ಟಿ.ಎಸ್.ಛಾಯಾಪತಿ
70ರ ಅಭಿನಂದನ
ಸಂಪುಟ

# ಛಾಯಾಭಿನಂದನ

ಪ್ರಧಾನ ಸಂಪಾದಕ
ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ






# ಛಾಯಾಭಿನಂದನ

ಶ್ರೀ ಟಿ.ಎಸ್. ಛಾಯಾಪತಿಯವರಿಗೆ
70ನೆಯ ಹುಟ್ಟುಹಬ್ಬದ ನೆನಪಿಗಾಗಿ
ಹಿರಿಯರು, ಬಂಧುಗಳು, ಲೇಖಕರು ಒಪ್ಪಿಸಿದ ಅಭಿನಂದನ ಸಂಪುಟ



# ಛಾಯಾಭಿನಂದನ




ಪ್ರಧಾನ ಸಂಪಾದಕರು

**ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ**

**ಪ್ರತಿಭಾ ಪ್ರಕಾಶನ**

**ಗೋಕುಲಂ ಮೂರನೆಯ ಹಂತ, ಮೈಸೂರು - ೨**



**CHAYABHINANDANA**

*A Felicitation Volume of T.S. Chayapathy*



Chief Editor : **Mallepuram G. Venkatesha**
Vice-Chancellor
Sanskrit University
Bangalore

*Published by*
**Prathibha Prakashana**
Gokulam 3rd stage
Mysore - 570 002



Pages : xvi + 352 = 368 Price : Rs.300/-

First Impression : 2014

Cover Design : Sudhakar Darbe



**D.T.P. at :**
**Lekha Graphics**, Jayanagar, Mysore - 14
Phone : 2568854

**Printed at :**
**GoodTouch Printers**, Mysore




## ಮಂಡಳಿಯ ಸದಸ್ಯರು

ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ (ಪ್ರಧಾನ ಸಂಪಾದಕರು)

ಮೈಸೂರು ರಂಗನಾಥ್ (ಸಂಪಾದಕರು)

## ಸದಸ್ಯರು

ಡಾ. ಎ.ವಿ. ನರಸಿಂಹಮೂರ್ತಿ

ಪ್ರೊ. ಎಚ್.ಎಸ್. ವೆಂಕಟೇಶಮೂರ್ತಿ

ಲಕ್ಷ್ಮಣ ಕೊಡಸೆ

ಡಾ. ಸಿ. ನಾಗಣ್ಣ

ಡಾ. ಎಚ್.ಬಿ. ರಾಜಶೇಖರ್

ದಿ. ಎಸ್. ಎನ್. ರಾಮಸ್ವಾಮಿ

## ಪ್ರಧಾನ ಸಂಪಾದಕರ ಮಾತು

ನಾನು ಕನಕಪುರದ ಮುನ್ಸಿಪಲ್ ಹೈಸ್ಕೂಲಿನಲ್ಲಿ ಕನ್ನಡ ಪಂಡಿತನಾಗಿ ಕೆಲಸ ಮಾಡುತ್ತಿದ್ದೆ. ಮೊದಲಿನಿಂದಲೂ ಅನೇಕ ಗ್ರಂಥಗಳನ್ನು ಸಂಗ್ರಹಿಸುವ ಹುಚ್ಚು. ಹಳೆಯ ಪುಸ್ತಕಗಳನ್ನು ತಂದು ಓದಿ, ಇನ್ನೊಬ್ಬರಿಗೆ ಓದಲು ಹಚ್ಚಿಸುತ್ತಿದ್ದ ಕಾಲ. ಕನ್ನಡದಲ್ಲಿ ಪ್ರಕಟವಾಗುವ ಅನೇಕ ಪುಸ್ತಕಗಳನ್ನು ನೋಡುವುದು, ಓದುವುದು, ಸಾಧ್ಯವಾದರೆ ಕೊಳ್ಳುವುದು ಮೊದಲಿನಿಂದಲೂ ನನಗೆ ಒಲಿದುಬಂದ ಪ್ರವೃತ್ತಿ. ಈ ಪ್ರವೃತ್ತಿಯಿಂದಾಗಿ ಬೆಂಗಳೂರಿನ ಸಾಹಿತ್ಯ ಭಂಡಾರದ ಜೊತೆಗೆ ಅವಿನಾಭಾವ ಸಂಬಂಧ ಬೆಳೆದಿತ್ತು. ಈ ಸಂಬಂಧದಿಂದಾಗಿ ಅನೇಕ ಲೇಖಕರು, ಪ್ರಕಾಶಕರು ನನ್ನ ಮಿತ್ರರಾದರು. ಅವರೊಡನೆ ಸಂಭಾಷಣೆ ಮಾಡುತ್ತ ಅನೇಕ ಹೊಸ ವಿಷಯಗಳನ್ನು ಕಲಿಯುತ್ತಾ ಹೋದೆ. ಹಿರಿಯರಾದ ಸಾಹಿತ್ಯ ಭಂಡಾರದ ಮಂಗಳೂರು ಗೋವಿಂದರಾಯರು ತಮ್ಮ ಹಳೆಗಾಲದ ಪುಸ್ತಕ ಪ್ರಕಟಣೆಯ ದುಃಖ - ದುಮ್ಮಾನಗಳನ್ನು ನನ್ನೊಡನೆ ಹಂಚಿಕೊಳ್ಳುತ್ತಿದ್ದರು. ಪ್ರತಿವಾರವೂ ಕನಕಪುರದಿಂದ ಬೆಂಗಳೂರಿಗೆ ಬಂದು ಲೇಖಕರನ್ನು ಭೇಟಿ ಮಾಡಿ, ಪತ್ರಿಕೆಗಳಿಗೆ ಬರಹಗಳನ್ನು ನೀಡಿ, ಸಾಹಿತ್ಯ ಭಂಡಾರಕ್ಕೆ ಭೇಟಿ ನೀಡುವುದು ನನ್ನ ಪ್ರವೃತ್ತಿಯಾಗಿತ್ತು.

1983 ಆಗಸ್ಟ್ ತಿಂಗಳ ಎರಡನೇ ವಾರ ಇರಬೇಕು. ಆ ದಿನ ಸಂಜೆ ಸಾಹಿತ್ಯ ಭಂಡಾರದಲ್ಲಿ ಹೊಸ ಪುಸ್ತಕಗಳನ್ನು ನೋಡುತ್ತಿದ್ದೆ. ಆಗ ಭಂಡಾರದ ಬಾಗಿಲಲ್ಲಿ ಉದ್ದನೆಯ ಹಾಗೂ ತೆಳ್ಳನೆಯ ವ್ಯಕ್ತಿಯೊಬ್ಬರು ನಿಂತಂತಾಯಿತು. ತಿರುಗಿ ನೋಡಿದೆ. ನನ್ನನ್ನು ನೋಡಿದವರೇ ಮುಗುಳ್ನಕ್ಕರು. ನಾನೂ ಮುಗುಳ್ನಕ್ಕೆ. ಅನಂತರ ಅವರು ಹಿರಿಯರಾದ ಗೋವಿಂದರಾಯರೊಡನೆ ಪುಸ್ತಕಗಳ ಬಗ್ಗೆ ಮಾತನಾಡಿದರು. ಪರಸ್ಪರ ಇಬ್ಬರೂ ಮಾತನಾಡುತ್ತಿರುವಾಗ ನಾನು ಮೌನ ಪ್ರೇಕ್ಷಕನಾಗಿ ನಿಂತಿದ್ದೆ. ಆದರೆ, ಆಗಾಗ್ಗೆ ಕೆಲವೊಂದು ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಲೂ ಇದ್ದೆ. ಇವರು ತ.ಸು. ಶಾಮರಾಯರ ಮಕ್ಕಳೆಂದೂ ಇವರ ಹೆಸರು ಟಿ.ಎಸ್. ಛಾಯಾಪತಿ ಎಂದೂ ತಿಳಿಯಿತು. ಅನಂತರ ಅದೇ ತಾನೇ ಪ್ರಕಟವಾಗಿದ್ದ 'ಸ್ವಸ್ತಿ' ಮಹಾಸಂಪುಟವನ್ನು

---



---

ಗೋವಿಂದರಾಯರ ಕೈಗೆ ಅವರು ನೀಡಿದರು. ಗೋವಿಂದರಾಯರು ನಿಧಾನವಾಗಿ ಹಾಳೆಗಳನ್ನು ತಿರುವಿಹಾಕುತ್ತಾ ಹೋದಂತೆ ನಾವಿಬ್ಬರೂ ಹೊರಗಡೆ ಬಂದು ತಳುಕಿನ ವೆಂಕಣ್ಣಯ್ಯನವರನ್ನೂ ತ.ಸು.ಶಾಮರಾಯರನ್ನೂ ನೆನಪು ಮಾಡಿಕೊಳ್ಳುತ್ತಿದ್ದೆವು. ಅನಂತರ ಪುಸ್ತಕದ ಅಂಗಡಿಯ ಎದುರಿದ್ದ ಮಲಬಾರ್ ಹೋಟೆಲಿನಲ್ಲಿ ಇಬ್ಬರೂ ದೋಸೆ ತಿಂದು, ಕಾಫಿ ಕುಡಿದೆವು. ಮರಳಿ ಪುಸ್ತಕದ ಅಂಗಡಿಗೆ ಬಂದೆವು. ಟಿ.ಎಸ್. ಛಾಯಾಪತಿಯವರು ವಿಶ್ವಾಸದಿಂದ ತಮ್ಮ ತಂದೆಯವರ ಅಭಿನಂದನಾ ಗ್ರಂಥವಾದ ಈ ಗ್ರಂಥವನ್ನು ಡಾ. ಹಾ.ಮಾ. ನಾಯಕ ಅವರು ಸಂಪಾದಿಸಿದ್ದರು. ನಾನು ಆ ಗ್ರಂಥದ ಮೇಲೆ ಕೈಯಾಡಿಸುತ್ತ ಆನಂದ ತುಂದಿಲನಾದೆ. ಮಾತು ಬರದೆ ಮೂಕನಾದೆ. ಮೈಸೂರಿಗೆ ಬರಲು ಅವರು ನನಗೆ ಆಹ್ವಾನವನ್ನು ನೀಡಿದರು. 'ಸ್ವಸ್ತಿ' ಮಹಾಸಂಪುಟವನ್ನು ನನಗೆ ಮೊದಲ ಭೇಟಿಯ ಕಾಣಿಕೆಯಾಗಿ ನೀಡಿದರು.

ಹೀಗೆ, ಹಿರಿಯ ಮಿತ್ರರಾದ ಟಿ.ಎಸ್. ಛಾಯಾಪತಿಯವರ ಪರಿಚಯ ನನಗೆ ಆಯಿತು. ಈ ಪರಿಚಯವು ಸ್ನೇಹದಲ್ಲಿ ಮುಳುಗಿಹೋಯಿತು. ಮೈಸೂರಿಗೆ ಹೋದಾಗ, ಅವರ ಮನೆಯಲ್ಲಿ ತಿಂಡಿ-ಕಾಫಿ ಕುಡಿಯದ ಒಂದು ದಿನವೂ ಇರಲಿಲ್ಲ. ಸ್ನೇಹದ ಸಂಬಂಧಕ್ಕೆ ಒಂದು ಅರ್ಥವನ್ನು ಬದುಕಿನಲ್ಲಿ ನೀಡಿದವರು ಮಿತ್ರರಾದ ಛಾಯಾಪತಿ ಯವರು. ಅನಂತರ ಪುಸ್ತಕ ಪ್ರಾಧಿಕಾರದ ಅಧ್ಯಕ್ಷನಾಗಿ ನಾನು ಆಯ್ಕೆಗೊಂಡಾಗ ಸದಸ್ಯರಾಗಿ ಟಿ.ಎಸ್. ಛಾಯಾಪತಿಯವರು ನನ್ನೊಡನೆ ಇದ್ದದ್ದು ದೈವಸಂಕಲ್ಪವೆಂದು ಈಗ ತೋರುತ್ತದೆ. ಅವರೊಡನೆ ಮೂರು ವರ್ಷಗಳ ಕಾಲ ಪುಸ್ತಕ ಪ್ರಕಟಣೆ, ಪುಸ್ತಕ ಪ್ರಚಾರ, ಪುಸ್ತಕದ ಓದು, ಪುಸ್ತಕೋದ್ಯಮ - ಇವುಗಳಲ್ಲಿ ತೊಡಗಿಕೊಳ್ಳುತ್ತ ಹೋದೆ. ಅವರ ನನ್ನ ಸಂಬಂಧ ಗಾಢವಾಯಿತು.

ನನ್ನ ಬದುಕಿನ ಅನೇಕ ಸಂದರ್ಭಗಳಲ್ಲಿ ಟಿ.ಎಸ್. ಛಾಯಾಪತಿಯವರ ನೆರವು ಒದಗುತ್ತಲೇ ಬಂದಿದೆ. ಅವರು ಅರಣ್ಯ ಮಂತ್ರಿಗಳಾಗಿದ್ದ ಶ್ರೀ ಕೆ.ಎಚ್. ರಂಗನಾಥ್ ಅವರನ್ನು ಭೇಟಿ ಮಾಡಿಸಿದ ಸಂದರ್ಭವನ್ನು ನೆನೆದರೆ ಈಗಲೂ ರೋಮಾಂಚನ ವಾಗುತ್ತದೆ. ಆಗ ಶ್ರೀ ಎಸ್.ಎಂ. ಕೃಷ್ಣ ಅವರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದರು. ಅರಣ್ಯ ಇಲಾಖೆಯ ಸಚಿವರಾಗಿದ್ದ ಶ್ರೀ ಕೆ.ಎಚ್. ರಂಗನಾಥ್ ಅವರನ್ನು ವಿಧಾನಸೌಧ ದಲ್ಲಿ ಛಾಯಾಪತಿ ಅವರೊಡನೆ ಭೇಟಿಯಾದಾಗ ನಾನು ಸಂಪಾದಿಸಿದ್ದ ಶಂಬಾ ಸಮಗ್ರ ಸಂಪುಟಗಳ ಹೊತ್ತಗೆಗಳನ್ನು ಅವರ ಕೈಗಿತ್ತೆ. ಅವುಗಳನ್ನು ಕೈಯಲ್ಲಿ ಹಿಡಿದು, ತಲೆಯ ಮೇಲೆ ಇಟ್ಟುಕೊಂಡು, ಸ್ವಲ್ಪ ಕಾಲ ಕಣ್ಣು ಮುಚ್ಚಿಕೊಂಡರು. ಅನಂತರ ಮೇಜಿನ ಮೇಲೆ ಇಟ್ಟು ನನ್ನ ಎರಡೂ ಕೈಗಳನ್ನು ತಮ್ಮ ಬೊಗಸೆಯಲ್ಲಿ ಹಿಡಿದು ಕಣ್ಣಿಗೊತ್ತಿ ಕೊಂಡರು. ನಾನು ಭಾವುಕನಾದೆ. ಆಗ ಅವರು ಶಂಬಾ ಜೋಶಿ ಜೊತೆ ನಮಗಿದ್ದ ಸ್ನೇಹ ಸಂಪದವನ್ನು ಹೇಳುತ್ತಾ ಹೋದರು. ಶಂಬಾ ಅವರು ಬರೆದ ಎರಡು -ಮೂರು

ಪತ್ರಗಳನ್ನು ಜತನವಾಗಿ ಇಟ್ಟುಕೊಂಡಿದ್ದೇನೆಂದು ತಿಳಿಸಿದರು. ನಾನು ಮಾಡಿದ ಸಂಪಾದನೆಯ ಕೆಲಸವನ್ನು ಬಾಯ್ತುಂಬಾ ಹೊಗಳಿದರು. ನನ್ನ ಮನಸ್ಸು ತುಂಬಿಹೋಯಿತು. ಅನಂತರ ಶ್ರೀ ಕೆ.ಎಚ್. ರಂಗನಾಥ್ ಅವರಿಗೂ ನನಗೂ ಅವಿನಾಭಾವ ಸಂಬಂಧ ಗಾಢವಾಗಿ ಬೆಳೆಯಿತು. ಹೀಗೆ ಅನೇಕ ಸಜ್ಜನರ ಸಂಬಂಧ ಬೆಳೆಯುವುದಕ್ಕೆ ಟಿ.ಎಸ್. ಛಾಯಾಪತಿ ಯವರು ಕಾರಣೀಭೂತರಾಗಿದ್ದಾರೆ. ನನ್ನ ಬದುಕಿನ ಏಳಿಗೆಯಲ್ಲಿ ಅವರ ನೆರವು ಅಪರಿಮಿತವಾದುದು. ಇದು ಮಾತಿಗೆ ಮೀರಿದ್ದು.

ಪ್ರಕಾಶಕಮಿತ್ರರಾದ ತಳುಕಿನ ಶಾಮರಾಯ ಛಾಯಪತಿ ಪುಸ್ತಕ ಪ್ರಕಾಶನದ ಹೆಸರಿನಲ್ಲಿ ಅಗ್ರಮಾನ್ಯರು, ಇವರು ಪ್ರಕಾಶಕರಾಗಿ ಎಂಥ ಪ್ರಸಿದ್ಧಿಯನ್ನು ಪಡೆದಿದ್ದಾರೋ ಅಷ್ಟೇ ಮಿಗಿಲಾದ ಪ್ರಾಶಸ್ತ್ಯವನ್ನು ಲೇಖಕರಾಗಿಯೂ ಪಡೆದಿದ್ದಾರೆ. ಹಾ.ಮಾ. ನಾಯಕರ 'ಪ್ರಣಯ ಪದಾವಳಿ', ಜಿ.ಎಸ್. ಶಿವರುದ್ರಪ್ಪನವರ 'ಚೆಲುವು, ಒಲವು' ಮತ್ತು 'ಸಾಮಗಾನ' ಮುಂತಾದ ಗ್ರಂಥಗಳು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಹಿರಿಮೆಯನ್ನು ಬೆಳಗಿಸಿವೆ. ಟಿ.ಎಸ್. ಛಾಯಾಪತಿಯವರು ಬರೆದ ಅನೇಕ ಪುಸ್ತಕಗಳು ಜನಪ್ರಿಯವಾಗಿಯೂ ಪ್ರಸಿದ್ಧಿಯನ್ನೂ ಪಡೆದಿವೆ. ಅವರು ಬರೆದ ಆಡಳಿತ ಭಾಷೆ ಕನ್ನಡ, ನಮ್ಮ ಕ್ರಿಕೆಟ್, ಸಚಿತ್ರ ರಾಮಾಯಣ, ಅಣ್ಣನ ಸ್ಮರಣೆ ಮುಂತಾದ ಪುಸ್ತಕಗಳು ಛಾಯಾಪತಿಯವರ ಬರೆವಣಿಗೆಯ ಶಕ್ತಿಯನ್ನು ಚೆನ್ನಾಗಿ ಪ್ರತಿಫಲಿಸುತ್ತವೆ. ಇದೆಲ್ಲವನ್ನೂ ನೆನೆಯುತ್ತಾ ಹೋದರೆ ತಳುಕಿನ ವಂಶವು ಸಾಮಾಜಿಕ, ಸಾಂಸ್ಕೃತಿಕ ಮತ್ತು ಸಾಹಿತ್ಯಕ ಕ್ಷೇತ್ರಗಳಿಗೆ ಕೊಟ್ಟ ಕೊಡುಗೆ ಯಾವತ್ತೂ ಸ್ಮರಣೀಯ ವಾದುದೇ. ಅಂಥ ವಂಶದಲ್ಲಿ ಹುಟ್ಟಿ ಎಲ್ಲ ಜನಸಮುದಾಯದ ಪ್ರೀತಿಗೆ, ವಿಶ್ವಾಸಕ್ಕೆ ಕಾರಣರಾದವರು ನಮ್ಮೆಲ್ಲರ ಆತ್ಮೀಯರಾದ ಟಿ.ಎಸ್. ಛಾಯಾಪತಿ!

ಪ್ರಕಾಶಕರಾದ ಟಿ.ಎಸ್. ಛಾಯಾಪತಿ ಅವರಿಗೆ ಈಗ ಎಪ್ಪತ್ತರ ಸಂಭ್ರಮ. ಅವರು ಈಗಲೂ ನಮ್ಮ ನಡುವಿನ ಕ್ರಿಯಾಶೀಲರು. ಇವರು ಸದ್‌ಗೃಹಸ್ಥರಾಗಿ ತಮ್ಮ ಧರ್ಮಪತ್ನಿಯವರಿಗೆ ಆದರ್ಶಪ್ರಾಯರು. ಇವರು ಉತ್ತಮ ಮಕ್ಕಳಿಗೆ ತಕ್ಕ ತಂದೆಯಾಗಿಯೂ ಗಣ್ಯತೆಯನ್ನು ಪಡೆದಿದ್ದಾರೆ. ಲೇಖಕರಿಗೂ ನಾಡಿನ ಪ್ರಕಾಶಕರಿಗೂ ಇವರು ಎಂದೆಂದೂ ದೊಡ್ಡ ಆಸ್ತಿಯೇ ಆಗಿದ್ದಾರೆ. ನಗೆಮೊಗದ, ಎತ್ತರ ವ್ಯಕ್ತಿತ್ವದ, ಸದಾ ಗಾಂಭೀರ್ಯದ, ಆಲೋಚನಾಮಗ್ನ ಟಿ.ಎಸ್. ಛಾಯಾಪತಿ ಎಲ್ಲರ ಪ್ರೀತಿಗೆ, ಗೌರವಕ್ಕೆ, ವಿಶ್ವಾಸಕ್ಕೆ ಪಾತ್ರರಾಗುತ್ತ ಬಂದಿದ್ದಾರೆ. ತಮ್ಮ ತಂದೆ ದಿವಂಗತ ಪ್ರೊ. ತ.ಸು. ಶಾಮರಾಯರು ಹುಟ್ಟುಹಾಕಿದ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ'ಯ ಪ್ರಕಾಶಕರಾಗಿ ಪ್ರಕಾಶನ ಪ್ರಪಂಚದಲ್ಲಿ ಸಹಸ್ರ ಪುಸ್ತಕಗಳನ್ನು ಪ್ರಕಟಿಸಿ ತಮ್ಮ ಧೀರತೆಯ ವ್ಯಕ್ತಿತ್ವವನ್ನು ಪಡೆದಿದ್ದಾರೆ. ಅವರು ಎಲ್ಲರಿಗೂ ಹಿರಿಮೆಯನ್ನು ತಂದುಕೊಟ್ಟಿದ್ದಾರೆ. ಇಂಥ ಎಪ್ಪತ್ತರ ಹರೆಯದ ವಿಶ್ವಮಿತ್ರರಿಗೆ ಹಿರಿಯರು, ಗೆಳೆಯರು,

ಲೇಖಕ ಮಿತ್ರರು ಅವರ 70ರ ಜನ್ಮ ಸಂಭ್ರಮದಲ್ಲಿ ಪ್ರೀತಿಯಿಂದ ಕೊಡಮಾಡುತ್ತಿರುವ 'ಛಾಯಾಭಿನಂದನ' ಒಂದು ಆಪ್ತವೂ ವಿಶಿಷ್ಟವೂ ಆದ ಅಭಿನಂದನ ಸಂಪುಟವಾಗಿದೆಯೆಂದು ನನ್ನ ಗ್ರಹಿಕೆ.

ಕಳೆದ ನಾಲ್ಕು ತಿಂಗಳ ಹಿಂದೆ ಮೈಸೂರಿನ ಶ್ರೀ ರಂಗನಾಥ್ ಅವರು ನನ್ನ ಕಛೇರಿಗೆ ಬಂದು ಟಿ.ಎಸ್. ಛಾಯಾಪತಿ ಅವರಿಗೆ ಬರುವ ಮೇ. 10ಕ್ಕೆ ಎಪ್ಪತ್ತು ವರ್ಷ ತುಂಬುತ್ತದೆಂದೂ ಅವರಿಗೆ ಅಭಿನಂದನ ಗ್ರಂಥವೊಂದನ್ನು ಅರ್ಪಿಸುವುದು ಅವಶ್ಯವೆಂದೂ ತಿಳಿಸಿದರು. ಆಗ ಇಬ್ಬರೂ ಕುಳಿತು ಇಡೀ ಗ್ರಂಥದ ಸ್ವರೂಪವನ್ನು ಚರ್ಚಿಸುತ್ತಾ ಹೋದೆವು. ಅಸ್ಪಷ್ಟವಾಗಿ ಒಂದು ರೂಪವನ್ನು ಪಡೆದಾದ ಮೇಲೆ ಮರಳಿ ಕುಳಿತು ವಿಭಾಗಗಳನ್ನು ವಿಂಗಡಿಸಿ ಇಂದಿನ ಸ್ವರೂಪಕ್ಕೆ ಗ್ರಂಥವನ್ನು ತಂದದ್ದಾಯಿತು. ಅನಂತರ ಛಾಯಾಪತಿಯವರ ಜೊತೆ ಕುಳಿತು ಇಡೀ ಗ್ರಂಥದ ಸ್ವರೂಪವನ್ನು ವಿವರಿಸುತ್ತಾ ಅಂತಿಮಗೊಳಿಸಿದೆವು. ಹೀಗೆ, 'ಛಾಯಾಭಿನಂದನ' ಒಂದು ಸ್ಪಷ್ಟ ಸ್ವರೂಪವನ್ನು ಪಡೆಯಿತು. ಛಾಯಾಪತಿಯವರ ಬಳಿಯಿದ್ದ ಕೆಲವು ಹಳೆಯ ಲೇಖನಗಳನ್ನು ಪಡೆದು ಈ ಗ್ರಂಥಕ್ಕೆ ಬಳಸಿಕೊಳ್ಳಲಾಗಿದೆ. ಅನೇಕ ಲೇಖಕ ಮಿತ್ರರರಿಗೆ ದೂರವಾಣಿ ಮೂಲಕ ವಿನಂತಿ ಮಾಡಿಕೊಂಡ ಮೇರೆಗೆ ಅರವತ್ತು ಲೇಖನಗಳು ತಿಂಗಳೊಳಗೆ ಬಂದಿವೆ. ಛಾಯಾಪತಿಯವರ ಮೇಲಿನ ಪ್ರೀತಿಯಿಂದ ಅನೇಕರು ಆತ್ಮೀಯ ಲೇಖನಗಳನ್ನು ಬರೆದು ಕಳುಹಿಸಿದ್ದಾರೆ. ತಳುಕಿನ ವೆಂಕಣ್ಣಯ್ಯ, ತಳುಕಿನ ಶಾಮರಾಯ ಹಾಗೂ ತಳುಕಿನ ಛಾಯಾಪತಿ ಕುಟುಂಬದ ಸದಸ್ಯರು ಪ್ರೀತಿಯಿಂದ ಲೇಖನಗಳನ್ನು ನಮಗೆ ಈ ಗ್ರಂಥದಲ್ಲಿ ಬಳಸಿಕೊಳ್ಳಲು ನೀಡಿದ್ದಾರೆ.

'ಛಾಯಾಭಿನಂದನ' ಗ್ರಂಥವನ್ನು ಸಂಪಾದಿಸುವಾಗ ಛಾಯಾಪತಿಯವರ ಕುಟುಂಬ ವರ್ಗ ನನ್ನ ನೆರವಿಗೆ ಬಂದಿದೆ. ಶ್ರೀಮತಿ ಪುಷ್ಪ ಛಾಯಾಪತಿ ಮತ್ತು ಅವರ ಮಗಳು ಶ್ರೀಮತಿ ಪ್ರತಿಭಾ ಈ ಪುಸ್ತಕದ ಸಿದ್ಧತೆಯಲ್ಲಿ ಅಪಾರವಾದ ನೆರವನ್ನು ನನಗೆ ನೀಡಿದ್ದಾರೆ. ಅವರು ಕರಡನ್ನು ನೋಡುತ್ತ, ಛಾಯಾಚಿತ್ರಗಳನ್ನು ಹುಡುಕಿ ಕೊಡುತ್ತ ತುಂಬು ಮನಸ್ಸಿನಿಂದ ನೆರವಾಗಿದ್ದಾರೆ. ಅವರಿಗೆ ನನ್ನ ನಮನಗಳು. ಈ ಸಂಪುಟಕ್ಕಾಗಿ ಲೇಖನಗಳನ್ನು ಬರೆದುಕೊಟ್ಟ ಎಲ್ಲ ಲೇಖಕಮಿತ್ರರಿಗೂ ವಂದನೆಗಳನ್ನು ಸಲ್ಲಿಸಲು ಸಂತೋಷವಾಗುತ್ತದೆ. ಮುಖಪುಟವನ್ನು ಅಂದವಾಗಿ, ಅರ್ಥಪೂರ್ಣವಾಗಿ ರೂಪಿಸಿ ಕೊಟ್ಟ ಶ್ರೀ ಸುಧಾಕರ ದರ್ಬೆಯವರಿಗೂ ಮುದ್ರಣಾಲಯದ ಸ್ನೇಹಿತರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಈ ಸಂಪುಟವು ಛಾಯಾಪತಿ ಅವರಿಗೆ ಪ್ರಿಯವಾಗಲೆಂದು ನಾನು ಆಶಿಸುವೆ. ಎಲ್ಲ ಸಹೃದಯ ಓದುಗ ಮಿತ್ರರಿಗೆ ನನ್ನ ನಮಸ್ಕಾರ.

**ಪ್ರೊ. ಮಲ್ಲೇಪುರ ಜಿ. ವೆಂಕಟೇಶ**

ಪ್ರಧಾನ ಸಂಪಾದಕ

# ಪರಿವಿಡಿ

## * ಹಿರಿಯರು ಕಂಡಂತೆ

**ಬಂಧುಗಳು ಕಂಡಂತೆ



***ಲೇಖಕರು ಕಂಡಂತೆ

**** ನನ್ನನ್ನು ನಾನೇ ಕಂಡಂತೆ

# ಕೊಟ್ಟ ಮಾತಿಗೆ ತಪ್ಪದವ

ನಾನು ಸಾಹಿತ್ಯ ಮಂದಿರ ಎಂಬ ಪ್ರಕಾಶನ ಸಂಸ್ಥೆ ಮತ್ತು ಪುಸ್ತಕ ಮಳಿಗೆಯನ್ನು ಕೊಂಚಕಾಲ ಮೈಸೂರಿನಲ್ಲಿ ನಡೆಸಿದೆ. ಆಗ ತಸು ಶಾಮರಾಯರ ಪರಿಚಯ ಆಯಿತು. ಪರಿಚಯ ಸ್ನೇಹವಾಗಿ ಮಾರ್ಪಟ್ಟಿತು. ಶಾಮರಾಯರ ಪಾದರಸದಂತಹ ಚಟುವಟಿಕೆ, ವಿದ್ಯಾರ್ಥಿಗಳ ಬಗೆಗೆ ಇದ್ದ ಮಮತೆ, ಕಾಳಜಿ, ವಿದ್ವತ್ತು ನನಗೆ ಅವರಲ್ಲಿದ್ದ ಗೌರವವನ್ನು ಇಮ್ಮಡಿಸಿತು. ಅವರ ಸರಳತೆ, ಸ್ನೇಹ ಪರತೆ, ಜೀವನಾಸಕ್ತಿ ಇವುಗಳಿಗೆ ನಾನು ನಿಬ್ಬೆರಗಾದೆ - ನನ್ನನ್ನು ಒಬ್ಬ ಸಹೋದರನಂತೆ ಭಾವಿಸಿ, ತಮ್ಮ ಪರಿವಾರವಲ್ಲಿನ ಒಬ್ಬನಂತೆ ಪರಿಗಣಿಸಿದರು. ಆಗ ಛಾಯಪತಿ ಇನ್ನೂ ಎಳೇ ಮಗು. ಶಾಮರಾಯರು ಆಗತಾನೇ ಅವರಣ್ಣಂದಿರಾದ ಪ್ರಾತಃ ಸ್ಮರಣೀಯರಾದ ಟಿ.ಎಸ್. ವೆಂಕಣ್ಣಯ್ಯನವರ ನೆನಪಿನಲ್ಲಿ ಒಂದು ಗ್ರಂಥಮಾಲೆಯನ್ನು ಆರಂಭ ಮಾಡಿದ್ದರು. ಛಾಯಾಪತಿ ಈ ಗ್ರಂಥಮಾಲೆಯನ್ನು ವಹಿಸಿಕೊಳ್ಳುವ ಮೊದಲೇ ಶಾಮರಾಯರು ಈ ಪ್ರಕಟಣ ಸಂಸ್ಥೆಯನ್ನು ಹುಲುಸಾಗಿ ಬೆಳೆಸಿದ್ದರು.

ಛಾಯಾಪತಿ ವಿದ್ಯಾಭ್ಯಾಸ ಮುಗಿಸಿ, ಎಂ.ಕಾಂ., ಪದವೀಧರನಾದ ಮೇಲೆ, ಪುಸ್ತಕ ಪ್ರಕಟಣೆಯ ಕಾರ್ಯವನ್ನು 1969ರಲ್ಲಿ ಒಂದು ಉದ್ಯಮವಾಗಿ ನಡೆಸುವ ತೀರ್ಮಾನ ಕೈಗೊಂಡರು. ಈ ನಲವತ್ತೈದು ವರ್ಷಗಳಲ್ಲಿ ಛಾಯಾಪತಿ ಪ್ರಕಟಣೆಯ ಕ್ಷೇತ್ರದಲ್ಲಿ ಬಹುದೊಡ್ಡ ಹೆಸರು ಗಳಿಸಿದ್ದಾನೆ. ಸಾವಿರಾರು ಪುಸ್ತಕಗಳನ್ನು ಪ್ರಕಟಣೆ ಮಾಡಿದ ಹೆಗ್ಗಳಿಕೆ ಅವನದು. ಸಾಹಿತ್ಯದ ಎಲ್ಲ ಪ್ರಾಕಾರಾಗಳಲ್ಲೂ ಸಾಹಿತ್ಯ ದಿಗ್ಗಜರಿಂದ ಪುಸ್ತಕಗಳನ್ನು ಬರೆಯಿಸಿ, ಪ್ರಕಟಣೆ ಮಾಡಿ ಕನ್ನಡಿಗರ ಕೃತಜ್ಞತೆಗೆ ಪಾತ್ರನಾಗಿದ್ದಾನೆ.

ಪ್ರೊ. ರಮೇಶ್ ಅವರು ನನ್ನ ಬಗೆಗೆ ಬರೆದ ಒಂದು ಪುಸ್ತಕ ಪ್ರಕಟವಾಗಬೇಕಾಗಿತ್ತು. ಛಾಯಾಪತಿ ಆ ಪುಸ್ತಕದ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಾಗ ಅವನು ಹೇಳಿದ ಮಾತು - ನಮ್ಮ ತಂದೆಗೂ ನಿಮಗೂ ಇದ್ದ ಸಖ್ಯವನ್ನು ಎಲ್ಲ ನನಗೆ ನಿಮ್ಮ ಬಗೆಗೆ ಬರೆಯಲಾದ ಪುಸ್ತಕವನ್ನು ಪ್ರಕಟ ಮಾಡುವ ಅವಕಾಶ ದೊರೆತದ್ದು ತುಂಬ ಸಂತಸ ತಂದಿದೆ. 'ಗಾಳಿಗೆ ಸಿಕ್ಕ ತರ ಗೆಲೆ'ಯನ್ನು ಆದಷ್ಟು ಅಂದವಾಗಿ ಮುದ್ರಣ

ಮಾಡಿಸುವವನಿದ್ದೇನೆ ಎಂದು ಛಾಯಾಪತಿ ಹೇಳಿದನಲ್ಲದೆ, ಕೊಟ್ಟ ಮಾತಿನಂತೆ ಬಹಳ ಮುತುವರ್ಜಿ ವಹಿಸಿ ಆ ಪುಸ್ತಕವನ್ನು ಹೊರತಂದನೆಂದು ತಿಳಿಸಲು ಹರ್ಷವಾಗುತ್ತದೆ.

ಛಾಯಾಪತಿ ಒಬ್ಬ ಪ್ರಕಾಶಕನಾಗಿ ಎಲ್ಲರ ಪ್ರೀತಿಗೆ, ಗೌರವಕ್ಕೆ ಪಾತ್ರನಾಗಿದ್ದಾನೆ. ತಂದೆಯಂತೆಯೇ ಸರಳ, ಸಜ್ಜನತೆಯ ಸಾಕಾರಮೂರ್ತಿಯಾಗಿರುವ ಛಾಯಾಪತಿ ಅನೇಕ ಪ್ರಶಸ್ತಿ, ಪುರಸ್ಕಾರಗಳಿಗೆ ಭಾಜನನಾಗಿದ್ದಾನೆ.

ಸರ್ಕಾರ ಛಾಯಪತಿಯ ಕನ್ನಡ ಕೈಂಕರ್ಯವನ್ನು ಪರಿಗಣಿಸಿ ಅವನಿಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ನೀಡಿ ಗೌರವಿಸಲಿ ಎಂದು ಹಾರೈಸುತ್ತೇನೆ.

# ಪ್ರಕಾಶನ ಕ್ಷೇತ್ರದಲ್ಲಿ ಛಾಯಾಪತಿಯ ಚಹರೆ

ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಪ್ರಕಾಶಕ ಹಾಗೂ ಲೇಖಕ ಶ್ರೀ ಟಿ.ಎಸ್. ಛಾಯಾಪತಿಯವರು ನನ್ನ ಆತ್ಮೀಯ ಸ್ನೇಹಿತರಲ್ಲಿ ಒಬ್ಬರು. ಅವರು ಎಪ್ಪತ್ತರ ವಸಂತಕ್ಕೆ ಕಾಲಿಡುತ್ತಿರುವ ಸಂದರ್ಭದಲ್ಲಿ ಅವರಿಗೆ ನೀಡಲಿರುವ ಅಭಿನಂದನ ಗ್ರಂಥಕ್ಕೆ ಲೇಖನ ಕೋರಿ ಸಂಪಾದಕರಾದ ಶ್ರೀ ಮಲ್ಲೇಪುರಂ ಜಿ. ವೆಂಕಟೇಶ ಅವರ ಪತ್ರ ಬಂದಾಗ ನನಗೆ ಒಮ್ಮೆಲೆ ದಿ. ತ.ಸು. ಶಾಮರಾಯರ ನೆನಪಾಯಿತು. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಸಭೆಗೆ ನಾನು ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಸಹಸದಸ್ಯನಾಗಿ ಆಗಾಗ ಹೋಗುತ್ತಿದ್ದೆ. 1956 ರಿಂದ 1960ರವರೆಗೆ ಪ್ರಸಾರಾಂಗದ ನಿರ್ದೇಶಕರಾಗಿದ್ದ ಅವಧಿಯಲ್ಲಿ, ತ.ಸು. ಶಾಮರಾಯರು ಕುವೆಂಪು ಅವರ ಪ್ರೇರಣೆ ಯಿಂದ ವಿವಿಧ ವಿಷಯಗಳನ್ನು ಕುರಿತ ಕನ್ನಡ ಪಠ್ಯಪುಸ್ತಕಗಳ ಪ್ರಕಟಣಾಕಾರ್ಯವನ್ನು ತೀವ್ರಗತಿಯಿಂದ ಪ್ರಾರಂಭಿಸಿದ್ದು ನಮಗೆ ಆದರ್ಶಪ್ರಾಯವಾಗಿತ್ತು. ಮುಂದೆ ಅಷ್ಟೇ ದಕ್ಷತೆಯಿಂದ ಡಾ. ಪ್ರಭುಶಂಕರ್ ಅವರು ಪ್ರಸಾರಾಂಗವನ್ನು ವಿವಿಧ ಮುಖದಿಂದ ಮುನ್ನೆಡೆಸಿದ್ದು ಈಗ ಇತಿಹಾಸ.

ಪ್ರೊ. ಟಿ.ಎಸ್. ವೆಂಕಣ್ಣಯ್ಯನವರು ಶಾಮರಾಯರಿಗೆ ಅಣ್ಣನಾಗಿರುವುದಕ್ಕೂ ಹೆಚ್ಚಾಗಿ ಗುರುವೇ ಆಗಿದ್ದರು. 1939ರಲ್ಲಿ ಅವರು ದಿವಗಂತರಾದ ಮೇಲೆ ತಮ್ಮ ಪ್ರೀತಿಯ ಅಣ್ಣನ ಹೆಸರಿನಲ್ಲಿ ತ.ವೆಂ. ಸ್ಮಾರಕ ಗ್ರಂಥಮಾಲೆಯನ್ನು ಪ್ರಾರಂಭಿಸಿದರು (1950). ಪುಸ್ತಕ ಪ್ರಕಾಶನವನ್ನು ತಮ್ಮ ವೃತ್ತಿಯನ್ನಾಗಿಸದೆ ಒಂದು ಹವ್ಯಾಸವಾಗಿಯೇ ಬೆಳೆಸಿಕೊಂಡು ಬಂದುದರಿಂದ ನಾಡಿನ ಉತ್ತಮ ಗ್ರಂಥ ಪ್ರಕಾಶನ ಸಂಸ್ಥೆಗಳಲ್ಲಿ ಒಂದು ಎಂಬ ಕೀರ್ತಿಯನ್ನು ಅದು ಪಡೆಯಿತು.

22-11-1970ರಂದು ಶಾಮರಾಯರು ಒಂದು ಹೆಬ್ಬೊತ್ತಿಗೆಯನ್ನು 'ಗೌರವಾದರ ಗಳೊಡನೆ' ನನಗೆ ಕೊಟ್ಟು, ಗ್ರಂಥಮಾಲೆಯಿಂದ ನನ್ನದೊಂದು ಪುಸ್ತಕ ತರುವ ಅಪೇಕ್ಷೆಯನ್ನು ವ್ಯಕ್ತಪಡಿಸಿದರು. ನನ್ನ ಮೊದಲ ಗದ್ಯ ಕೃತಿ 'ಸಾಹಿತ್ಯ ಚಿಂತನ' 1966ರಲ್ಲಿ ಧಾರವಾಡದ ಮಿಂಚಿನಬಳ್ಳಿ ಪ್ರಕಾಶನದಿಂದ ಪ್ರಕಟಗೊಂಡಿತ್ತು. ನನ್ನ

ಚೆನ್ನವೀರ ಕಣವಿ

ಎರಡನೆಯ ಕೃತಿ 'ಕಾವ್ಯಾನುಸಂಧಾನ' (ವಿಮರ್ಶಾತ್ಮಕ ಪ್ರಬಂಧಗಳ ಸಂಕಲನ) ತ.ವೆಂ. ಸ್ಮಾರಕ ಗ್ರಂಥಮಾಲೆಯಲ್ಲಿ ಪ್ರಕಟಗೊಂಡದ್ದು (1971) ನನ್ನ ಭಾಗ್ಯವೆಂದೇ ಹೇಳಬಹುದು. ನನ್ನ ಆತ್ಮೀಯ ಸ್ನೇಹಿತರಾಗಿದ್ದ ಡಾ. ಜಿ.ಎಸ್. ಶಿವರುದ್ರಪ್ಪನವರ ಪ್ರಥಮ ಕವನ ಸಂಕಲನ 'ಸಾಮಗಾನ' (1951) ಹಾಗೂ ಅವರ ಸಂಪ್ರಬಂಧ 'ಸೌಂದರ್ಯ ಸಮೀಕ್ಷೆ' ಅಲ್ಲದೆ ಅವರ ಇನ್ನು ಹಲವು ಗ್ರಂಥಗಳು ಇದೇ ಗ್ರಂಥಮಾಲೆಯಲ್ಲಿ ಪ್ರಕಟಗೊಂಡುದನ್ನು ಇಲ್ಲಿ ಸ್ಮರಿಸಬಹುದು.

ಶ್ರೀ ಶಾಮರಾಯರು ನನಗೆ ಕೊಡುಗೆಯಾಗಿ ನೀಡಿದ್ದ ಷಷ್ಠ್ಯಬ್ದಿಪೂರ್ತಿಗೆ ದಿವಂಗತ ಪ್ರೊ. ಟಿ.ಎಸ್. ವೆಂಕಣ್ಣಯ್ಯನವರ ಸ್ಮಾರಕ ಗ್ರಂಥ 'ಸವಿನೆನಪು' ಆದದ್ದು ನನ್ನ ಇನ್ನೊಂದು ಭಾಗ್ಯ. ಈ ಮೊದಲು ಟಿ.ಎಸ್. ವೆಂಕಣ್ಣಯ್ಯನವರ ಬಗ್ಗೆ ಕೆಲಮಟ್ಟಿಗೆ ತಿಳಿದುಕೊಂಡಿದ್ದೆನಾದರೂ ಈ ಸ್ಮಾರಕ ಗ್ರಂಥದ ಪ್ರಧಾನ ಸಂಪಾದಕರಾದ ಕುವೆಂಪು ಅವರು ಅದಕ್ಕೆ ಬರೆದ ಮುನ್ನುಡಿಯನ್ನು ಓದಿ ನಾನು ನಿಜಕ್ಕೂ ರೋಮಾಂಚಿತನಾದೆ. ಹಾಗೆಯೇ ಪ್ರಕಾಶಕರಾಗಿ ಶಾಮರಾಯರು ಬರೆದ 'ಪ್ರಕಾಶಕ ಭಗೀರಥನ ಬಿನ್ನಹ' ವನ್ನೋದಿ ಕಳವಳವೂ ಆಯಿತು. ಅಂತೂ ಸಂಸ್ಮರಣ ಗ್ರಂಥಗಳ ಪರಂಪರೆಯಲ್ಲಿ 'ಸವಿನೆನಪು' ಟಿ.ಎಸ್. ವೆಂಕಣ್ಣಯ್ಯನವರ ಭವ್ಯ ವ್ಯಕ್ತಿತ್ವಕ್ಕೆ ತಕ್ಕಂತೆ ಒಂದು ಮೈಲು ಗಲ್ಲನ್ನೇ ಸ್ಥಾಪಿಸಿತೆನ್ನಬಹುದು.

ತ.ಸು. ಶಾಮರಾಯರು ವಯಸ್ಸಾಗುತ್ತಿದ್ದಂತೆ ಗ್ರಂಥಮಾಲೆಯ ಜವಾಬ್ದಾರಿಯನ್ನು ಮಗ ಛಾಯಾಪತಿಗೆ ವಹಿಸಿಕೊಟ್ಟರು. ಆಗತಾನೆ ಎಂ.ಕಾಂ. ಪದವಿ ಪಡೆದಿದ್ದ ಛಾಯಾಪತಿ ಗ್ರಂಥಮಾಲೆಯ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿಕೊಂಡು (1968) ಅವರ ಮಾರ್ಗದರ್ಶನದಲ್ಲಿ ಹೊಸಕಾಲಕ್ಕೆ ತಕ್ಕಂತೆ ಹೊಸತನದಿಂದ ಮುನ್ನಡೆಸಿಕೊಂಡು ಬರುತ್ತಿದ್ದಾರೆ. ನನ್ನ ಒಂಬತ್ತನೆಯ ಕವನ ಸಂಗ್ರಹ 'ನಗರದಲ್ಲಿ ನೆರಳು' 1974ರಲ್ಲಿ ಪ್ರಕಟಿಸಿ ಛಾಯಾಪತಿ ಮಾಲೆಯ ಜೊತೆಗಿರುವ ಸಂಬಂಧವನ್ನು ಗಟ್ಟಿಗೊಳಿಸಿದರು. 1983ರಲ್ಲಿ 'ಸ್ವಸ್ತಿ'ಯನ್ನು ಪ್ರಕಟಿಸುವುದರ ಮೂಲಕ ಛಾಯಾಪತಿ ಅಭಿನಂದನ ಗ್ರಂಥಗಳ ಪರಂಪರೆಯಲ್ಲಿ ಇನ್ನೊಂದು ಮೈಲುಗಲ್ಲನ್ನು ಸ್ಥಾಪಿಸಿದರೆಂದರೆ ಅತಿಶಯೋಕ್ತಿ ಯಾಗದು. ಇದು ತ.ಸು. ಶಾಮರಾಯರಿಗೆ ಅವರ ಎಪ್ಪತ್ತೈದನೆಯ ಹುಟ್ಟುಹಬ್ಬದ ನೆನಪಿಗಾಗಿ ಶಿಷ್ಯರೂ ಮಿತ್ರರೂಬ ಅಭಿಮಾನಿಗಳೂ ಒಪ್ಪಿಸಿದ ಗೌರವ ಗ್ರಂಥ. ಇದರ ಸಂಪಾದಕರಾದ ಡಾ. ಹಾ.ಮಾ. ನಾಯಕ, ಡಾ. ಸಿ.ಪಿ. ಕೃಷ್ಣಕುಮಾರ್ ಹಾಗೂ ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರಿಯವರು ತಮ್ಮ 'ಮೊದಲ ಮಾತು'ವಿನಲ್ಲಿ 'ಶಾಮರಾಯರು ಕನ್ನಡ ನವೋದಯದ ಆಚಾರ್ಯರಲ್ಲೊಬ್ಬರಾದ ಟಿ.ಎಸ್. ವೆಂಕಣ್ಣಯ್ಯನವರ ತಮ್ಮ. ಆದರೆ ಅವರ ಕೀರ್ತಿ ಅಣ್ಣನ ಹೆಸರನ್ನು ಅವಲಂಬಿಸಿದ್ದಲ್ಲ. ತಮ್ಮ ಸಾಧನೆಯ ಬಲದಿಂದ ಶ್ರೀ ಶಾಮರಾಯರು ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಒಂದು ವಿಶಿಷ್ಟ ಸ್ಥಾನಕ್ಕೆ

ಹಕ್ಕುದಾರರಾಗಿದ್ದಾರೆ ಎಂದಿರುವುದು ಅತ್ಯಂತ ಸೂಕ್ತವಾಗಿದೆ. ಈ ಗ್ರಂಥದ ಮೊದಲನೆಯ ಭಾಗದಲ್ಲಿ ಹೊಸಗನ್ನಡದ ಎಪ್ಪತ್ತೆಂಟು ಮಹತ್ವದ ಪುಸ್ತಕಗಳನ್ನು ಕುರಿತ ಎಪ್ಪತ್ತೆಂಟು ಲೇಖನಗಳಿವೆ. ಮುದ್ದಣನಿಂದ ಹಿಡಿದು ಅವನಿಗಿಂತ ಹಿಂದಿನ ಕೆಲವರು ಲೇಖಕರೂ ಇಲ್ಲಿದ್ದಾರೆ - ದೇವನೂರು ಮಹಾದೇವರವರೆಗೆ ಇಲ್ಲಿ ಕೃತಿ ಸಮೀಕ್ಷೆಯ ಹರಹು. ಇವರೆಲ್ಲ ಸಾಧ್ಯವಿದ್ದಷ್ಟು ಪ್ರಾತಿನಿಧಿಕ ಲೇಖಕರಿರುವಂತೆ ಸಂಪಾದಕರು ನೋಡಿಕೊಂಡಿರುವುದರಿಂದ ಇಪ್ಪತ್ತನೆಯ ಶತಮಾನದ ಮಹತ್ವದ ಕೃತಿಗಳಲ್ಲಿ ಇವೂ ಸೇರುತ್ತವೆಂಬುದರಲ್ಲಿ ಸಂಶಯವಿಲ್ಲ. ಹೀಗೆ 'ಸ್ವಸ್ತಿ' ಅಭಿನಂದನ ಗ್ರಂಥಗಳಿಗೆ ಹೊಸಹಾದಿಯನ್ನು ತೋರಿಸಿತೆಂದರೆ ತಪ್ಪಾಗದು.

ಕನ್ನಡ ನಾಡಿನಲ್ಲಿ ವಿವಿಧ ಬಗೆಯ ಸಾಹಿತ್ಯದ ಬೆಳವಣಿಗೆಗೆ ಪ್ರಕಾಶಕರು ಸಲ್ಲಿಸುತ್ತ ಬಂದಿರುವ ಸೇವೆ ಗಮನಾರ್ಹವಾದದ್ದು. ಅಂತೆಯೇ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಉತ್ತಮ ಗುಣಮಟ್ಟದ ಗ್ರಂಥಗಳು ಬೆಳಕಿಗೆ ಬರುವದು ಸಾಧ್ಯವಾಗಿದೆ. ಲೇಖಕರಿಗೂ ಇದು ಪ್ರೋತ್ಸಾಹದಾಯಕವಾಗಿರುವುದು ಸರ್ವವಿದೀತ ಸಂಗತಿಯಾಗಿದೆ. ಕೆಲವು ಪ್ರಕಾಶಕರು ಲೇಖಕರೂ ಆಗಿ ಹೆಸರು ಮಾಡಿದವರಿದ್ದಾರೆ. ಅಂಥವರು ತಮ್ಮ ಹೊಣೆಗಾರಿಕೆಯನ್ನು ಸರಿಯಾಗಿಯೇ ನಿರ್ವಹಿಸಿರುವುದನ್ನು ಕಾಣುತ್ತೇವೆ. ವ್ಯಾವಹಾರಿಕ ಜಾಣ್ಮೆಯನ್ನೂ ಸಾಧಿಸಿಕೊಂಡ ಟಿ.ಎಸ್. ಛಾಯಾಪತಿಯವರು ಪ್ರಕಾಶನ ಕಾರ್ಯವನ್ನು ಶಾಮರಾಯರಂತೆ ಕೇವಲ ಹವ್ಯಾಸವಾಗಿ ಇಟ್ಟುಕೊಳ್ಳದೆ ಪ್ರಕಾಶನ ವೃತ್ತಿಯನ್ನು ಒಂದು ತಪಸ್ಸಿನಂತೆ ಭಾವಿಸಿ ತಮ್ಮನ್ನು ಇಡಿಯಾಗಿ ತೊಡಗಿಸಿಕೊಂಡವರು. ಆದ್ದರಿಂದ ಈ ಅವಧಿಯಲ್ಲಿ ಕಾವ್ಯ, ಕಥೆ, ನಾಟಕ, ಪ್ರಬಂಧ, ವಿಮರ್ಶೆ, ಜೀವನಚರಿತ್ರೆ, ಅಂಕಣ ಬರೆಹ, ಪ್ರವಾಸ ಕಥನ, ಸಂಶೋಧನೆ, ಅಭಿನಂದನ - ಇವಕ್ಕೆ ಸಂಬಂಧಿಸಿದಂತೆ ಸಾವಿರಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ಈ ಮಾಲೆಯಲ್ಲಿ ಪ್ರಕಟಿಸಲು ಸಾಧ್ಯವಾಗಿದೆ. 1999ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರದಿಂದ 'ಅತ್ಯುತ್ತಮ ಪ್ರಕಾಶಕ' ಪ್ರಶಸ್ತಿಯನ್ನು ಇವರು ಪಡೆದಿದ್ದಾರೆ. ಒಂದು ಅವಧಿಗೆ ಆ ಪ್ರಾಧಿಕಾರದ ಸದಸ್ಯರನ್ನಾಗಿಯೂ ಸರಕಾರ ಇವರನ್ನು ನೇಮಿಸಿದ್ದುಂಟು. ನಾಡಿನ ವಿವಿಧ ಕ್ಷೇತ್ರಗಳ ಅನೇಕ ಗಣ್ಯ ಲೇಖಕರು ಈ ಮಾಲೆಯ ಲೇಖಕ ಬಳಗದಲ್ಲಿದ್ದಾರೆ. ಈ ಮಾಲೆಯ ಹಲವಾರು ಪುಸ್ತಕಗಳು ಹತ್ತಾರು ಮುದ್ರಣಗಳನ್ನು ಕಂಡಿರುವುದಲ್ಲದೆ, ವಿವಿಧ ಪ್ರಶಸ್ತಿಗಳಿಗೂ ಪಾತ್ರವಾಗಿವೆ.

ಛಾಯಾಪತಿ ಒಳ್ಳೆಯ ಲೇಖಕರೂ ಆಗಿದ್ದು ಇದುವರೆಗೆ ಇಪ್ಪತ್ತೂರು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ವ್ಯಕ್ತಿಚಿತ್ರಗಳನ್ನು ಕೊಡುವಲ್ಲಿ ಇವರ ಲೇಖನಿ ಪಳಗಿದೆ. ಇವರ ಕೃತಿ ರಚನೆಯಲ್ಲಿ ವಿಷಯ ವೈವಿಧ್ಯವಿದೆ. 'ಗಾಂಧೀಜಿಯ ಕನಸು ನಜೀರರಿಂದ ನನಸು' ಜಿಲ್ಲಾ ಪರಿಷತ್‌ನ ಕಾಯಿದೆಗಳ ಬಗ್ಗೆ ರಚಿಸಲಾಗಿದ್ದು, 'ಸರಳವಾಗಿ ಪ್ರತಿಯೊಬ್ಬ ಗ್ರಾಮಸ್ಥರೂ ತಿಳಿದುಕೊಳ್ಳುವಂತೆ ಚರ್ಚಿಸಲಾಗಿದೆ' ಎಂದು ಕುವೆಂಪು ಇಲ್ಲಿಯ

ಬರವಣಿಗೆಯ ರೀತಿಯನ್ನು ಮೆಚ್ಚಿಕೊಂಡದ್ದುಂಟು. 'ಆಡಳಿತ ಭಾಷೆ ಕನ್ನಡ' ಛಾಯಾಪತಿಯವರ ಸ್ವೋಪಜ್ಞವಾದ ಕೊಡುಗೆಯೆಂಬುದಾಗಿ ಡಾ. ಹಾ.ಮಾ. ನಾಯಕರು ಮೆಚ್ಚಿ ಈಗ ಬಂದಿರುವ ಎಲ್ಲ ಪುಸ್ತಕಗಳಿಗಿಂತ ಮುಂದೆ ಹೋಗಿದೆ ಎಂದೂ ಹೇಳಿದ್ದಾರೆ. ತ.ಸು.ಶಾಮರಾಯರು 94 ವರ್ಷಗಳ ತುಂಬು ಬಾಳನ್ನು ಬಾಳಿ ತೀರಿಕೊಂಡ ಕೆಲ ವರ್ಷಗಳ ಮೇಲೆ ಛಾಯಾಪತಿ 'ಅಣ್ಣನ ಸ್ಮರಣೆ' ಬರೆದರು. ಈ ಪುಸ್ತಕದ 'ನೂರು ನೆನಪಿನ' ಬಿಂದುಗಳಲ್ಲಿ ಶ್ರೀ ತ.ಸು. ಶಾಮರಾಯರ ಅತ್ಯಂತ ಮಾನವೀಯವಾದ ವ್ಯಕ್ತಿತ್ವದ ಮಹತ್ತು ಮಿನುಗುತ್ತಿದೆ' ಎಂದು ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪನವರು ನುಡಿದಿದ್ದಾರೆ. ನನಗೂ ಅದು ಮೆಚ್ಚಿಗೆಯ ಪುಸ್ತಕವಾಗಿತ್ತು.

ಇಸವಿ 2000 ತ.ವೆಂ. ಸ್ಮಾರಕ ಗ್ರಂಥಮಾಲೆಗೆ ಬಂಗಾರದ ಹಬ್ಬ. ಆ ಒಂದು ವರ್ಷದ ಅವಧಿಯಲ್ಲಿ 50 ಪುಸ್ತಕಗಳನ್ನು 'ಬಂಗಾರದ ಬೆಳೆ'ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟಿಸಲು ಛಾಯಾಪತಿ ಯೋಚಿಸಿದಾಗ ಆ ಬೆಳೆಯ 9ನೆಯ ಕುಸುಮವಾಗಿ ನನ್ನ 'ಬರೆದು ತೀರದ ಬದುಕು' ಕವನ ಸಂಗ್ರಹ ಪ್ರಕಟವಾದದ್ದೊಂದು ಯೋಗಾಯೋಗ. ಆ ಒಂದು ಅವಧಿಯಲ್ಲಿಯೇ ಐವತ್ತು ಪುಸ್ತಕಗಳು ಹೊರಬಂದಿದ್ದರಿಂದ ಮಾಲೆಗೆ ಇನ್ನಿಷ್ಟು ಮೆರುಗು ಬಂದಂತಾಯಿತು.

ಛಾಯಾಪತಿಯವರು ಪ್ರಕಾಶನಕ್ಕೆ ಸಂಬಂಧಪಟ್ಟಂತೆ ಯಾವಾಗಲೂ ಹೊಸ ಪ್ರಯೊಗಗಳ ಬಗ್ಗೆ ಯೋಚನೆ ಮಾಡುತ್ತಿರುತ್ತಾರೆ. ಅದರ ಪರಿಣಾಮವಾಗಿಯೇ 2009ರಲ್ಲಿ ನನ್ನ ಹದಿನಾರು ಬಿಡಿ ಕವನ ಸಂಗ್ರಹಗಳು ಏಕಕಾಲಕ್ಕೆ ಪ್ರಕಟಗೊಳ್ಳು ವಂತಾಯಿತು. ನನ್ನ ಸಮಗ್ರ ನಾಟಕ ಕಾವ್ಯ ಸಂಪುಟ ಮೂರು ಮುದ್ರಣಗಳನ್ನು ಕಂಡಿದ್ದರೂ ವಿದ್ಯಾರ್ಥಿಗಳ ಹಾಗೂ ಸಾಮಾನ್ಯ ಓದುಗರ ದೃಷ್ಟಿಯಿಂದ ಬಿಡಿ ಸಂಗ್ರಹಗಳ ಪ್ರತಿಗಳೂ ಅವರಿಗೆ ಲಭ್ಯವಾಗುವದು ಪ್ರಯೋಜನಕಾರಿ ಎಂಬ ವಿಚಾರ ಛಾಯಾಪತಿಯವರಿಗೆ ಹೊಳೆದದ್ದೇ ತಡ, ನನಗೊಂದು ಮಾತು ತಿಳಿಸಿ, ಕೂಡಲೆ ಕಾರ್ಯ ಪ್ರವೃತ್ತರಾದರು. ಈ ಎಲ್ಲ ಹದಿನಾರು ಕೃತಿಗಳಿಗೂ ಕಲಾವಿದ ಸುಧಾಕರ ದರ್ಬೆಯವರು ಅರ್ಥವತ್ತಾದ ಚಿತ್ರಗಳೊಂದಿಗೆ ಮುಖಪುಟ ವಿನ್ಯಾಸ ಸಿದ್ಧಗೊಳಿಸಿದರು. ಬೆನ್ನು ಹೊದಿಕೆಯಲ್ಲಿ ಆ ಕೃತಿ ಮೊದಲು ಪ್ರಕಟವಾದಾಗ ಬಂದ ವಿಮರ್ಶಕರ ನುಡಿ, ಒಳಗೆ ಕಾವ್ಯದ ಪ್ರಾರಂಭದಲ್ಲಿ, ಆಯಾ ಅವಧಿಯದೊಂದು ಕವಿಯ ಭಾವ ಚಿತ್ರ. ಸುಲಭವಾದ ಬೆಲೆ. ಕಾವ್ಯ ಪ್ರಿಯರಿಗೆ ಇನ್ನೇನು ಬೇಕು? 2009, ಅಕ್ಟೋಬರ 29 ರಂದು ಸಂಜೆ 6 ಗಂಟೆಗೆ ಬೆಂಗಳೂರಿನ ಇನ್ಸಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಸಭಾಂಗಣದಲ್ಲಿ ಡಾ. ಜಿ.ಎಸ್. ಶಿವರುದ್ರಪ್ಪನವರು ಈ ಎಲ್ಲ ಹದಿನಾರು ಬಿಡಿ ಸಂಗ್ರಹಗಳನ್ನು ಬಿಡುಗಡೆ ಮಾಡಿ ಪ್ರಕಾಶಕರಾದ ಟಿ.ಎಸ್. ಛಾಯಾಪತಿಯವರ ಪ್ರಯತ್ನವನ್ನು ಮುಕ್ತಕಂಠದಿಂದ ಪ್ರಶಂಶಿಸಿದರು. ಇಷ್ಟರಲ್ಲಿಯೇ ಇವು ಪುನರ್ಮುದ್ರಣ

ಗೊಳ್ಳಬಹುದೆಂಬ ಸೂಚನೆಯನ್ನು ಛಾಯಾಪತಿಯವರು ನನಗೆ ನೀಡಿದ್ದಾರೆ. ಇದಕ್ಕೆ ಎರಡು ವರ್ಷಗಳ ಮುನ್ನ, ಅಂದರೆ 2007ರಲ್ಲಿ ನನ್ನ ಆಯ್ದ ಭಾವಗೀತೆಗಳ ಸಂಗ್ರಹ 'ಹೂವು ಹೊರಳುವವು ಸೂರ್ಯನ ಕಡೆಗೆ' ಪ್ರಕಟಿಸಿ ವಿಸ್ತೃತ ನಾಲ್ಕನೆಯ ಮುದ್ರಣದ ಪ್ರತಿಗೆ (110 ಪುಟಗಳು) ಕೇವಲ 27ರೂ. ಬೆಲೆ ಇಟ್ಟು ಸುಗಮಸಂಗೀತಗಾರರಿಗೆ ನೆರವಾದದ್ದನ್ನೂ ಇಲ್ಲಿ ನೆನೆಯಬೇಕು.

ಕಳೆದ ವರ್ಷ ಸೆಪ್ಟೆಂಬರ್ 18 ರಂದು ಬೆಂಗಳೂರಿನಲ್ಲಿ ಡಾ. ಜಿ.ಎಸ್. ಶಿವರುದ್ರಪ್ಪನವರನ್ನು ಕಾಣಲು ಅವರ ಮನೆಗೆ ಹೋಗಿದ್ದೆ. ಆರೋಗ್ಯ ಚೆನ್ನಾಗಿರದಿದ್ದರೂ ಗಾಲಿಕುರ್ಚಿಯಲ್ಲಿ ಕುಳಿತು ಬಂದು ಕೆಲಹೊತ್ತು ಮಾತನಾಡಿದರು. ತಮ್ಮ ಹದಿನಾಲ್ಕು ಕವನ ಸಂಗ್ರಹಗಳ ಬಿಡಿ ಪ್ರತಿಗಳ ಒಂದು ಸೆಟ್ಟನ್ನು ನೆನಪು ಮಾಡಿಕೊಂಡು ನನಗೆ ಕೊಟ್ಟರು. ದಪ್ಪಗಿನ ಹಾಳೆಯಲ್ಲಿ ಮುದ್ರಣಗೊಂಡ ಆ ಎಲ್ಲ ಸಂಗ್ರಹಗಳಿಗೂ ಚಂದ್ರನಾಥ ಆಚಾರ್ಯರು ಸೂಕ್ತವಾದ ಮುಖಚಿತ್ರಗಳನ್ನು ತೆಗೆದಿದ್ದು ಬೆಂಗಳೂರಿನ 'ಸಾಹಿತ್ಯಭಂಡಾರ'ದ ಶ್ರೀ ರಾಜ ಅವರು ಇವುಗಳನ್ನು ಪ್ರಕಟಿಸಿದ್ದಾರೆ. "ನಾಲ್ಕು ವರ್ಷಗಳ ಹಿಂದೆ ಛಾಯಾಪತಿ ನಿಮ್ಮ ಬಿಡಿ ಸಂಗ್ರಹಗಳನ್ನು ಏಕಕಾಲಕ್ಕೆ ಪ್ರಕಟಿಸಿದ್ದು ಇವರಿಗೆ ಪ್ರೇರಣೆ ನೀಡಿರಬೇಕು" ಎಂದು ಜಿ.ಎಸ್.ಎಸ್. ಆ ಸಂದರ್ಭದಲ್ಲಿ ಸಂತೋಷದಿಂದ ನೆನೆಪಿಸಿಕೊಂಡರು. ಜಿ.ಎಸ್.ಎಸ್. ಅವರ ಈ ಬಿಡಿ ಸಂಗ್ರಹಗಳೂ ಮುದ್ದಾಗಿವೆ. ಆದರೆ ಅವಕ್ಕೆ ಕವಿಯ ಭಾವಚಿತ್ರವಿಲ್ಲದಿರುವುದು ಒಂದು ಕೊರತೆ ಎನ್ನಿಸಿತು.

ಕೇಂದ್ರ ಸಾಹಿತ್ಯ ಅಕಾಡೆಮಿ, ಮಕ್ಕಳ ಸಾಹಿತ್ಯ ರಚನೆಯಲ್ಲಿ ವಿಶೇಷ ಕೆಲಸ ಮಾಡಿದವರಿಗೂ ಪುರಸ್ಕಾರ ನೀಡುತ್ತದಷ್ಟೆ. ಕಳೆದ ವರ್ಷ ಕವಿ ಮಿತ್ರ ಡಾ. ಎಚ್.ಎಸ್. ವೆಂಕಟೇಶಮೂರ್ತಿಯವರು ಅದಕ್ಕೆ ಭಾಜನರಾದರು. ಈ ಅವಕಾಶಕ್ಕಾಗಿಯೇ ಕಾದಿದ್ದರೆನ್ನುವಂತೆ ಛಾಯಾಪತಿಯವರು ತ.ವೆಂ. ಸ್ಮಾರಕ ಗ್ರಂಥಮಾಲೆಯಲ್ಲಿ ಎಚ್.ಎಸ್.ವಿ. ಅವರ ಸಮಗ್ರ ಮಕ್ಕಳ ಸಾಹಿತ್ಯ ಸಂಪುಟವನ್ನು ತಂದೇಬಿಟ್ಟರು. ಕಳೆದ ವರ್ಷ ನವೆಂಬರ್ 25 ರಂದು ಬೆಂಗಳೂರಿನ ರಾಜಲಕ್ಷ್ಮಿ ಕಲಾವೇದಿಕೆಯಲ್ಲಿ ಕಾವ್ಯಾಸಕ್ತರ ಸಮ್ಮುಖದಲ್ಲಿ ಅದರ ಬಿಡುಗಡೆಯೂ ನೆರವೇರಿತು. ಡಾ.ಗಿರಡ್ಡಿಗೋವಿಂದ ರಾಜ, ಪ್ರೊ. ಟಿ.ಪಿ. ಅಶೋಕ ಹಾಗೂ ನಾನು ಅತಿಥಿಯಾಗಿ ಮಾತನಾಡಿ ಕವಿ ಎಚ್.ಎಸ್. ವಿ ಹಾಗೂ ಪ್ರಕಾಶಕ ಛಾಯಾಪತಿಯವರೊಂದಿಗೆ ನಮ್ಮ ಸಂತೋಷವನ್ನು ಹಂಚಿಕೊಂಡೆವು.

ಇವತ್ತು ಕನ್ನಡದಲ್ಲಿ ಏನಿಲ್ಲೆಂದರೂ ಪ್ರತಿವರ್ಷ ಏಳೆಂಟು ಸಾವಿರ ಪುಸ್ತಕಗಳು ಪ್ರಕಟವಾಗುತ್ತಿರಬಹುದು. ಕಳೆದ ಒಂದೆರಡು ದಶಕಗಳಲ್ಲಿ ಬೆಳೆಯುತ್ತಿರುವ ಪ್ರಕಾಶಕರ ಸಂಖ್ಯೆಯನ್ನು ನೋಡಿದರೆ ಪ್ರಕಾಶನ ಸಂಸ್ಥೆಗಳ ಹೆಸರುಗಳನ್ನು ನೆನಪಿಟ್ಟುಕೊಳ್ಳುವುದೂ ಸಾಧ್ಯವಿಲ್ಲವೆಂದು ತೋರುತ್ತದೆ. ವಿಶ್ವವಿದ್ಯಾಲಯಗಳು, ಅಕಾಡೆಮಿಗಳು, ಪುಸ್ತಕ

ಪ್ರಾಧಿಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮುಂತಾದವುಗಳನ್ನು ಹೊರತು ಪಡಿಸಿಯೂ ಖಾಸಗಿ ಪ್ರಕಾಶಕರು ಆರೋಗ್ಯಕರವೆನಿಸುವ ಸ್ಪರ್ಧೆಯಿಂದ ಉತ್ಕೃಷ್ಟವಾದ ರೀತಿಯಲ್ಲಿ ಒಳ್ಳೊಳ್ಳೆಯ ಪುಸ್ತಕಗಳನ್ನು ತರುತ್ತಿರುವುದು ನಿಜಕ್ಕೂ ಸಂತೋಷದ ಸಂಗತಿ. ಉದಾಹರಣೆಗೆ ಈಗ ನನ್ನೆದುರು ಇತ್ತೀಚೆಗೆ ಪ್ರಕಟವಾದ ಎರಡು ಪುಸ್ತಕಗಳಿವೆ. ಷ. ಶೆಟ್ಟರ್ ಬರೆದ 'ಹಳಗನ್ನಡ, ಲಿಪಿ, ಲಿಪಿಕಾರ, ಲಿಪಿ ವ್ಯವಸಾಯ' (ಅಭಿನವ ಪ್ರಕಾಶನ, ಬೆಂಗಳೂರು) ಮತ್ತು ಜಿ. ರಾಮನಾಥ ಭಟ್ ಅನುವಾದಿಸಿದ 'ರವೀಂದ್ರ ಕಾವ್ಯ ಸಂಚಯ' (ಗೀತಾಬುಕ್ ಹೌಸ್, ಮೈಸೂರು). ಹೆಸರಿಸಬೇಕಾದ ಇನ್ನೂ ಅನೇಕ ಗ್ರಂಥಗಳೂ ಹಾಗೂ ಪ್ರಕಾಶಕರೂ ಇದ್ದಾರೆ.

ಛಾಯಾಪತಿಯವರ ವಯೋಮಾನಕ್ಕನುಸರಿಸಿ (70) ಹಿಂದಿನ ಹಾಗೂ ಇಂದಿನ ಎಪ್ಪತ್ತು ಮಹತ್ವದ ಪ್ರಕಾಶಕನ ಸಂಸ್ಥೆಗಳನ್ನು ಕುರಿತು ಸಂಕ್ಷಿಪ್ತ ಲೇಖನಗಳನ್ನು ಈ ಅಭಿನಂದನ ಗ್ರಂಥ ಒಳಗೊಂಡಿದ್ದರೆ 'ಸ್ವಸ್ತಿ'ಯಂತೆ ಇದೂ ವಿಶಿಷ್ಟವಾಗುತ್ತಿತ್ತೆಂದು ನನ್ನ ಅನಿಸಿಕೆ. ಆದರೆ ಅದಕ್ಕೆ ವೇಳೆಯ ಕೊರತೆ ಇತ್ತೆಂದು ತೋರುತ್ತದೆ.

ಸನ್ಮಿತ್ರ ಶ್ರೀ ಟಿ.ಎಸ್. ಛಾಯಾಪತಿಯವರಿಗೆ ಹಾಗೂ ಅವರ ಕುಟುಂಬವರ್ಗಕ್ಕೆ ಎಲ್ಲ ಬಗೆಯ ಶುಭವನ್ನು ಕೋರುತ್ತೇನೆ.



## ಟಿ.ಎಸ್. ಛಾಯಾಪತಿ

ನೀಳಕಾಯ, ಮೆಲುವಾದ ಮೆದುಮಾತು, ಇವನಾರವ ಇವನಾರವ ಎನ್ನದೆ ಭೆಟ್ಟಿಯಾದ ಮರು ಕ್ಷಣದಲ್ಲಿಯೇ ಇವ ನಮ್ಮವ ಎನ್ನಿಸಿ ಬಿಡುವ ಆತ್ಮೀಯತೆ, ಸಾಹಿತ್ಯದ ಬಗ್ಗೆ ಪ್ರೀತಿ, ಸಾಹಿತಿಗಳ ಬಗ್ಗೆ ಅಪಾರ ಗೌರವ - ಮೈಸೂರಿನ ಗೆಳೆಯ ಛಾಯಾಪತಿ ಎಂದೊಡನೆ ನನ್ನೆದುರು ಪದರುಪದರಾಗಿ ಬಿಚ್ಚಿಕೊಳ್ಳುವ ಶಬ್ದಚಿತ್ರವಿದು.

ಕನ್ನಡ ನಾಡಿನ ಸಾಂಸ್ಕೃತಿಕ ರಾಜಧಾನಿ ಮೈಸೂರು - ಎಂಬುದು ಮಾಮೂಲಿ ಮಾತು. ರಾಜರಿದ್ದ ಊರುಗಳಿಗೆಲ್ಲ ಈ ಪದವಿ ಬರಲಾರದು, ಸೃಜನ ಶೀಲ ಚೇತನಗಳೆಲ್ಲ ಒಟ್ಟಾಗಿ ಕಟ್ಟುವ ವಿದ್ಯಮಾನವಿದು. ನಮ್ಮ ನವೋದಯ ಸಂದರ್ಭದ ಇಂಥ ಹಿರಿಯ ಚೇತನಗಳಲ್ಲಿ ಒಬ್ಬರು - ತ.ಸು. ಶಾಮರಾಯರು. ಅವರು ಸದಾ ವಂದ್ಯರು.

ಅವರ ಪುತ್ರ ಛಾಯಾಪತಿ ತಂದೆ ಪ್ರಾರಂಭಿಸಿದ ಪುಸ್ತಕ ಪ್ರಕಾಶನದ ಕಾಯಕವನ್ನು, ಸಮಕಾಲೀನ ಸಂದರ್ಭದ ಎಲ್ಲ ಬದಲಾವಣೆಗಳನ್ನು ಅಳವಡಿಸಿಕೊಳ್ಳುತ್ತಲೇ, ಸಾರ್ಥಕವಾಗಿ ಮುಂದುವರೆಸಿದ್ದಾರೆ. 'ಪ್ರಕಾಶನ' ಎಂಬುದು ಒಂದು 'ಉದ್ಯಮ' ವಾಗಿರುವ ಈ ದಿನಮಾನದಲ್ಲಿ ಗುಣಮಟ್ಟವನ್ನು ಕಾಯ್ದುಕೊಳ್ಳುವುದೇ ಒಂದು ಸಾಹಸದ ಕಾರ್ಯ. ಈ ನಿಟ್ಟಿನಲ್ಲಿ ಛಾಯಾಪತಿ ಎಂದಿಗೂ ರಾಜಿ ಮಾಡಿಕೊಂಡವರಲ್ಲ. ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಇಂದಿಗೂ ಕನ್ನಡ ಸಂಸ್ಕೃತಿಯ ಹೆಮ್ಮೆ ಗಳಲ್ಲಿ ಒಂದು.

ಛಾಯಾಪತಿ ನನಗೆ ನಿಕಟವಾದ ಪ್ರಸಂಗವಿದು. ಶ್ರೀಧರ ಅವರ ಸಂಪಾದಕತ್ವದ 'ಅಗ್ನಿ' ಸಾಪ್ತಾಹಿಕದಲ್ಲಿ ನಾನು ಐದು ವರ್ಷ ನಿರಂತರವಾಗಿ ಅಂಕಣ ಬರೆದೆ. ಅವನ್ನೆಲ್ಲ ಒಟ್ಟಾಗಿ ಎರಡು ಸಂಪುಟಗಳಲ್ಲಿ ತರಲು ಛಾಯಾಪತಿ ಮುಂದಾದಾಗ ನನಗೆ ಖುಶಿಯಾಯಿತು. ಹಾಗೆ ನೋಡಿದರೆ ಉತ್ತರ ಕರ್ನಾಟಕದ - ಅದರಲ್ಲೂ ಧಾರವಾಡದ -ಸಾಹಿತ್ಯವಲಯದೊಂದಿಗೆ ಅವರರು ಮೊದಲಿನಿಂದಲೂ ಒಡನಾಟ. ಚೆನ್ನವೀರ ಕಣವಿ ಅವರ ಇಡೀ ಸಾಹಿತ್ಯವನ್ನು ಅವರು ಹೊರತಂದಿದ್ದಾರೆ. ತ.ವೆಂ. ಸ್ಮಾರಕ ಗ್ರಂಥ ಮಾಲೆಯ ತೆಕ್ಕೆಯಲ್ಲಿ ಅಖಂಡ ಕರ್ನಾಟಕದ ಅಕ್ಷರ ಲೋಕ ಇಂದು ಪಡೆದಿದೆ.

---

**ಚಂದ್ರಶೇಖರ ಪಾಟೀಲ**

---

ತಂದೆ ತ.ಸು. ಶಾಮರಾಯರ ನೆನಪಿನ ಬಿಡಿ ಬಿಡಿ ಚಿತ್ರಗಳನ್ನು ಛಾಯಾಪತಿ ಪುಸ್ತಕ ರೂಪದಲ್ಲಿ ತಂದಿದ್ದಾರೆ. ಓದಿ ನಾನು ಮೆಚ್ಚಿಕೊಂಡಿದ್ದೇನೆ. ಆ ಕುರಿತು ನಾನು ಬರೆದ ಸಾಲುಗಳಿವು :

[ಸಂಕ್ರಮಣ ಸಂಚಿಕೆಯೊಂದರಲ್ಲಿ : 383-384 ಜನವರಿ, ಏಪ್ರಿಲ್ 2009]

ಇಂಥ ಮಹಾನುಭಾವರ ಜೀವನದ ಅನೇಕ ಪ್ರಸಂಗಗಳನ್ನು ಅಣ್ಣನ ಸ್ಮರಣೆಯಾಗಿ ದಾಖಲಿಸಿದವರು ಅವರ ಮಗ ಖ್ಯಾತ ಪುಸ್ತಕ ಪ್ರಕಾಶಕ ಶ್ರೀ ಛಾಯಾಪತಿಯವರು. ತಂದೆಯೊಂದಿಗೆ ಐದು ದಶಕಗಳ ಕಾಲ ಕಳೆದ ಇವರಿಗೆ ಅವರ ವ್ಯಕ್ತಿತ್ವದ ಅನೇಕ ಮುಖಗಳಲ್ಲಿ ಯಾವ ಅತಿಗಳೂ ಇಲ್ಲದೆ, ದೃಶ್ಯಗಳ ಮೂಲಕ ಹಿಡಿದಿಡಲು ಸಾಧ್ಯವಾಗಿದೆ. ಮೌಲ್ಯಗಳು ನಶಿಸುತ್ತಿರುವ ಈ ಹೊತ್ತು ಅಣ್ಣನಂಥವರ ಚರಿತ್ರೆ ಈ ಸಮಯಕ್ಕೆ ಅನಿವಾರ್ಯ ಎನ್ನುತ್ತಾರೆ ಛಾಯಾಪತಿ. ಡಾ. ಪ್ರಭುಶಂಕರ ಅವರು ಸೂಕ್ತ ಶಬ್ದಗಳಲ್ಲಿ ಗುರುನಮನ ಸಲ್ಲಿಸಿದ್ದಾರೆ.

ಕನ್ನಡ ನವೋದಯದ ಕಾಲದ ಸಾಹಿತ್ಯಿಕ ಸಾಂಸ್ಕೃತಿಕ ವಲಯದಲ್ಲಿ ಹಳೆಯ ಮೈಸೂರು ಭಾಗದಲ್ಲಿ ತ.ಸು. ಶಾಮರಾಯರು ಬಹಳ ದೊಡ್ಡ ಹೆಸರು. ಪ್ರಕಾಂಡ ಪಂಡಿತರಾಗಿದ್ದ ಅವರು ತಮ್ಮ ಓರಗೆಯೇ ಘಟಾನುಘಟಿಗಳಿಗಿಂತ ಬಹಳ ಭಿನ್ನವಾಗಿ ಬದುಕಿದವರು. ಜಾತಿ ಮತಗಳ ಸಂಕುಚಿತ ಬೇಲಿಯನ್ನು ಮೀರಿ ಮಾನವೀಯತೆಯ ನೆಲೆಯಲ್ಲಿ ಅವರ ಶಿಷ್ಯಕೋಟಿ ಅಪಾರ. ಅತಿಥಿ ಸತ್ಕಾರದಲ್ಲಿ ಎತ್ತಿದ ಕೈ. ಹಿರಿಯ ಸಾಹಿತಿ ಚದುರಂಗರ 'ಮಾತಿಗೆ': ಶಾಮರಾಯರ ಮನೆ ಹನ್ನೆರಡನೆ ಶತಮಾನದ ಮಹಾಮನೆಯಂತಿತ್ತು.

ಸಹಜವಾಗಿಯೇ ಛಾಯಾಪತಿ ಪ್ರಕಾಶನ ವಲಯದಲ್ಲಿ ಮಾಡಿದ ಸಾಧನೆಗೆ ಅನೇಕ ಪುರಸ್ಕಾರಗಳು ಬಂದಿವೆ. ಇನ್ನೂ ಬರಲಿ. ಕರ್ತವ್ಯದಲ್ಲಿ ನಿರತರಾಗಿರುವ ಕಾಯಕ ಜೀವಿಗಳಿಗೆ ಈ ಸಮಷ್ಟಿ ಸ್ಪಂದನ ಮತ್ತು ಪ್ರೋತ್ಸಾಹ ಯಾವಾಗಲೂ ಚೇತೋಹಾರಿ. ಅವರ ಕ್ರಿಯಾಶೀಲತೆ ಇನ್ನೂ ಚುರುಕಾಗಲಿ; ನಾಡಿ-ನುಡಿಗೆ ಅವರು ಸಲ್ಲಿಸುತ್ತಿರುವ ಸೇವಾ ಕ್ಷೇತ್ರ ಇನ್ನೂ ವಿಸ್ತಾರವಾಗಲಿ ಅಂತ ಹಾರೈಸುತ್ತೇನೆ.

## ತಳುಕಿನ ಬೆಳಕು

ನನ್ನ ಆಪ್ತಮಿತ್ರರೂ, ಹಿತೈಷಿಗಳೂ ಮಾನವೀಯತೆಯ ಸಾಕಾರಮೂರ್ತಿಯೂ ಆದ ತಳುಕಿನ ಶಾಮರಾವ್ ಛಾಯಾಪತಿಯವರು ಎಪ್ಪತ್ತರ ಗಡಿಯನ್ನು ದಾಟಿದ್ದಾರೆಂಬ ಸಂಗತಿ ಅವರ ಅಪಾರ ಅಭಿಮಾನಿ ಬಳಗಕ್ಕೆ ತುಂಬಾ ಸಂತೋಷ ಉಂಟು ಮಾಡಿದೆ. ಪರರ ನೋವಿಗೆ ಸ್ಪಂದಿಸುವ, ಪರರ ಒಳಿತನ್ನೇ ಬಯಸುವ ಸಾಂಪ್ರದಾಯಿಕ ಪರಂಪರೆಯ ಕುಟುಂಬದಿಂದ ಬಂದ ಛಾಯಾಪತಿಯವರಿಗೆ ನಮ್ಮೆಲ್ಲರ ಕೋಟಿ ಕೋಟಿ ಅಭಿನಂದನೆಗಳು ಹಾಗೂ ಶುಭಾಶಯಗಳು, ಪಾರಂಪರಿಕ ಮೌಲ್ಯಗಳನ್ನು ಗೌರವಿಸುವ ಸಮಾಜ ಮುಖಿ ಚಿಂತನೆಯ ಛಾಯಾಪತಿಯವರಿಗೆ ಹಾಗೂ ಅವರ ಕುಟುಂಬ ವರ್ಗದವರಿಗೆ ಭಗವಂತನು ಆಯುರಾರೋಗ್ಯಾದಿಭಾಗ್ಯಗಳನ್ನು ಕರುಣಿಸಲೆಂಬುದೇ ನಮ್ಮೆಲ್ಲರ ಪ್ರಾರ್ಥನೆ.

ಏಳು ದಶಕಗಳ ಕಾಲ ಅವರು ತುಳಿದ ಹಾದಿ ಸುಗಮವಾದದ್ದೇನಲ್ಲ. ನಡೆದು ಬಂದ ಹಾದಿಯ ಕಡೆ ಒಂದು ಹಿನ್ನೋಟ ಹರಿಸಿದಾಗ ಅದು ನಿಜಕ್ಕೂ ರೋಮಾಂಚಕ ಅನುಭವವೇ ಹೌದು. ವಾಣಿಜ್ಯ ಕ್ಷೇತ್ರದಲ್ಲಿ ಮಾಸ್ಟರ್ಸ್ ಪದವಿಗಳಿಸಿದ ಛಾಯಾಪತಿಯವರು  ವಿಶ್ವವಿದ್ಯಾನಿಲಯದ ಶಿಕ್ಷಕನೋ ಅಥವಾ ಬ್ಯಾಂಕ್ ಅಧಿಕಾರಿಯೋ ಆಗಬಹುದಿತ್ತು. ಆದರೆ ಅವರು ಹಾಗೆ ಮಾಡಲಿಲ್ಲ. ತಮ್ಮ ತಂದೆಯವರಾದ ತ.ಸು. ಶಾಮರಾಯರು ಸ್ಥಾಪಿಸಿದ ತಳುಕಿನ ವೆಂಕಣ್ಣಯ್ಯ ಸ್ಮಾರಕ ಪ್ರಕಾಶನ ಸಂಸ್ಥೆಯನ್ನು ಮುಂದುವರಿಸಿಕೊಂಡು ಹೋಗುವ ನಿರ್ಧಾರ ಮಾಡುತ್ತಾರೆ. ಆಗಿನ್ನೂ ಛಾಯಾಪತಿಯವರು ಇಪ್ಪತ್ನಾಲ್ಕು ವರ್ಷದ ಯುವಕ. ನಾಲ್ಕೂವರೆ ದಶಕಗಳ ಕಾಲ ಕಾಯಾ, ವಾಚಾ ಮನಸಾ ಪ್ರಕಾಶನದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡು ಮಹತ್ತರ ಸಾಧನೆಯನ್ನೇ ಮಾಡಿದ್ದಾರೆ. 'ಸಾವಿರ ಪುಸ್ತಕಗಳ ಸರದಾರ', 'ಕನ್ನಡ ಪ್ರಕಾಶನ ರತ್ನ', 'ಸಾಹಿತ್ಯ ಸೇವಾ ಧುರೀಣ', ಇತ್ಯಾದಿ ಬಿರುದಾಂಕಿತರಾಗಿದ್ದಾರೆ. ಬಂದಿರುವ ಪ್ರಶಸ್ತಿಗಳು ನಡೆದಿರುವ ಸನ್ಮಾನಗಳಂತೂ ಲೆಕ್ಕವಿಲ್ಲದಷ್ಟು. ಇವರು ರಚಿಸಿದ ಕೃತಿಗಳಿಗೆ ಕನ್ನಡನಾಡಿನ ಖ್ಯಾತ ಸಾಹಿತಿಗಳ ಪ್ರಶಂಸೆ ಸಂದಿದೆ. ಇಪ್ಪತ್ತೆರಡು ಕೃತಿಗಳು ಇವರ ಸಾಹಿತ್ಯ ಪ್ರೇಮಕ್ಕೆ ಸಾಕ್ಷಿಯಾಗಿ ನಿಂತಿವೆ. ಎಪ್ಪತ್ತರ ವಯಸ್ಸಿನಲ್ಲೂ ಅವರಲ್ಲಿರುವ ಕ್ರಿಯಾಶೀಲತೆ

---

**ಸಿ.ಕೆ.ಎನ್. ರಾಜ**

---

ಎಂತಹವರಿಗೂ ಆಶ್ಚರ್ಯ ಉಂಟು ಮಾಡುತ್ತದೆ. ಯಾವುದೋ ಒಂದು ಅದಮ್ಯ ಚೇತನ ಅವರ ವ್ಯಕ್ತಿತ್ವದಲ್ಲೇ ಹುದುಗಿದೆ. ಸಕಾರಾತ್ಮಕ ಚಿಂತನ ಅವರ ಜೀವನದ ಒಂದು ಭಾಗವೇ ಆಗಿದೆ.

ಸಾಹಿತ್ಯ ಕ್ಷೇತ್ರದಲ್ಲೇ ಇರುವ ಛಾಯಾಪತಿಗಳಿಗೂ ಕಾನೂನು ಕ್ಷೇತ್ರದ ಶಿಕ್ಷಕನಾದ ನನಗೂ ಎಲ್ಲಿಯ ನಂಟು? ಎತ್ತಣ ಮಾಮರ, ಎತ್ತಣ ಕೋಗಿಲೆ? ಯಾವ ಜನ್ಮದ ಮೈತ್ರಿ ನಮ್ಮಿಬ್ಬರನು ಇಂದು ಬಂಧಿಸಿಹುದೋ ನಾ ಕಾಣೆ. ಸಾಹಿತ್ಯ ಸಮಾರಂಭಗಳಲ್ಲಿ ನಾವು ಅನೇಕ ಬಾರಿ ಭೇಟಿಯಾಗಿದ್ದೆವು. ನಾನು ಸಾಹಿತಿಯೂ ಅಲ್ಲ. ಬರಹಗಾರನಂತೂ ಮೊದಲೇ ಅಲ್ಲ. ಖಾಲಿ ಹಾಳೆ ಕಂಡರೆ ತೋಚಿದ್ದನ್ನು ಗೀಚುವವನೂ ನಾನೇ. ತೋಚದೇ ಗೀಚುವವನೂ ನಾನೇ. ವಸ್ತು ಸ್ಥಿತಿ ಹೀಗಿರುವಾಗ ನನಗೂ ಛಾಯಾಪತಿಯವರಿಗೂ ಬಿಡಿಸಲಾಗದ ಬಾಂಧವ್ಯ, ವಿವರಿಸಲಾಗದ ಆತ್ಮೀಯತೆ ಇರುವುದಂತೂ ಸತ್ಯ.

ಹಲವಾರು ತಿಂಗಳುಗಳ ಹಿಂದಿನ ಮಾತು. ಒಂದು ಮಧ್ಯಾಹ್ನ ಒಂದು ಘಂಟೆಯ ಹೊತ್ತಿನಲ್ಲಿ ಛಾಯಾಪತಿಯವರು ನಮ್ಮ ಮನೆಗೆ ಬಂದರು. ಪುಸ್ತಕಗಳ ಪ್ರಕಟಣೆ ಯಿಂದ ಪ್ರಾರಂಭವಾದ ಮಾತು ಎಲ್ಲೆಲ್ಲಿಗೋ ತಿರುಗಿ ಸಾಹಿತಿಗಳನ್ನು ಕುರಿತು ಪ್ರಸ್ತಾಪಕ್ಕೆ ತಿರುಗಿತು. ತಳುಕಿನ ವೆಂಕಣ್ಣಯ್ಯನವರು, ತ.ಸು. ಶಾಮರಾಯರು, ತ.ರಾ. ಸುಬ್ಬರಾಯರಿಂದ ಪ್ರಾರಂಭವಾಗಿ ಕುವೆಂಪು, ದೇ.ಜ.ಗೌ, ಚನ್ನವೀರಕಣವಿ, ಜಿ.ಎಸ್. ಶಿವರುದ್ರಪ್ಪನವರು, ಹಾ.ಮಾ.ನಾಯಕರು, ವೆಂಕಟಾಚಲಶಾಸ್ತ್ರಿಗಳು, ಮಲ್ಲೇಪುರಂ ವೆಂಕಟೇಶ್‌ರವರು ಎಲ್ಲರ ಬಗ್ಗೆಯೂ ಛಾಯಾಪತಿಯವರು ತುಂಬಾ ಆತ್ಮೀಯತೆ ಯಿಂದ ಮಾತನಾಡಿದರು. ನಂತರ ಮಾತು ಪ್ರಕಾಶನ ಕ್ಷೇತ್ರದ ಕಷ್ಟಸುಖಗಳ ಕಡೆ ತಿರುಗಿತು; ಇಡೀ ಸಂಭಾಷಣೆಯಲ್ಲಿ ನಾನೊಬ್ಬ 'ಶ್ರೋತೃ' ಮಾತ್ರ. ನೀಳ ಶರೀರದ, ಎತ್ತರದ ನಿಲುವಿನ ಛಾಯಾಪತಿಯವರು ಮಾತನಾಡುತ್ತಿದ್ದರೆ ನಾನು ತುಂಬಾ ಕುತೂಹಲದಿಂದ ಕೇಳುತ್ತಿದ್ದೆ.

ಹಾಗೆಯೇ ಮಾತು ಕಾನೂನು ಕ್ಷೇತ್ರಕ್ಕೆ ತಿರುಗಿತು. ಛಾಯಾಪತಿ ನನ್ನ ಕಡೆ ಬಾಣ ಪ್ರಯೋಗ ಮಾಡೇ ಬಿಟ್ಟರು - 'ರಾಜ ಅವರೇ, ನೀವು ಸಾಮಾನ್ಯ ಮನುಷ್ಯರಿಗೆ ಅರ್ಥವಾಗುವಂತೆ ಸುಲಭವಾದ ಕನ್ನಡದಲ್ಲಿ ನಮ್ಮ ಸಂವಿಧಾನವನ್ನು ಕುರಿತು ಒಂದು ಕಿರುಪುಸ್ತಕವನ್ನೇಕೆ ಬರೆಯಬಾರದು?

'ಸಾಧ್ಯವಿಲ್ಲ' ಎಂದು ಹೇಳುವುದಾದರೂ ಹೇಗೆ? ಒಪ್ಪಿಗೆ ಸೂಚಿಸಿದೆ. ವಿಷಯ ಅಲ್ಲಿಗೆ ನಿಲ್ಲಲಿಲ್ಲ. ಛಾಯಾಪತಿಯವರಿಂದ 'ಪುಸ್ತಕ ಎಲ್ಲಿಯವರೆಗೆ ಬಂತು' ಎಂಬ ಪ್ರೀತಿ ಪೂರ್ವಕ ತನಿಖೆ ಶುರುವಾಯಿತು. ಅನಿವಾರ್ಯತೆಯನ್ನು ಮನಗಂಡ ನಾನು ಪುಸ್ತಕ ಬರೆದು ಮುಗಿಸಿದೆ. ದೂರವಾಣಿಯ ಮೂಲಕ ಛಾಯಾಪತಿಯವರಿಗೆ ತಿಳಿಸಿದೆ. ಅದಾದ ಹದಿನೈದು ದಿನಗಳಲ್ಲಿ ಪುಸ್ತಕ ಹೊರಬಂತು. ಬರಹಗಾರನಿಗೆ ಕೊಡುವ

ಪ್ರತಿಗಳನ್ನು ನನಗೆ ಕೊಡಲು ಛಾಯಾಪತಿಯವರೇ ಖುದ್ದಾಗಿ ಬಂದಿದ್ದರು. ಅವನ್ನು ಕೊಡುವಾಗ - 'ಇನ್ನು ಒಂದು ತಿಂಗಳಲ್ಲಿ ನಿಮ್ಮಿಂದ 'ಮಾನವ ಹಕ್ಕುಗಳನ್ನು' ಕುರಿತು ಒಂದು ಪುಸ್ತಕಬೇಕು. ಬರೆಯುವಿರಿ ತಾನೇ? ನಾನು ಒಪ್ಪಿಗೆ ಸೂಚಿಸಿದೆ. ಆದರೇಕೋ ಇನ್ನೂ ಬರೆಯಲಾಗಿಲ್ಲ. ಏತನ್ಮಧ್ಯೆ ಛಾಯಾಪತಿಯವರು ಮನೆಗೆ ಬಂದರು. ನಾನು ಮಕ್ಕಳಿಗಾಗಿ ಬರೆದಿದ್ದ ಒಂದು ನೂರು ನೀತಿ ಕತೆಗಳ ಹಸ್ತಪ್ರತಿಯನ್ನು ತೋರಿಸಿದೆ. ಸ್ಥಳದಲ್ಲೇ ಪ್ರಕಟಿಸಲು ತೀರ್ಮಾನಿಸಿದ ಛಾಯಾಪತಿಯವರು ಹಸ್ತಪ್ರತಿಯೊಡನೆ ಹೊರಟೇ ಬಿಟ್ಟರು. ಮಾರನೆಯ ದಿನ ಮಧ್ಯಾಹ್ನ ಮನೆಗೆ ಬಂದು ನಾನು ಬರೆದಿದ್ದ ಮೂಲ ಪ್ರತಿಯನ್ನು ನನಗೆ ಹಿಂತಿರುಗಿಸುತ್ತಾ 'ಎಲ್ಲವನ್ನೂ ಜೆರಾಕ್ಸ್ ಮಾಡಿಸಿ, ಡಿಟಿಪಿಗೆ ಕೊಟ್ಟಿದ್ದೇನೆ. ಅದಾದ ನಂತರ ಕಲಾವಿದರಿಂದ ಸೂಕ್ತ ಚಿತ್ರ ಬರೆಸಬೇಕು. ಆ ವೇಳೆಗೆ ನೀವು ಇನ್ನೂ ಇಪ್ಪತ್ತೈದು ಕತೆಗಳನ್ನು ಬರೆದಿದ್ದರೆ ಒಳ್ಳೆಯದು' ಅಂದವರೇ ಮನೆಗೆ ಹೊರಟರು. ಈ ಪ್ರಸಂಗ ಛಾಯಾಪತಿಯವರ ಕ್ರಿಯಾಶೀಲತೆಗೆ ಒಂದು ನಿದರ್ಶನ ಮಾತ್ರ.

ಬರಹಗಾರನಿಗೆ ಸಂಭಾವನೆ ನೀಡಲೇಬೇಕೆಂಬುದು ತ.ವೆಂ. ಸ್ಮಾರಕ ಗ್ರಂಥ ಮಾಲೆಯ ಪ್ರಕಾಶನದ ಧ್ಯೇಯವೆಂದೇ ಹೇಳಬೇಕು. ಇದನ್ನು ಎಳ್ಳಷ್ಟೂ ತಪ್ಪದಂತೆ ಪಾಲಿಸಿಕೊಂಡು ಬಂದಿರುವ ಛಾಯಾಪತಿಯವರಿಗೆ ಅಭಿನಂದನೆಗಳು ಸಲ್ಲಬೇಕು.

ಯಾರೊಡನೆ ಸಂಪರ್ಕಕ್ಕೆ ಬಂದರೂ ಶೀಘ್ರವಾಗಿ ಅವರನ್ನು ತುಂಬಾ ಆತ್ಮೀಯರಂತೆ ಕಾಣುವುದು ಛಾಯಾಪತಿಯವರಿಗೆ ರಕ್ತಗತವಾಗಿ ಬಂದಿರುವ ಗುಣ. 'ಸಾವಿರ ಪುಸ್ತಕಗಳ ಸರದಾರ'ನಾದರೂ ವ್ಯಾಪಾರೀ ಮನೋಭಾವ ಅವರಲ್ಲಿಲ್ಲ. ಮೂಲತಃ ಸುಸಂಸ್ಕೃತರೂ, ಸಜ್ಜನರೂ, ವಿನಯಶೀಲರೂ ಆದ ಛಾಯಾಪತಿಯವರದು ತುಂಬಾ ಅಪರೂಪದ ವ್ಯಕ್ತಿತ್ವ. ಜಾತ್ಯತೀತ ಮನೋಭಾವ ಅವರಿಗೆ ಅವರ ತಂದೆಯವರಿಂದ ಬಂದಿರುವ ಬಳುವಳಿ. ಅವರ ಮಾತುಗಳು ಹೊಮ್ಮುವುದು ನಾಲಿಗೆಯಿಂದಲ್ಲ ಹೃದಯದಿಂದ. ಜೀವನದಲ್ಲಿ ಇಂತಹ ಶ್ರೇಷ್ಠ ಪುರುಷನ ಪರಿಚಯ, ಸಾನ್ನಿಧ್ಯ ನನಗೆ ದೊರಕಿದ್ದು ನನ್ನ ಪೂರ್ವಾರ್ಜಿತ ಪುಣ್ಯಫಲವೆಂದೇ ನನ್ನ ಭಾವನೆ.

ಲೇಖಕರೊಬ್ಬರು ಟಿ.ಎಸ್. ವೆಂಕಣ್ಣಯ್ಯನವರು, ತ.ಸು. ಶಾಮರಾಯರು, ಮತ್ತು ತ.ರಾ. ಸುಬ್ಬರಾಯರನ್ನು 'ತಳುಕಿನ ಮನೆತನದ ನಂದಾದೀವಿಗೆ'ಗಳೆಂದು ಕರೆದಿರುವುದು ಹಾಗೂ ಛಾಯಾಪತಿಯವರನ್ನು ಅದೇ ಮನೆತನದ 'ಬೆಳಕಿನ ಪುಂಜ'ವೆಂದು ಕರೆದಿರುವುದು ತುಂಬಾ ಔಚಿತ್ಯ ಪೂರ್ಣವಾಗಿದೆ.

ಈ ಬಗೆಯ ಮೇರು ವ್ಯಕ್ತಿತ್ವದ ಛಾಯಾಪತಿಯವರು ಸಾಧಿಸಿರುವ ಯಶಸ್ಸಿನ ಹಿಂದೆ ಇರುವವರೇ ಶ್ರೀಮತಿ ಛಾಯಾಪತಿಯವರು. ಇವರದು ಹೇಳಿ ಮಾಡಿಸಿದಂತಹ ಆದರ್ಶ ದಾಂಪತ್ಯ. ಪತಿಯೊಡನೆ ಏರಿಳಿತಗಳಲ್ಲಿ, ಕಷ್ಟಸುಖಗಳಲ್ಲಿ ಸಮನಾಗಿ

ಪಾಲ್ಗೊಂಡ ಕೀರ್ತಿ ಶ್ರೀಮತಿ ಛಾಯಾಪತಿಯವರಿಗೆ ಸಲ್ಲಬೇಕು. 'ತಳುಕಿನ ಬೆಳಕು' ನಿರಂತರವಾಗಿ ಪ್ರಕಾಶಮಾನವಾಗಿರುವುದಕ್ಕೆ ಇವರೇ ಕಾರಣಕರ್ತರು.

ಕೊನೆಯದಾಗಿ ಒಂದು ಕೋಟಿ ರೂಪಾಯಿಗಳ ಪ್ರಶ್ನೆ ನಮ್ಮೆದುರು ನಿಲ್ಲುತ್ತದೆ. ಅದೇನೆಂದರೆ 'ನಾಲ್ಕೂವರೆ ದಶಕಗಳ ಕಾಲ ಗಮನಾರ್ಹವಾದ ಕೊಡುಗೆಯನ್ನು ಕನ್ನಡ ಸಾಹಿತ್ಯಕ್ಕೆ ನೀಡಿರುವ ಛಾಯಾಪತಿಯವರಿಗೆ 'ಕನ್ನಡ ರಾಜ್ಯೋತ್ಸವ ಪ್ರಶಸ್ತಿ' ಯಾಕೆ ಲಭಿಸಿಲ್ಲ? ಇದಕ್ಕೆ ಉತ್ತರ ನೀಡಬೇಕಾದವರು ಯಾರು? ಕರ್ನಾಟಕ ಸರ್ಕಾರವೇ? ಕನ್ನಡ ಕುಲಕೋಟಿಯೇ?

# ಶ್ರೀ ಟಿ.ಎಸ್. ಛಾಯಾಪತಿಯವರು - ನನ್ನ ಅನುಭವದಲ್ಲಿ

ಹೆಸರಾಂತ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಪ್ರಕಾಶಕರೂ ಹಾಗೂ ಹಿರಿಯ ಲೇಖಕರೂ ಆದ ಶ್ರೀ ಟಿ.ಎಸ್. ಛಾಯಾಪತಿಯವರು ಕರ್ನಾಟಕ ರಾಜ್ಯದ ಓದುಗರಿಗೂ, ಲೇಖಕರಿಗೂ, ಪತ್ರಕರ್ತರುಗಳಿಗೂ, ಹಾಗೂ ಸಾಹಿತಿಗಳಿಗೂ ಚಿರಪರಿಚಿತರು. ಸಮಾಜದ ಈ ವೃತ್ತದ ಮಂದಿಯಲ್ಲಿ ಶ್ರೀ ಛಾಯಾಪತಿಯವರ ಹೆಸರನ್ನು 'ಯಾರು ತಾನೆ ಕೇಳಿಲ್ಲ'? ಎಂಬ ಪ್ರಶ್ನೆಗೆ ಸರಿ ಉತ್ತರ 'ಅವರ ಹೆಸರನ್ನು ಯಾರು ತಾನೆ ಕೇಳಿಲ್ಲ?'. ಶ್ರೀ ಛಾಯಾಪತಿಯವರನ್ನು ಎಲ್ಲರೂ ಬಲ್ಲರು. ಅವರೊಬ್ಬ ಪ್ರಖ್ಯಾತ ಪುರುಷ. ಕಳೆದ ಅನೇಕ ದಶಕಗಳಿಂದ ನನಗೂ ಅವರ ಹೆಸರು ಸಂಘ ಸಂಸ್ಥೆಗಳ ಮತ್ತು ಸಾರ್ವಜನಿಕರ ಮೂಲಕ ಕೇಳಿ ಬರುತ್ತಿತ್ತು. ಆದರೆ ಛಾಯಾಪತಿಯವರನ್ನು ಖುದ್ದು ಭೇಟಿ ಮಾಡಲು ಅವಕಾಶಗಳು ದೊರಕಿರಲಿಲ್ಲ. ಹಿಂದಿನ ದಶಕದ ಮೊದಲಾರ್ಧದಲ್ಲಿ ಅವರನ್ನು ಸಂಪರ್ಕಿಸುವ ಒಂದು ಸದಾವಕಾಶ ನನಗೆ ದೊರಕಿತು. ಕ್ರಿ.ಶ. 2004-2005ರ ಸಾಲಿನಲ್ಲಿ ನನ್ನ ತಮ್ಮ ಪ್ರೊ. ವಿ. ನರಹರಿಯು ನನ್ನ ಜೀವನ ಚರಿತ್ರೆಯನ್ನು (ಅಣ್ಣನ ಮೇಲಿನ ವಾತ್ಸಲ್ಯದಿಂದ), ತನ್ನ ಸುರಿತ ಲೇಖನಿಯ ಮುಖೇನ ರಚಿಸಿದ. ಈ ಉತ್ತಮ ಶೈಲಿಯ ಗಾಂಭೀರ್ಯ ಕೃತಿಯು ನನ್ನನ್ನು ನಾನೇ ಕನ್ನಡಿಯಲ್ಲಿ ನೋಡಿಕೊಳ್ಳುವಂತಹ ದರ್ಪಣ ಗ್ರಂಥವಾಗಿತ್ತು. ಈ ಕೃತಿಯನ್ನು ಹೇಗೆ ಮತ್ತು ಯಾರ ಮೂಲಕ ಅಚ್ಚು ಹಾಕಿಸಿ ಪ್ರಕಟಿಸಬೇಕೆಂಬ ಪ್ರಸ್ತಾಪ ಬಂದಾಗ ಪ್ರೊ. ನರಹರಿ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಗೆ ವಹಿಸಿಕೊಡುವುದು ಸೂಕ್ತವೆಂದು ಅಭಿಪ್ರಾಯಪಟ್ಟರು. ಈ ಗ್ರಂಥಮಾಲೆಯ ಪ್ರಕಾಶಕರಾದ ಶ್ರೀ ಟಿ.ಎಸ್. ಛಾಯಾಪತಿಯವರು ಆಗಾಗಲೇ ಪ್ರೊ. ನರಹರಿ ವಿರಚಿತ ಅನೇಕ ಕೃತಿಗಳನ್ನು ತಮ್ಮ ಗ್ರಂಥಮಾಲಿಕೆಯ ಮೂಲಕ ಪ್ರಕಟಿಸಿದ್ದರು. ಅವರು ಪ್ರೊ. ನರಹರಿಯಿಂದ ಸಿದ್ಧಗೊಳಿಸಿದ ನನ್ನ ಜೀವನ ಚರಿತ್ರೆಯ ಮುದ್ರಣ ಮತ್ತು ಪ್ರಕಟಿಸುವ ಹೊಣೆಗಾರಿಕೆಯನ್ನು ವಹಿಸಿಕೊಂಡರು. ಆ ಸನ್ನಿವೇಶವು ನನ್ನ ಮತ್ತು ಶ್ರೀ ಛಾಯಾಪತಿಯವರ ಪರಿಚಯ ಮತ್ತು ಸ್ನೇಹಕ್ಕೆ ನಾಂದಿಯಾಯಿತು. 'ಪರಮಹೃದಯಿ' -ಡಾ. ವಿ. ಪರಮೇಶ್ವರ ಎಂಬ ಶೀರ್ಷಿಕೆಯಲ್ಲಿ ಪ್ರೊ. ನರಹರಿ

ಡಾ.ವಿ. ಪರಮೇಶ್ವರ

ವಿರಚಿತ ನನ್ನ ಜೀವನ ಚರಿತ್ರೆಯನ್ನು ಶ್ರೀ ಛಾಯಾಪತಿಯವರು ತಮ್ಮದೇ ಆದ ಸೊಗಸಾದ ಶೈಲಿಯಲ್ಲಿ ಮುದ್ರಿಸಿ ಪ್ರಕಟಿಸಿದರು. ಅದೊಂದು ಶ್ಲಾಘನೀಯವಾದ ಕಾರ್ಯ. ನನ್ನ ವೈದ್ಯ ಮಿತ್ರರು ನನ್ನ ಎಪ್ಪತ್ತೇಳನೆ ವರ್ಷ ವಯಸ್ಸು ತುಂಬಿದ ಹುಟ್ಟುಹಬ್ಬದ ಸ್ಮರಣೆಗಾಗಿ ಏರ್ಪಡಿಸಿದ್ದ ಸಾರ್ವಜನಿಕ ಸಭೆಯಲ್ಲಿ ದಿನಾಂಕ 18 ಮೇ 2008ರಂದು ನಿವೃತ್ತ ಮುಖ್ಯ ನ್ಯಾಯಾಧೀಶ ಡಾ. ಶ್ರೀ ವಿ.ಎಸ್. ಮಳಿಮಠರವರ ಅಮೃತ ಹಸ್ತದಿಂದ 'ಪರಮಹೃದಯಿ' ಪುಸ್ತಕವನ್ನು ಬಿಡಗಡೆ ಮಾಡಲಾಯಿತು. ಅಚ್ಚುಕಟ್ಟಾಗಿ ಮುದ್ರಣ ಹೊಂದಿದ ಈ ಕೃತಿಯು ಅಭಿಮಾನಿಗಳ ಮನೆಮಾತಾಯಿತು. ಹಾಗೂ ಶ್ರೀ ಛಾಯಾಪತಿಯವರ ಮೆಹನತ್ತಿನಿಂದ ಮುಂದಿನ ಒಂದು ವರ್ಷ ಕಾಲದಲ್ಲಿ 'ಪರಮಹೃದಯಿ - ಡಾ.ವಿ. ಪರಮೇಶ್ವರ' ಪುಸ್ತಕವು ಮೂರನೆಯ ಮುದ್ರಣವನ್ನು ಕಂಡಿತು. ಈ ಬಗ್ಗೆ ನಾನು ಶ್ರೀ ಛಾಯಾಪತಿಯವರಿಗೆ ಆಭಾರಿ. ಶ್ರೀ ಛಾಯಾಪತಿಯವರು ಮರು ಮುದ್ರಣಗಳನ್ನು ಶ್ರದ್ಧೆಯಿಂದ ಅಲ್ಪ ಕಾಲದಲ್ಲಿ ಒದಗಿಸಿಕೊಟ್ಟರು. ಅಲ್ಲದೆ ಕರ್ನಾಟಕ ರಾಜ್ಯದ ಅನೇಕ ಸಾರ್ವಜನಿಕ ಗ್ರಂಥಾಲಯಗಳಲ್ಲಿ ಈ ಪುಸ್ತಕವು ದೊರೆಯು ವಂತೆ ಮಾಡಿದರು. ಶ್ರೀ ಛಾಯಾಪತಿಯವರು ಶ್ರದ್ಧಾವಂತರು, ಕ್ರಿಯಾಶೀಲರು, ಅನುಭವಿಗಳು, ಅಭಿಮಾನಿಗಳು ಮತ್ತು ಆತ್ಮೀಯರು. ಶ್ರೀ ಛಾಯಾಪತಿಯವರಿಗೆ ಯಾವ ಕೆಲಸವಾಗಲೀ, ಯಾರ ಕೆಲಸವಾಗಲೀ ಅದು ಚಿಕ್ಕದು, ಇದು ದೊಡ್ಡದು ಎಂಬ ಭಾವನೆಗಳಿಲ್ಲ. ತಾನು ಒಪ್ಪಿಕೊಂಡ ಮೇಲೆ ಎಲ್ಲಾ ಕೆಲಸಗಳೂ ತನ್ನದೇ ಆದ ಕೆಲಸಗಳೆಂದು ಗುರಿಸಾಧನೆಯತ್ತ ಧಾವಿಸುವ ಸ್ವಭಾವದವರು. ಛಾಯಪತಿಯವರು ಸ್ನೇಹಪರರು, ಮೃದುಭಾಷಿ, ಸಂಭಾಷಣಾ ಚತುರರು.

ಸಮಾಜದಲ್ಲಿ ಕೆಲವರು ಸಜ್ಜನರು, ಮತ್ತೆ ಕೆಲವರು ಪರೋಪಕಾರಿಗಳು, ಇನ್ನು ಕೆಲವರು ಕೇಳಿದಲ್ಲಿ ಸಹಾಯವನ್ನು ಒದಗಿಸುವವರು, ಅಲ್ಲೊಬ್ಬ ಇಲ್ಲೊಬ್ಬ ಸಹಾಯ ಬೇಕಾಗಿರುವ ಪರಿಸ್ಥಿತಿಗಳನ್ನು ಹುಡುಕಿಕೊಂಡು ಹೋಗಿ ತಮ್ಮ ನೆರವನ್ನು ನೀಡುವವರು. ಶ್ರೀ ಛಾಯಾಪತಿಗಳು ಈ ಎಲ್ಲಾ ವರ್ಗಗಳಿಗೂ ಸೇರಿದವರು. ಛಾಯಾಪತಿಯವರು ಚಿಂತನದಲ್ಲಾಗಲಿ, ಗಂಭೀರ ಸ್ಥಿತಿಗಳಲ್ಲಾಗಲಿ ಹತಾಶರಾಗುವ ಪ್ರಕೃತಿಯವರಲ್ಲ. ಮಹತ್ವಾಕಾಂಕ್ಷಿಗಳು. ಉತ್ತೇಜನ ನೀಡುವುದರಲ್ಲಿ ನಿಪುಣರು. ಈ ಛಾಯಾಪತಿಯವರು ನನ್ನನ್ನು ಅನೇಕಬಾರಿ ಭೇಟಿ ಮಾಡಿರುವರು. ಜ್ಞಾನ ಪ್ರಸಾರಣೆ ಅವರ ಧ್ಯೇಯ. ಪ್ರತಿ ಭೇಟಿಯಲ್ಲಿಯೂ ತಾವು ಮುದ್ರಿಸಿ, ಪ್ರಕಟಿಸಿದ ಹಲವಾರು ಅಮೂಲ್ಯ ಗ್ರಂಥಗಳನ್ನು ನನಗೆ ಉಡುಗೊರೆಯಾಗಿ ತಂದು ಕೊಟ್ಟಿರುವರು. ಇವು ಜ್ಞಾನಾರ್ಜನೆಗೆ ಕೈ ದೀಪಗಳು. ಶ್ರೀ ಛಾಯಪತಿಯವರು ಯಾರನ್ನೂ ಹಗುರವಾಗಿ ಕಾಣುವವರಲ್ಲ. ಯಾರ ಬಗ್ಗೆಯೂ ಹಗುರ ಮಾತುಗಳನ್ನು ಆಡುವವರಲ್ಲ. 'ನಮ್ಮ ಆಧುನಿಕ ಸಮಾಜದಲ್ಲಿ ಅಧಿಕ ರಕ್ತದೊತ್ತಡ, ಬೊಜ್ಜುದೇಹ, ಮಧುಮೇಹರೋಗ ಮತ್ತು ಹೃದಯಾಘಾತಗಳು

ವಯಸ್ಸು ಮತ್ತು ಲಿಂಗ ಭೇದವಿಲ್ಲದೆ ಒಂದು ಸಾಂಕ್ರಾಮಿಕ ಪಿಡುಗುಗಳಂತೆ ಕಂಡು ಬರುತ್ತಿವೆ. ಈ ರೋಗಗಳ ಬಗ್ಗೆ ಜನ ಜಾಗೃತಿ ಮೂಡಿಸಲೂ ಹಾಗೂ ವೈದ್ಯರಿಗೂ, ಜನಸಾಮಾನ್ಯರಿಗೂ ವಿಷಯ ಸಂಗ್ರಹಣೆ ನೀಡಲೂ, ಈ ರೋಗಗಳ ಬಗ್ಗೆ ಕೃತಿಗಳನ್ನು ರಚಿಸಬೇಕೆಂದು ಸಂಕಲ್ಪಮಾಡಿ, 'ಬೊಜ್ಜುದೇಹ' ಮತ್ತು 'ಅಧಿಕ ರಕ್ತದೊತ್ತಡ' ಶೀರ್ಷಿಕೆಗಳ ಎರಡು ಪುಸ್ತಕಗಳನ್ನು ಹೊರತಂದಿದ್ದೇನೆ. ಮಧುಮೇಹರೋಗ ಹಾಗೂ ಹೃದಯಬೇನೆ -ಹೃದಯಘಾತ ರೋಗಗಳ ಬಗ್ಗೆ ಕೃತಿಗಳನ್ನು ಸಿದ್ದಪಡಿಸುತ್ತಿದ್ದೇನೆ' ಎಂಬ ವಿಷಯವನ್ನು ನಾನು ಶ್ರೀ ಛಾಯಾಪತಿಯವರೊಡನೆ ಸಂಭಾಷಣೆಯಲ್ಲಿ ಲೋಕಾಭಿರಾಮವಾಗಿ ಪ್ರಸ್ತಾಪ ಮಾಡಿದೆ. ಕಣ್ಣು ಮಿಟುಕುವಷ್ಟು ಕಾಲದಲ್ಲಿ ಛಾಯಾಪತಿಯವರು ಘಟಕ್ಕನೆ ಕುರ್ಚಿಯಿಂದ ಮೇಲೆ ಜಿಮ್ಮಿ, 'ಇದೊಂದು ನನಗೆ ಪರಮಾವಕಾಶ. ಆದಷ್ಟು ಬೇಗ ಈ ಪುಸ್ತಕಗಳ ಕರುಡು ಪ್ರತಿಗಳನ್ನು ನನಗೆ ಕಳುಹಿಸಿ. ಆ ಪುಸ್ತಕಗಳ ಮುದ್ರಣ, ಪ್ರಕಾಶನ ಮತ್ತು ಹಂಚಿಕೆಯ ಜವಾಬ್ದಾರಿಯನ್ನು ನನಗೆ ವಹಿಸಿ ಕೊಡಿ' ಎಂದು ಘಟ ಘಟನೆ ಉತ್ತರಿಸಿದರು, ಇದುವೇ ಶ್ರೀ ಛಾಯಾಪತಿಯವರು. ಕ್ಷಣ ಮಾತ್ರದಲ್ಲಿ ನಿರ್ಧಾರ ತೆಗೆದುಕೊಳ್ಳುವ ವ್ಯಕ್ತಿ. ಒಂದು ಕೃತಿಯು ಎಷ್ಟು ಉತ್ತಮ ದರ್ಜೆಯದಾದರೂ ಅದರ ಲೇಖಕನು ಪ್ರಕಾಶಕರನ್ನು ಕಾಡಿ, ಬೇಡಿ, ಅಂಜಿ, ಗಿಂಜಿ ತನ್ನ ಬರಹವನ್ನು ಹೊರತರಬೇಕಾಗಿ ಬಂದಿರುವ ಕಾಲದಲ್ಲಿ ಛಾಯಾಪತಿಗಳ ಆಶ್ವಾಸನಾ ಮಾತುಗಳು ಅವರ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವುದು. ಅಷ್ಟೇ ಅಲ್ಲ ಶ್ರೀ ಛಾಯಾಪತಿಯವರು 'ಮಧುಮೇಹರೋಗ' ಹಾಗೂ 'ಹೃದಯಬೇನೆ- ಹೃದಯಾಘಾತ' ಕೃತಿಗಳ ಬರವಣಿಗೆಗಳನ್ನು ಶೀಘ್ರದಲ್ಲಿ ಪೂರ್ಣಗೊಳಿಸಬೇಕೆಂದು ಎಡೆಬಿಡದೆ ನನ್ನನ್ನು ಒತ್ತಾಯಪಡಿಸಿದರು. ಸಿದ್ದವಾದ ಕರಡು ಪ್ರತಿಗಳನ್ನು ಸ್ವತಃ ಸ್ವೀಕರಿಸಿ ಕ್ಷಿಪ್ರ ಕಾಲದಲ್ಲಿ ಮುದ್ರಣಮಾಡಿ, ಮುದ್ರಿಸಿದ ಪ್ರತಿಗಳನ್ನು ಅನೇಕ ಬಾರಿ ಅವುಗಳ ತಿದ್ದುಪಡಿಗೆ ನನ್ನ ವಿಳಾಸಕ್ಕೆ ಮರು ರವಾನೆ ಮಾಡಿದರು. 'ಮಧುಮೇಹರೋಗ' ಹಾಗೂ 'ಹೃದಯಬೇನೆ ಮತ್ತು ಹೃದಯಾಘಾತ' ಪುಸ್ತಕಗಳಿಗೆ ಸುಂದರ ಮತ್ತು ಅರ್ಥಗರ್ಭಿತ ಮುಖ ಪುಟಗಳನ್ನು ಸೃಷ್ಟಿಸಿ ಪುಸ್ತಕಗಳ ಮುದ್ರಣಕ್ಕೆ ಚಾಲನೆ ನೀಡಿದರು. ಸೊಗಸಾಗಿ ಅಚ್ಚು ಹಾಕಿದ ಅಚ್ಚುಕಟ್ಟಿನ ಈ ಪುಸ್ತಕಗಳನ್ನು ಬೆಂಗಳೂರಿನಲ್ಲಿ ದಿನಾಂಕ 18 ಆಗಸ್ಟ್ 2013ರಂದು ಆಂಗ್ಲಭಾಷೆಯಲ್ಲಿ ರಚಿಸಿದ ನನ್ನ ಆತ್ಮಚರಿತ್ರೆಯ ಪುಸ್ತಕದ (My Tryst with Destiny) ಬಿಡುಗಡೆಯೊಂದಿಗೆ ಸಾರ್ವಜನಿಕ ಸಭೆಯಲ್ಲಿ ಲೋಕಾರ್ಪಣೆ ಮಾಡಲು ಸಕಾಲದಲ್ಲಿ ತಲುಪಿಸಿದರು. ಇದೊಂದು ಶ್ರೀ ಛಾಯಾಪತಿಯವರ ಕರ್ತವ್ಯ ನಿಷ್ಠೆ ಮತ್ತು ಜವಾಬ್ದಾರಿ ಸ್ವಭಾವಗಳಿಗೆ ಸಮರ್ಥನೆ ನೀಡುವ ಉದಾಹರಣೆ. ಎಲ್ಲರೂ ಮೆಚ್ಚಲೇಬೇಕಾದ ಮತ್ತು ಅನುಕರಣೆಗೆ ಯೋಗ್ಯವಾದ ಗುಣಗಳು.

## ಸಾಧನೆಯ ತ್ರಿವಿಕ್ರಮ

ತಳುಕಿನ ವೆಂಕಣ್ಣಯ್ಯನವರು ಉದ್ದಾಮ ಪಂಡಿತರು ಮತ್ತು ಕುವೆಂಪು ಅವರ ಗುರುಗಳಾಗಿದ್ದರೆಂದು ಕೇಳಿದ್ದೆ. ಅವರ ಸವಿನೆನಪನ್ನು ಉಳಿಸಿಕೊಂಡು ಮುಂದೆ ಸಾಗುವ ಸಮುದ್ದೇಶದಿಂದ ಅವರ ತಮ್ಮ ಶ್ರೀ ತ.ಸು. ಶಾಮರಾಯರು ತಳುಕಿನ ವೆಂಕಣ್ಣಯ್ಯನವರ ಹೆಸರಿನಲ್ಲಿ ಗ್ರಂಥಮಾಲೆಯನ್ನು ಪ್ರಾರಂಭಿಸಿದರು. (ತ.ವೆಂ. ಗ್ರಂಥಮಾಲೆಯನ್ನು ಪ್ರಾರಂಭಿಸಿದರು.)

ಅದನ್ನು ಮುಂದುವರಿಸಿಕೊಂಡು ಹೋಗುವ ಜವಾಬ್ದಾರಿಯನ್ನು ಶಾಮರಾಯರ ಪುತ್ರ ಶ್ರೀ ಛಾಯಾಪತಿಯವರು ವಹಿಸಿಕೊಂಡು, ಸಮರ್ಥರಾಗಿ ಗ್ರಂಥಮಾಲೆಯನ್ನು ಉಛ್ರಾಯ ಸ್ಥಿತಿಗೆ ತಂದರು. 'ಸಾವಿದ ಐದುನೂರಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ಪ್ರಕಟಿಸಿದ್ದಾರೆ. ಇವರು ಕೇವಲ ಪ್ರಕಾಶಕರೇ ಅಲ್ಲದೆ, ರೇಡಿಯೋ ಭಾಷಣಕಾರರು ಮತ್ತು, ಲೇಖಕರೂ ಹೌದು. ಹೀಗೆ ನಾನು ಇವರಲ್ಲಿ ಬಹುಮುಖ ಪ್ರತಿಭೆಯನ್ನು ಕಾಣುತ್ತೇನೆ.

1964ರಲ್ಲಿ ನನ್ನ ಪರಿಚಯವಾಗಿ 'ನನ್ನ ಪ್ರಥಮ ಗ್ರಂಥ' Manual of Experiments in psychology'ಯನ್ನು ಪ್ರಕಟಿಸಿದರು. ಇಂದು ಅದು ಹಲವು ಬಾರಿ ಮುದ್ರಣವಾಗಿ 'ಈ ಕ್ಷೇತ್ರದಲ್ಲಿ ಬೈಬಲ್ ಎನ್ನಿಸಿಕೊಂಡಿದೆ. ಈ ಗೌರವ ಛಾಯಾಪತಿಯವರಿಗೆ ಸಲ್ಲುತ್ತದೆ.

ಅನಂತರ ನನ್ನ ಒಂದು ಕಿರಿಯ ಗ್ರಂಥ 'ಶಿಕ್ಷಣದ ಸವಾಲನ್ನು' ಪ್ರಕಟಿಸಿದರು. ಅಂತೆಯೇ ನನ್ನ ಮತ್ತೊಂದು ಗ್ರಂಥ- 'ಕಾಮವಿಕಾರಗಳು', 'ನಿದ್ರೆ ಮತ್ತು ನಿದ್ರಾ ಸಮಸ್ಯೆಗಳು' ಎಂಬ ಎರಡು ಕಿರು ಗ್ರಂಥಗಳನ್ನೂ ಪ್ರಕಟಿಸಿದರಲ್ಲದೆ, ಇತ್ತೀಚೆಗೆ ಪುಸ್ತಕ ಪ್ರಾಧಿಕಾರದ ಸದಸ್ಯರಾಗಿದ್ದಾಗ 'ನನ್ನ ಮತ್ತೊಂದು ಗ್ರಂಥವನ್ನು ಕಾರ್ಲ್ ಗೆಸ್ಟೋವ್ ಯೂಂಗ್ ಎಂಬ ಗ್ರಂಥವನ್ನು ಪ್ರಕಟಿಸಿದರು. ಈ ಎಲ್ಲಾ ಪ್ರೋತ್ಸಾಹಕ್ಕಾಗಿ ನಾನು ಛಾಯಾಪತಿಯವರಿಗೆ ಚಿರಋಣಿಯಾಗಿದ್ದೇನೆ.

ಕಡೆಯದಾಗಿ ಇತ್ತೀಚೆಗೆ ನನ್ನ ಗ್ರಂಥ 'ಆರೋಗ್ಯ ಮನೋವಿಜ್ಞಾನ ಭಾಗ -೧ ಪ್ರಕಟಿಸಿದರು. ಹೀಗೆ ನನ್ನ ಸಾಹಿತ್ಯ ಪ್ರಗತಿಗೆ ಕಾರಣಕರ್ತರಾದರು. ಈ ಎಲ್ಲಾ ಸಹಾಯ

---

**ಪ್ರೊ. ಪಿ. ನಟರಾಜ್**

---

ಮತ್ತು ಪ್ರೋತ್ಸಾಹಕ್ಕಾಗಿ ನನ್ನ ಒಂದು ಗ್ರಂಥವನ್ನು ಅವರಿಗೆ ಅರ್ಪಿಸಿದ್ದೇನೆ.

ಈಗ ಟಿ.ಎಸ್. ಛಾಯಾಪತಿಯವರಿಗೆ ಅಕ್ಷರ ಬಾಗಿನವೊಂದನ್ನು ಸಂಸ್ಕೃತ ವಿ.ವಿ. ಕುಲಪತಿಗಳಾದ ಡಾ. ಮಲ್ಲೇಪುರಂ ಜಿ. ವೆಂಕಟೇಶ್ ರವರ ಸಂಪಾದಕತ್ವದಲ್ಲಿ ಅಕ್ಷರ ಬಾಗಿನವೊಂದನ್ನು ಅರ್ಪಿಸುತ್ತಿರುವುದು ನನಗೆ ತುಂಬಾ ಸಂತೋಷವನ್ನುಂಟು ಮಾಡಿದೆ. ಇಂಥ ಹಲವಾರು ಗೌರವಗಳು ಅವರಿಗೆ ಮುಂದೆಯೂ ಸಲ್ಲಲಿ ಎಂದು ಹಾರೈಸುತ್ತೇನೆ. ಒಂದೇ ಮಾತಿನಲ್ಲಿ ಹೇಳುವುದಾದರೆ, ಶ್ರೀ ಛಾಯಾಪತಿಯವರು ನೋಡುವುದಕ್ಕೆ ಗಾತ್ರದಲ್ಲಿ ವಾಮನ, ಸಾಧನೆಯಲ್ಲಿ ತ್ರಿವಿಕ್ರಮ, ಎಂದರೆ ತಪ್ಪಾಗಲಾರದು.

# ತಳುಕಿನ ಸಮಕಾಲೀನ ರತ್ನ : ಶ್ರೀ ಛಾಯಾಪತಿ

ಒಂದು ವಾರದ ಹಿಂದೆ ನಾನು ಮತ್ತು ನನ್ನ ಶ್ರೀಮತಿ ಹಾಗೂ ಎಸ್. ರಾಮಾನುಜ ಮತ್ತು ಅವರ ಶ್ರೀಮತಿಯವರು ಹಂಪೆಯಲ್ಲಿ ನಡೆದ ಇಪ್ಪತ್ತನಾಲ್ಕನೆಯ ದಕ್ಷಿಣ ಭಾರತ ನಾಣ್ಯ ಶಾಸ್ತ್ರ ಸಂಸ್ಥೆಯ ಸಮ್ಮೇಳನದಲ್ಲಿ ಭಾಗವಹಿಸಿದ್ದೆವು. ಸಮ್ಮೇಳನ ಅದ್ಭುತವಾಗಿ ನಡೆಯಿತು ಮತ್ತು ನಾಣ್ಯಶಾಸ್ತ್ರ ವಿದ್ವಾಂಸರು ಹತ್ತಾರು ಹೊಸ ನಾಣ್ಯಗಳನ್ನು ಬೆಳಕಿಗೆ ತಂದು ಪ್ರಬಂಧ ಮಂಡಿಸಿದರು. ಹೀಗೆ ಮಾತನಾಡುತ್ತ ಕುಳಿತಿದ್ದ ಸಮಯದಲ್ಲಿ ಶ್ರೀಮತಿ ರಾಮಾನುಜ ಅವರು ಈ ಊರಿನ ಸುತ್ತಮುತ್ತಲಿನ ವೈಶಿಷ್ಟ್ಯವೇನು ಎಂದು ವಿಚಾರಿಸುತ್ತಿದ್ದರು. ಆಗ ಪುರಾತತ್ವ ಇಲಾಖೆಯ ಕಮಿಷನರ್ ಆಗಿರುವ ಡಾ. ಗೋಪಾಲ್ ಅವರು ಇಲ್ಲಿಗೆ ಸಮೀಪದಲ್ಲಿ ಮೊಳಕಾಲ್ಮೂರು ಎಂಬ ಹಳ್ಳಿಯಿದೆ. ಅದು ರೇಷ್ಮೆ ಸೀರೆಗಳಿಗೆ ಪ್ರಸಿದ್ಧಿಯಾದ ಸ್ಥಳ. ಪ್ರತಿಯೊಂದು ಮನೆ ಯಲ್ಲಿಯೂ ಸೀರೆ ನೇಯುವ ಮಗ್ಗಗಳಿವೆ ಎಂದರು. ಕೂಡಲೆ ನಾವು ಕಾರನ್ನು ಹತ್ತಿ ಬಿಸಿಲನ್ನೂ ಲೆಕ್ಕಿಸದೆ ಮೊಳಕಾಲ್ಮೂರು ಗ್ರಾಮವನ್ನು ತಲುಪಿದೆವು. ಸೀರೆಯನ್ನು ಮಾರುವ ಒಂದು ಮನೆಗೆ ಹೋದೆವು. ಅವರು ತಳುಕಿನ ಮನೆತನಕ್ಕೆ ಚಿರಪರಿಚಿತರು. ಶ್ರೀಛಾಯಾಪತಿಯವರ ಮಿತ್ರರೂ ಕೂಡ. ಅವರೊಡನೆ ದೂರವಾಣಿಯಲ್ಲಿ ಮಾತನಾಡಿದೆವು; ಇದರಿಂದಾಗಿ ಸೀರೆಯ ಬೆಲೆಯಲ್ಲಿ ಕಡಿಮೆಯನ್ನು ಮಾಡಲಾಯಿತು. ಆಗ ಆ ಮನೆಯವರು ಸರ್ ಇಲ್ಲಿ ಛಾಯಪತಿಯವರ ಕುಟುಂಬದವರು ಒಂದು ವೆಂಕಟೇಶ್ವರನ ವಿಗ್ರಹವನ್ನು ಸ್ಥಾಪಿಸಿದ್ದಾರೆ. ಅದನ್ನು ನೀವು ಖಂಡಿತ ನೋಡಲೇಬೇಕು ಎಂದರು. ನಮ್ಮ ಕುತೂಹಲ ಜಾಸ್ತಿಯಾಯಿತು.

ಮೂರು ತಲೆಮಾರು ಎನ್ನುವ ಗ್ರಂಥದಲ್ಲಿ ದಾಖಲಾಗಿರುವಂತೆ, "ರಂಗಮ್ಮನವರಿಗೆ ಒಂದು ಕನಸು ಬಿದ್ದು, ಅಲ್ಲಿ ಒಂದು ವೆಂಕಟರಮಣಸ್ವಾಮಿ ವಿಗ್ರಹ ದೊರಕಿತಂತೆ. ಅದನ್ನು ತಂದು ಅಲ್ಲಿ ಗುಡಿಯಲ್ಲಿ ಪ್ರತಿಷ್ಠಾಪಿಸಿದ್ದಾರೆ. ಇಲ್ಲಿ ದೇವರ ದರ್ಶನ ಮಾಡಿದರೆ ತಿರುಪತಿಗೆ ಹೋಗಿ ವೆಂಕಟೇಶ್ವರನ ದರ್ಶನ ಮಾಡಿದಂತೆಯೇ ಸರಿ ಎನ್ನುವುದು ಇಂದಿಗೂ ಜನಗಳ ನಂಬಿಕೆ. ಪ್ರತಿವರ್ಷವೂ ಛಾಯಾಪತಿಯವರು ಈ

ಡಾ. ಎ.ವಿ. ನರಸಿಂಹಮೂರ್ತಿ

ದೇವಾಲಯಕ್ಕೆ ಹೋಗಿ ಪೂಜಾ ಕೈಂಕರ್ಯಗಳನ್ನು ಮಾಡಿಕೊಂಡು ಬರುತ್ತಾರೆ." ಅಲ್ಲಿಂದ ಮುಂದೆ ಹೊರಟು ನಮ್ಮ ಪ್ರಯಾಣವನ್ನು ಮುಂದುವರಿಸುತ್ತಿದ್ದಾಗ, ನಮ್ಮ ಕಾರು ತಳುಕು ಎನ್ನುವ ಗ್ರಾಮದ ಮುಖಾಂತರ ಹಾದು ಹೋಯಿತು. ಕಾರನ್ನು ನಿಧಾನ ಮಾಡಿ, ಸುತ್ತಮುತ್ತ ನೋಡಿ, ಕುವೆಂಪು ಅವರು ತಮ್ಮ ಗುರುಗಳಾದ ತಳುಕಿನ ವೆಂಕಣ್ಣಯ್ಯನವರಿಗೆ 'ರಾಮಾಯಣದರ್ಶನಂ' ಮಹಾಕಾವ್ಯವನ್ನು ಅರ್ಪಿಸಿದ್ದೂ ಜ್ಞಾಪಕಕ್ಕೆ ಬಂದಿತು. ಈ ರೀತಿ ತಳುಕು ಒಂದು ಸಣ್ಣ ಗ್ರಾಮವಾದರೂ, ಕನ್ನಡ ಸಾಹಿತ್ಯಿಕ ಜಗತ್ತಿನಲ್ಲಿ ಅದಕ್ಕೆ ಮಹತ್ತರವಾದ ಸ್ಥಾನವಿದೆ ಎಂದೂ ಅರಿವಾಯಿತು. ಅದೇ ಛಾಯಾಪತಿಯವರ ಟ್ರಂಪ್‌ಕಾರ್ಡ್ ಇದ್ದಂತೆ. ತಳುಕಿನ ಶಾಮರಾಯ ಛಾಯಾಪತಿ ಯವರು ತಮ್ಮ ಪುಸ್ತಕ ಪ್ರಕಾಶನ ಸಂಸ್ಥೆಯನ್ನೂ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಎಂದು ಕರೆದಿರುವುದು ಅವರಿಗಿರುವ ಇತಿಹಾಸ ಮತ್ತು ಸಂಸ್ಕೃತಿಯ ಪ್ರಜ್ಞೆಯನ್ನು ತೋರಿಸುತ್ತದೆ. ನಮ್ಮ ಹುಟ್ಟಿದೂರು ಚಿನ್ನದ ನಾಡಿಗಿಂತ ಹೆಚ್ಚು ಶ್ರೇಷ್ಠ ಎನ್ನುವ ಮಾತನ್ನು ನೆನಪಿಸುತ್ತದೆ.

ನಾನು ಶ್ರೀ ಛಾಯಾಪತಿಯವರಿಗಿಂತ ವಯಸ್ಸಿನಲ್ಲಿ ಹಿರಿಯನಾದರೂ ನಾವು ಒಂದೇ ತಲೆಮಾರಿನವರು. ಹಾಗಾಗಿ ನಮ್ಮ ಸ್ನೇಹಕ್ಕೆ ಒಂದು ಸಾಂಸ್ಕೃತಿಕ ನೆಲೆಯಿದೆ. ಛಾಯಾಪತಿಯವರು ಹುಡುಗನಾಗಿದ್ದಾಗಿನ ಸಮಯದಿಂದ ನಾನು ಅವರನ್ನು ಬಲ್ಲೆ; ಅಂದರೆ ಸುಮಾರು ಅರ್ಧಶತಮಾನಕ್ಕೂ ಮೀರಿದ ಅವಧಿ. ಏಕೆಂದರೆ ಪ್ರೊ. ತ.ಸು. ಶಾಮರಾಯರ ಮನೆಯಲ್ಲಿ ನಡೆಯುತ್ತಿದ್ದ ವಿದ್ವದ್ಗೋಷ್ಠಿಗಳಲ್ಲಿ, ನಾನು ಯುವಕ ನಾಗಿದ್ದರೂ ನನಗೆ ಅವಕಾಶ ದೊರಕಿದ್ದಿತು. ಪ್ರೊ. ಎಚ್.ಎಂ. ಶಂಕರನಾರಾಯಣ ರಾವ್, ವೆಂಕಟರಾಮಪ್ಪ, ಹರಿಯಪ್ಪ, ಲಕ್ಷ್ಮೀನರಸಿಂಹಶಾಸ್ತ್ರಿ ಮುಂತಾದ ಘಟಾನುಘಟಿಗಳ ಜೊತೆ ನಾನಿರುತ್ತಿದ್ದುದು ನನ್ನ ಪುಣ್ಯ. ಜೊತೆಗೆ ಇನ್ನೊಂದು ವಿಷಯವೂ ಇದ್ದಿತು. ಛಾಯಾಪತಿಯವರ ತಮ್ಮ ಸೂರ್ಯನಾರಾಯಣ ನನ್ನ ವಿದ್ಯಾರ್ಥಿ. ಬ್ಯಾಂಕಿನಲ್ಲಿ ಉದ್ಯೋಗಿಯಾಗಿದ್ದು ಈಗ ನಿವೃತ್ತರಾಗಿದ್ದಾರೆ.

ನನ್ನ ಪುಸ್ತಕ 'ಕನ್ನಡ ಲಿಪಿಯ ಉಗಮ ಮತ್ತು ವಿಕಾಸ' ನಾಲ್ಕಾರು ಮುದ್ರಣಗಳನ್ನು ಕಂಡಿರುವ ಗ್ರಂಥ. ಅದು ನನಗೆ ಹೆಚ್ಚಿನ ಜನಪ್ರಿಯತೆ ಮತ್ತು ಗೌರವ ತಂದ ಪುಸ್ತಕ. ವಿಶ್ವವಿದ್ಯಾನಿಲಯ ಅದನ್ನು ಮೊದಲು ಪ್ರಕಟಿಸಿತ್ತು; ಅದಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ದೊರಕಿತ್ತು. ಅದರ ಪ್ರತಿಗಳು ಖರ್ಚಾಗಿ ಅದಕ್ಕೆ ತುಂಬ ಬೇಡಿಕೆ ಇದ್ದಿತು. ಆಗ ಛಾಯಾಪತಿಯವರು ನನ್ನ ಮನೆಗೆ ಬಂದು ಆ ಪುಸ್ತಕವನ್ನು ತಾವು ಪ್ರಕಟಿಸುವುದಾಗಿ ಹೇಳಿ ನನ್ನನ್ನು ಒಪ್ಪಿಸಿದರು. ಆನಂತರ ಅವರು ಅದನ್ನು ಮೂರು ಸಾರಿ ಪುನರ್ಮುದ್ರಿಸಿದರು ಎಂದು ನನ್ನ ನೆನಪು. ಈಗ ಚಾಲ್ತಿಯಲ್ಲಿರುವುದು ಛಾಯಾಪತಿಯವರು ಮುದ್ರಿಸಿರುವ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ

ನನ್ನ ಈ ಪುಸ್ತಕ. ಇದು ನನ್ನ ಮತ್ತು ಅವರ ಸ್ನೇಹಕ್ಕೆ ಭದ್ರ ಬುನಾದಿಯನ್ನು ಹಾಕಿತು ಎಂದರೆ ತಪ್ಪಲ್ಲ.

ಕೆಲವು ವರ್ಷಗಳ ಹಿಂದೆ ಶೃಂಗೇರಿಯನ್ನು ಕುರಿತು ಇಂಗ್ಲಿಷ್ ಭಾಷೆಯಲ್ಲಿ ನಾನೊಂದು ಗ್ರಂಥವನ್ನು ರಚಿಸಿದ್ದೆ. ಬೆಂಗಳೂರಿನ ನನ್ನ ಮಿತ್ರರಾದ ಸೂರ್ಯಕಾಂತ ಪಂಡಿತ್ ಅವರು ಅದನ್ನು ಪ್ರಕಟಿಸಿದ್ದರು. ಅದಕ್ಕೆ ಒಳ್ಳೆಯ ಸ್ವಾಗತ ಸಿಕ್ಕಿತ್ತು. ಅಂದಿನ ಮಾನ್ಯ ರಾಜ್ಯಪಾಲರಾದ ಶ್ರೀ ಟಿ.ಎನ್. ಚತುರ್ವೇದಿಯವರು ಅದನ್ನು ಲೋಕಾರ್ಪಣೆ ಮಾಡಿದ್ದರು. ಈ ಪುಸ್ತಕ ಶ್ರೀ ಛಾಯಾಪತಿಯವರ ಗಮನಕ್ಕೆ ಬಂದಿತು. ನಮ್ಮ ಮನೆಗೆ ಒಂದು 'ಡಾ. ಮೂರ್ತಿಗಳೇ, ಇಂತಹ ಒಳ್ಳೆಯ ಪುಸ್ತಕ ಕನ್ನಡದಲ್ಲಿ ಪ್ರಕಟವಾದರೆ, ಕನ್ನಡಿಗರಿಗೆ ಶೃಂಗೇರಿಯನ್ನು ಕುರಿತಾದ ಅಧಿಕೃತ ಹಾಗೂ ಐತಿಹಾಸಿಕ ಮಾಹಿತಿ ಹೆಚ್ಚಾಗುತ್ತದೆ. ನಾನು ಈ ಕನ್ನಡ ಪುಸ್ತಕವನ್ನು ಪ್ರಕಟಿಸಲು ಸಂತೋಷ ಪಡುತ್ತೇನೆ' ಎಂದು ನನ್ನನ್ನು ಹುರಿದುಂಬಿಸಿದರು. ಶೀಘ್ರವಾಗಿ ಈ ಪುಸ್ತಕವನ್ನು ರಚಿಸಿದೆ. ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯಲ್ಲಿ 'ಶೃಂಗೇರಿ' ಪ್ರಕಟಗೊಂಡಿತು. ಓದುಗರಿಗೆ ಈ ಪುಸ್ತಕ ಇಷ್ಟವಾಯಿತು; ಜೊತೆಗೆ ಛಾಯಾಪತಿಯರು ಈ ಪುಸ್ತಕವನ್ನು ಜನಗಳಿಗೆ ತಲುಪಿಸುವ ಕಾರ್ಯವನ್ನು ಉತ್ತಮವಾಗಿ ಮಾಡಿದರು. ಬಹಳ ಬೇಗನೆ ಈ ಪುಸ್ತಕದ ಪ್ರತಿಗಳು ಮುಗಿದು ಹೋದವು. ಎರಡನೆಯ ಮುದ್ರಣಕ್ಕೆ ಈ ಗ್ರಂಥ ಸಿದ್ಧವಾಯಿತು. ಕೂಡಲೆ ಛಾಯಾಪತಿಯವರು ಕಾರ್ಯಪ್ರವೃತ್ತರಾದರು; ಎರಡನೆಯ ಮುದ್ರಣ ಪ್ರಕಟಗೊಂಡಿತು. ಛಾಯಾಪತಿಯವರ ಹಸ್ತಗುಣ ಚೆನ್ನಾಗಿದೆ. ಎರಡನೆಯ ಮುದ್ರಣದ ಪ್ರತಿಗಳೂ ಮುಗಿದು ಹೋಗಿ, ಅದು ಮೂರನೆಯ ಮುದ್ರಣಕ್ಕೆ ಸಿದ್ಧವಾಗಿದೆ. ಸದ್ಯದಲ್ಲೇ ಅದು ಪ್ರಕಟವಾಗಲಿದೆ.

ಛಾಯಾಪತಿಯವರು ಸಾವಿರ ಪುಸ್ತಕಗಳ ಸರದಾರ ಎಂಬ ಖ್ಯಾತಿಗೆ ಭಾಜನರಾಗಿದ್ದರೂ, ಕೈಗೆ ಸಿಕ್ಕಿದ್ದನ್ನೆಲ್ಲ ವ್ಯಾಪಾರೀ ಮನೋಭಾವದಿಂದ ಪ್ರಕಟಿಸುವವರಲ್ಲ. ತಳುಕಿನ ಮನೆತನಕ್ಕೆ ಗೌರವ ತರುವಂತಹ, ಕನ್ನಡ ಸಾಹಿತ್ಯಕ್ಕೆ ಕೊಡುಗೆಯಾಗಬಲ್ಲ ಪುಸ್ತಕಗಳನ್ನು ಮಾತ್ರ ಪ್ರಕಟಿಸುವಂತಹ ಅಕಾಡೆಮಿಕ್ ಪ್ರಕಾಶಕರು. ಒಂದು ಪುಸ್ತಕ ಪ್ರಕಾಶನಕ್ಕೆ ಬಂದರೆ, ಅದನ್ನು ಪರಿಣತರಿಗೆ ತೋರಿಸಿ, ಅವರ ಅಭಿಪ್ರಾಯ ಪಡೆದು ಅದು ಗೌರವ ತರುವ ಪುಸ್ತಕವಾದರೆ ಮಾತ್ರ ಪ್ರಕಟಿಸುತ್ತಾರೆ. ಅಂದರೆ ಪುಸ್ತಕದ ಗುಣಮಟ್ಟವನ್ನು ಕಾಯುವುದರಲ್ಲಿ ಹೆಚ್ಚಿನ ಮತುವರ್ಜಿ ವಹಿಸುತ್ತಾರೆ. ಹೀಗಾಗಿ ಅವರ ಪ್ರಕಟಣೆಗಳ ಪಟ್ಟಿಯನ್ನು ನೋಡುತ್ತ ಹೋದರೆ ಕನ್ನಡದ ಅತಿಶ್ರೇಷ್ಠ ಪುಸ್ತಕಗಳ ಪಟ್ಟಿಯಂತೆ ಅದು ಕಂಡರೆ ಆಶ್ಚರ್ಯವಲ್ಲ. ಹೀಗಾಗಿ ಅವರಿಗೆ ಪುಸ್ತಕ ಪ್ರಕಟಣಾ ಪ್ರಪಂಚದಲ್ಲಿ ಗೌರವಯುತ ಸ್ಥಾನವಿದೆ. ಅದೊಂದು ಹೆಚ್ಚಳವೇ ಸರಿ.

ಕೆಲವು ವರ್ಷಗಳ ಹಿಂದೆ ನನ್ನ ಇಬ್ಬರು ಅಜ್ಜಂದಿರು (ತಂದೆಯ ತಂದೆ ಆರಡಿ ಕೊಪ್ಪ ಸುಬ್ರಹ್ಮಣ್ಯ ಶಾಸ್ತ್ರಿಗಳು ಮತ್ತು ತಾಯಿಯ ತಂದೆ ಬಾಣಾವರದ ರಾಮಸ್ವಾಮಿ ಶಾಸ್ತ್ರಿಗಳು)ಗಳನ್ನು ಕುರಿತು ಎರಡು ಹಣತೆ ಎಂಬ ಪುಸ್ತಕವನ್ನು ರಚಿಸಿದ್ದೆ. ಅದನ್ನು ಡಾ. ಪ್ರಣತಾರ್ತಿಹರನ್ ಅವರು ಓದಿದರು. ಬಹಳ ಚೆನ್ನಾಗಿದೆ ಎಂದು ಪ್ರಕಟಿಸುವ ತರಾತುರಿಯಲ್ಲಿದ್ದರು. ಇದು ಯಾರ ಮೂಲಕವೋ ಛಾಯಾಪತಿಯವರಿಗೆ ತಿಳಿಯಿತು. ಕೂಡಲೆ ಛಾಯಾಪತಿಯವರು ಡಾ. ಪ್ರಣತಾರ್ತಿಹರನ್ ಅವರ ಜೊತೆಯಲ್ಲಿ ನಮ್ಮ ಮನೆಗೆ ಬಂದು ಹಸ್ತಪ್ರತಿಯನ್ನು ತೆಗೆದುಕೊಂಡು ಕೇವಲ ಒಂದು ವಾರದಲ್ಲಿ ಪ್ರಕಟಿಸಿದರು. ಈ ಪುಸ್ತಕ ಅನೇಕರ ಮೆಚ್ಚಿಗೆಯನ್ನು ಗಳಿಸಿದೆ ಎಂದು ಹೇಳಲು ನನಗೆ ಹೆಮ್ಮೆ.

ಒಂದು ಸಾರಿ ಛಾಯಾಪತಿಯವರು ನಮ್ಮ ಮನೆಗೆ ಬಂದಾಗ ಅವರೇ ಬರೆದ 'ಅಣ್ಣನ ಸ್ಮರಣೆ' ಎನ್ನುವ ಪುಸ್ತಕವನ್ನು ಕೊಟ್ಟರು. ಒಂದು ರೀತಿಯಲ್ಲಿ ಅದೊಂದು ವಿನೂತನ ಶೈಲಿಯ ಪುಸ್ತಕ. ಆಕರ್ಷಕ ಘಟನೆಗಳ ಮೂಲಕ ತಮ್ಮ ಪೂಜ್ಯ ತಂದೆಯವರನ್ನು ಈ ಪುಸ್ತಕದಲ್ಲಿ ಸ್ಮರಿಸಿದ್ದರು. ನನ್ನ ಜೀವನದಲ್ಲಿಯೂ ಇದೇ ರೀತಿಯ ಅನೇಕ ಘಟನೆಗಳಿವೆ: ಅವೆಲ್ಲವನ್ನೂ ಯಾಕೆ ಗ್ರಂಥರೂಪದಲ್ಲಿ ದಾಖಲಿಸಬಾರದು ಎನ್ನುವ ಆಸೆ ಚಿಗುರಿತು; ಅದನ್ನು ಬರೆದೆನು. ಅದಕ್ಕೆ ಏನು ಹೆಸರು ಕೊಡುವುದು ಎಂದು ಯೋಚಿಸುತ್ತಿರುವಾಗ, ಅವರೇ 'ಚದುರಿದ ಚಿತ್ರಗಳು' ಎಂದರೆ ಚೆನ್ನಾಗಿರುತ್ತದೆ ಎಂದರು. ಅವರೇ ಆ ಪುಸ್ತಕವನ್ನು ಪ್ರಕಟಿಸಿದರು. ಈ ಪುಸ್ತಕ ಹತ್ತಾರು ಜನಗಳ ಮೆಚ್ಚಿಗೆಯನ್ನು ಗಳಿಸಿದೆ. ಒಟ್ಟಿನಲ್ಲಿ ಈ ಪುಸ್ತಕಕ್ಕೆ ಛಾಯಾಪತಿಯವರೇ ಸ್ಫೂರ್ತಿ.

'ಕರ್ನಾಟಕದ ಸೇವುಣರ ಇತಿಹಾಸ' ಎನ್ನುವ ನನ್ನ ಪುಸ್ತಕವನ್ನು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿತ್ತು. ಅದರ ಪ್ರತಿಗಳು ಮುಗಿದು ಹೋಗಿದ್ದವು. ಈ ರಾಜವಂಶಕ್ಕೆ ಸಂಬಂಧಿಸಿದ ಏಕೈಕ ಕನ್ನಡ ಪುಸ್ತಕ ಅದಾಗಿದ್ದುದರಿಂದ, ಅದಕ್ಕೆ ಹೆಚ್ಚಿನ ಬೇಡಿಕೆ ಇದ್ದಿತು. ವಿಶ್ವವಿದ್ಯಾನಿಲಯದವರು ಕೆಲವು ಕಾರಣಗಳಿಂದಾಗಿ ಅದರ ಎರಡನೆಯ ಮುದ್ರಣವನ್ನು ಪ್ರಕಟಿಸಲು ಸಾಧ್ಯವಿಲ್ಲವೆಂದರು. ಇದು ಛಾಯಾಪತಿಯವರಿಗೆ ತಿಳಿದು ಬಂದಿತು. ಕೂಡಲೆ ನನ್ನಲ್ಲಿದ್ದ ಆ ಪುಸ್ತಕದ ಹಳೆಯ ಒಂದು ಪ್ರತಿಯನ್ನು ತೆಗೆದುಕೊಂಡು ಹೋಗಿ, ಸುಂದರವಾಗಿ ಅಚ್ಚು ಮಾಡಿಸಿ ಪ್ರಕಟಿಸಿದರು. ಸೇವುಣರು ಕನ್ನಡಿಗರೇ ಹೊರತು ಮರಾಠಿಯವರಲ್ಲ ಎನ್ನುವ ಹೆಮ್ಮೆಯ ವಿಷಯವನ್ನು ಕನ್ನಡಿಗರಿಗೆ ಪುನಃ ತಲುಪಿಸಿದ ಕೀರ್ತಿ ಛಾಯಾಪತಿಯವರಿಗೆ ಸೇರುತ್ತದೆ.

ನಾನು ಅನೇಕ ವರ್ಷಗಳಿಂದ ಮೈಸೂರಿನಿಂದ ಪ್ರಕಟವಾಗುವ ಇಂಗ್ಲೀಷಿನ ಸ್ಟಾರ್ ಆಫ್ ಮೈಸೂರು ಮತ್ತು ಕನ್ನಡದ ಮೈಸೂರು ಮಿತ್ರ ದೈನಂದಿನ ಪತ್ರಿಕೆಗಳಿಗೆ

ವಾರಕ್ಕೊಂದು ದಿನ 'ಪೇಜಸ್ ಫ್ರಂ ಹಿಸ್ಟರಿ' ಅಥವಾ 'ಇತಿಹಾಸದ ಪುಟಗಳಿಂದ' ಎಂಬ ಅಂಕಣವನ್ನು ಆರು ವರ್ಷಗಳಿಂದ ಬರೆಯುತ್ತಿದ್ದೇನೆ. ಈ ಪತ್ರಿಕೆಗಳ ಸಂಪಾದಕರ ದೃಷ್ಟಿಯಲ್ಲಿ ಈ ಅಂಕಣಗಳು ಅತಿ ಹೆಚ್ಚಿನ ಓದುಗರಿಗೆ ಪ್ರಿಯವಾಗಿವೆ. ಅದು ನನ್ನ ಸೌಭಾಗ್ಯ. ಭಾರತೀಯ ವಿದ್ಯಾಭವನಗಳ ಕರ್ನಾಟಕದ ಅಧ್ಯಕ್ಷರಾದ ಹಾಗೂ ಸಾಹಿತ್ಯ ಪ್ರಿಯರಾದ ಶ್ರೀ ಎಸ್. ರಾಮಾನುಜ ಅವರು ಇಂಗ್ಲಿಷಿನ ನೂರು ಲೇಖನಗಳನ್ನು ಸಂಕಲನ ಮಾಡಿಸಿ 'ಪೇಜಸ್ ಫ್ರಂ ಹಿಸ್ಟರಿ' ಎನ್ನುವ ಪುಸ್ತಕವನ್ನು ಭಾರತೀಯ ವಿದ್ಯಾಭವನದ ಪ್ರಿಯಂವದಾ ಬಿರ್ಲಾ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸಂಸ್ಥೆಯ ಮೂಲಕ ಪ್ರಕಟಿಸಿದರು. ಇದನ್ನು ಕನ್ನಡದಲ್ಲಿ ಪ್ರಕಟಿಸಬೇಕು ಎನ್ನುವ ಹಂಬಲ ಛಾಯಾಪತಿಯವರಿಗೆ ಉಂಟಾಯಿತು. ಮೈಸೂರು ಮಿತ್ರ ಪತ್ರಿಕೆಯಲ್ಲಿ ನಾನು ಬರೆದ ಒಂದು ನೂರು ಲೇಖನಗಳನ್ನು ಸೇರಿಸಿ 'ಇತಿಹಾಸದ ಪುಟಗಳಿಂದ' ಎನ್ನುವ ಪುಸ್ತಕವನ್ನು ಪ್ರಕಟಿಸಿದರು. ಅನೇಕರು ಇದರಿಂದ ಸಂತೋಷಗೊಂಡು ಪತ್ರಗಳನ್ನು ಬರೆದರು. ಛಾಯಾಪತಿಯವರ ಹಿರಿಯ ಅಣ್ಣ ಡಾ. ವೆಂಕಣ್ಣಯ್ಯನವರು ಶೃಂಗೇರಿಯ ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿದ್ದರು. ಸಾವಿರಾರು ವಿದ್ಯಾರ್ಥಿಗಳಿಗೆ ಸಂಸ್ಕೃತ ವಿದ್ಯೆಯನ್ನು ಪ್ರದಾನ ಮಾಡಿದ ಖ್ಯಾತಿಗೆ ಪಾತ್ರರಾಗಿದ್ದರು. ನಾಲ್ಕಾರು ಕಾರಣಗಳಿಂದಾಗಿ ನಾನು ಅವರನ್ನು ಮೆಚ್ಚಿಕೊಂಡಿದ್ದೆ. ಮೈಸೂರಿಗೆ ಬಂದಾಗ ನಮ್ಮ ಮನೆಗೆ ಬಂದು ಉಭಯ ಕುಶಲೋಪರಿ ಮಾತನಾಡಿ ಕಾಫಿ ಕುಡಿದು ಹೋಗುತ್ತಿದ್ದರು. ಇಂತಹ ಶ್ರೇಷ್ಠ ವಿದ್ವಾಂಸರಿಗೆ ಛಾಯಾಪತಿಯವರು 'ಇತಿಹಾಸದ ಪುಟಗಳಿಂದ' ಎನ್ನುವ ನನ್ನ ಪುಸ್ತಕವನ್ನು ಕೊಟ್ಟರು. ಆ ಪುಸ್ತಕವನ್ನು ಓದಿ, ಒಂದು ವಾರದ ನಂತರ ಅವರು ಛಾಯಾಪತಿಯವರನ್ನು ಸಂಪರ್ಕಿಸಿ, ಡಾ. ನರಸಿಂಹಮೂರ್ತಿಯವರ ಈ ಪುಸ್ತಕ ವಿದ್ವತ್‌ಪೂರ್ಣವಾಗಿದ್ದರೂ ಲಲಿತ ಪ್ರಬಂಧಕ್ಕೆ ಮಾದರಿಯಾಗಿದೆ. ಇದನ್ನು ಪ್ರಕಟಿಸಿ ನೀನು ಒಳ್ಳೆಯ ಕೆಲಸವನ್ನು ಮಾಡಿದ್ದೀ. ಅವರಿಗೆ ಈ ಪುಸ್ತಕಕ್ಕಾಗಿ ನೀಡುವ ಸಂಭಾವನೆಯನ್ನು ನೀನು ಡಬಲ್ ಮಾಡಬೇಕು ಎಂದು ಹೇಳಿದರಂತೆ. ಛಾಯಾಪತಿ ಯವರೇ ಈ ವಿಷಯವನ್ನು ನನಗೆ ತಿಳಿಸಿದರು. ದುರದೃಷ್ಟವಶಾತ್, ಡಾ. ವೆಂಕಣ್ಣಯ್ಯ ಹಠಾತ್ತನೆ ನಿಧನರಾದರು. ತಳುಕಿನ ವೆಂಕಣ್ಣಯ್ಯ ಕುಟುಂಬದ ಒಬ್ಬ ಉತ್ತಮ ಸದಸ್ಯ ಕಣ್ಮರೆಯಾದಂತೆ ಆಯಿತು.

ವಿಶ್ವವಿದ್ಯಾನಿಲಯ ಹಾಗೂ ಭಾರತೀಯ ವಿದ್ಯಾಭವನವನ್ನು ಬಿಟ್ಟರೆ ನನ್ನ ಎಲ್ಲ ಕನ್ನಡ ಪುಸ್ತಕಗಳನ್ನು ಛಾಯಾಪತಿಯವರೇ ಪ್ರಕಟಿಸಿದ್ದಾರೆ ಹಾಗೂ ಪುನರ್ಮುದ್ರಿಸಿ ದ್ದಾರೆ. ನಮ್ಮ ನಡುವಿನ ಬಾಂಧವ್ಯ ಲೇಖಕ ಹಾಗೂ ಪ್ರಕಾಶಕರನ್ನೂ ಮೀರಿದ ಆತ್ಮೀಯ ಸಂಬಂಧ ಎಂದು ಹೇಳಲೇಬೇಕು. ಸಾಮಾನ್ಯವಾಗಿ ಅವರು ಬೆಳಗಿನ ವಾಯುವಿಹಾರಕ್ಕೆ ನನ್ನ ಮನೆಯ ಮುಂದೆಯೇ ಹೋಗಬೇಕು. ಹಾಗಾಗಿ ನಾನು ಅವರನ್ನು ಒಳಕ್ಕೆ

ಕರೆಯುತ್ತೇನೆ. ಒಳಕ್ಕೆ ಬಂದು ಮೂರು -ನಾಲ್ಕು ಸಿಪ್ ಆಗುವಷ್ಟು ಕಾಫಿಯನ್ನು ಸವಿಯುತ್ತಾರೆ. ನಿಮ್ಮ ಶ್ರೀಮತಿಯವರು ಮಾಡುವ ಒಳ್ಳೆಯ ಸ್ವಾದಿಷ್ಟ ಕಾಫಿಯನ್ನು ಬೇಡ ಎನ್ನುವುದಕ್ಕೆ ಮನಸ್ಸಾಗುವುದಿಲ್ಲ ಎಂದು ಹೇಳಿ ಮೆಚ್ಚಿಗೆ ಸೂಚಿಸುತ್ತಾರೆ.

ಶ್ರೀ ಮತ್ತು ಶ್ರೀಮತಿ ಛಾಯಾಪತಿಯವರು ಆತಿಥ್ಯಕ್ಕೆ ಹೆಸರಾದವರು. ಛಾಯಾಪತಿಯವರು ಫೋನ್ ಮಾಡುತ್ತಾರೆ; 'ಇವತ್ತು ನಮ್ಮ ಮನೆಯಲ್ಲಿ ಅವರೆಕಾಳು ಉಪ್ಪಿಟ್ಟು ಮಾಡಿದ್ದಾರೆ. ಇನ್ನೊಬ್ಬ ಸ್ನೇಹಿತರನ್ನೂ ಕರೆದಿದ್ದೇನೆ. ನೀವೂ ಬಂದರೆ ಸ್ವಲ್ಪ ಹೊತ್ತು ಕಾಲಕಳೆಯಬಹುದು'. ಅವರು ಮಾತನಾಡುವ ರೀತಿಯನ್ನು ಗಮನಿಸಿದರೆ ಇಲ್ಲ ಎನ್ನುವುದಕ್ಕೆ ಆಗುವುದಿಲ್ಲ. ಅವರೆಕಾಳು ಉಪ್ಪಿಟ್ಟಿನ ನೆಪದಲ್ಲಿ ಒಂದು ಸಾಹಿತ್ಯಿಕ - ಸಾಂಸ್ಕೃತಿಕ ಜಗತ್ತೇ ನಮ್ಮ ಮುಂದೆ ತೆರೆದುಕೊಳ್ಳುತ್ತದೆ. ತ.ಸು. ಶಾಮರಾಯರೂ ಇದೇ ರೀತಿ ಮಾಡುತ್ತಿದ್ದರು. ಅದನ್ನು ಛಾಯಾಪತಿಯವರು ಮುಂದುವರಿಸಿಕೊಂಡು ಬಂದಿದ್ದಾರೆ. ಇದರ ವಿಷಯವನ್ನು ಬರೆಯುವಾಗ ಶ್ರೀಮತಿ ಪುಷ್ಪ ಛಾಯಾಪತಿಯವರ ಸಂಭ್ರಮ ಮತ್ತು ಧಾರಾಳತನವನ್ನು ನೆನೆಯಲೇಬೇಕು. 'ಮೇಡ್ ಫಾರ್ ಈಚ್ ಅದರ್' ಎನ್ನುವ ರೀತಿಯಲ್ಲಿದ್ದಾರೆ ಈ ದಂಪತಿಗಳು. ಇದು ಹೀಗೆ ದೀರ್ಘಕಾಲ ಮುಂದುವರಿಯಲಿ ಎಂದು ಆಶಿಸುತ್ತೇನೆ.

ಛಾಯಾಪತಿಯವರಿಗೆ ನನ್ನ ಮೇಲೆ ವಿಶೇಷ ಗೌರವ ಮತ್ತು ವಿಶ್ವಾಸ. ನನ್ನ ಸಾಧನೆ ಹಾಗೂ ವಿದ್ವತ್ತುಗಳನ್ನು ಹಾಗೂ ಭಾರತೀಯ ವಿದ್ಯಾಭವನಕ್ಕೆ ನಾನು ಸಲ್ಲಿಸುತ್ತಿರುವ ಸೇವೆಯನ್ನು ಆಗಾಗ್ಗೆ ಹೊಗಳುತ್ತಿರುತ್ತಾರೆ. ಅದನ್ನು ಇತರರ ಎದುರಿಗೂ ಹೇಳುತ್ತಾರೆ. ಮೈಸೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಮಡ್ಡೀಕೆರೆ ಗೋಪಾಲ್ ಅವರೊಡನೆ ಸೇರಿ ಛಾಯಾಪತಿಯವರು ನನ್ನ 75ನೆಯ ಹುಟ್ಟುಹಬ್ಬವನ್ನು ಅದ್ಭುತವಾಗಿ ಸಾರ್ವಜನಿಕವಾಗಿ ಆಚರಿಸಿದರು. ಆ ಸಮಾರಂಭಕ್ಕೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಯುಕ್ತರಾಗಿದ್ದ ಶ್ರೀ ಮನು ಬಳಿಗಾರ್ ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಅವರ ಸಮ್ಮುಖದಲ್ಲಿ ನನ್ನ ಸಾಧನೆಗಳನ್ನು ಹಾಡಿ ಹೊಗಳಿ, ಇಂತಹ ಶ್ರೇಷ್ಠರಿಗೆ ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಸಿಕ್ಕದೇ ಇರುವುದು ದುರ್ದೈವ ಎಂದು ಹೇಳಿದಾಗ ಮನು ಬಳಿಗಾರ್ ಅವರಿಗೆ ಆಶ್ಚರ್ಯವಾಯಿತು. ಗುಣಗ್ರಾಹಿಯಾದ ಶ್ರೀ ಮನು ಬಳಿಗಾರ್ ಅವರ ಪ್ರಯತ್ನದಿಂದಾಗಿ ನನಗೆ ಕನ್ನಡ ರಾಜ್ಯೋತ್ಸವ ಪ್ರಶಸ್ತಿ ದೊರಕಿತು. ಅದಕ್ಕೆ ಬುನಾದಿಯನ್ನು ಹಾಕಿದವರು ಶ್ರೀಮತಿ ರತ್ನಮ್ಮ, ಛಾಯಾಪತಿ ಮತ್ತು ಮಡ್ಡೀಕೆರೆ ಗೋಪಾಲ್ ಎಂದರೆ ತಪ್ಪಾಗಲಾರದು.

ಛಾಯಾಪತಿಯವರು ನಮ್ಮ ಮನೆಗೆ ಬಂದರು ಎಂದರೆ ಅವರು ಒಂದು ಹೊಸ ಪುಸ್ತಕವನ್ನು ತಂದಿದ್ದಾರೆ ಎನ್ನುವುದು ಖಚಿತ. ಅಷ್ಟೇ ಅಲ್ಲ; ಈಗ ತಾನೇ ಈ ಪ್ರತಿ ಪ್ರೆಸ್‌ನಿಂದ ಬಂತು: ಇದರ ಮೊದಲ ಪ್ರತಿಯನ್ನು ನಿಮಗೆ ನೀಡುತ್ತಿದ್ದೇನೆ ಎಂದು

ಹೇಳಿ ನನ್ನ ಗೌರವವನ್ನು ಇಮ್ಮಡಿ ಗೊಳಿಸುತ್ತಾರೆ. ನನ್ನ ಲೈಬ್ರರಿಯಲ್ಲಿ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಇತ್ತೀಚಿನ ಎಲ್ಲ ಪುಸ್ತಕಗಳೂ ಇವೆ ಎಂದು ಹೇಳಲು ನನಗೆ ಹೆಮ್ಮೆ ಎನಿಸುತ್ತದೆ. ಇದರಿಂದಾಗಿ ಇತಿಹಾಸಕಾರನಾದ ನನ್ನಲ್ಲಿ ಸಾಹಿತ್ಯದಲ್ಲಿ ಆಸಕ್ತಿ ಉಂಟಾಗುವಂತೆ ಮಾಡಿದವರಲ್ಲಿ ಛಾಯಾಪತಿಯವರೇ ಪ್ರಮುಖರು.

ಛಾಯಾಪತಿಯವರಲ್ಲಿ ಮೆಚ್ಚಬಹುದಾದ ಇನ್ನೊಂದು ಅಪರೂಪದ ಗುಣವೆಂದರೆ ಇತರರಿಗೆ ಸಹಾಯ ಮಾಡುವುದು. ಛಾಯಾಪತಿಯವರಿಗೆ ಗಣ್ಯವ್ಯಕ್ತಿಗಳ ಪರಿಚಯ ಜಾಸ್ತಿ: ಅವರು ರಾಜಕೀಯ ವ್ಯಕ್ತಿಗಳಾಗಿರಬಹುದು ; ಸಾಹಿತಿಗಳಾಗಿರಬಹುದು ಅಥವಾ ಅಧಿಕಾರಿಗಳಾಗಿರಬಹುದು. ಯಾರಾದರೂ ಬಂದು ನೀವು 'ಅವರಿಗೆ' ಒಂದು ಮಾತು ಹೇಳಿದರೆ ನನ್ನ ಕೆಲಸ ಆಗುತ್ತದೆ ಎಂದು ಪ್ರಾರ್ಥಿಸಿಕೊಂಡರೆ, ಕೂಡಲೇ ಅವರು ಆ ಕೆಲಸವನ್ನು ತ್ರಿಕರಣ ಶುದ್ಧಿ ಪೂರ್ವಕವಾಗಿ ಮಾಡುತ್ತಾರೆ. ಹೀಗಾಗಿ ಸಹಾಯವನ್ನು ಅಪೇಕ್ಷಿಸಿಕೊಂಡು ಹತ್ತಾರು ಜನಗಳು ಅವರ ಮನೆಗೆ ಬರುವುದನ್ನು ನಾನು ಗಮನಿಸಿದ್ದೇನೆ.

ಛಾಯಾಪತಿಯವರು ಸರಳ ಜೀವಿ. ಸುಖೀ ಕುಟುಂಬ. ತೃಪ್ತಿಯೇ ಅವರ ಮಂತ್ರ. ಎತ್ತರವಾದ ಸ್ವಲ್ಪವೂ ಬಾಗದ ನಿಲುವು. ನಾಲ್ಕು ಜನಗಳಿಗೆ ಎದ್ದು ಕಾಣುವ ವ್ಯಕ್ತಿತ್ವ. ಅದಕ್ಕೆ ಸರಿಹೊಂದುವ ಸ್ನೇಹ. ಇವರ ಸಾಧನೆಯಲ್ಲಿ ಶ್ರೀಮತಿ ಛಾಯಾಪತಿಯವರಿಗೆ ಹೆಚ್ಚಿನ ಪಾಲಿದೆ. ತಳುಕಿನ ಶ್ರೇಷ್ಠ ಕುಟುಂಬಕ್ಕೆ ಹೇಳಿ ಮಾಡಿಸಿದ ವ್ಯಕ್ತಿತ್ವ. ಛಾಯಾಪತಿ ದಂಪತಿಗಳಿಗೆ ಹಾಗೂ ಅವರ ಕುಟುಂಬದವರಿಗೆ ಇನ್ನೂ ಹೆಚ್ಚಿನ ಅಭಿವೃದ್ಧಿ ಉಂಟಾಗಲಿ ಎಂದು ಪ್ರಾರ್ಥಿಸುತ್ತೇನೆ. ವೈಯಕ್ತಿಕವಾಗಿ ಛಾಯಾಪತಿಯವರಿಗೆ ಇನ್ನೂ ಹೊಸ ಪ್ರಶಸ್ತಿಗಳು ದೊರಕಲಿ ಹಾಗೂ ಇತೋಪ್ಯತಿಶಯ ಹೆಚ್ಚಳ ಉಂಟಾಗಲಿ ಎಂದು ನಾನು ಮತ್ತು ನನ್ನ ಶ್ರೀಮತಿ ಕಮಲಾಂಬ ಶ್ರೀ ಲಕ್ಷ್ಮೀ ನರಸಿಂಹಸ್ವಾಮಿಯನ್ನು ಪ್ರಾರ್ಥಿಸುತ್ತೇವೆ.

# ಪರಂಪರೆಯನ್ನು ಬೆಳೆಸಿದವರು

ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಕನ್ನಡದ ಹಳೆಯ ಪ್ರಕಾಶನ ಸಂಸ್ಥೆಗಳಲ್ಲೊಂದು; ಪ್ರಸಿದ್ಧ ಹಾಗೂ ಪ್ರಬುದ್ಧವಾದುದು ಕೂಡ. ಅದರ ಸ್ಥಾಪಕರು ತ.ಸು. ಶಾಮರಾಯರು. ಅದನ್ನು ಶ್ಲಾಘನೀಯವಾಗಿ ಮುಂದುವರಿಸಿಕೊಂಡು ಹೋಗುತ್ತಿರುವವರು ಅವರ ಮಗ ಟಿ.ಎಸ್. ಛಾಯಾಪತಿಯವರು. ಪರಂಪರೆಯನ್ನು ಅವರು ಉಳಿಸಿದ್ದಾರೆ ಮಾತ್ರವಲ್ಲ. ಹೊಸ ಆಯಾಮಗಳನ್ನಿತ್ತು ಬೆಳೆಸಿದ್ದಾರೆ. ತಂದೆ ಕಟ್ಟಿದ ಮನೆಗೆ ಅವರು ಮಹಡಿ ಹಾಕಿದ್ದಾರೆ. ಅಪ್ಪನ ಆಸ್ತಿಯನ್ನು ಉಳಿಸುವ ಮಕ್ಕಳು ಅಪರೂಪ; ಅಂಥವರಲ್ಲೊಬ್ಬರು ಛಾಯಾಪತಿ!

ಕನ್ನಡದ ಅನೇಕ ಖ್ಯಾತನಾಮ ಲೇಖಕರ ಕೃತಿಗಳು ತ.ವೆಂ. ಸ್ಮಾರಕ ಗ್ರಂಥಮಾಲೆ ಯಲ್ಲಿ ಪ್ರಕಟವಾಗಿವೆ; ಹೊಸಬರೆಷ್ಟೋ ಮಂದಿ ಮಾಲೆಯ ಮೂಲಕ ಬೆಳಕು ಕಂಡಿದ್ದಾರೆ. ಮಾಲೆ ಹೊರತಂದಿರುವ ಅನೇಕ ಕೃತಿಗಳು ಅಂತರಂಗದ ಸತ್ವ ಮತ್ತು ಬಹಿರಂಗದ ಸೌಂದರ್ಯದಿಂದ ಕೂಡಿ, ಕನ್ನಡ ಸಾಹಿತ್ಯಕ್ಕೆ ಮೌಲಿಕ ಕೊಡುಗೆಗಳಾಗಿವೆ. ಪುಣ್ಯ ಶ್ಲೋಕರಾದ ಟಿ.ಎಸ್. ವೆಂಕಣ್ಣಯ್ಯನವರು, ತ.ಸು. ಶಾಮರಾಯರು ಮತ್ತು ಇನ್ನೂ ಮಿಗಿಲಾಗಿ ಛಾಯಾಪತಿ ಕನ್ನಡ ಓದುಗರ ಕೃತಜ್ಞತೆಗೆ ಪಾತ್ರರು.

ನನ್ನ ಹದಿನೈದು ಪುಸ್ತಕಗಳನ್ನು ಛಾಯಾಪತಿ ಪ್ರಕಟಿಸಿದ್ದಾರೆ. ಇದೇನೂ ಸಣ್ಣ ಸಂಖ್ಯೆಯಲ್ಲ. ವೈಯಕ್ತಿಕವಾಗಿ ಅವರಿಗೆ ನಾನು ಆಭಾರಿ. ಅವರ ಮತ್ತು ನನ್ನ ಸಂಬಂಧ ಕೇವಲ ಪ್ರಕಾಶಕ -ಲೇಖಕರ ಸಂಬಂಧವಲ್ಲ; ಅವರು ನನ್ನ ದೀರ್ಘಕಾಲದ ಮಿತ್ರರ ಲ್ಲೊಬ್ಬರು, ವಯಸ್ಸಿನಲ್ಲಿ ಕಿರಿಯರಾದರೂ, ಅವರು ಪ್ರಕಾಶಕರಷ್ಟೇ ಅಲ್ಲ; ಈಚೆಗೆ ಲೇಖಕರೂ ಆಗಿದ್ದಾರೆ!

ಸುಮಾರು ಮೂರು ದಶಕಗಳ ಹಿಂದೆ ಶಾಮರಾಯರ ಮನೆಯಲ್ಲಿ ನನಗೆ ಛಾಯಾಪತಿಯವರ ಪರಿಚಯವಾಯಿತು. ತ.ವೆಂ. ಸ್ಮಾರಕ ಗ್ರಂಥಮಾಲೆಯನ್ನು ಈಗ ತಾವು ವಹಿಸಿಕೊಂಡಿರುವುದಾಗಿ ಹೇಳಿ, ಅದಕ್ಕೆ ನಾನೊಂದು ಪುಸ್ತಕವನ್ನು ಕೊಡಬೇಕೆಂದು ಅವರು ಕೇಳಿದರು. (ಆಗಲೂ ಶಾಮರಾಯರೆ ಮಾಲೆಯ ಸಂಪಾದಕರಾಗಿದ್ದರು). ನಾನು

**ಸಿ.ಪಿ.ಕೆ.**

ಋಷಿಗೊಂಡು, 'ಜಾನಪದ ಪ್ರತಿಭೆ' (1969) ಎಂಬ ಪುಸ್ತಕವನ್ನು ಕೊಟ್ಟೆ. ಅದು ತ.ವೆಂ.. ಸ್ಮಾರಕ ಗ್ರಂಥಮಾಲೆಯಲ್ಲಿ ಪ್ರಕಟವಾದ ನನ್ನ ಪ್ರಥಮ ಪುಸ್ತಕ; ನನ್ನ ಪ್ರಮುಖ ಗ್ರಂಥಗಳಲ್ಲಿ ಒಂದೂ ಹೌದು. 'ಜಾನಪದ ಸರಸ್ವತಿ', 'ಸಮಾವೇಶ'... ಹೀಗೆ ಸಾಲಾಗಿ ನನ್ನ ಕೃತಿಗಳನ್ನು ಹೊರತಂದರು, ಛಾಯಾಪತಿ.

ಆಗ - ಅದಕ್ಕೂ ಮುನ್ನ ಮತ್ತು ಆಮೇಲೆ ಕೂಡ - ಶಾಮರಾಯರಿಗೂ ದೇಜಗೌ ಅವರಿಗೂ ಹೊಂದಾಣಿಕೆಯಿರಲಿಲ್ಲ. (ಇದು ಎಲ್ಲರೂ ಬಲ್ಲ ಸಂಗತಿ.) ನಾನು ದೇಜಗೌ ಅವರಿಗೆ ತುಂಬ ಹತ್ತಿರವಾಗಿದ್ದವನು. ವ್ಯವಹಾರ ಚತುರರಾಗಿದ್ದ ನನ್ನ ಗೆಳೆಯ ರೊಬ್ಬರು, ಶಾಮರಾಯರೊಡನೆ ಮತ್ತು ಛಾಯಾಪತಿಯವರೊಡನೆ ನನಗಿದ್ದ ಸಂಪರ್ಕವನ್ನು ಗಮನಿಸಿ, ಎಚ್ಚರಿಕೆ ಕೊಟ್ಟರು : 'ನೋಡಿ. ಶಾಮರಾಯರಿಗೂ ಜವರೇಗೌಡರಿಗೂ ಆಗುವುದಿಲ್ಲ. ನೀವು ಶಾಮರಾಯರ ಹತ್ತಿರ ಹೋಗುತ್ತೀರಲ್ಲ, ಸ್ವಾಮಿ! ದೇಜಗೌ ಬೇಸರ ಮಾಡಿಕೊಳ್ಳಬಹುದು!' ಅದಕ್ಕೆ ನಾನು ಸೊಪ್ಪು ಹಾಕಲಿಲ್ಲ. ಅಷ್ಟೇ ಅಲ್ಲ, ಛಾಯಾಪತಿಯವರು ಕೇಳಿಕೊಂಡಂತೆ, ಅವರನ್ನು ಆಗ ಕುಲಪತಿಗಳಾಗಿದ್ದ ದೇಜಗೌ ಅವರಲ್ಲಿಗೆ ಕರೆದೊಯ್ದು, ಪರಿಚಯಿಸಿ, 'ಈಗ ತ.ವೆಂ. ಸ್ಮಾರಕ ಗ್ರಂಥಮಾಲೆ ಯನ್ನು ನೋಡಿಕೊಳ್ಳುತ್ತಿರುವವರು ಇವರು. ನಿಮ್ಮದೊಂದು ಪುಸ್ತಕವನ್ನು ತಮ್ಮ ಮಾಲೆಯಲ್ಲಿ ಪ್ರಕಟಿಸಲು ಬಯಸುತ್ತಾರೆ!' ಎಂದು ಹೇಳಿದೆ. (ನನ್ನ ಮಾತಿಗೆ ದೇಜಗೌ ಬೆಲೆ ಕೊಡುತ್ತಿದ್ದ ಕಾಲವದು!) ಅವರು ಸಂತೋಷದಿಂದ ತಮ್ಮ 'ಮುನ್ನುಡಿಗಳು' ಪುಸ್ತಕವನ್ನು ಕೊಟ್ಟರು; ಅದರ ಬೆನ್ನಿನಲ್ಲೆ 'ನೂರೆಂಟು ಪುಸ್ತಕಗಳು' ಗ್ರಂಥವನ್ನು ಕೂಡ. ಎರಡನ್ನೂ ಛಾಯಾಪತಿ ತಮ್ಮ ಮಾಲೆಯಲ್ಲಿ ಸೇರಿಸಿಕೊಂಡರು. ಅಷ್ಟೇ ಅಲ್ಲ, ಅವರು ಹೊರತಂದ ಪುಸ್ತಕವೊಂದನ್ನು ದೇಜಗೌ ಮತ್ತು ಹಾಮಾನಾ ಪಿ.ಯು.ಸಿ.ಗೆ ಪಠ್ಯಪುಸ್ತಕವನ್ನಾಗಿ ಮಾಡಿದರು. (ನನ್ನ ಕೋರಿಕೆಯೂ ಅದರ ಹಿಂದಿತ್ತು.) ನಾನು ಮೇಲೆ ಹೇಳಿದ ಮಿತ್ರರು - ಅವರೂ ದೇಜಗೌಗೆ ಹತ್ತಿರದವರು - ಇನ್ನು ಅಪಾಯವಿಲ್ಲ ಎಂಬುದನ್ನು ಮನಗಂಡು, ಶಾಮರಾಯರಿಗೆ ಮತ್ತು ಛಾಯಾಪತಿ ಯವರಿಗೆ ತಾವೂ ನಿಕಟವಾದರು; ನನಗಿಂತ ನಿಕಟವಾದರು! ಅವರ ಪುಸ್ತಕಗಳೂ ಮಾಲೆಯಲ್ಲಿ ಬೆಳಕು ಕಂಡುವು. ಮುಂದೆ ಸ್ವಲ್ಪ ಕಾಲ ನನ್ನ ಮತ್ತು ಛಾಯಾಪತಿಯವರ ಸಂಬಂಧ, ಹಳಸಿಕೊಳ್ಳದಿದ್ದರೂ ಹಿಂದಿದ್ದಷ್ಟು ಹಸನಾಗಿ ಉಳಿಯಲಿಲ್ಲವೆನಿಸುತ್ತದೆ! ಏರಿಳಿತಗಳಿದ್ದರೂ ನಮ್ಮ ಸ್ನೇಹ ಇಂದಿಗೂ ಹರಿಗಡಿಯದಿದೆ ಎನ್ನುವುದು ಮುಖ್ಯವಾದ ಮಾತು.

ಯಾವುದೋ ಹಂತದಲ್ಲಿ ತಂದೆ ಮಗನ ಸಂಬಂಧದಲ್ಲಿ ಸಣ್ಣ ಬಿರುಕು ಕಾಣಿಸಿ ಕೊಂಡದ್ದೂ ಉಂಟು. ಆಗಾಗ ತಮ್ಮ ಅಸಮಾಧಾನವನ್ನು ಶಾಮರಾಯರು ನನ್ನೊಡನೆ ತೋಡಿಕೊಳ್ಳುತ್ತಿದ್ದರು. ನಾನು ಅದನ್ನು ಛಾಯಾಪತಿಗೆ ತಿಳಿಸುತ್ತಿರಲಿಲ್ಲ. ತಂದೆ ಮಕ್ಕಳ

ಮನಸ್ತಾಪ ಎಷ್ಟು ದಿವಸ ಇದ್ದೀತು, ಎಂದಾದರೂ ಕರಗಲೇಬೇಕು ಎಂದುಕೊಂಡು ಔದಾಸೀನ್ಯ ವಹಿಸಿದೆ. ಹಾಗೆಯೇ ಆಯಿತು!

ಆ ದಿನಗಳಲ್ಲಿ ನನ್ನ ಸ್ಕೂಟರಿನ ಮೇಲೆ ಛಾಯಾಪತಿಯವರನ್ನು ಕುಳ್ಳಿರಿಸಿಕೊಂಡು ಮುದ್ರಣಾಲಯಗಳಿಗೆ ಓಡಾಡುತ್ತಿದ್ದ ಚಿತ್ರ ಈಗಲೂ ನನ್ನ ಕಣ್ಣಿಗೆ ಕಟ್ಟಿದೆ! (ಅಂತೆಯೇ ಶಾಮರಾಯರನ್ನು ಕುಳ್ಳಿರಿಸಿಕೊಂಡು ಕುವೆಂಪು ಅವರ ಮನೆಗೆ ಕರೆದುಕೊಂಡು ಹೋಗುತ್ತಿದ್ದೆ. ನನ್ನದು 'ಕೃಷ್ಣ ಸಾರಥ್ಯ' ಎನ್ನುತ್ತಿದ್ದರು, ರಾಯರು!) ಛಾಯಾಪತಿ ಮತ್ತು ನಾನು ಐಯರ್ ಹೋಟಲಿನಲ್ಲಿ ತಿಂಡಿ ತಿಂದ ದಿನಗಳಿಗೆ ಲೆಕ್ಕವಿಲ್ಲ; ನನ್ನ ಒಂದೊಂದು ಪುಸ್ತಕ ಹೊರಬಂದಾಗಲೂ ಆ ಹೋಟಲಿಗೆ ಹೋಗಿ, ಮಸಾಲೆ ದೋಸೆ ತಿಂದು ತಣಿಯುವುದು ನಮ್ಮ ರೂಢಿಯಾಗಿತ್ತು! ಈಚೆಗೆ ಅನೇಕ ಸಲ ಛಾಯಾಪತಿ ಯವರ ಮನೆಯ ಆತಿಥ್ಯವನ್ನು ಸವಿದಿದ್ದೇನೆ. (ಹಾಗೆ ನೋಡಿದರೆ, ಶಾಮರಾಯರ ಮನೆಯಲ್ಲೂ ಅವರೊಡನೆ, ಅವರ ಮಕ್ಕಳೊಡನೆ, ಸೊಸೆಯಂದಿರೊಡನೆ ಕುಳಿತು ಎಷ್ಟೋ ಸಲ ಊಟ ಮಾಡಿದ್ದೇನೆ. ರಾಯರ ಮತ್ತು ಅವರ ಪತ್ನಿ ಸುಬ್ಬಮ್ಮನವರ ಔದಾರ್ಯ ಸರ್ವವೇದ್ಯವಾದದ್ದು.)

ಛಾಯಾಪತಿಯವರದು ಯಶಸ್ವಿಯಾದ ಬದುಕು. (ಕಷ್ಟಗಳನ್ನೂ ಅವರು ಕಂಡಿದ್ದಾರೆ.) ಆ ಯಶಸ್ಸಿನ ಹಿಂದೆ ಅವರ ವ್ಯವಹಾರ ಕೌಶಲ, ಕಾರ್ಯಕ್ಷಮತೆ, ಸತತ ಪರಿಶ್ರಮ, ಸ್ನೇಹ ಪರತೆಗಳಿವೆ. (ಅವರ ಶ್ರೀಮತಿಯವರೂ ಇದ್ದಾರೆ ಎಂದು ನಂಬಿ ದ್ದೇನೆ!) ಛಾಯಾಪತಿಯವರ ಬಗೆಗೆ ಒಳ್ಳೆಯ ಮಾತುಗಳಂತೆ ಒಡಕು ಮಾತುಗಳನ್ನೂ ಕೇಳಿದ್ದೇನೆ. ಸಮಾಜದಲ್ಲಿ ಯಾರು ತಾನೆ ಸಂಪೂರ್ಣವಾಗಿ ಟೀಕಾತೀತರು? ಉಳಿದು ದನ್ನೆಲ್ಲ ಕಡೆಗಣಿಸಿ, ಛಾಯಾಪತಿಯವರು ಮಾಡಿರುವ, ಮಾಡುತ್ತಿರುವ ಉತ್ತಮವಾದ ಕೆಲಸಕ್ಕೆ ಈ ಹೊತ್ತು ಒತ್ತು ಕೊಡಬೇಕಾಗಿದೆ.

ಈಗ ಚಿನ್ನದ ಹಬ್ಬದ ಸಂಭ್ರಮದಲ್ಲಿರುವ ತ.ವೆಂ. ಸ್ಮಾರಕ ಗ್ರಂಥಮಾಲೆ ಹೇಮಧೂಳಿಯಲ್ಲಿ ಮೀಯುತ್ತಿದೆ! ಅದಕ್ಕೆ ಅಷ್ಟಿಷ್ಟು ಕೊಡುಗೆಯಿತ್ತು, ಅದರಿಂದ ತಕ್ಕಮಟ್ಟಿಗೆ ದೊಡ್ಡವರಾಗಿರುವ ನನ್ನಂಥವರಿಗೆ ಇದೊಂದು ಹೆಮ್ಮೆಯ ಸಂಗತಿ. ಈ ಸಂದರ್ಭದಲ್ಲಿ ಐವತ್ತು ಪುಸ್ತಕಗಳನ್ನು ಹೊರತರುವ ಯೋಜನೆಯನ್ನು ಛಾಯಾಪತಿ ಹಾಕಿಕೊಂಡಿದ್ದಾರೆ. ಅದು ಯಶಸ್ವಿಯಾಗಲಿ ಎಂದು ಹಾರೈಸುತ್ತೇನೆ.

'ಅತ್ಯುತ್ತಮ ಪ್ರಕಾಶನ ಸಂಸ್ಥೆ' ಪ್ರಶಸ್ತಿಯನ್ನು ಗಳಿಸಿರುವ ತ.ವೆಂ. ಸ್ಮಾರಕ ಮಾಲೆಗೂ ಮಾಲೆಗಾರರಾದ ಟಿ.ಎಸ್. ಛಾಯಾಪತಿಯವರಿಗೂ ಹಾರ್ದಿಕ ಅಭಿನಂದನೆ ಗಳು ಮತ್ತು ಶುಭ ಕಾಮನೆಗಳು, ನಾಡಿನ ಪರವಾಗಿ ಮತ್ತು ವೈಯಕ್ತಿಕವಾಗಿ.

# ಛಲದಂಕಮಲ್ಲ ಶ್ರೀ ಛಾಯಾಪತಿ

ಶ್ರೀ ಟಿ.ಎಸ್. ಛಾಯಾಪತಿ ಅವರು ಸ್ನೇಹ ಜೀವಿಗಳು. ಬಹು ದೊಡ್ಡ ಪರಂಪರೆಯ ವಾರಸುದಾರರು. ಆಚಾರ್ಯ ತ.ಸು. ವೆಂಕಣ್ಣಯ್ಯ ಅವರು ಇವರ ದೊಡ್ಡಪ್ಪ. ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಸ್ಥಾಪಕ ಸಂಪಾದಕ, ಪ್ರಕಾಶಕರಾಗಿ, ಪ್ರಾಧ್ಯಾಪಕರಾಗಿ ಹಲವು ದಶಕಗಳ ಕಾಲ ಕನ್ನಡದ ಸೇವೆ ಮಾಡಿದ ಪ್ರೊ. ತ.ಸು. ಶಾಮರಾಯರು ಶ್ರೀ ಛಾಯಾಪತಿ ಅವರ ತಂದೆ. ಈ ಪರಂಪರೆ ಮಿತ್ರ ಶ್ರೀ ಛಾಯಾಪತಿ ಅವರ ಆಸ್ತಿ. ಇಂಥ ಅಮೋಘವಾದ ಆಸ್ತಿ ಬಹುಶಃ ಬೇರೆ ಇನ್ನಾರಿಗೂ ಇಲ್ಲವೆಂದು ಭಾವಿಸಿರುವೆ. ಇದು ಗೆಳೆಯ ಛಾಯಾಪತಿಯವರ ಪುಣ್ಯವೆಂದು ಭಾವಿಸಿರುವೆ.

ಐವತ್ತು ವರ್ಷಗಳ ಪೂರ್ವದಲ್ಲಿ ಪ್ರೊ. ಶಾಮರಾಯರು ಕನ್ನಡ ಅಧ್ಯಾಪಕ ವೃತ್ತಿಯೊಂದಿಗೆ, ಕನ್ನಡದ ಪುಣ್ಯ ಪುರುಷ ಹಾಗೂ ಅವರ ಅಣ್ಣಂದಿರಾದ ಪ್ರೊ. ತ.ಸು. ವೆಂಕಣ್ಣಯ್ಯನವರ ಹೆಸರಿನಲ್ಲಿ 'ತಳುಕಿನ ವೆಂಕಣಯ್ಯ ಸ್ಮಾರಕ ಗ್ರಂಥಮಾಲೆ' ಆರಂಭಿಸಿದರು. ಆಗ ತಂದೆಯೊಂದಿಗೆ ಶ್ರೀ ಛಾಯಾಪತಿ ಅವರೂ ಈ ಪ್ರಕಾಶನಕ್ಕಾಗಿ ದುಡಿಯುತ್ತ ಬಂದರು. ಎಂ.ಕಾಂ. ಸ್ನಾತಕೋತ್ತರ ಪದವಿ ಪಡೆದಿದ್ದ ಅವರು ಬಯಸಿದ್ದರೆ, ಆ ಕಾಲದಲ್ಲಿ ಅಧಿಕಾರಿಯಾಗಿ, ಕಾಮರ್ಸ್ ಕಾಲೇಜಿನಲ್ಲಿ ಪ್ರಾಧ್ಯಾಪಕನಾಗಿ ಹಾಯಾಗಿರಬಹುದಾಗಿತ್ತು. ಆದರೆ ಅವರು ಹಾಗೆ ಮಾಡದೇ ತಂದೆಯವರ ಈ ಕಾಯಕದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು. ಇದು ಅವರಲ್ಲಿರುವ ಸಾಹಿತ್ಯಾಸಕ್ತಿ ಹಾಗೂ ಪುಸ್ತಕ ಸಂಸ್ಕೃತಿಯ ಬಗ್ಗೆ ಅವರಲ್ಲಿರುವ ಪ್ರೀತಿಯನ್ನು ತೋರಿಸುತ್ತದೆ.

ತಂದೆ ಪ್ರೊ. ಶಾಮರಾಯರ ನಿಧನದ ನಂತರ ತಾವೊಬ್ಬರೇ ಪ್ರಕಾಶನದ ಜವಾಬ್ದಾರಿ ಹೊತ್ತು ಈವರೆಗೂ ಅಮೋಘವಾದ ರೀತಿಯಲ್ಲಿ ನಿರ್ವಹಿಸಿಕೊಂಡು ಬರುತ್ತಿದ್ದಾರೆ. ಪುಸ್ತಕ ಪ್ರಕಟಣಾ ಲೋಕದಲ್ಲಿ ಅಚ್ಚರಿ ಪಡುವಂಥ ಗ್ರಂಥರಾಶಿಯನ್ನು ಪ್ರಕಟಿಸಿ ಗ್ರಂಥಮಾಲೆಗೆ ಕೀರ್ತಿ ತಂದುಕೊಟ್ಟರು. ಛಾಯಾಪತಿ ಅವರ ಈ ಸಾಹಸವನ್ನು ನಾಡಿನ

---

**ಡಾ. ಪಂಚಾಕ್ಷರಿ ಹಿರೇಮಠ**

---

ಹೆಸರಾಂತ ಲೇಖಕರು ತುಂಬು ಹೃದಯದಿಂದ ಶ್ಲಾಘಿಸಿದರು. ಶ್ರೀ ಛಾಯಾಪತಿ ಕೇವಲ ಶ್ರೇಷ್ಠ ಪ್ರಕಾಶಕರಾಗಿ ಉಳಿಯದೇ ಒಳ್ಳೆಯ ಲೇಖಕರಾಗಿಯೂ ಪ್ರಸಿದ್ಧಿ ಪಡೆದವರು. ಛಾಯಾಪತಿ ಅವರ 'ಕನ್ನಡದ ಕಲಿ' ಕುರಿತು ರಾಷ್ಟ್ರಕವಿ ಕುವೆಂಪು ಅವರು 'ಕನ್ನಡದ ಕಲಿ ಪುಸ್ತಕ' ಕನ್ನಡ ಸಾರಸ್ವತಲೋಕಕ್ಕೆ ಸ್ವಾಗತಾರ್ಹ ಎಂದರೆ ಹೆಸರಾಂತ ಅಂಕಣಕಾರ ರಾಗಿದ್ದ ಪ್ರೊ. ಎಚ್ಚೆಸ್ಕೆ ಅವರು - 'ಕನ್ನಡದ ಕಲಿ ಗ್ರಂಥದ ಲೇಖಕರಾದ ಛಾಯಾಪತಿ ಅವರದು ನೇರ ಸರಳ ಶೈಲಿ, ಸತ್ಯನಿಷ್ಠೆಯ ನಿರೂಪಣೆ. ಸಾರ್ವಜನಿಕರಲ್ಲಿ ಸಾತ್ವಿಕವನ್ನು ಬಯಸುವ ಪ್ರತಿಯೊಬ್ಬರೂ ಓದಬೇಕಾದ ಪುಸ್ತಕ'ವೆಂದು ಪುಸ್ತಕದ ಮಹತ್ವ ಕೊಂಡಾಡಿದ್ದಾರೆ.

ಶ್ರೀ ಛಾಯಾಪತಿಯವರ ಇನ್ನೊಂದು ಕೃತಿ 'ವರದಕ್ಷಿಣೆ : ಸಾಮಾಜಿಕ ಪಿಡುಗು' ಎಂಬುದರ ಬಗ್ಗೆ ಪ್ರೊ. ಎಂ. ನಂಜಮ್ಮಣ್ಣಿ ಅವರು 'ಛಾಯಾಪತಿಯವರು ಆಧುನಿಕ ಸಮಾಜದಲ್ಲಿ ಕಾಡುತ್ತಿರುವ ಹಲವಾರು ಸಮಸ್ಯೆಗಳಲ್ಲಿ ವರದಕ್ಷಿಣೆಯ ಪಿಡುಗನ್ನು, ಹೃದಯಂಗಮವಾಗಿ ನಿರೂಪಿಸಿದ್ದಾರೆ. ಜಾರಿಯಲ್ಲಿರುವ ಕಾನೂನುಗಳ ಬಗ್ಗೆ ಕ್ಷಕಿರಣ ಬೀರುವ ಈ ಪುಸ್ತಕ ತುಂಬ ಉಪಯುಕ್ತವಾಗಿದೆ' ಎಂದಿದ್ದಾರೆ. ಅವರ ಇನ್ನೂ ಹಲವಾರು ಕೃತಿಗಳು ನಾಡಿನ ವಿದ್ವಾಂಸರ ಗಮನ ಸೆಳೆದಿವೆ. ಹೀಗೆ ಶ್ರೀ ಛಾಯಾಪತಿ ಪ್ರಸಿದ್ಧ ಪ್ರಕಾಶಕರಾಗಿ, ಲೇಖಕರಾಗಿ ಕನ್ನಡದ ಸೇವೆ ಅಂದಿನಿಂದ ಇಂದಿನವರೆಗೂ ಮಾಡುತ್ತಲೇ ಇದ್ದಾರೆ, ಹಾಗೂ ಸಾರ್ಥಕವಾದ ಬದುಕನ್ನು ಬದುಕುತ್ತಿದ್ದಾರೆ.

ಇಂಥ ಸಾರ್ಥಕ ಬದುಕಿನ ಸನ್ಮಿತ್ರ ಶ್ರೀ ಛಾಯಾಪತಿಯವರನ್ನು, ನಾಡಿನ ಜನತೆ ಗುರುತಿಸಿ, ಈಗ ಅವರನ್ನು ಸನ್ಮಾನಿಸುವ ಕಾರ್ಯಕ್ರಮವನ್ನು ಮೈಸೂರಿನಲ್ಲಿ ಹಮ್ಮಿಕೊಂಡಿರುವುದು ಸ್ತುತ್ಯಾರ್ಹ.

ಶ್ರೀ ಛಾಯಾಪತಿಯವರನ್ನು ಈ ಶುಭ ಪ್ರಸಂಗದಲ್ಲಿ ಹೃದಯಾರೆ ಅಭಿನಂದಿಸುತ್ತೇನೆ ಹಾಗೂ ಭಗವಂತ ಅವರಿಗೂ, ಅವರ ಕುಟುಂಬ ವರ್ಗಕ್ಕೂ ಇನ್ನೂ ಹೆಚ್ಚಿನ ರೀತಿಯಲ್ಲಿ ಕನ್ನಡದ ಸೇವೆ ಮಾಡಲು ಆಯುರಾರೋಗ್ಯ ಭಾಗ್ಯ ನೀಡಲೆಂದು ಪ್ರಾರ್ಥಿಸುತ್ತೇನೆ.

# ಸಾಹಸಿ ಪುಸ್ತಕೋದ್ಯಮಿ

ನನ್ನ ಮತ್ತು ಮಿತ್ರ ಛಾಯಾಪತಿ ಅವರ ಪರಿಚಯ ಎರಡು ಮೂರು ದಶಕಗಳದ್ದು. ಆದರೆ ತಳುಕಿನ ಮನೆತನದವರೊಂದಿಗೆ ನಮ್ಮ ಸಂಬಂಧ ಸುಮಾರು ಎಂಟು ದಶಕಗಳಷ್ಟು ಹಿಂದಿನದು. ಹರಿಹರದಿಂದ ನಮ್ಮ ತಂದೆ ಎಚ್.ಎಂ. ಶಂಕರನಾರಾಯಣ ರಾಯರು ಓದಲು ಮೈಸೂರಿಗೆ ಸುಮಾರು 1935ರಷ್ಟು ಹಿಂದೆ ಬಂದಾಗ ಅವರಿಗೆ ಆಶ್ರಯಕೊಟ್ಟಿದ್ದು ಛಾಯಾಪತಿ ಅವರ ದೊಡ್ಡಪ್ಪನವರಾಗಿದ್ದ ಕೀರ್ತಿಶೇಷ ಟಿ.ಎಸ್. ವೆಂಕಣ್ಣಯ್ಯನವರು. ಅವರು ನಮ್ಮ ತಂದೆಗೆ ಆಶ್ರಯ ನೀಡಿದ್ದರ ಜೊತೆಗೆ ಅನ್ನವಿಟ್ಟು ಕಾಪಾಡಿದವರು. ಅವರಿಗೂ ನಮ್ಮ ತಂದೆಯೆಂದರೆ ಪ್ರೀತಿ. ತರಗತಿಗಳಲ್ಲಿ ಹಾಸ್ಯಕ್ಕಾಗಿ ನಮ್ಮ ತಂದೆಯವರ ಎಚ್.ಎಂ. ಎಸ್. ಇನ್ಷಿಯಲ್ ಅನ್ನು 'His Majesty Service' ಎಂದು ಕರೆಯುತ್ತಿದ್ದರು! ಅದು ಬ್ರಿಟಿಷರ ಕಾಲ. ಅಲ್ಲಿಂದ ಮುಂದೆ ವೆಂಕಣ್ಣಯ್ಯನವರ ತಮ್ಮ, ಕನ್ನಡ ಶ್ರೇಷ್ಠ ಪ್ರಾಧ್ಯಾಪಕ, ತ.ಸು. ಶಾಮರಾಯರೊಡನೆ ಗೆಳೆತನ ಬೆಳೆಯಿತು. ಎಷ್ಟೋ ದಿನಗಳು ಶಾಮರಾಯರು, ಎಚ್.ಎಂ. ಎಸ್. ಮತ್ತು ಡಾ. ಕೆ. ಕೃಷ್ಣಮೂರ್ತಿ ಅವರು ಬೆಳಗಿನ ಹೊತ್ತು ವಾಯು ವಿಹಾರಕ್ಕೆ ಹೋಗುತ್ತಿದ್ದರು. ಅನಂತರ ಎಚ್.ಎಂ.ಎಸ್. ಮತ್ತು ಶಾಮರಾಯರು ಕೂಡಿ 'ತಳುಕಿನ ವೆಂಕಣ್ಣಯ್ಯ ಸ್ಮಾರಕ' ಪ್ರಕಟಣೆಯನ್ನು ಆರಂಭಿಸಿದರು. ಏಳೆಂಟು ಪುಸ್ತಕಗಳೂ ಪ್ರಕಟಗೊಂಡವು. ಅಲ್ಲಿಂದಾಚೆಗೆ ಸೌಕರ್ಯಕ್ಕಾಗಿ ಬೇರೆ ಬೇರೆ ಪ್ರಕಾಶನಗಳನ್ನು ಕೈಗೊಂಡರು. ಶಾಮರಾಯರು ತಮ್ಮ 'ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ' ಹೆಸರನ್ನೆ ಮುಂದುವರಿಸಿದರೆ ರಾಯರು ತಮ್ಮ ಪ್ರಕಾಶನಕ್ಕೆ 'ಶಾರದಾ ಮಂದಿರ' ಎಂದು ನಾಮಕರಣ ಮಾಡಿದರು.

ಈ ಎರಡೂ ಪ್ರಕಾಶನಗಳು ಅಲ್ಲಿಂದೀಚೆಗೆ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಏನು ಕೊಡುಗೆಗಳನ್ನು ನೀಡಿದವು ಎಂಬುದು ಈಗ ಇತಿಹಾಸ. ಈ ಎರಡೂ ಪ್ರಕಟಣಾಲಯಗಳಲ್ಲಿ ಹೊರಬಂದ ಗ್ರಂಥಗಳು ವಿದ್ವಾಂಸರ, ಜನಸಾಮಾನ್ಯರ ಗಮನ ಸೆಳೆದುವಲ್ಲದೆ ಓದುಗರ ಅಭಿರುಚಿಯನ್ನು ತಿದ್ದಿ ಅವರನ್ನು ಸಂಸ್ಕಾರವಂತರನ್ನಾಗಿಸುವ ದಿಶೆಯಲ್ಲಿ ಅದ್ಭುತ ಕೆಲಸವನ್ನು ಕೈಗೊಂಡವು. ಮುಂದೆ ತಳುಕಿನ ವೆಂಕಣ್ಣಯ್ಯ ಸ್ಮಾರಕ

ಪ್ರೊ. ಎಚ್.ಎಸ್. ಹರಿಶಂಕರ್

ಗ್ರಂಥಮಾಲೆಯ ಸೂತ್ರಧಾರವನ್ನು ಕೈಗೆತ್ತಿಕೊಂಡು ಶಾಮರಾಯರು ಅನೇಕ ಗ್ರಂಥಗಳನ್ನು ಪ್ರಕಟಿಸಿದರು. ತ.ಸು. ಶಾಮರಾಯರು ಸ್ವತಃ ವಿದ್ವಾಂಸರಾಗಿದ್ದರಿಂದ, ತಮ್ಮ ಕೃತಿಗಳನ್ನು ತಾವೇ ಪ್ರಕಟಿಸಿಕೊಂಡರು. ಜೊತೆಗೆ ವಿದ್ವಜ್ಜನರ ಕೃತಿಗಳನ್ನು ಕನ್ನಡವಲ್ಲಿ ಪ್ರಕಟಿಸತೊಡಗಿದರು. ಹಾಗೆ ಪ್ರಕಟಿಸಿದ ಗ್ರಂಥಗಳಲ್ಲಿ ಹಳಗನ್ನಡ, ನಡುಗನ್ನಡ ಕೃತಿಗಳೂ ಇದ್ದವು. ಪ್ರೊ. ಟಿ.ಎಸ್. ವೆಂಕಣ್ಣಯ್ಯನವರು ಸಂಪಾದಿಸಿಕೊಟ್ಟ 'ಬಸವರಾಜ ದೇವರ ರಗಳೆ' ಈ ಬಗೆಯ ವಿಶಿಷ್ಟ ಗ್ರಂಥ. ಪ್ರೊ. ವೆಂಕಣ್ಣಯ್ಯನವರು ಬರೆದದ್ದು ಸ್ವಲ್ಪ. ಆದರೆ ಅವರು ಪ್ರೊ ಡಿಎಲ್‌ಎನ್, ಕುವೆಂಪು, ತೀನಂಶ್ರೀ, ತ.ಸು. ಶಾಮರಾಯರಂಥ ಪ್ರತಿಭಾನ್ವಿತರಿಗೆ ಸದಾ ಪ್ರೋತ್ಸಾಹ ನೀಡುತ್ತ ಬಂದವರು. ಅಣ್ಣನ ಬದುಕು ಶಾಮರಾಯರಿಗೆ ಮಾದರಿಯಾಯಿತು. ಅವರ ಗುಣಗಳೇ ಮೈವೆತ್ತಂತೆ ಶಾಮರಾಯರು ನೂರಾರು ಮಂದಿ ವಿದ್ಯಾರ್ಥಿಗಳಿಗೆ ಆಶ್ರಯದಾತರು. ಅನ್ನದಾನ ಮತ್ತು ವಿದ್ಯಾದಾನಕ್ಕೆ ತಳುಕಿನ ಕುಟುಂಬ ನೀಡಿರುವ ಕೊಡುಗೆ ಸಾಮಾನ್ಯವಾದುದೇನೂ ಅಲ್ಲ.

ಕನ್ನಡದಲ್ಲಿ 'ನೂಲಿನಂತೆ ಸೀರೆ ತಾಯಿಯಂತೆ ಮಗಳು' ಎಂಬ ನಾಣ್ಣುಡಿ ಬಳಕೆಯಲ್ಲಿದೆ. ಅದು ಸತ್ಯ, ಸಾಹಿತ್ಯಿಕ ಮನೆತನದಿಂದ ಬಂದ ಮಿತ್ರ ಛಾಯಾಪತಿ ಯವರು ಕಾಮರ್ಸ್ ಪದವೀಧರರಾಗಿಯೂ, ಸಾಹಿತಿಗಳಾದದ್ದು ವೈಶಿಷ್ಟ. ದೊಡ್ಡಪ್ಪ ಟಿ.ಎಸ್. ವೆಂಕಣ್ಣಯ್ಯ, ತಂದೆ ತ.ಸು. ಶಾಮರಾಯರು, ಅಣ್ಣ ತ.ರಾ. ಸುಬ್ಬರಾವ್ (ತರಾಸು) ಹೀಗೆ ಸಾಹಿತಿಗಳ ವಂಶವಾಹಿನಿಯೇ ಹರಿದು ಬಂದಿದೆ. ಜೊತೆಗೆ ವೆಂಕಣ್ಣಯ್ಯನವರ ಬೀಗರಾಗಿದ್ದ ಬೆಳಗೆರೆ ಚಂದ್ರಶೇಖರ ಶಾಸ್ತ್ರಿ, ಬೆಳಗೆರೆ ಜಾನಕಮ್ಮ, ಬೆಳಗೆರೆ ಕೃಷ್ಣಶಾಸ್ತ್ರಿ, ಬೆಳಗೆರೆ ಸೀತಾರಾಮಶಾಸ್ತ್ರಿ (ಕ್ಷೀರ ಸಾಗರ), ಬೆಳಗೆರೆ ರವಿ ಮುಂತಾದ ಸಾಹಿತಿಗಳ ಮನೆತನದ ರಕ್ತ ಬಾಂಧವ್ಯಗಳೂ ಸೇರಿವೆ.

ತ.ಸು. ಶಾಮರಾಯರು ಆರಂಭಿಸಿದ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಸಾರಥ್ಯವನ್ನು ವಹಿಸಲು ಶಾಮರಾಯರ ಪುತ್ರ ಟಿ.ಎಸ್. ಛಾಯಾಪತಿ ಮುಂದೆ ಬಂದರು. ಈ ಕೆಲಸ ಸುಲಭದ್ದಾಗಿರಲಿಲ್ಲ. ಮನಸ್ಸು ಮಾಡಿದ್ದರೆ ಛಾಯಾಪತಿ ಅವರು ವಾಣಿಜ್ಯ ವಿಭಾಗದಲ್ಲಿ ಅಧ್ಯಾಪಕರಾಗಬಹುದಿತ್ತು. ಇಲ್ಲದೆ ಹೋದರೆ ಬ್ಯಾಂಕ್ ಕೆಲಸಕ್ಕೆ ಸೇರಿ ಅಧಿಕಾರಿಯಾಗಬಹುದಾಗಿತ್ತು. ಆದರೆ ದುಡ್ಡು ಬರುವ ವೃತ್ತಿಯನ್ನು ಬದಿಗಿರಿಸಿ ಪ್ರಕಟಣಾಕಾರ್ಯದಂತಹ ದುಸ್ಸಾಧ್ಯ ಕೆಲಸಕ್ಕೆ ಕೈ ಹಾಕಿದರು. ಕನ್ನಡ ಪ್ರಕಟಣಾರಂಗದಲ್ಲಿ ಎಲ್ಲವೂ ಸುಮುಖವಾಗಿಲ್ಲ. ಲಕ್ಷ ಲಕ್ಷ ಕನ್ನಡಿಗರಿರುವ ಕರ್ನಾಟಕ ದಲ್ಲಿ ಉತ್ತಮ ಗ್ರಂಥದ ಒಂದು ಸಾವಿರ ಪ್ರತಿಗಳು ಖರ್ಚಾಗಬೇಕಾದರೆ ಹತ್ತು ವರ್ಷಗಳು ಕಾಯಬೇಕಾಗುತ್ತದೆ. ಜನಪ್ರಿಯ ಲೇಖಕರ ಕೃತಿಗಳೇನೋ ಖರ್ಚಾಗುತ್ತವೆ. ಆದರೆ ಅಂತಹ ಲೇಖಕರು ನೂರನ್ನೂ ಮೀರುವುದಿಲ್ಲ. ಇದಕ್ಕೆ ಕಾರಣಗಳು ಹಲವಾರು

ಇರಬಹುದು. ವಿಶ್ಲೇಷಣೆ ಸುಲಭ, ಆದರೆ ಸಮಸ್ಯೆಗೆ ಪರಿಹಾರವಿಲ್ಲ. ಹೀಗಿದ್ದೂ ಈ ಸಾಹಸಕ್ಕೆ ಕೈ ಹಾಕಿದುದು ಛಾಯಾಪತಿ. ಅವರ ಎದೆಗಾರಿಕೆಯನ್ನು ತೋರಿಸುತ್ತದೆ. ಪ್ರಕಟಣಾ ಉದ್ಯಮಕ್ಕೆ ತಮ್ಮನ್ನೇ ಸಮರ್ಪಣಾ ಭಾವದಿಂದ ಅರ್ಪಿಸಿಕೊಂಡಿದ್ದ ಇವರನ್ನು ಕಂಡು ಅನೇಕರು ಮರುಕಪಟ್ಟಿದ್ದೂ ಉಂಟು. ಸ್ವತಃ ತಂದೆಯವರೇ ಮಗನ ಈ ಸಾಹಸಕ್ಕೆ ದಿಗಿಲು ಪಟ್ಟಿರಬೇಕು. ಆದರೆ ಇವು ಛಾಯಾಪತಿಯವರನ್ನು ತಮ್ಮ ಕರ್ತವ್ಯ ನಿಷ್ಠೆಯಿಂದ ವಿಮುಖಗೊಳಿಸಲಿಲ್ಲ. ಹಿಡಿದಪಟ್ಟು ಸಡಿಲಸದೆ ಯಶಸ್ವಿಯಾದರು.

ಛಾಯಾಪತಿಯವರ ಮತ್ತೊಂದು ಒಳ್ಳೆಯ ಅಂಶವೆಂದರೆ ಅವರ ಸ್ವಭಾವ. ಅದು ಅವರ ಗುಣ. ಅವರು ಒಳ್ಳೆಯ ಮಾತಿನಿಂದಲೇ ಎಲ್ಲರ ಗಮನ ಸೆಳೆಯಬಲ್ಲವರು. ಎಂಥ ಕಷ್ಟಕರ ಪ್ರಸಂಗಗಳಲ್ಲೂ ಅವರು ತಮ್ಮ ಮಾತಿನ ಮಾಯಾಜಾಲದಿಂದ ಪ್ರತಿಕಕ್ಷಿಯನ್ನು ಚಿತ್ತುಮಾಡಬಲ್ಲರು. ಆದರೆ ಅವರ ಮಾತುಗಾರಿಕೆಯೆಲ್ಲ ಒಳಿತಿನ ಹಾದಿಯತ್ತ ಹೋಗುತ್ತದೆ ಎಂಬುದನ್ನು ಮರೆಯುಬಾರದು. ಹಾಗಾಗಿಯೇ ಸಿದ್ಧಪ್ರಸಿದ್ಧರು ಅವರ ಮಾಲೆಯಲ್ಲಿ ಪ್ರಕಟಿಸಲು ತಮ್ಮ ಗ್ರಂಥಗಳನ್ನು ಕೊಟ್ಟರು, ಕನ್ನಡ ಸಮೃದ್ಧವಾಗುವಲ್ಲಿ ಆಸಕ್ತಿ ತಳೆದರು.

ಪ್ರಕಟಣೆಗಳ ವಿಷಯ ಬಂದಾಗ ಛಾಯಪತಿಯವರು ಗುಣಮಟ್ಟದೊಂದಿಗೆ ರಾಜಿ ಮಾಡಿಕೊಳ್ಳುವುದಿಲ್ಲ. ಉತ್ತಮ ಮುಖಪುಟಗಳನ್ನು ಹೊಂದಿರುವ ಅವರ ಪ್ರಕಟಣೆಗಳನ್ನು ನೋಡಿಯೇ ಸಂತಸಪಡಬೇಕು. ಆ ಕೃತಿಗಳ ಒಳಗಣ ಹೂರಣವೂ ಅಷ್ಟೇ ಸೊಗಸು. ತ.ಸು. ಶಾಮರಾಯರ 'ಮೂರು ತಲೆಮಾರು' ಇದಕ್ಕೆ ಒಂದು ಉತ್ತಮ ಉದಾಹರಣೆ. ನನ್ನದೂ ಒಂದು ಪುಸ್ತಕ 'ತಿರುಮಲಾರ್ಯ' ತುಂಬ ಚೆನ್ನಾಗಿ ಮುದ್ರಿತವಾಗಿದೆ. ನನ್ನ ಹಿರಿಯ ಮಿತ್ರರೂ ಸುಪ್ರಸಿದ್ಧ ಹೃದಯತಜ್ಞರೂ ಆಗಿರುವ ಡಾ. ಎ.ಎಸ್. ಚಂದ್ರಶೇಖರ್‌ರಾವ್ ಬರೆದಿರುವ 'ಅಂಜೈನ ಮತ್ತು ಹೃದಯಾಘಾತ' ಕೃತಿಯನ್ನು ಕೇವಲ ಒಂದೂವರೆ ತಿಂಗಳಿನಲ್ಲಿ ಸೊಗಸಾಗಿ ಮುದ್ರಿಸಿಕೊಟ್ಟರು. ಮುದ್ರಣಾಲಯಗಳೊಂದಿಗೆ ಉತ್ತಮ ಸಂಬಂಧ ಹೊಂದಿರುವ ಛಾಯಾಪತಿಯವರು ಪುಸ್ತಕಗಳನ್ನು ಬಹುಬೇಗ ಪ್ರಕಟಿಸುವುದು ಲೇಖಕರಿಗೆ ವರದಾನವಾಗಿದೆ.

ಛಾಯಾಪತಿಯವರನ್ನು ಅವರ ಎಪ್ಪತ್ತರ ಹರೆಯದರಲ್ಲಿ ಅಭಿನಂದಿಸುತ್ತಿರುವವರ ಪೈಕಿ ಪ್ರಸಿದ್ಧ ಕವಿ ಬಿ.ಆರ್. ಲಕ್ಷ್ಮಣರಾಯರು ಸುಪ್ರಸಿದ್ಧ ಆಂಗ್ಲ ಕವಿ ಲಾಂಗ್‌ಫೆಲೊಗೆ ಅವರನ್ನು ಹೋಲಿಸಿದ್ದಾರೆ. ಛಾಯಾಪತಿಯವರು ನಿಜಕ್ಕೂ ಕನ್ನಡದ ಲಾಂಗ್‌ಫೆಲೊ; ಎತ್ತರದಲ್ಲೂ ಕೂಡ. ಬಹುಶಃ ಇದು ಮನೆತನದಿಂದ ಬಂದಿರಬೇಕು. ಶಾಮರಾಯರೂ ಎತ್ತರವಾಗಿದ್ದರು. ಅವರ ಅಣ್ಣ ಟಿ.ಎಸ್. ವೆಂಕಣ್ಣಯ್ಯನವರ ಎತ್ತರವಂತೂ ಮನೆಮಾತಾಗಿದೆ. ಎಷ್ಟೋ ಸಂದರ್ಭಗಳಲ್ಲಿ ವೆಂಕಣ್ಣಯ್ಯನವರ ಸ್ನೇಹಿತರು ಇವರನ್ನು

ಎತ್ತರವಲ್ಲಾದರೂ ಸೋಲಿಸಬೇಕೆಂದು ಸಂಕಲ್ಪಿಸಿ ಹಲವಾರು ಸಲ ಅತಿ ಎತ್ತರದ ವ್ಯಕ್ತಿಗಳನ್ನು ಕರೆ ತರುತ್ತಿದ್ದರಂತೆ. ಆದರೆ ಅವರ ಆಟ ವೆಂಕಣ್ಣಯ್ಯನವರ ಮುಂದೆ ನಡೆಯಲಿಲ್ಲ. ಅವರೆಲ್ಲ ಇವರ ಭುಜಕ್ಕೂ ಸರಿಸಮನಾಗಿ ಬಾರದೆ ಹೋದರು!

ಮಿತ್ರ ಛಾಯಾಪತಿ ಅವರನ್ನು ಕುರಿತಂತೆ ಪ್ರೊ. ಎಚ್ಚೆಸ್ಕೆ ಮಾತನ್ನು ಇಲ್ಲಿ ಉಲ್ಲೇಖಿಸಲೇಬೇಕು. "ಛಾಯಾಪತಿಯವರದು ಒಂಟಿ ಪಯಣ; ಭಗೀರಥನ ಛಲ. ಅವರಿಗೆ ಪ್ರಕಾಶನ ಕಾರ್ಯ ಉದ್ಯಮವಲ್ಲ ಜೀವನ ವಿಧಾನ" ಇದಕ್ಕಿಂತ ಬೇರೆ ವ್ಯಾಖ್ಯಾನದ ಅಗತ್ಯವಿಲ್ಲ.

ಎಪ್ಪತ್ತರ ಹೊಸ್ತಿಲಿನಲ್ಲಿ ಕಾಲಿಡುತ್ತಿರುವ ಟಿ.ಎಸ್. ಛಾಯಾಪತಿ ಅವರಿಗೆ ದೇವರು ಆಯುರಾರೋಗ್ಯ ಐಶ್ವರ್ಯಗಳನ್ನು ನೀಡಲಿ. ಅವರಿಂದ ಕನ್ನಡ ಸಾಹಿತ್ಯ ಕಣಜ ಮತ್ತಷ್ಟು ಉತ್ಕೃಷ್ಟ ಗ್ರಂಥಗಳಿಂದ ತುಂಬಲಿ ಎಂದು ಹಾರೈಸುವುದು ನನ್ನ ಪಾಲಿನ ಕೆಲಸ.



# ಸ್ವಸಾಮರ್ಥ್ಯದ ಸಾಧಕ

ನವೋದಯ ಸಾಹಿತ್ಯದ ಪಂಚ ಕಲಶ ಗೋಪುರಗಳಲ್ಲಿ ತ.ಸು. ವೆಂಕಣ್ಣಯ್ಯ ಒಬ್ಬರು. ಇವರ ಹೆಸರಿನ ತಳುಕಿನ ವೆಂಕಣ್ಣಯ್ಯ ಗ್ರಂಥ ಮಾಲೆ ಕನ್ನಡ ಪುಸ್ತಕೋದ್ಯಮ ದಲ್ಲಿ ಬಹಳ ಮಹತ್ವವಾದದ್ದು. ಪ್ರೊ. ವೆಂಕಣ್ಣಯ್ಯನವರ ಸೋದರ ಪ್ರೊ. ತ.ಸು. ಶಾಮರಾಯರಿಗೆ ಈ ಗ್ರಂಥಮಾಲೆ ವ್ಯಾವಹಾರಿಕ ಸಾಧನವಾಗಿರಲಿಲ್ಲ. ಅಗ್ರಜರೂ, ಗುರುಸಮಾನರೂ ಆಗಿದ್ದ ಅಣ್ಣನವರ ಬಳಿಯಲ್ಲಿ ಒಮ್ಮೆ ಶಾಮರಾಯರು 'ನಿಮ್ಮ ಹೆಸರು ನಿಲ್ಲುವಂಥ ಕಾರ್ಯವೇನಾದರೂ ಮಾಡಬೇಕು' ಎಂದು ತಮ್ಮ ಕನಸನ್ನು ವ್ಯಕ್ತಪಡಿಸಿದರು. ಅವರ ಉತ್ತರ ಕೂಡಲೆ ಸಿದ್ಧವಾಗಿತ್ತು. 'ನಾನೇನಾದರೂ ಬುದ್ಧನೇ ಅಥವಾ ಬಸವಣ್ಣನೇ' ನನ್ನ ಹೆಸರೇಕೆ? ಉಳಿಯಬೇಕು ಎಂದರು. ಅವರ ಬದುಕು ಜೀವಂತ ದಂತಕಥೆ.

ರಾಷ್ಟ್ರಕವಿ ಕುವೆಂಪು ತಮ್ಮ ಮೇರು ಕೃತಿ ಶ್ರೀರಾಮಾಯಣ ದರ್ಶನವನ್ನು ಗುರು ವೆಂಕಣ್ಣಯ್ಯನವರಿಗೆ ಅರ್ಪಿಸಿ ಶಾಶ್ವತತೆಯನ್ನು ನೀಡಿದ್ದಾರೆ.

ಮಂಕುತಿಮ್ಮನ ಕಗ್ಗದಂತಹ ಅಪೂರ್ವ ಕೃತಿಯನ್ನು ಡಿ.ವಿ.ಜಿ. ಮಿತ್ರ ವೆಂಕಣ್ಣಯ್ಯ ನವರಿಗೆ ಮತ್ತು ಮೋಕ್ಷಗೊಂಡಂ ಕೃಷ್ಣಮೂರ್ತಿಯವರಿಗೆ ಅರ್ಪಿಸಿದ್ದಾರೆ.

ಬದಿಯೇಂ ಗೆಯ್ದೊಡೆಯುಂ ನಾ
ನದಿರದೆ ನಿಲಲಾಯ್ತು ನಿಮ್ಮ ಕೆಳೆಯಾಸರೆಯಿಂ ||
ಬದುಕನವನೊಡೆದೊಡೇನೆ
ನ್ನೆದೆಯಿನಿಸಂ ಕೀಳಲಳವೆ ನಿಮ್ಮೆಸೆನೆಳಲಂ ?
.......... ಆ ಮರುಕದ ಕಣ್ಣಾನಗು
ವಾ ಮಾತಿನ ಸವಿಗಳಲೆ ಸಂಜೀವನಗಳ್ ? ||

ಎಂದು ಕಣ್ಣಿನ ತಂಪುನೋಟವನ್ನೂ ಸಂಜೀವಿನಿ ಸದ್ಯಶವಾದದ ನಗುವನ್ನೂ ಸ್ಮರಿಸುತ್ತಾ ವೆಂಕಣ್ಣಯ್ಯನವರಿಗೆ ಅರ್ಪಿಸಿದ್ದಾರೆ. ವಿ|| ಪ್ರೊ. ವೆಂಕಣ್ಣಯ್ಯನವರ ಹಿರಿಮೆಗೆ ಈ ಇಬ್ಬರು ಕವಿಗಳ ಅರ್ಪಣೆ ಅರ್ಥಗರ್ಭಿತವಾಗಿದೆ.

---

ವಿ. ಅಮೃತ

---

ಅಂಗೈ ಒಂದು ಐದು ಬೆರಳುಗಳೂ ಭಿನ್ನವಾದವು. ತ.ಸು. ಶಾಮರಾಯರು ತ.ರಾ.ಸು., ಶೃಂಗೇರಿಯ ಕಾಲೇಜಿನ ಪ್ರಾಂಶುಪಾಲರಾಗಿದ್ದ ದಿ|| ತ.ಶಾ. ವೆಂಕಣ್ಣಯ್ಯ, ಜಯಮ್ಮ, ಛಾಯಾಪತಿ, ಸೂರಿ, ಲಕ್ಷ್ಮೀ ಈ ಕುಟುಂಬಕ್ಕೆ ಸೇರಿದವರೆಲ್ಲರಲ್ಲೂ ಮನೆತನದ ಸಂಸ್ಕಾರದ ಎಳೆ ಎದ್ದು ಕಾಣುತ್ತಲೇ ಇರುತ್ತದೆ. ನಿರ್ಮಲ ಅಂತಃಕರಣ, ಔದಾರ್ಯ ಸ್ನೇಹ ಮಾಧುರ್ಯ ಮತ್ತು ಪರೋಪಕಾರ ಈ ಮನೆತನದ ಪ್ರಧಾನ ಲಕ್ಷಣಗಳು.

ಪ್ರಸ್ತುತ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯನ್ನು ಉನ್ನತ ಸ್ಥಿತಿಗೆ ತಂದದ್ದು ಶ್ರೀ ಛಾಯಾಪತಿ. ನಾನು ಪೂಜ್ಯ ಶಾಮರಾಯರ ತಂಪು ನೆರಳಿನಲ್ಲಿ ಆಶ್ರಯ ಪಡೆದ ವಿದ್ಯಾರ್ಥಿನಿ. ಈ ಕಾರಣದಿಂದ ದಿ|| ವೆಂಕಣ್ಣಯ್ಯ, ಛಾಯಾಪತಿ, ಸೂರಿ, ಜಯಮ್ಮ ಮತ್ತು ಲಕ್ಷ್ಮೀ ನನಗೆ ಸೋದರ ಸಂಬಂಧಿಗಳು.

ಛಾಯಾಪತಿ ಎಂ.ಕಾಂ. ಪದವೀಧರನಾದ ತರುವಾಯ ಯಾವುದಾದರೂ ಬ್ಯಾಂಕ್ ನೌಕರಿಗೆ ಸೇರಬಹುದಾಗಿತ್ತು. ಅಥವಾ ಸಿ.ಎ. ಮುಂತಾದ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ತೆಗೆದುಕೊಳ್ಳುವ ಅವಕಾಶವು ಇದ್ದಿತು. ಆದರೆ ತಂದೆಯವರು ತಮ್ಮ ಅಣ್ಣನ ಹೆಸರಿನ ಗ್ರಂಥಮಾಲೆಯನ್ನು ವಹಿಸಿಕೊಳ್ಳಬೇಕೆಂದು ಅಪ್ಪಣೆ ಮಾಡಿದ ಕೂಡಲೆ ಮರುಮಾತಿಲ್ಲದೆ ಆ ಜವಾಬ್ದಾರಿಯ ಹೊಣೆ ಹೊತ್ತು ಪುಸ್ತಕೋದ್ಯಮಕ್ಕೆ ಪಾದಾರ್ಪಣೆ ಮಾಡಿದರು.

ಸುಮಾರು 1967-68ನೇ ಇಸವಿಯೆಂದು ತೋರುತ್ತದೆ. ಆಗ್ಗೆ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಆರೋಗ್ಯಕರ ಸ್ಥಿತಿಯಲ್ಲಿರಲಿಲ್ಲ. ಪ್ರಪ್ರಥಮವಾಗಿ ಶಾಮರಾಯರಿಗೆ ಪುಸ್ತಕೋದ್ಯಮ ಅಣ್ಣನ ಹೆಸರಿನ ಸ್ಮಾರಕವಾಗಿತ್ತಷ್ಟೆ! ಅವರಿಗೆ ನಿಶ್ಚಿತ ವ್ಯವಹಾರ ಜ್ಞಾನ ಇರಲಿಲ್ಲ ಎಂದರೆ ತಪ್ಪಾಗಲಾರದು. ಅಧಿಕಾರ ವಲಯದಲ್ಲಿ ಜಾತೀಯತೆ ಹಾಗೂ ಶಾಮರಾಯರ ಸ್ವಭಾವ ಕಾರಣವಾಗಿ ಗ್ರಂಥಮಾಲೆಯನ್ನು ಮುಖ್ಯವಾಹಿನಿಗೆ ತರುವುದು ಕಷ್ಟಸಾಧ್ಯವಾಗಿತ್ತು. ಸಹಾಯ ಮಾಡುವ ಮನೋಭಾವವೂ ಸಂಬಂಧಪಟ್ಟ ಅಧಿಕಾರಿಗಳಿಗೆ ಕೊರತೆಯಾಗಿತ್ತು. ವಿಶ್ವವಿದ್ಯಾನಿಲಯದ ಅಂದಿನ ಪ್ರಭಾವಶಾಲಿ ಅಧಿಕಾರಿಗಳಿಗೂ ಶಾಮರಾಯರಿಗೂ ಪರಸ್ಪರರಲ್ಲಿ ಸ್ನೇಹ ಸಾಮರಸ್ಯ ಇರಲಿಲ್ಲ. ಇಂಥ ಸನ್ನಿವೇಶದಲ್ಲಿ ಗ್ರಂಥಪ್ರಕಟನಾ ಕಾರ್ಯ ಸವಾಲಾಯಿತು. ಈ ವ್ಯವಹಾರಕ್ಕೆ ಛಾಯಾಪತಿ ಅನನುಭವಿ. ಮುನ್ನುಗ್ಗುವ ಸಾಹಸ, ಧೈರ್ಯ, ಮಾತುಗಾರಿಕೆ, ಕಾರ್ಯನಿಷ್ಠೆ, ಪರೇಂಗಿತ ಜ್ಞಾನ ಮುಂತಾದ ಸ್ವಭಾವಜನ್ಯ ಗುಣಗಳು ಅವರ ಮೂಲಧನವಾಗಿತ್ತು.

ಎಂಥಾ ಪುಸ್ತಕವನ್ನು ಪ್ರಕಟಿಸುವುದು ಇದಕ್ಕೆ ಯಾರನ್ನು ಕಾಣಬೇಕು? ಈ ಯಾವ ಅರಿವೂ ಇಲ್ಲದ ಮಂಕಾಗಿದ್ದ ಸನ್ನಿವೇಶ ಮನಸ್ಸನ್ನು ಕೆಣಕುತ್ತಿತ್ತು. ವಿದ್ಯಾರ್ಥಿಗಳಿಗೆ ಉಪಯೋಗವಾಗಬಹುದಾದ ಪುಸ್ತಕವೊಂದನ್ನು ಪ್ರಕಟಿಸೋಣ ಎಂಬ ನಿರ್ಧಾರಕ್ಕೆ ಬಂದರು . ಮಹಾರಾಣಿ ಕಾಲೇಜಿನ ಮನಃಶಾಸ್ತ್ರದ ಮುಖ್ಯಸ್ಥರಾದ ಪ್ರೊ. ಪಿ. ನಟರಾಜ್

ಅವರನ್ನು ಭೇಟಿಯಾಗಿ ತಮ್ಮ ಸಮಸ್ಯೆಯನ್ನು ಸ್ಥೂಲವಾಗಿ ಪರಿಚಯಿಸಿದರು. 'Mannual of laboratory and experimental psychology' ಎಂಬ ಗ್ರಂಥ ಒಂದನ್ನು ಪ್ರಕಟಣೆಗೆ ಕೊಡಲೊಪ್ಪಿದರು. ಅದು ವಿದ್ಯಾರ್ಥಿಗಳ ಪ್ರಾಯೋಗಿಕ ವಿಚಾರಕ್ಕೆ ಮಾರ್ಗದರ್ಶಿಯಾದ ಮಾದರಿ ಗ್ರಂಥವಾಗಿತ್ತು. ಇದರಿಂದ ಸಮಸ್ಯೆ ಪರಿಹಾರವಾಗದಿದ್ದರೂ ಪ್ರಕಟನಾಲಯ ಕ್ರಿಯಾಶೀಲವಾಗಲು ಸಹಾಯವಾಯಿತು.

ಈ ಮುಗ್ಗಟ್ಟಿನಲ್ಲೂ ಶ್ರೀ ಮುಗಳಿಯವರ ವೈಚಾರಿಕ ಪ್ರಬಂಧ ಸಂಕಲನವನ್ನು ಬೆಳಕಿಗೆ ತಂದರು. ಮುಖ ಪುಟದಲ್ಲಿ ಕನ್ನಡ, ಕನ್ನಡ ಸಂಸ್ಕೃತಿಯ ಅಭಿಮಾನ ಉಕ್ಕಿ ಸುರಿಯುವಂತೆ ಬೇಲೂರು ಶಿಲಾಬಾಲಿಕೆ, ಹಂಸ ಮುಂತಾದ ಎಲ್ಲಾ ಬೊಂಬೆಗಳ ಚಿತ್ರವನ್ನು ಒಳಗೊಂಡಂತೆ ಕಲಸು ಮೋಲೋಗರ ಮಾಡಲಾಗಿತ್ತು. ಇದಾದ ತರುವಾಯ ಒಂದು ದಿನ ನಾನು ಕಾಲೇಜಿಗೆ ಹೊರಟಿದ್ದೆ. ಛಾಯಾಪತಿ ಆತುರಾತುರವಾಗಿ ನಮ್ಮ ಮನೆಗೆ ಬಂದರು. ಮುಖದಲ್ಲಿ ಪ್ರಧಾನವಾಗಿದ್ದ ಉತ್ಸಾಹ ಏನೋ ಸಂತೋಷದ ಸುದ್ದಿ ಇದೆ ಎಂದು ಸುಲಭವಾಗಿ ಊಹಿಸುವಂತಿತ್ತು.

ದಿ. ಪ್ರೊ. ಹಾ.ಮಾ. ನಾಯಕರ ಪ್ರೋತ್ಸಾಹ ಮಾತಿನ ಸಹಾಯದಿಂದ ಇಪ್ಪತ್ತು ಸಾವಿರ ರೂ.ಗಳ ಸಗಟು ವ್ಯಾಪಾರಕ್ಕೆ ಅಪ್ಪಣೆಯಾಗಿತ್ತು. ನಾನು ಕೂಡಲೆ ಒಂದು ಲೋಟ ಹಾಲು ಕೊಟ್ಟು ಸಂತೋಷವನ್ನು ವ್ಯಕ್ತಪಡಿಸಿದೆ. ಇದು ಅವರ ಸಾಹಸಗಾಥೆಯ ಮೊದಲ ಹೆಜ್ಜೆ. ಅಂದಿನಿಂದ ಅವರ ಏಳಿಗೆ ಹಿಂತಿರುಗಿ ನೋಡದೆ ಮುಂದೆ ಸಾಗಿದೆ, ಸಾಗುತ್ತಿದೆ, ಹೀಗೆಯೇ ಮುಂದುವರೆಯಲಿ.

ಪ್ರೊ. ಜವರೇಗೌಡರು, 'ಈ ಹುಡುಗ ಕನ್ನಡಕ್ಕಾಗಿ ಶ್ರಮಿಸುತ್ತಿದ್ದಾರೆ; ಅವರಿಗೆ ಪ್ರೋತ್ಸಾಹಿಸಬೇಕು ಎನ್ನುವ ಏಕೈಕ ತತ್ವಕ್ಕೆ ಬದ್ಧರಾದರು. ಆ ನಿರ್ಧಾರದ ಮುಂದೆ ವೈಯಕ್ತಿಕ ಭಿನ್ನಾಭಿಪ್ರಾಯ ಜಾತಿ ಮುಂತಾದ ವಿಚಾರಗಳು ಕ್ಷುದ್ರವಾಗಿ ಕರಗಿ ಹೋಯಿತು. ಪ್ರೊ. ಹಾ.ಮಾ. ನಾಯಕರು ಪೂಜ್ಯ ತ.ಸು. ಶಾಮರಾಯರಿಗೆ ದೂರವಾಣಿ ಕರೆ ಮಾಡಿ ಛಾಯಾಪತಿ ಕನ್ನಡದಲ್ಲಿ ಒಳ್ಳೆಯ ಕೆಲಸ ಮಾಡುತ್ತಿದ್ದಾರೆ. ಅವರಿಗೆ ನಮ್ಮ ಬೆಂಬಲವಿದೆ ಎಂದರು. 'ನಿಮ್ಮ ಮಗ ಎಂದಾಗಲೀ ಅಥವಾ ಬ್ರಾಹ್ಮಣ-ಅಬ್ರಾಹ್ಮಣ ಎಂಬ ಮಾತಿಗೆ ಎಡೆಯೇ ಇರಲಿಲ್ಲ. ನಾಯಕರು ತಮ್ಮನ್ನು ಶಾಮರಾಯರ ವಿದ್ಯಾರ್ಥಿ, ಆ ಋಣಕ್ಕಾಗಿ ನಿಮ್ಮ ಮಗನಿಗೆ ಸಹಾಯ ಮಾಡುತ್ತಿದ್ದೇನೆ ಎಂಬ ಮಾತನ್ನೂ ಆಡಲಿಲ್ಲ. ನಾಯಕರ ಮಾತು ಯಾವಾಗಲೂ ಖಚಿತ ನೇರ, ಅನುಮಾನ ಅಪಾರ್ಥಗಳಿಗೆ ಅವಕಾಶವಿಲ್ಲದ್ದು ಎಂಬುದು ಎಲ್ಲರಿಗೂ ತಿಳಿದ ವಿಷಯ.

ಹೀಗೆ ಛಾಯಾಪತಿ ಯಾವ, ಯಾರ ಮನಸ್ತಾಪಕ್ಕೂ ಸಿಲುಕದೆ, ಯಾರ ದಾಕ್ಷಿಣ್ಯ, ದಯೆಗೂ ಕೈಯೊಡ್ಡದೆ ಸ್ವಸಾಮರ್ಥ್ಯದಿಂದ ಪ್ರಗತಿ ಪಥದಲ್ಲಿ ಮುಂದುವರೆದಿದ್ದಾರೆ.

ತಮ್ಮ ತಂದೆ ಮತ್ತು ದೊಡ್ಡಪ್ಪ ತಳುಕಿನ ವೆಂಕಣ್ಣಯ್ಯನವರ ಬಗ್ಗೆ ಅಪಾರ ಗೌರವ, ಹೆಮ್ಮೆ ಹಾಗೂ ಕೃತಜ್ಞತೆ, ಇಂಥ ವಿಚಾರ ಬಂದಾಗ ಅವರ ಧ್ವನಿ ಭಾರವಾಗುತ್ತದೆ.

ರಾಷ್ಟ್ರಕವಿ ಜಿ.ಎಸ್. ಎಸ್. , ಅವರ ಸೌಂದರ್ಯ ಸಮೀಕ್ಷೆಯನ್ನು ಪ್ರಕಟಿಸಿ ಹಲವು ಮರು ಮುದ್ರಣವನ್ನು ಕಂಡಿತು.

ಲೇಖಕರಿಗೆ ಹಣ ಸಂದಾಯ ಮಾಡುವುದು, ಶುದ್ಧ ಮುದ್ರಣ ಕಾರ್ಯ, ಹೇಳಿದ ಕಾಲಕ್ಕೆ ತಪ್ಪದಂತೆ ಕೃತಿಗಳನ್ನು ಬಿಡುಗಡೆ ಮಾಡಿಸುವುದು ಮುಂತಾದ ಎಲ್ಲ ಕಾರ್ಯಗಳಲ್ಲೂ ನಿಷ್ಠೆ, ಕಾರ್ಯತತ್ಪರತೆಯನ್ನು ಮೆರೆದಿದ್ದಾರೆ.

ಉತ್ತಮ ಪುಸ್ತಕಗಳನ್ನು ಪ್ರಕಟಿಸುವ ಮೂಲಕ ಬಹಳಷ್ಟು ಬರಹಗಾರರನ್ನು ಬೆಳಕಿಗೆ ತರುವುದರ ಜೊತೆಗೆ ಪ್ರಸಿದ್ಧ ವ್ಯಕ್ತಿಗಳ ಚಿಂತನೆಗಳ ಪ್ರಕಟಣೆಯ ಮೂಲಕ ಲೇಖಕರ ದನಿಯಾಗಿದ್ದಾರೆ ಛಾಯಾಪತಿ. ಲೇಖಕರು ತಮ್ಮ ಕೃತಿಗಳನ್ನು ಕೈಗೆತ್ತಿ ಕೊಂಡಾಗ ಅವರಲ್ಲಾಗುವ ಸಂತೋಷ, ಮೂಕ ಹಾರೈಕೆ ಪ್ರಕಾಶಕರಿಗೆ ಶ್ರೀರಕ್ಷೆ. ತಳುಕಿನ ಮನೆತನದ ಲೇಖಕರ ಪಂಕ್ತಿಯಲ್ಲಿ ಪ್ರಕಾಶಕರಾದ ಛಾಯಾಪತಿಯವರೂ ಸಮಸಮ ವಾಗಿ ತಲೆ ಎತ್ತಿ ನಿಲ್ಲಬಲ್ಲರು.

ಸುಮಾರು ಒಂದು ಸಾವಿರಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿರುವ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಅತ್ಯುತ್ತಮ ಪ್ರಕಾಶನ ಪ್ರಶಸ್ತಿಯನ್ನು ಪಡೆದು ಕೊಂಡಿದೆ. ಟಿ.ಎಸ್. ವೆಂಕಣ್ಣಯ್ಯ, ತ.ಸು. ಶಾಮರಾಯ, ರಂ.ಶ್ರೀ ಮುಗಳಿ, ಹಾ.ಮಾ. ನಾಯಕ, ಜಿ.ಎಸ್. ಶಿವರುದ್ರಪ್ಪ, ಚನ್ನವೀರಕಣವಿ, ದೇಜಗೌ, ಡಾ. ಸಿ.ಪಿ.ಕೆ, ವಿಜಯ ಸಾಸನೂರ್, ಲಕ್ಕಪ್ಪಗೌಡ ರಂತಹ ಲೇಖಕರ ಕೃತಿಗಳು ತ.ವೆಂ. ಸ್ಮಾರಕ ಗ್ರಂಥಮಾಲೆ ಯಲ್ಲಿ ಪ್ರಕಟಗೊಂಡಿವೆ. ಕನ್ನಡ ಸಾಹಿತ್ಯ ಚರಿತ್ರೆ, ಶಬ್ದಮಣಿ ದರ್ಪಣ, ಬಸವರಾಜ ದೇವರ ರಗಳೆ, ಜಾನಪದ ಸ್ವರೂಪ, ಸೌಂದರ್ಯ ಸಮೀಕ್ಷೆಗಳಂತಹ ಪುಸ್ತಕಗಳು ಐದರಿಂದ ಹತ್ತು ಬಾರಿ ಮುದ್ರಣ ಕಾಣುವ ಮೂಲಕ ಪ್ರಕಾಶಕ ಹಾಗೂ ಪ್ರಕಾಶನಕ್ಕೆ ಹೆಸರು ತಂದು ಕೊಟ್ಟಿದೆ. ಪ್ರಕಾಶನ ಕಲೆಯಲ್ಲಿ ಛಾಯಾಪತಿಯವರು ಉನ್ನತ ಗುಣಮಟ್ಟವನ್ನು ಸಾಧಿಸಿದ್ದಾರೆ. 'ಸಾವಿರ ಪುಟಗಳ ಸರದಾರ' ಎಂಬ ಕೀರ್ತಿಗೆ ಭಾಜನರು.

ಕನ್ನಡ ಪುಸ್ತಕ ಪ್ರಕಾಶವೋದ್ಯಮದಲ್ಲಿಯೇ ಒಂದು ಸಾವಿರ ಪುಟಗಳ ಮಹಾಭಾರತ ಸಮೀಕ್ಷೆ, ಕನ್ನಡ ನಾಡಿನ ಹೆಮ್ಮೆಯ ಅಂಕಣಕಾರ ಪ್ರೊ. ಎಚ್ಚೆಸ್ಕೆಯವರ ಅಂಕಣದ ಬರಹದ ಸಂಕಲನಗಳಾದ 'ಬೆಳಕು ಚೆಲ್ಲಿದ ಬದುಕು', 'ಗಗನ ಚುಕ್ಕಿ ಭರಚುಕ್ಕಿ', 'ಮಾನ್ಯರು ಸಾಮಾನ್ಯರು' ಬೃಹದಾಕಾರದ ಗುಣ ಮಟ್ಟದ ಪುಸ್ತಕಗಳನ್ನು ಹೊರತಂದಿರುವುದು ಅವರ ಸಾಹಸಕ್ಕೆ, ಸಾಹಿತ್ಯಾಭಿಮಾನಕ್ಕೆ ಮತ್ತು ಕನ್ನಡ ಭಾಷಾ ಪ್ರೇಮಕ್ಕೆ ಹಿಡಿದ ಕನ್ನಡಿಯಂತಿದೆ. ಆದರೆ ಯಾವ ಕಾರಣಕ್ಕೂ ಗುಣಮಟ್ಟದಲ್ಲಿ ತಮ್ಮ ನಿಲವನ್ನು ಬದಲಾಯಿಸಿಕೊಂಡಿಲ್ಲ. ತ.ಸು. ಶಾಮರಾಯರ ಅಭಿನಂದನ ಗ್ರಂಥ

"ಸ್ವಸ್ತಿ"ಯನ್ನು ಕುರಿತು ಹಾ.ಮಾ. ನಾಯಕರು ಮಾತನಾಡುತ್ತ ಇಂಥ ಪುಸ್ತಕ ಪ್ರಕಟಿಸಲು ಯಮಧೈರ್ಯವೇ ಬೇಕು ಎಂದು ಮೆಚ್ಚುಗೆ ವ್ಯಕ್ತಪಡಿಸಿದ್ದರು.

ಛಾಯಾಪತಿ ಪ್ರಕಾಶಕರಾಗಿರುವುದರ ಜೊತೆಗೆ ಖ್ಯಾತ ಲೇಖಕರೂ ಹೌದು. ಇಪ್ಪತ್ತು ಕೃತಿಗಳಿಗೂ ಮೀರಿದ ಸಂಖ್ಯೆಯಲ್ಲಿ ಕೃತಿಗಳನ್ನು ರಚಿಸಿದ್ದಾರೆ. ತಮ್ಮ ವಂಶದ ಹಿರಿಯ ರಾದ ಟಿ.ಎಸ್. ವೆಂಕಣ್ಣಯ್ಯ, ತ.ಸು. ಶಾಮರಾಯ, ತ.ರಾ.ಸು. ಅವರಲ್ಲದೆ ಚದುರಂಗ, ಅಬ್ದುಲ್ ನಜೀರ್ ಸಾಬ್, ಬಿ. ಪಾರ್ಥಸಾರಧಿ ಅವರ ವ್ಯಕ್ತಿ ಚಿತ್ರಣಗಳನ್ನು ಬಿಡಿಸಿದ್ದಾರೆ. ಜಿಲ್ಲಾ ಪರಿಷತ್ತಿನ ಕಾಯಿದೆಗಳ ಮೇಲೆ ಬೆಳಕು ಚೆಲ್ಲುವ 'ಗಾಂಧೀಜಿ ಕನಸು ನಜೀರರಿಂದ ನನಸು' ಎಂಬ ಕೃತಿಯಂತೂ ರಾಷ್ಟ್ರಕವಿ ಕುವೆಂಪು ಅವರ ಮೆಚ್ಚುಗೆಯನ್ನು ಗಳಿಸಿತು. ಈಚೆಗೆ ಹಿರಿಯ ಕವಿಗಳ ಸಮಗ್ರ ಸಾಹಿತ್ಯವನ್ನು ಪ್ರಕಟಿಸುವ ಕೈಂಕರ್ಯದಲ್ಲಿ ಆಸಕ್ತರಾಗಿದ್ದಾರೆ.

ಸುಮಾರು ಮೂರು ದಶಕಗಳ ಅವಧಿಯಲ್ಲಿ ತ.ಸು.ವೆಂ. ಗ್ರಂಥ ಮಾಲೆಯನ್ನು ಅತ್ಯುನ್ನತ ಸ್ಥಿತಿಗೆ ಏರಿಸಿರುವ ಶ್ರೇಯಸ್ಸು ಛಾಯಾಪತಿಯವರಿಗೇ ಸಲ್ಲತಕ್ಕದ್ದು. ಪ್ರಕಾಶನದ ದುಡಿಮೆಯಲ್ಲಿ ತೃಪ್ತಿ ಧನ್ಯತೆಯನ್ನು ಕಂಡಿದ್ದಾರೆ. 1999ರಲ್ಲಿ 'ಅತ್ಯುತ್ತಮ ಪ್ರಕಾಶನ ಪ್ರಶಸ್ತಿ'ಯನ್ನು ಪಡೆದು ಕೊಂಡಿದ್ದಾರೆ. ಸಾಹಿತಿಗಳ ಬೆಂಬಲ, ಅಧಿಕಾರಿಗಳ ಸ್ನೇಹ, ರಾಜಕಾರಣಿಗಳ ಪ್ರಭಾವ - ಹೀಗೆ ಹಲವು ಬಗೆಯ ಜನರೊಡನೆ ಇವರ ವಿಶ್ವಾಸ ಪೂರ್ವಕ ಸ್ನೇಹ ಸಂಬಂಧ ತಮ್ಮ 'ಆಸ್ತಿ' ಎಂದು ಕೃತಜ್ಞತೆಯಿಂದ ಪದೇ ಪದೇ ವ್ಯಕ್ತಪಡಿಸುತ್ತಾರೆ. ಇವರಿಗೆ ಸಂದಿರುವ ಪ್ರಶಸ್ತಿ ಗೌರವಗಳಿಗೆ ಪ್ರತ್ಯೇಕ ಪುಟವನ್ನೇ ಮೀಸಲಿಡಬೇಕು. ಬಹುಶಃ ಪ್ರಶಸ್ತಿಯು ಹೊರೆ ಹಾಗೂ ಸ್ವಜ ಸರಳತೆಯಿಂದ ಬಾಗಿದ ವಿನಯವಂತರು.

ಪ್ರಕಾಶಕರ ವೃತ್ತಿ ಸುಲಭವಲ್ಲ. ಊರಿಂದ ಊರಿಗೆ ಪ್ರಯಾಣ, ಜನರೊಡನೆ ಬೆರೆಯುವ ಕಲೆ, ವ್ಯಾಪಾರದ ಏರಿಳಿತವನ್ನು ಎದುರಿಸುವ ಚಿತ್ತ ಸ್ಥೈರ್ಯ, ಈ ಎಲ್ಲವನ್ನು ಒಳಗೊಳ್ಳುತ್ತದೆ. ಈ ಎಲ್ಲಕ್ಕೂ ಬೆಂಬಲ ನೀಡುವ ಬಾಳ ಸಂಗಾತಿ ಶ್ರೀಮತಿ ಪುಷ್ಪ ಅವರ ಸಹಕಾರ ಅನನ್ಯವಾದದ್ದು. ಅತಿಥಿ ಸತ್ಕಾರದಲ್ಲಿ ಆಕೆ ಎತ್ತಿದ ಕೈ. ಅವರ ಒತ್ತಾಸೆಯಿಂದ 'ಪ್ರತಿಭಾ ಪ್ರಕಾಶನ' ಎಂಬ ಇನ್ನೊಂದು ಕುಡಿ ತಲೆ ಎತ್ತಿದೆ. 'ಸ್ವಾಮಿ ಚಿತ್ತಾನು ವರ್ತಿನಿ' ಛಾಯಾನುವರ್ತಿಯಾಗಿ ಸಂಸಾರದ ಹೊರೆ ಯಜಮಾನರಿಗೆ ತಟ್ಟದಂತೆ ನಿರ್ವಹಿಸುವ ಸಮರ್ಥ ಗೃಹಣಿ.

ಜೀವೇವ ಶರದಶ್ಶತಂ..... ಛಾಯಾಪತಿ ನೂರು ಕಾಲ ಆರೋಗ್ಯ ನೆಮ್ಮದಿ ಯಿಂದಿದ್ದು ಇನ್ನೂ ಶ್ರೇಷ್ಠ ಕನ್ನಡ ಕೃತಿಗಳನ್ನು ನಾಡಿಗೆ ನೀಡಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

# ಶ್ರೀ ಛಾಯಾಪತಿ : ನಾನು ಕಂಡಂತೆ

ತಮ್ಮ ಅಣ್ಣನ ನೆನಪಿಗಾಗಿ ಸ್ಥಾಪಿಸಿರುವ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ'ಯ ಮುಖ್ಯ ಪ್ರಾಣ, ಚೈತನ್ಯ, ಕರುಣೆಯ ಕಣ್ಣು, ವ್ಯವಹಾರ ನಿಪುಣ, ಸ್ನೇಹಜೀವಿ, ನಮ್ಮ ಈ ಸರ್ವತ್ರ ಮಿತ್ರ, ಛಾಯಾಪತಿ. ಭೌತಿಕವಾಗಿಯೂ ತಮ್ಮ ಪುಣ್ಯ ರೂಪಿ ತಂದೆಯನ್ನು ಹೋಲುವ ತದ್ರೂಪಿ.

ಅಪರೂಪದ ಈ ಹೆಸರು ಅನ್ವರ್ಥ. ಕಾರಣ 'ಛಾಯಾ' - 'ಪತಿ' ಇಲ್ಲಿ, 'ಛಾಯಾ', ಸತಿಯಾಗಿರಲೇಬೇಕು. ಏಕೆಂದರೆ 'ಪತಿ' ಇಂದ 'ಛಾಯೆ' ಬೇರ್ಪಡಿಸಲಾಗದು. ಪತಿಗೆ ರೂಪವಿಲ್ಲ ಎಂದ ಮೇಲೆ 'ಸತಿ' ಸಹಿತ, ಅನಂತಭಾವಗಳ ಅನಂತರೂಪಿಣಿ, ಈ ಛಾಯಾಪತಿ, 'ಉದಯೇ, ಬ್ರಹ್ಮಸ್ವರೂಪಂಚ, ಮಧ್ಯಾನ್ಹಂತು ಮಹೇಶ್ವರಃ, ಅಸ್ತಮಾನೇ ಸ್ವಯಂ ವಿಷ್ಣುಃ ತ್ರಯೀಮೂರ್ತಿರ್ದಿವಾಕರಃ, ತ್ರಿಮೂರ್ತಿ ಸ್ವರೂಪ, ಗುರುವಿನಂತೆ' ಎಲ್ಲರಿಗಿಂತ ಹೆಚ್ಚಾಗಿ ಎಲ್ಲರಿಗೂ ಗುರುವಾಗಿರುವಾತ. ಗುರುಸಹಿತ 'ಗುರುಬ್ರಹ್ಮ.... ತಸ್ಮೈ ಶ್ರೀ ಗುರವೇ ನಮಃ'. ಈ ಪ್ರತ್ಯಕ್ಷ ದೈವಕ್ಕೆ ಸಮನಿಲ್ಲ. ಇದು ನಿರಂತರವಾಗಿ ಕಾಲ, ದೇಶ, ವರ್ತಮಾನಕ್ಕೆ, ಮಿಗಿಲಾದ ನಿತ್ಯ ಸತ್ಯ. ಸೃಷ್ಟಿ ಎಲ್ಲಾ ಈ ಈತನಿಂದಲೇ, ದೃಷ್ಟಿ ಸ್ವರೂಪವಾಗಿ ಗೋಚರ ಪ್ರತಿಕ್ಷಣವೂ ಕ್ಷಯ ವಾಗುತ್ತಿದ್ದರೂ ಕರಗದ ಅಕ್ಷಯ ಸಂಪತ್ತು.

ಇದು 'ದಿವಿಯ ಸಂಪತ್ತಿನ' ಭಾವರೂಪವಾದರೆ, 'ಭುವಿಯ ಸಂಪತ್ತಿನ' ಭವ್ಯ ಗುಣರೂಪರಾಶಿಯ ಸ್ವರೂಪವೇ ನಮ್ಮ 'ಮಿತ್ರ ಛಾಯಾಪತಿ'. ಕಾರಣ, ಸಹೃದಯ ರೆಲ್ಲ, ಈತನನ್ನು ಬೇರೆ ರೂಪವಾಗಿ ಭಾವಿಸಲು ಸಾಧ್ಯವೇ ಇಲ್ಲ. ಇದು ಎಲ್ಲರಿಗೂ ಯಾವಾಗಲೂ ಸಲ್ಲುವ ಮಾತು. ಇದರ ಸ್ವರೂಪ 'ಯದ್ ಭಾವಂತದ್ಭವತಿ'. ಈ ಆರ್ಷನುಡಿಯೂ ದೇವವಾಣಿ, ವೇದವಾಣಿ. ಈತನೊಬ್ಬ ಅಕ್ಷರ ಪ್ರೀತಿಯ ಯಕ್ಷ. ಪರಮೇಶ್ವರನ ಪರಮ ಕರುಣಾ ಪ್ರವಾಹದ ಪ್ರತಿರೂಪ ಗಂಗಾ ಸಲಲಿದ ಸಾರ್ಥಕ ಜೀವನದಂತೆ, ಜ್ಞಾನದಾತೆ 'ಶಾರದೆಯ' ಸಾಹಿತ್ಯ ಪುಣ್ಯ ಪ್ರವಾಹವನ್ನು ಮನೆ ಮನಗಳಿಗೆ ಹರಿಸಿದ ಭಗೀರಥ. ವಿನಮ್ರನಿಸ್ವಾರ್ಥಿ.

---

**ಪ್ರೇಮಸೇತು**

---

ಪ್ರಾತಃಸ್ಮರಣೀಯರೂ, ಪರಂಪರೆಯ ಪ್ರೇಮ ಪುಷ್ಪಗಳೂ ಆದ, ಇವರ ಹಿರಿಯರ ಸ್ವಾರ್ಥರಹಿತ ಸೇವಾದೀಕ್ಷೆಯ ಸ್ವರೂಪ, ತ.ವೆಂ. ಸ್ಮಾರಕ ಗ್ರಂಥಮಾಲೆಯು, ಇಂದಿನ ಔನ್ನತ್ಯ, ಪಾವಿತ್ರತೆಯ ಪ್ರತೀಕವಾಗಿ, ಬೆಳೆದಿರುವುದೇ ಇದಕ್ಕೆ ಪ್ರತ್ಯಕ್ಷ ಸಾಕ್ಷಿ.

ಈ ಪ್ರಾತಃಸ್ಮರಣೀಯರ, ಮನೆಯ ಮಾಣಿಕ್ಯವೇ ನಮ್ಮೀ ಛಾಯಾಪತಿ.ಶಾಮ ರಾಯರ 'ಮಧ್ಯಮ' ಪುತ್ರ. ಈ ಪ್ರೀತಿಯ ಹೆಸರಿನ 'ಪುನಃ ಚರಣವೇ' ನಮ್ಮ ಭಾಗ್ಯ. ಒಮ್ಮೆ ನಾನು ರಚಿಸಿದ್ದ 'ಪ್ರೇಮಸೇತು' ಕವನ ಸಂಗ್ರಹವನ್ನು ರಾಯರ ಮುಂದೆ ಓದುವ ಪುಣ್ಯ ನನಗೆ ಲಭಿಸಿತ್ತು. ನನ್ನ ಈ ನೂರೆಂಟು ಪದ್ಯಗಳ ಸಂಗ್ರಹದಲ್ಲಿ, ಕೆಲವನ್ನು ರಾಯರೇ 'ಇವು ಬೇಡ ಸುಲಭವಾಗಿ ಎಲ್ಲರಿಗೂ ಅರ್ಥವಾಗದ ಇವುಗಳನ್ನು ತೆಗೆದುಹಾಕು', ಎನ್ನುವ ಆತ್ಮೀಯ ಸಲಹೆ. ಅಷ್ಟೇ ಅಲ್ಲ, ಅಲ್ಲಿಯೇ ಬೇರೆ ಕೋಣೆ ಯಲ್ಲಿದ್ದ, ಶ್ರೀ ಛಾಯಾಪತಿಯವರನ್ನು ಕರೆದು 'ನೋಡಯ್ಯ, ಸೇತೂರಾಂ ಬರೆದಿರುವ ಈ ಪದ್ಯಗಳು ತುಂಬಾ ಚೆನ್ನಾಗಿವೆ, ನೀನು ಪಬ್ಲಿಷ್‌ಮಾಡ್ತಿಯೋ ನಾನು ಮಾಡಲೋ? ಎನ್ನುವ ವಿಸ್ಮಯ ಪ್ರಶ್ನೆಯನ್ನು ಮಗನಿಗೆ ಹಾಕಿದರು.

ಕೇಳಬೇಕೇ ? ಶ್ರೀ ಛಾಯಾಪತಿಯವರ ಪಿತೃಭಕ್ತಿಯ, ಔದಾರ್ಯದ 'ಉತ್ತರ'. 'ಅದಕ್ಕೇನಂತೆ, ನಮ್ಮ ಸ್ಮಾರಕ ಗ್ರಂಥಮಾಲೆಯಿಂದಲೇ ಇದನ್ನು ಪ್ರಕಟಿಸುತ್ತೇನೆ' ಎಂದು ಹೇಳಿದರು. ಈ ಅಪೂರ್ವ ಘಟನೆ, ದಿನ, ನಾನೆಂದೂ ಮರೆಯಲಾರೆ.

ಈ 'ಪ್ರೇಮಸೇತು'ಕೃತಿಯೇ, ನನ್ನ ಸಾಹಿತ್ಯದ ಪ್ರಥಮ ಹೆಜ್ಜೆ. ಈ ನನ್ನ ಪುಟ್ಟ ಹೆಜ್ಜೆಗೆ ಬಲ, ಒಲವುಗಳ, ಶಕ್ತಿನೀಡಿದರೇ, ನನ್ನ ಮಾನಸ ಅನುಜ, ಶ್ರೀ ಛಾಯಾಪತಿ. ಹತ್ತು ವರ್ಷಗಳ ಹಿಂದೆ 2003ರಲ್ಲಿ ಈ ಸಂಕಲನ 'ಶ್ರೀ ಎಚ್ಚೆಸ್ಕೆ' ಅವರ ಅಮರವಾಣಿಯ, ಮುನ್ನುಡಿಯೊಂದಿಗೆ, ತಾ.ವೆಂ. ಸ್ಮಾರಕ ಗ್ರಂಥಮಾಲೆಯ 'ಬಂಗಾರದ ಬೆಳೆ'ಯ ಮಾಲಿಕೆ ಯಲ್ಲಿ ಮೂವತ್ತಾರನೆಯ ಪ್ರೇಮ ಪುಷ್ಪವಾಗಿ, ಸ್ಥಾನವನ್ನು ಪಡೆದಿರುವುದು ನನ್ನ ಸೌಭಾಗ್ಯವೇ ಸರಿ.

ಈ ಕೃತಿಯಲ್ಲಿ 'ಬಂಗಾರದ ಬಾಗಿಲಲ್ಲಿ ಮೊದಲ ಮಾತು' ಎನ್ನುವ ಶೀರ್ಷಿಕೆ ಯಲ್ಲಿ, ಪ್ರಕಾಶರಾದ ಶ್ರೀ ಛಾಯಾಪತಿಯವರು, ನನ್ನ ಬಗ್ಗೆ ಆಡಿರುವ ಮಾತುಗಳು, ಅವರ ಪ್ರೀತಿ ಮತ್ತು ಹೃದಯ ವೈಶಾಲ್ಯದ ಪ್ರತಿರೂಪವಾಗಿವೆ. ಎಲ್ಲರ ಬಗ್ಗೆಯೂ, ಪ್ರೇಮಪೂರಿತವಾದ ಇವರ ಮಾತುಗಳು ಎಲ್ಲರಿಗೂ ಅನುಸರಣೀಯ. ಈ ಘಟನೆ ಯಿಂದ, ನಮ್ಮ ಬಾಂಧವ್ಯ ವೃದ್ಧಿಯಾಗುತ್ತಾ ಬಂದು, ಶ್ರೀ ಶಾಮರಾಯರ ಮುತ್ತಿ ನಂತಹ, ಮೂರು ಗಂಡು ಮಕ್ಕಳಲ್ಲಿ ನನ್ನನ್ನು 'ಅಣ್ಣ'ನೆಂದೇ ಭಾವಿಸಿ, ತನ್ನ ಪ್ರೀತಿಯನ್ನು ತೋರುತ್ತಿರುವ 'ಶ್ರೀ ಛಾಯಾಪತಿ ತಮ್ಮ' ನನ್ನ ಪಾಲಿಗೆ ವಿಶೇಷವಾಗಿ ನನ್ನ ಅಮ್ಮನ ಹತ್ತು ಮಕ್ಕಳಲ್ಲಿ 'ಅಳಿದುಳಿದ ನನ್ನ ಒಂಟಿ ಜೀವಕ್ಕೆ, ನನ್ನ ಸಾಹಿತ್ಯದ ಸಸಿಗೆ' ಮೊದಲನೆಯ ಗುಟುಕು ನೀಡಿದ ನಿಷ್ಕಲ್ಮಷಿ, ನಿಷ್ಕಾಮಿ. ಅಂದಿನಿಂದ ನನ್ನ 'ಬೇಕು,

ಬೇಡಗಳನ್ನು ತನ್ನದೇ ರೀತಿಯಲ್ಲಿ ಗಮನಿಸಿ, ನನ್ನ ಜೀವನೋತ್ಸಾಹಕ್ಕೆ, ಕಾರಣರಾಗಿ, ನನ್ನ ಜೀವನಾನುಭವಗಳನ್ನು ಗಟ್ಟಿಗೊಳಿಸಲು, ಅನೇಕ ಸಂದರ್ಭಗಳನ್ನು ಸೃಷ್ಟಿಸಿ, ಅನಾಯಾಚಿತವಾಗಿ, ಅವುಗಳಿಂದ ನಾನು ಪಡೆಯುವ ಸಂತೋಷವನ್ನು, ತನ್ನದೆಂದು, ಭಾವಿಸುವ ಅಪರೂಪದ ಮಿತ್ರ. ನನಗೆ ಅಣ್ಣನ ಸ್ಥಾನವನ್ನು ನೀಡಿರುವ ಆತ, ನನ್ನ ಕೈಲಿ ಮಾತನಾಡುವಾಗಲೂ ನನ್ನ ಬಗ್ಗೆ ಯೋಚಿಸುವಾಗಲು ಸಮಕ್ಷಮವಾಗಲಿ, ಪರೋಕ್ಷವಾಗಿ ಆಗಲಿ, ಏಕ ವಚನವನ್ನು ಎಂದೂ ಪ್ರಯೋಗಿಸಿಲ್ಲ.

ಶ್ರೀ ಮಾನ್ ತ.ಸು. ಶಾಮರಾಯರಿಗೆ, ಕನಕಾಭಿಷೇಕವು ಶೃಂಗೇರಿಯಲ್ಲಿ ನಡೆದ ಸಂದರ್ಭದಿಂದ ಮೊದಲುಗೊಂಡು ಸುಮಾರು ಎರಡು ದಶಕಗಳ ಅಂತರದಲ್ಲಿ ಶ್ರೀ ಛಾಯಾಪತಿಯು, ತಮ್ಮ ವೈಯ್ಯಕ್ತಿಕ, ಸಮಾರಂಭಗಳಲ್ಲೂ ಮತ್ತಿತರ ರಾಜ್ಯ ಮಟ್ಟದ ಸಾಹಿತ್ಯಕ, ಸಾಂಸ್ಕೃತಿಕ ಸಮಾರಂಭಗಳಲ್ಲೂ, ನನಗೆ ಭಾಗವಹಿಸುವ ಅವಕಾಶವನ್ನು ಸೃಷ್ಟಿಸಿ ಕೊಟ್ಟು ಸಂತೋಷ ಪಡುತ್ತಿರುವ ಸ್ವಾರ್ಥರಹಿತ ಸಾತ್ವಿಕ ಸಂಪತ್ತಿನ ಹೃದಯವಂತ. ಒಂದೇ, ಎರಡೇ ಎಷ್ಟೆಂದು, ಹೇಗೆಂದು, ಹೇಳಲಿ ಪದಗಳಿಗೆ ಮೀರಿದ, ಭಾವಕ್ಕೆ ಎಟುಕದ ಇವರ ಸಾತ್ವಿಕಗುಣ ಸಂಪತ್ತು.

ಶ್ರೀ 'ಚಂಪಾ'ರವರು ಸಾಹಿತ್ಯ ಪರಿಷತ್ತಿನ ರಾಜ್ಯಾಧ್ಯಕ್ಷರಾಗಿದ್ದ ಅವಧಿಯಲ್ಲಿ, ಛಾಯಾಪತಿಯವರ ಒಂದು ಮಾತಿನಿಂದ ಅಖಿಲ ಭಾರತ ಸಾಹಿತ್ಯಸಮ್ಮೇಳನದಲ್ಲಿ ನನಗೆ ಕವನ ವಾಚನದ ಅವಕಾಶ ಅನೇಕ, ಅಪರೂಪ, ಸಮಾರಂಭಗಳಲ್ಲಿ ಒಂದಾದ ಕವಿ 'ಕಣವಿ'ಯವರ ಹದಿನಾರು ಕೃತಿಗಳ ಬಿಡುಗಡೆಯ ಸಮಾರಂಭದಲ್ಲಿ, ನನ್ನನ್ನು ಬೆಂಗಳೂರಿಗೆ ಜೊತೆಯಲ್ಲಿ ಕರೆದೊಯ್ದು, ಅಂದಿನ ಸಮಾರಂಭದ, ವಂದನಾರ್ಪಣೆ ಯನ್ನು ಸಹಿತ ನಿರ್ವಹಿಸಲು ಹೇಳಿ, ಅಲ್ಲಿನ ಎಲ್ಲರಿಗೂ ಸಂತೋಷವನ್ನು ಉಂಟು ಮಾಡುವ ಸುಯೋಗವನ್ನು ನನಗೆ ಕಲ್ಪಿಸಿದ ಪ್ರೀತಿವಂತ.

ಶ್ರೀ ಶೃಂಗೇರಿ ಕ್ಷೇತ್ರದಲ್ಲಿ ಶ್ರೀಶಾಮರಾಯರ ಜ್ಯೇಷ್ಠ ಪುತ್ರ ಶ್ರೀ ವೆಂಕಣ್ಣಯ್ಯನ 'ಷಷ್ಟ್ಯಬ್ದಿಶಾಂತಿಯ' ಸಮಾರಂಭದಲ್ಲೂ, ಆತನನ್ನು ಕುರಿತು ಬರೆದಿದ್ದ 'ಶುಭಾಶಯ ಕವನ ಮಾಲಿಕೆ'ಯನ್ನು ಓದಿ, ನೀಡಲು ಅವಕಾಶ ಮಾಡಿಕೊಟ್ಟ, ಈ ಬಂಧುವಿನ 'ಛಾಯಾಬಂಧನ'ದಿಂದ ಮುಕ್ತನಾಗುವುದು ಸಾಧ್ಯವೆ? ಆ ದಿಶೆಯಲ್ಲಿ ಯೋಚಿಸಲಾಗದ, ಮಾಡಬಹುದಾದ ಒಂದೇ ಕೆಲಸವೆಂದರೆ, ಧನ್ಯತೆಯ ಭಾವದಲ್ಲಿ ಈ ಬಂಧುವಿಗೆ ಅರ್ಪಿಸಬಹುದಾದ ಕೃತಜ್ಞತೆಯ ಒಂದು ತೃಣ, ನನ್ನ ನಯನದಲ್ಲಿ ಮೂಡುವ ಬೆಚ್ಚನೆಯ ಅಶ್ರುಬಿಂದು ಒಂದು ಇವರಿಗೆ ಅರ್ಪಿಸುವುದು.

ಅನೇಕ ಹಿರಿಯ, ಕವಿ, ಸಾಹಿತ್ಯ ಮಿತ್ರರಿಗೆ ನನ್ನನ್ನು 'ಅಣ್ಣ'ನೆಂದೆ ಭಾವಿಸಿ, ಪರಿಚಯಿಸಿ, ಸಂಭ್ರಮಿಸುವ, ಈತನ ಸುಸಂಸ್ಕೃತ ಸಂಪತ್ತಿನ ಹೃದಯವಂತಿಕೆಯ ಪರಿಧಿ ಪರಿಮಿತಿ, ಅನುಹ್ಯ ಅಸಮಾನ.

ಸುಮಾರು ವರ್ಷಗಳ ಹಿಂದೆ, ಮಿತ್ರ ಶ್ರೀ. ಗಿರಿಗೌಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ, ಈ ನಿತ್ಯ ಸಂತೋಷಿ ಸ್ನೇಹ ಜೀವಿ, ನನ್ನನ್ನು ಜಿಲ್ಲಾ ಪರಿಷತ್ತಿನ ಅರ್ಥಾತ್ ಕನ್ನಡ ಸಾಹಿತ್ಯ ಪರಿಷತ್ತಿನ, ಜಿಲ್ಲಾ ಘಟಕದ ಕಾರ್ಯದರ್ಶಿ ಮತ್ತು ಸಾಹಿತ್ಯ ಭವನ ನಿರ್ಮಾಣದ, ಸಮಿತಿಯ ಕೋಶಾಧ್ಯಕ್ಷ ಮತ್ತು ಪ್ರಧಾನ ಕಾರ್ಯದರ್ಶಿ ಯಾಗುವಂಥ ಅವಕಾಶಗಳಿಗೆ, ಪರೋಕ್ಷ ಪ್ರೇರಕರಾಗಿ, ನನ್ನ ಆ ಸ್ಥಾನಮಾನಗಳಿಗೆ, ಸಾರ್ಥಕ ಸಂತೋಷವನ್ನು ವ್ಯಕ್ತಪಡಿಸಿದ ನಿರ್ಮೋಹಿ.

ಅಷ್ಟೇ ಏಕೆ? 'ಹಿತರಲ್ಲಿ ಸ್ನೇಹಿತನೊಬ್ಬ ಕ್ಷಿತಿಯಲ್ಲಿ, ಮಿತಿಯಿಲ್ಲ ಇವನ ಹೃದಯ ಔದಾರ್ಯಕಿಲ್ಲಿ'. ಈ ಸಾಲುಗಳನ್ನು ಸಾರ್ಥಕಪಡಿಸಿದ, ಪಡಿಸುತ್ತಲಿರುವ ಸಾಧಕ. ಶ್ರೀ ಮಲ್ಲೇಪುರಂ ಅವರಿಂದ ನನ್ನ ಎರಡನೆಯ ಕವನ ಸಂಕಲನ 'ಭಾವಾಂತರಂಗ'ಕ್ಕೆ ಮುತ್ತಿನಂತಹ ಮುನ್ನುಡಿಯನ್ನು ಪಡೆಯುವ ಸೌಭಾಗ್ಯ ನನಗೆ ದೊರೆತಿದ್ದು ಈ 'ಸೀದಾಸಾದಾ' ತಮ್ಮನಿಂದ.

ನನ್ನ ಅನೇಕ ವರ್ಷಗಳ ಬಯಕೆಯಾಗಿದ್ದ 'ಮೈಸೂರು ದಸರಾ ಪ್ರಧಾನ ಕವಿಗೋಷ್ಠಿ'ಯಲ್ಲಿ ಕವನ ವಾಚನಮಾಡಲು ಅವಕಾಶವನ್ನು ಉಪಸಮಿತಿಯ ಅಧ್ಯಕ್ಷರಾದ, ಛಾಯಾಪತಿಯವರ ಮಿತ್ರ ಶ್ರೀ ಭಗವಾನ್ ಅವರಿಗೆ ಹೇಳಿ, ನನಗೆ ಅವಕಾಶಕಲ್ಪಿಸಿ ಕೊಟ್ಟ ಹೃದಯವಂತ. ಈ ಸಹೃದಯಿದ್ವಯರಾದ ಶ್ರೀ ಭಗವಾನ್ ಮತ್ತು ಶ್ರೀ ಛಾಯಾಪತಿಯ ಪ್ರೀತಿಯ ಋಣಭಾರ ಅಪಾರ.

ಹೀಗೆಯೇ, ಈ ಸುಸಂದರ್ಭಗಳ ಬಂಗಾರದ ಸರದಕೊನೆ, ನನ್ನ ನಂತರ ತಾನೇ ನೀವು ಕಾಣುವುದು? ಇಷ್ಟೊಂದು ನನ್ನ ಜೀವನ ಪ್ರೀತಿಗೆಲ್ಲಾ, ಈ "ಸ್ನೇಹಾಮೃತಬಿಂದು" ಸ್ವರೂಪದ ಶ್ರೀ ಛಾಯಾಪತಿಯವರೇ ಕಾರಣ. ಇದು ನನ್ನ ಭಾಗ್ಯ. ನನ್ನ ಪಡೆದವರು ಮಾಡಿದ್ದ ಪುಣ್ಯಸ್ವರೂಪ. ಜಾತಿ, ಮತ, ಸೂತಕಗಳಿಂದ ಬಹು ದೂರ ಉಳಿದಿದ್ದ, ತಂದೆಯವರಂತೆ, ಈತನ ಔದಾರ್ಯದ ಪ್ರಾರಂಭಮನೆಯಿಂದ ಇದು ಅಕ್ಷರಶಃ ಸಾಕಾರ ಗೊಳಿಸಿದವರು, ಗೊಳಿಸುತ್ತಿರುವವರು, ಈ ಸಹೃದಯಿ, ಸೋದರ ಛಾಯಾಪತಿ ಮಿತ್ರ ಈತನನ್ನು 'ಮಿತ್ರ' (ಸೂರ್ಯ) ಎಂದು ಕರೆದರೆ ಆ ಪದಕ್ಕೆ ಹೆಚ್ಚು ಮನ್ನಣೆ ಸರ್ವತ್ರ, ಇದು ಸತ್ಯ. ಕಾರಣ ಈತನ ಸತಿ, ಸೌಭಾಗ್ಯವತಿ 'ಪುಷ್ಪ' ಹೆಸರಿಗೆ ತಕ್ಕ, ಮಲರಹಿತ ಕೋಮಲ ಹೃದಯದ 'ಅರ್ಧಾಂಗಿ'. ಅಷ್ಟೇ ಅಲ್ಲ 'ಉತ್ತಮಾಂಗಿ'ಯೂ ಹೌದು. ಸದಾ ಹಸನ್ಮುಖಿಯಾಗಿ, ಎಲ್ಲರನ್ನು ಯಾವಾಗಲೂ, ಕಂಡೊಡನೆಯೇ ಮಂದಸ್ಮಿತ ಮುಖಿಯಾಗಿ, ಹೃದಯ ಪೂರ್ವಕ ಸ್ವಾಗತವನ್ನು, ತಮ್ಮಲ್ಲಿಗೆ ಬಂದ ಎಲ್ಲರಿಗೂ, ನೀಡುವಂಥದು, ಮಾತ್ರವಲ್ಲ, ಬಂದವರೆಲ್ಲರ ಯೋಗಕ್ಷೇಮವನ್ನು ವಿಚಾರಿಸಿ, 'ಉಭಯ ಕುಶಲೋಪರಿ', ವ್ಯಾವಹಾರಿಕ ವಿಷಯಗಳನ್ನು ಆಕೆಯ ಪತಿಯೊಡನೆ, ಹಂಚಿಕೊಳ್ಳುವುದು, ಬಂದವರಿಗೆ, ಹೃತ್ಪೂರ್ವಕ ಸ್ವಾಂತನ, ಸಹಕಾರ. ಸಲಹೆಗಳನ್ನು

ನೀಡುವ, 'ಪತಿ'ರಾಯರ ಬಗ್ಗೆ ಸಂತೋಷವನ್ನು ವ್ಯಕ್ತಪಡಿಸಿ, ಆಕೆಯ ಮೌನ ಸಮ್ಮತಿಯನ್ನೂ ನೀಡುತ್ತಿದ್ದ, ನೀಡುತ್ತಿರುವ ಸದ್ಗುಣಿ ಸಹಧರ್ಮಿಣಿ ಇಂತಹ, ಸದ್ಗುಣಗಳ ಗಣಿ 'ಛಾಯಾಪತಿಯ ಹೃದಯಾಂತರಾಳದ, ' ಸಂಗೀತದ ಸುಮಧುರಸು ಸ್ವರದ ಸ್ವರೂಪಣಿ, 'ಶ್ರೀ ಶಾರದೆಯ' ಅಂಶಸಂಭೂತೆ, ಕೋಮಲ ಮೃದುಲ ಪಲ್ಲವ ಸಮೇತ 'ಪುಷ್ಪ'. ಸೃಷ್ಟಿಯ ಸೌಭಾಗ್ಯ ಸ್ವರೂಪವೇ, ಈತನ ಈ ಸಹಜ ಸುಂದರ ಗುಣ ಸುಂದರಿ 'ಪುಷ್ಪ', "ಮಾ ಜಾನಕಿ ಚೇ ಬಟ್ಟಗಾ, ಮಹಾರಾಜ ವೈತಿವಿ". ಶ್ರೀ ತ್ಯಾಗರಾಜಸ್ವಾಮಿಯವರ 'ಜಾನಕಿ' ಸ್ವರೂಪದ, ಅಂಶಾವತಾರಿ. ಈ 'ಪುಷ್ಪ' ಅದಕೇ ಈ ಪತಿ, 'ಪುಷ್ಪಾಪತಿ',ಯಾದರೂ 'ಛಾಯಾ'ಪತಿಯ ಗುಣವಿಶೇಷಗಳು ಈಕೆಗೆ ಆರೋಪ. ಪತಿಯ ವೈದಿಕ, ಲೌಕಿಕ, ಆಚಾರ ವ್ಯವಹಾರಗಳೆಲ್ಲಾ, ಇವರಿಗೆ ಪರಂಪರಾಗತ ವೈಶಿಷ್ಟ್ಯಗಳು ಆಚರಣೆ ಅನುಸರಣೆಗೆ ಯೋಗ್ಯವಾದವು. ಅಂತೆಯೇ ಇವರ ನಡೆ. ನಿಷ್ಕಲ್ಮಷ ಹೃದಯಿಗಳು ಅತಿಥಿ ಅಭ್ಯಾಗತರಲ್ಲಿ ಆದರ ಪ್ರತಿಗಳು, ಯಥೋಚಿತ ನಿರ್ವಂಚಿತ.

ಇವರ ಒಡನಾಟವೂ ಸಹಿತ, ಹಿತ. ಸರ್ವಸಮ್ಮತವಲ್ಲವೆಂದು ಯಾರು ಹೇಳಲಾರದಂಥ, ಹಿತ.

ನಾ ಕಂಡಂತೆ ತಮ್ಮ ಅರವತ್ತೊಂಬತ್ತನೆಯ ವರ್ಷಕ್ಕೆ ಪಾದಾರ್ಪಣೆ ಮಾಡುತ್ತಿರುವ ಈ ಸಾರ್ಥಕ ಸುಪುತ್ರನಿಗೆ, ಆತನ ಎಪ್ಪತ್ತನೆಯ ಹುಟ್ಟುಹಬ್ಬದ, ಶುಭಾಶಯಗಳನ್ನು ಸಂಖ್ಯೆಯಿಂದಲೇ ಸಂಯೋಜಿಸಿ, 'ಫಲಕ'ದ ರೂಪದಲ್ಲಿ ಅರ್ಪಿಸಿದ ಹೆಮ್ಮೆ, ನನ್ನದಾಗಿತ್ತು. 69, 96ರಾಗಿ 97 ರಿಂದ 110ರವರೆಗೆ ಗಂಗೆಯಂತೆ ಹರಿದು, ಎಲ್ಲರಿಗೂ ಶುಭವನ್ನು ತರಲಿ, ಎನ್ನುವುದು ಆ ದಿನ ನೀಡಿದ 'ಶುಭಾಶಯ - ಫಲಕದ' ಶುಭ ಶುಭಾಂಕಾಂಕ್ಷೆಗಳು.

'ಎಲ್ಲರ ಮನೆಯ ದೋಸೆತೂತು'. ಈ ಮಾತು ನಮ್ಮ ಮಿತ್ರ ಶ್ರೀ ಛಾಯಾಪತಿಯ ವಿಷಯದಲ್ಲಿ, ಛಾಯೆಯಂತೆ ಬಂದು ಮಾಯವಾಗುವ ಪರಿ, ಅದೂ ಛಾಯಾಪತಿಗೇ ಸರಿ. ಅದರ ಅಂತ್ಯ ದೈವಪ್ರೇರಣೆಯ ದಿವ್ಯ ಶಕ್ತಿಗೇ ಬಿಟ್ಟು, ಕ್ಷಮಯಾಧರಿತ್ರಿಯ ದಿವ್ಯಗುಣ ಸಂಪನ್ನ ರೀ ಬಂಧು ವೃಂದ. ಸಂಸ್ಕಾರ ಸಂಪನ್ನರಾದ ಈ ಬಂಧುಗಳ ನೆನೆಯುವುದೇ ಒಂದು ಪುಣ್ಯ ಕಥೆಯ ಕೇಳಿದಂತೆ ಆಹ್ಲಾದಮಯ.

ಸಾಹಿತ್ಯ ದಿಗ್ಗಜಗಳ ಒಡನಾಟ, ಕಲಾವಿದರ ಕಲಾಪೋಷಕರ ಸ್ನೇಹ ಗುರು ಹಿರಿಯ, - ಬಂಧು ಮಿತ್ರರಲ್ಲಿನ ಭಕ್ತಿ,ಶ್ರದ್ಧಾಪ್ರೀತಿಗಳ ಹೃದಯವಂತಿಕೆ, ಇವರಲ್ಲಿ ಪಡೆಯುತ್ತಿವೆ ಜೀವಂತಿಕೆ. ಇಷ್ಟೆಲ್ಲಾ ಶಿಷ್ಟ, ವಿಶಿಷ್ಟ ಗುಣ ಸಂಗಮಗಳ ಖನಿಯಾದರೂ, ಮುಗ್ಧ ಮೃದು ಸರಳ ಸ್ವಭಾವದ ಸ್ನೇಹಿತರು, ಶ್ರೀ ದಂಪತಿಗಳು.

ಇಂತಹ ಮಿತ್ರನ ಏಕೈಕ ಪುತ್ರ ಪುತ್ರಿ ಮತ್ತವರ ಬೆಳೆಯುತ್ತಿರುವ, ಸಂತಾನ

ಶ್ರೀಯು ಸಹಿತ, ಸ್ಮರಣೀಯ. ಪೂಜಯಂತೆ ಪತಿ. ದಾನದಂತೆ ಮಕ್ಕಳು. ಈ ಗಾದೆಯ, ವೇದವಾಣಿಯ ಸಾಕ್ಷಿ ಇದರ ಮಕ್ಕಳ ಪಾಲಿಗೆ ಸಾದೃಶ.

ಕನ್ನಡ ನಾಡಿನ ಪ್ರಖ್ಯಾತ ಪ್ರಕಾಶಕರ ಸಾಲಿನಲ್ಲಿ, 'ಶ್ರೀ ಛಾಯಾಪತಿ'ಯವರ ಸಾರಥ್ಯದಲ್ಲಿನ 'ತ.ವೆಂ. ಸ್ಮಾರಕ ಗ್ರಂಥಮಾಲೆಯ' ಕಿರೀಟಕ್ಕೆ ಅತ್ಯುತ್ತಮ ಪ್ರಕಾಶಕರೆಂಬ ಕೀರ್ತಿಯ ಹೊನ್ನಕಳಸ ಅಷ್ಟೇ ಅಲ್ಲ. ಇವರು ಸಾಹಿತಿ, ಕೃತಿ ಕಾರರೂ ಹೌದು. ಇವರು ಅನೇಕ ಮೌಲಿಕ ಕೃತಿಗಳನ್ನು ಸಹ ರಚಿಸಿದ್ದಾರೆ. ಸಾರ್ವಜನಿಕ, ಸಂಘ ಸಂಸ್ಥೆಗಳಿಂದಲೂ 'ಅಭಿನಂದನಾ', ಪ್ರಶಸ್ತಿಗಳ ಸಂತಸ ಸಮರ್ಪಣ ಉಳಿದಿರುವುದು, ಅಸಹಾಯಕ ಪ್ರದರ್ಶನ ಆದರ್ಶ ಸರ್ಕಾರದ ದೃಷ್ಟಿಗೆ ಇವರು ಬೀಳುವ ಶುಭ ಮುಹೂರ್ತದ ಸಮಯ ನಿರೀಕ್ಷಣ, ನಮದಲ್ಲ. ಸರ್ಕಾರದ ಸಾರ್ಥಕ ಕಾರ್ಯ ಪ್ರದರ್ಶನದ ಒಂದು ಅವಕಾಶ.

ಇಂತಹ 'ಸುಖೀ ಸಂಸಾರದ' ಸರದಾರನಾಗಿಯೂ, 'ಪ್ರಕಟಣಾ ಪ್ರಪಂಚದ' ಯಮಧೈರ್ಯದ ಸಾಧಕರಾಗಿಯೂ ನಮ್ಮ ನಿಮ್ಮೆಲ್ಲ ಹೃದಯ ನಿವಾಸಿಯಾಗಿಯೂ, ಸಾರ್ಥಕ ಜೀವನದ, ಧನ್ಯ ಜೀವಿಯಾಗಿಯೂ, ವರ್ಧಿಸುತ್ತಿರುವ, ಈ ಚಿರಂಜೀವಿ, ಮತ್ತವರ ಪುತ್ರ, ಮಿತ್ರ, ಕಳತ್ರ, ಬಂಧು ಬಾಂಧವ, ಸಹೃದಯಿಗಳಿಗೆಲ್ಲಾ, ತಿರುಮಲೆಯ ತಿರುಮಲೇಶನು, ವರದಗರಳಪುರಿಯ ಶಿರಿಕಂಠನೂ, ಗುರುಶಿರೋಮಣಿಗಳೂ, ಕಾಮಧೇನು ಕಲ್ಪವೃಕ್ಷದಂತೆ, ಭಕ್ತಜನಬಂಧು, ವರದಾಯಕ ದಯಾಸಿಂಧು ಶ್ರೀ ಗುರು ಸಾರ್ವಭೌಮರು ತಮ್ಮ ಕೃಪಾಕಟಾಕ್ಷಗಳು ಸದಾ ನೀಡಿ, ಇವರಿಗೆ ಸರ್ವಶ್ರೇಯ, ಶುಭಮಂಗಳವನ್ನು ದಯಪಾಲಿಸಲಿ.

'ಚಿರಮಬಿವರ್ಧಂತಾಂ, ಶ್ರೀ ಛಾಯಾಪತಿ ಸಂತಾನಶ್ರೀಃ'

'ಇಪ್ಪತ್ತು ಎಪ್ಪತ್ತು ಎಲ್ಲಾ ಒಂದೇ'

ನೀನು, ಜೀವನದಿ ಉತ್ಸಾಹ ತುಂಬು ಇಂದೇ.

## ತಳುಕಿನ ವಂಶವಾಹೀ ಸಲ್ಲಕ್ಷಣಗಳ ಸಾಕಾರಮೂರ್ತಿ ಛಾಯಾಪತಿ

ಸೇವೆಯೇ ಅಮೂಲ್ಯ ಕಾರ್ಯ ಎಂಬ ಆದರ್ಶವನ್ನು ಬೆಳೆಸಿ, ಉತ್ತೇಜೀಸುವ, ಪ್ರಪಂಚದ ರಾಷ್ಟ್ರಗಳ ನಡುವೆ ಇರುವ ಸಂಘರ್ಷಗಳನ್ನು ತಪ್ಪಿಸಿ ಅಂಥಲೆಲ್ಲ ಶಾಂತಿ ಸೌಹಾರ್ದಯಗಳನ್ನು ಏರ್ಪಡಿಸುವ, ಒಟ್ಟಾರೆ ಮಾನವನ ಬದುಕಿನಲ್ಲಿ ನೆಮ್ಮದಿ ಉಂಟಾಗಿಸುವ ಧ್ಯೇಯವನ್ನು ಹೊತ್ತುಕೊಂಡು 1905ರಲ್ಲಿ ಅಮೆರಿಕದ ಚಿಕಾಗೋ ನಗರದಲ್ಲಿ ಸ್ಥಾಪಿತವಾದಂಥ ಸಂಘಟನೆ ರೋಟರಿ ಅಂತಾರಾಷ್ಟ್ರೀಯ (ರೋಟರಿ ಇಂಟರ್ ನ್ಯಾಷನಲ್) ಸಂಸ್ಥೆ. ಮನುಷ್ಯಮನುಷ್ಯರಲ್ಲಿ, ಸಮುದಾಯಸಮುದಾಯಗಳಲ್ಲಿ ಶಾಂತಿ ಸಮಾಧಾನ ಸೌಹಾರ್ದಗಳನ್ನು ಏರ್ಪಡಿಸಲು ಕಂಕಣತೊಟ್ಟು ಸೇವೆ ಸಲ್ಲಿಸುತ್ತಿರುವ ಸಂಸ್ಥೆ ಇದು.

ಯಾವುದೇ ಕೆಲಸಗಳನ್ನು ನಾವು ಮಾಡಿದರೂ ನಮ್ಮ ನಡೆನುಡಿ ಮತ್ತು ಚಿಂತನೆ ಗಳು ಯುಕ್ತರೀತಿಯಲ್ಲಿ ಮಾನವನ ಕಲ್ಯಾಣಕ್ಕೆ ಸಲ್ಲುತ್ತವೆಯೇ ಇಲ್ಲವೆ ಎಂಬುದನ್ನು ಪರೀಕ್ಷಿಸಿಕೊಳ್ಳಲು ರೋಟರಿಯು ನಾಲ್ಕು ಬಗೆಯ ಪರೀಕ್ಷೆಗಳನ್ನು, (ಚತುರ್ವಿಧ ಪರೀಕ್ಷೆ), ನಾವೇ ಏರ್ಪಡಿಸಿಕೊಳ್ಳಲು ಅನುಕೂಲವಾಗುವಂಥ ನಾಲ್ಕು ಮಾರ್ಗದರ್ಶನ ಗಳನ್ನು ನೀಡಿದೆ. ನಮ್ಮ ಕೆಲಸಗಳು ಇದು ಸತ್ಯವೇ? ಇದು ಸಂಬಂಧಪಟ್ಟವರಿಗೆಲ್ಲ ಒಳ್ಳೆಯದನ್ನು ಉಂಟುಮಾಡುತ್ತದೆಯೇ? ಇದು ಸದ್ಭಾವನೆ ಮತ್ತು ಉತ್ತಮ ಸ್ನೇಹಸಂಬಂಧವನ್ನು ಬೆಳೆಸುವುದೇ? ಇದು ಸಂಬಂಧಪಟ್ಟವರಿಗೆಲ್ಲ ಪ್ರಯೋಜನ ಕಾರಿಯೇ? ಇವೇ ರೋಟರಿಯ ಚತುರ್ವಿಧ ಪರೀಕ್ಷೆಗಳು. ಈ ಪರೀಕ್ಷೆಗಳಿಗೆ ನಮ್ಮನ್ನು ನಾವು ಈಡುಮಾಡಿಕೊಂಡುದಾದರೆ ನಮ್ಮ ಎಲ್ಲ ಕೆಲಸಗಳೂ ಸರ್ವಜನಹಿತಾಯ ಸರ್ವಕಾಲಹಿತಾಯವಾಗುವುದು ನಿಶ್ಚಿತ. ಇಂಥ ಕೆಲಸವನ್ನೇ ಮಾಡಿದ್ದು ತಳುಕಿನ ಕುಟುಂಬದವರು.

ಅಮೆರಿಕದ ದೇಹಕ್ರಿಯಾವಿಜ್ಞಾನಿಯಾಗಿದ್ದವ ಗ್ರೆಗೂರ್ ಮೆಂಡಲ್ (1872-1935) ಎಂಬವ. ಈತ 1851ರಲ್ಲಿ ಜೀವಿಗಳಲ್ಲಿಯ ಅನುವಂಶೀಯತೆಯನ್ನು ಕುರಿತಂತೆ ಬಟಾಣಿಗಿಡಗಳ ಮೇಲಿನ ಪ್ರಯೋಗಗಳ ಆಧಾರದ ಮೇಲೆ ಕೆಲವು ಮೂಲಭೂತ

---

ಎಸ್. ರಾಮಪ್ರಸಾದ್

---

ನಿಯಮಗಳನ್ನು ಪ್ರತಿಪಾದಿಸಿದ. ಅವನ ಪ್ರಾಬಲ್ಯನಿಲಯಮ ಮತ್ತು ಪ್ರತ್ಯೇಕತಾ ನಿಯಮಗಳು ಪ್ರತಿಯೊಂದು ಜೀವಿಯಲ್ಲೂ ಒಂದೊಂದು ಗುಣಲಕ್ಷಣವನ್ನು ನಿರ್ದೇಶಿಸುವ ಒಂದೊಂದು ಘಟಕವಿರುವುದರ ವೃತ್ತಾಂತಗಳನ್ನು ತಿಳಿಸಿಕೊಡುತ್ತವೆ. ವಂಶವಾಹಿಕಣಗಳ ಲಕ್ಷಣಗಳು (ಜೆನೆಟಿಕ್ ಕ್ಯಾರೆಕ್ಟರಿಸ್ಟಿಕ್ಸ್) ಹೇಗೆ ವಂಶಪಾರಂಪರ್ಯ ವಾಗಿ ಮುಂದುವರೆದುಕೊಂಡು ಹೋಗುತ್ತವೆ; ಈ ಪ್ರಕ್ರಿಯೆಯ ವಿಧಿವಿಧಾನಗಳೇನು, ಪರಿಣಾಮಗಳೇನು ಎಂಬ ವಿಚಾರದಲ್ಲಿ ಮೆಂಡಲನ ಪ್ರಯೋಗಗಳು ಇಂದೂ ತಮ್ಮ ಮಹತ್ವವನ್ನು ಉಳಿಸಿಕೊಂಡಿವೆ.

ರೋಟರಿಯ ಚತುರ್ವಿಧ ಪರೀಕ್ಷೆ ಮತ್ತು ಮೆಂಡಲನ ಅನುವಂಶೀಯತೆಯ ನಿಯಮಗಳನ್ನು ಇಲ್ಲಿ ಪ್ರಸ್ತಾವಿಸಿದ್ದರ ಕಾರಣವೇನೆಂದರೆ - ತಳುಕಿನ ಕುಟುಂಬದ ಸದಸ್ಯರಲ್ಲಿ ಇದ್ದಂಥ ಸೇವಾ ಮನೋಭಾವ, ತನ್ನಂತೆ ಪರರನ್ನು ಕಾಣಬೇಕೆಂಬ ಪ್ರವೃತ್ತಿ, ಸರ್ವರೊಳು ಒಂದಾಗುವ ವಿಶೇಷತೆ ಮುಂತಾದ ಕಲ್ಯಾಣಗುಣಲಕ್ಷಣಗಳು ಆ ಕುಟುಂಬದ ಹಿರಿಯ ಸದಸ್ಯರಲ್ಲೂ ಮುಂದುವರೆಸಿಕೊಂಡು ಬಂದದ್ದೇ. ಈ ಮೂಲ ಭೂತ ಗುಣಲಕ್ಷಣಗಳು ವಂಶವಾಹಿನಿಯಾಗಿ ಮುಂದೆ ಮುಂದೆ ಸಾಗಿಬರುವ ವಿಚಾರವನ್ನು ಪ್ರಸ್ತಾಪಿಸಿದ ಗ್ರಿಗೊರ್ ಮೆಂಡಲ್ ಎಷ್ಟರಮಟ್ಟಿಗೆ ತನ್ನ ಆಲೋಚನಾ ಪರತೆಯನ್ನೂ ಚಿಂತನಶೀಲತೆಯನ್ನೂ ಬೆಳೆಸಿಕೊಂಡಿದ್ದ ಎಂಬುದರ ಜೀವಂತದರ್ಶನ ತಳುಕಿನ ಕುಟುಂಬದ ಸದಸ್ಯರಲ್ಲೂ ಪ್ರತಿಬಿಂಬಿತವಾಗಿದೆ.

"ಥಳಕಿನ ಈ ಪ್ರಪಂಚದಲ್ಲಿ ತಳುಕಿನ ಪ್ರಸಿದ್ಧ ವಂಶಕುಡಿಯಾದ ಅವರು ಅಣ್ಣಾ ಪೂಜ್ಯ ವೆಂಕಣ್ಣಯ್ಯನವರ ಪಡಿಯಚ್ಚೇ ಆಗಿ ತಮ್ಮ ಜೀವಿತಕಾಲದಲ್ಲಿ ದಂತಕತೆಯಾಗಿ ದ್ದರು. ಅಧ್ಯಯನ, ಅಧ್ಯಾಪನ, ಕೃತಿರಚನೆಯ ತ್ರಿವೇಣಿಸಂಗಮವಾಗಿದ್ದರು" ಎಂದು ತಮ್ಮ ತಂದೆಯವರಾಗಿದ್ದ ತ.ಸು. ಶಾಮರಾಯರ ಬಗ್ಗೆ ಅವರ ಹಿರಿಯ ಮಗ ಟಿ.ಎಸ್. ವೆಂಕಣ್ಣಯ್ಯ ಹೇಳಿರುವ ಮಾತುಗಳು ವೆಂಕಣ್ಣಯ್ಯನವರಾಗಲೀ ಶಾಮರಾಯರಾಗಲೀ ಹೇಗೆ ತಮ್ಮ ಕೆಲಸಕಾರ್ಯಗಳನ್ನು ಇಲ್ಲಿ ತಿಳಿಸಿದ ಚತುರ್ವಿಧ ಪರೀಕ್ಷೆಗೆ ಈಡುಮಾಡಿ ಕೊಂಡು ಯಶಸ್ವಿಗಳಾದರು ಎಂಬುದು ಮುಖ್ಯ.

ಪ್ರೀತಿ, ವಿಶ್ವಾಸ, ಅನುಕಂಪ, ವಾತ್ಸಲ್ಯ ಮುಂತಾದ ಶ್ರೀಮಂತಗುಣಗಳನ್ನು ಮೈಗೂಡಿಸಿಕೊಂಡಿದ್ದ ತ.ಸು. ಶಾಮರಾಯರ ಪುತ್ರರಾಗಿ ಜನಿಸದ ಆತ್ಮೀಯ ಟಿ.ಎಸ್. ಛಾಯಾಪತಿಯವರನ್ನು ಈಗ ಯಾರಾದರೂ ಗಮನವಿಟ್ಟು ನೋಡಿದರೆ ಛಾಯಾಪತಿ ಯವರ ಮುಖಲಕ್ಷಣ ತ.ಸು. ಶಾಮರಾಯರ ಮುಖಲಕ್ಷಣವನ್ನು ಹೋಲುವುದನ್ನು ಗಮನಿಸಬಹುದು. ದೊಡ್ಡಪ್ಪನಂತೆಯೇ ನೀಳಕಾಯ, ಕೋಲುಮುಖ, ಎದ್ದುಕಾಣುವ ನಾಸಿಕ, ನೀಳಕೈಬೆರಳುಗಳು ಮುಂತಾದವೆಲ್ಲ ಅನುವಂಶೀಯತೆಯ ಲಕ್ಷಣಗಳಾಗಿವೆ. ಇಲ್ಲೂ ಗ್ರೆಗೊರ್ ಮೆಂಡಲನ ನಿಯಮಗಳು ಸಾಕ್ಷಾತ್ಕಾರಗೊಂಡಿರುವುದನ್ನು

ಕಾಣಬಹುದು. ತಂದೆಯಂತೆಯೇ ಮಗ, ತಾಯಿಯಂತೆಯೇ ಮಗಳು ಎಂಬ ಮಾತಿನ ಸಾರ್ಥಕ್ಯವನ್ನು ಛಾಯಾಪತಿಯವರಲ್ಲಿ ಕಾಣಬಹುದು. ತಂದೆಯ ಪ್ರೀತಿ-ವಿಶ್ವಾಸ-ಪ್ರೇಮ ಮುಂತಾದ ಸದ್ಗುಣಗಳ ಸಾಕಾರಮೂರ್ತಿಯಾಗಿರುವವರು ಗೆಳೆಯ ಛಾಯಾಪತಿ.

ಗೆಳೆಯ ಛಾಯಾಪತಿ ನನಗಿಂತಲೂ ಎರಡು ವರ್ಷ ಕಿರಿಯವ ಎಂಬ ಕಾರಣ ಅವರನ್ನು ಹೀಗೆ ಸಂಬೋಧಿಸಬಹುದಾದರೂ ಚಿಂತನಾಪರರೂ ಆಲೋಚನಶೀಲರೂ ವ್ಯವಹಾರಸ್ಥರೂ ಆಗಿರುವ ಕಾರಣ ಛಾಯಾಪತಿಯವರ ದೇಹದ ಸ್ವರೂಪ ಹಿರಿತನವನ್ನು ಪ್ರತಿಬಿಂಬಿಸುತ್ತದೆ. ಒಂದು ಕಾಲಕ್ಕೆ ಮೈಸೂರಿನ ಕೃಷ್ಣಮೂರ್ತಿಪುರಂನಲ್ಲಿ ಪೂಜ್ಯ ಶಾಮರಾಯರು ವಾಸಮಾಡುತ್ತಿದ್ದು ತಿಂಗಳಿಗೊಮ್ಮೆ ಪ್ರತಿಭಾವಂತ ಸಾಹಿತಿಗಳನ್ನು ಆಹ್ವಾನಿಸಿ, ಅವರ ಚಿಂತನೆಗಳನ್ನು ಸಹಸಾಹಿತಿಗಳೊಂದಿಗೆ ಹಂಚಿಕೊಳ್ಳಲು ಸಣ್ಣ ಸಂತೋಷಕೂಟವನ್ನು ಏರ್ಪಡಿಸುತ್ತಿದ್ದರು. ಆ ವೇಳೆ ಸಾಹಿತ್ಯಿಕ ಕಾರ್ಯಕ್ರಮಗಳು (ಕಾವ್ಯವಾಚನ, ಕವಿತಾವಾಚನ, ವಿಮರ್ಶೆ ಪ್ರಸ್ತುತಿ ಮುಂತಾದವು) ಮುಗಿದ ಬಳಿಕ ಶಾಮರಾವ್ ದಂಪತಿಗಳು ಏರ್ಪಡಿಸುತ್ತಿದ್ದ ರಸಭೋಜನದ ಸವಿಯನ್ನು ನಾನೂ ಉಂಡಿದ್ದೇನೆ. ಅಲ್ಲಿ ಛಾಯಾಪತಿಯವರು ತಮ್ಮ ತಂದೆಗೆ ಸಹಾಯಮಾಡಲು ನಿಂತಿರುತ್ತಿದ್ದರು. ಹಾಗಾಗಿ ಛಾಯಾಪತಿಯವರ ಶ್ರೀಮುಖ ನನಗೆ ಚೆನ್ನಾಗಿ ಗುರುತು ಇದೆ. ಅವರ ಅನುಭವಗಳ ರೇಖೆಗಳು ಅವರ ಹಣೆಯ ಮೇಲೆ ಮೂಡಿ ಅವರಿಗೊಂದು ಪರಿಪಕ್ವತೆಯ ರೂಪವನ್ನು ಈಗ ನೀಡಿದೆ ಅಷ್ಟೆ.

ತಂದೆಯ ಬೆಳಕಿನ ನೆರಳಿನಲ್ಲೇ ನಡೆದು ಬಂದಿರುವ ಶ್ರೀ ಛಾಯಾಪತಿ ಅವರು ಎಂ.ಕಾಂ. ಪದವೀಧರರು. ಬೇಕಾಗಿದ್ದಲ್ಲಿ ಅವರು ಶೈಕ್ಷಣಿಕವೃತ್ತಿಯನ್ನು ಆತುಕೊಂಡು ಅಧ್ಯಾಪಕರಾಗಬಹುದಿತ್ತು. ಆದರೆ ವಿಧಿಯ ಕೈಗೊಂಬೆಯಾದರವರು. ಸುಮಾರು ಆರು ದಶಕಗಳ ಹಿಂದೆಯೇ ತ.ಸು. ಶಾಮರಾಯರು ಸ್ಥಾಪಿಸಿದ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಭಾರವನ್ನು ಬಲುಪ್ರೀತಿಯಿಂದ ಹೊತ್ತುಕೊಂಡು ಯಶಸ್ವಿಯಾಗಿ ನಿಭಾಯಿಸುತ್ತ ಬಂದಿದ್ದಾರೆ. ಈ ಗ್ರಂಥಮಾಲೆ ಒಂದು ಸಾವಿರಕ್ಕೂ ಮಿಗಿಲಾಗಿ ಮೌಲ್ವಿಕ ಗ್ರಂಥಗಳನ್ನು ಪ್ರಕಟಿಸಿದೆ. ಸಾಹಿತ್ಯ, ಕಲೆ, ಸಂಸ್ಕೃತಿ, ವಿಮರ್ಶೆ, ಪ್ರವಾಸಕಥನ, ವಿಜ್ಞಾನ, ವ್ಯಕ್ತಿಚಿತ್ರಗಳು ಮುಂತಾದ ಕ್ಷೇತ್ರಗಳಲ್ಲಿನ ಸಾಹಿತ್ಯಗಳನ್ನು ಪ್ರಕಾಶಪಡಿಸಿ ಪ್ರಕಾಶನ ಕ್ಷೇತ್ರದ ಮುಂಚೂಣಿಯಲ್ಲಿದೆ. ದಿವಂಗತ ತ.ಸು. ಶಾಮರಾಯರಿಂದ ಪ್ರಾರಂಭಗೊಂಡು ಈಗಲೂ ಛಾಯಾಪತಿಯವರ ನೇತೃತ್ವದಲ್ಲಿ ಮುಂದುವರೆಯುತ್ತಿದೆ ಈ ಪ್ರಕಾಶನ ಸಂಸ್ಥೆ. ಛಾಯಾಪತಿ ಅವರಿಗೆ ಸಂದಿರುವ ಸನ್ಮಾನ ಪುರಸ್ಕಾರಗಳು ಅವರ ಧೀಶಕ್ತಿಯನ್ನೂ ಪ್ರಕಾಶನಾಶಕ್ತಿಯನ್ನೂ ಎತ್ತಿ ತೋರಿಸುವ ಒರೆಗಲ್ಲುಗಳಾಗಿವೆ. ಶ್ರೀಯುತ ಛಾಯಾಪತಿ ಅವರೇ ರಚಿಸಿರುವ ಇಪ್ಪತ್ತಮೂರು ಪುಸ್ತಕಗಳು, ರೇಡಿಯೋ

ಪ್ರಸಾರಭಾಷಣಗಳು, ಆಕಾಶವಾಣಿ ಸಂದರ್ಶನಗಳು, ಪುಸ್ತಕವನ್ನು ಸಮಯಕ್ಕೆ ಸರಿಯಾದಿ ವಿತರಣೆ ಮಾಡುವ ಅವರ ನಿಷ್ಠೆ-ಪ್ರಾಮಾಣಿಕತೆಗಳು, ಲೇಖಕರ ಪ್ರೀತಿ ವಿಶ್ವಾಸಗಳನ್ನು ಗಳಿಸಿರುವುದು, ಅವರಿಗೆ ಸಂದಿರುವ ಕನ್ನಡ ಪ್ರಕಾಶನ ರತ್ನ, ಸಾವಿರ ಪುಟಗಳ ಸರದಾರ, ಸೃಜನಶೀಲ ಪ್ರಕಾಶಕ, ಕನ್ನಡ ಪುಸ್ತಕ ಪ್ರಕಾಶನದ ಮೇರು ಮುಂತಾದ ನೈಜಗುಣವಾಚಕರೂಪದ ಬಿರುದುಗಳು ಮುಂತಾದವೆಲ್ಲ ಶ್ರೀಯುತರು ತಮ್ಮ ಮೂರು ಆಯಾಮದ (ನಿರ್ಧರಣೆ, ಅರ್ಪಣಾ ಮನೋಭಾವ ಮತ್ತು ಭಕ್ತಿವೈಶಿಷ್ಟ್ಯಗಳು) ಶ್ರೀಮಂತಿಕೆಯ ಗುಣಲಕ್ಷಣಗಳು ಪ್ರತಿಬಿಂಬಿಸುವ ಪರಿಯನ್ನು ತಿಳಿಸುತ್ತವೆ.

"ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯನ್ನು ಶಾಮರಾಯರು ಪ್ರಾರಂಭಿಸಿದ್ದು ಎರಡು ಮುಖ್ಯ ಉದ್ದೇಶಗಳಿಂದ. ಒಂದು ಪ್ರಮುಖವಾಗಿ ವೆಂಕಣ್ಣಯ್ಯನವರ ಹೆಸರನ್ನು ಚಿರಸ್ಥಾಯಿಗಳಿಸುವುದು. ಎರಡನೆಯದು ಯುವ ಬರಹಗಾರರನ್ನು ಪ್ರೋತ್ಸಾಹಿಸುವುದು" - ಹೀಗೆಂದು ಶ್ರೀ ಛಾಯಾಪತಿ ಅವರು ತಮ್ಮ ತಂದೆಯ ಬಗ್ಗೆ ರಚಿಸಿರುವ 'ತಂಪು ನೆಳಲು' ಪುಸ್ತಕದಲ್ಲಿ ಹೇಳಿಕೊಂಡಿದ್ದಾರೆ. ಈ ಮಾತಿನ ಮುಂದುವರಿದ ಸಾರ್ಥಕ್ಯವು ಛಾಯಾಪತಿಯವರೇ ಮುಂದುವರೆಸಿಕೊಂಡು ಬರುತ್ತಿರುವ ರೀತಿ-ನೀತಿಗಳಲ್ಲಿ ವ್ಯಕ್ತವಾಗಿದೆ. ಛಾಯಾಪತಿ ಅವರು ತಮ್ಮ ತಂದೆಯ ಮನೋಗತವನ್ನು ಚೆನ್ನಾಗಿ ಇಂಗಿತಮಾಡಿಕೊಂಡು ಅವರು ಹಾಕಿಕೊಟ್ಟ ಮೇಲ್ಪಂಕ್ತಿಯಲ್ಲೇ ಪ್ರಕಟಣೆಯ ಕೆಲಸವನ್ನು ಜಾಣ್ಮೆಯಿಂದ ಮುಂದುವರಿಸುತ್ತಿದ್ದಾರೆ. ಇದರಿಂದ ಎರಡು ಅಂಶಗಳು ಸ್ಪಷ್ಟಪಡುತ್ತವೆ. ಸ್ವಂತಿಕೆಯಿಂದ ಮೇಲೆ ಬಂದು ಕನ್ನಡ ಸಾರಸ್ವತಲೋಕದಲ್ಲಿ ಗಿರಿಶಿಖರ ಸದೃಶ್ಯರಾಗಿ ಬದುಕಿ ಬಾಳಿದಂಥ ಇಬ್ಬರು ಮಹನೀಯರುಗಳ (ವೆಂಕಣ್ಣಯ್ಯ ಮತ್ತು ಶಾಮರಾವ್) ಹೆಸರುಗಳನ್ನು ಚಿರಸ್ಥಾಯಿಯಾಗಿರಿಸುವುದು ಮತ್ತು ಅನೇಕ ಪ್ರತಿಭಾವಂತ ಲೇಖಕರನ್ನು ಬೆಳಕಿಗೆ ತರುವುದು. ಈ ಎರಡೂ ವಿಚಾರಗಳನ್ನು ದಿವಂಗತ ಶಾಮರಾಯರು ತಮ್ಮ ಅನುದಿನದ ಕೈಂಕರ್ಯವೆಂದೇ ಭಾವಿಸಿದ್ದರು. ಇಂದು ಈ ಕೈಂಕರ್ಯಭಾವ ಇಂದಿಗೂ ಶ್ರೀಯುತ ಛಾಯಾಪತಿ ಅವರಲ್ಲಿ ರಕ್ತಗತವಾಗಿರುವುದನ್ನು ಕಾಣಬಹುದು. ಈ ಹಿಂದೆ ಇಲ್ಲಿ ಪ್ರಸ್ತಾಪಿಸಿದ ವಂಶವಾಹೀಕಣಗಳ ರೂಪ-ಸ್ವರೂಪ ಅಂಶಗಳು ತಳುಕಿನ ಮುಂದಿನ ಪೀಳಿಗೆಯಲ್ಲಿ ಹೇಗೆ ಮುಂದುವರೆದುಕೊಂಡು ಬಂದಿವೆ ಎಂಬುದನ್ನೇ ಜೀವಂತ ನಿದರ್ಶನಗಳು ಎನ್ನಬಹುದು.

ಗೆಳೆಯ ಛಾಯಾಪತಿ ಅವರು ಸತ್ಕುಲಪ್ರಸೂತರು. ತಂದೆ ಹಾಗೂ ದೊಡ್ಡಪ್ಪನವರ ಎಲ್ಲ ಶ್ರೀಮಂತ ಕಲ್ಯಾಣಗುಣಗಳನ್ನು ಮೈಗೂಡಿಸಿಕೊಡಿರುವವರು. ಅವರು ಎಲ್ಲಿಗೇ ಹೋಗಲಿ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಛಾಯಾಪತಿ ನಾನು ಎಂದು ಪೂರ್ವೋತ್ತರ ಹೇಳಿಕೊಂಡೇ ತಿರುಗಾಡುವವರು. ಈ ಹಿನ್ನೆಲೆ ಅವರಿಗೆ

ಯಿತನ್ನನ್ನು ತಂದುಕೊಟ್ಟಿದೆ. ನಯವಿನಯಗಳ ಸಾಕಾರಮೂರ್ತಿ, ಇವರನ್ನು ನೋಡಿದಾಗ ಸಾಕ್ಷಾತ್ ತ.ಸು. ಶಾಮರಾಯರನ್ನೇ ನೋಡಿದ ಹಾಗೆ ಭಾಸವಾಗುತ್ತದೆ. ಎಷ್ಟಾದರೂ ತಳುಕಿನ ವಂಶವೆಂಬ ಮುದ್ರಣಾಲಯದಲ್ಲಿ ಮೂಡಿಬಂದ ಪಡಿಯಚ್ಚು ತಾನೇ? ಅವರ ಕೆಲಸಕಾರ್ಯಗಳು, ರೀತಿನೀತಿಗಳು ತಳುಕಿನ ಸಹೋದರರ ರೀತಿ-ನೀತಿಗಳಂತೆಯೇ ಗಾಂಭೀರ್ಯವಾಗಿ ನೆರವೇರುವಂತಿರುವುವು.

ಎಪ್ಪತ್ತನೆಯ ವಸಂತಕ್ಕೆ ಕಾಲಿಡುತ್ತಿರುವ ಗೆಳೆಯ ಛಾಯಾಪತಿ ಅವರು ತಮ್ಮ ಕೆಲಸ ಕಾರ್ಯಗಳಲ್ಲಿ ತಳುಕಿನ ಮನೆತನದ ಕೀರ್ತಿ, ಗೌರವ, ಗಾಂಭೀರ್ಯ, ವಿಶ್ವಾಸಗಳನ್ನು ಇನ್ನೂ ಹಲವು ವಸಂತಗಳ ಕಾಲ ಮುಂದುವರಿಸುವಂತಾಗಲಿ. ತಾನು ಮಾಡುವ ಕೆಲಸ ಕಾರ್ಯಗಳನ್ನು ರೋಟರಿಯ ಚತುರ್ವಿಧ ಪರೀಕ್ಷೆಯ ಒರೆಗಲ್ಲಿಗೆ ಹಚ್ಚಿ ನೋಡಿ ಮುಂದುವರೆಯುತ್ತಿರುವ, ಸಾರಸ್ವತ ಸೇವಾ ಮನೋಭಾವವನ್ನು ಮೈಗೂಡಿಸಿಕೊಂಡಿರುವ ಶ್ರೀಯುತ ಛಾಯಾಪತಿಗೆ ಜಯಸಂವತ್ಸರದ ಚೈತ್ರದ ಗಾನಕೋಗಿಲೆಯ ಇಂಚರವು ಅವರೂ ಅವರ ಕುಟುಂಬದವರೂ ಇನ್ನೂ ಹತ್ತಾರು ವರ್ಷಗಳ ಕಾಲ ಆಲಿಸುವಂತಾಗಲಿ, ಅವರ ಮೇಲೆ ತಳುಕಿನ ಪೂರ್ವಜರ ಶಾಶ್ವತ ಅನುಗ್ರಹ ಸದಾ ಇರಲಿ ಎಂದು ಹಾರೈಸುತ್ತೇನೆ. 'ಛಾಯಾಪತಿ' ಎಂಬ ಅಕ್ಷರಬಾಗಿನವನ್ನು ಶ್ರೀಯುತರಿಗೆ ಸಮರ್ಪಿಸುವ ಸುಸಂದರ್ಭದ ಸಮಾರಂಭ ಅವರಿಗೆ ಹೆಚ್ಚಿನ ಕೀರ್ತಿ - ಪ್ರತಿಷ್ಠೆಗಳನ್ನು ತಂದುಕೊಡಲಿ ಎಂದು ಹೇಳಿ ಅವರನ್ನು ಈ ಲೇಖನದ ಮೂಲಕ ಅಭಿನಂದಿಸುತ್ತೇನೆ.

# ಹೊಂಗನಸಿನ ಪಾಲುದಾರ ಟಿ.ಎಸ್. ಛಾಯಾಪತಿ

ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಪ್ರಕಾಶಕರಾದ ಟಿ.ಎಸ್. ಛಾಯಾಪತಿಯವರು ಹಿರಿಯ ವಿದ್ವಾಂಸರ ಕುಟುಂಬದಲ್ಲಿ (ಪ್ರೊಫೆಸರ್ ಟಿ.ಎಸ್. ವೆಂಕಣ್ಣಯ್ಯ, ಪ್ರೊಫೆಸರ್ ಟಿ.ಎಸ್. ಶಾಮರಾವ್) ಜನಿಸಿದ ಅಪರೂಪದ ಪ್ರಕಾಶಕರು ಹಾಗೂ ಸ್ವತಃ ಬರಹಗಾರರು. ಅವರ ಸಹೋದರ ಟಿ.ಎಸ್. ವೆಂಕಣ್ಣಯ್ಯ ನನ್ನ ಸಹಪಾಠಿಯಾಗಿದ್ದುದು ಮಹಾರಾಜ ಕಾಲೇಜಿನ ಬಿ.ಎ. ತರಗತಿಯಲ್ಲಿ. ಇತ್ತೀಚೆಗಷ್ಟೆ ನನ್ನ ಹಾಗೂ ಛಾಯಾಪತಿಯವರ ಒಡನಾಟ. ಆದರೂ ಕೆಲವೇ ಸಮಯದಲ್ಲಿ ನನ್ನ ಮೇಲೆ ಪರಿಣಾಮ ಬೀರಿದ ಸೃಜನಶೀಲ, ಸೌಮ್ಯ ಸರಳ ವ್ಯಕ್ತಿತ್ವ ಅವರದು.

ಒಂದು ಸಮಾಜಕ್ಕೆ, ಒಂದು ತಲೆಮಾರಿಗೆ ಸಾಂಸ್ಕೃತಿಕ ಕೊಡುಗೆಯಾಗಬೇಕಾದರೆ ಒಳ್ಳೆಯ ಕಲೆಗಾರ, ಸಂಗೀತಗಾರ ಹಾಗೂ ಲೇಖಕ ಎಂದು ಎಲ್ಲರಿಗೂ ತಿಳಿದ ವಿಷಯವೇ. ಆದರೆ ಅದರ ಸಹಭಾಗಿತ್ವದ ಹೊಣೆಯನ್ನು ಹೊತ್ತ ಪ್ರಕಾಶಕರನ್ನು ಜನರು ಅಷ್ಟಾಗಿ ಗಮನಿಸುವುದಿಲ್ಲ. ಆದರೆ ಛಾಯಾಪತಿಯವರ ವಿಷಯದಲ್ಲಿ ಹೇಳಬೇಕೆಂದರೆ ಅವರ ಬರವಣಿಗೆ, ಅವರ ವ್ಯಕ್ತಿತ್ವ ಅವರ ಪ್ರಕಾಶನದ ಸ್ಥೈರ್ಯವನ್ನು ಪುಷ್ಟಿಗೊಳಿಸಿ ಇವೆಲ್ಲದರ ಮಿಲನ ಅವರನ್ನು ಅಸಾಧಾರಣ ವ್ಯಕ್ತಿಯಾಗಿ ಮಾರ್ಪಡಿಸಿದೆ. ಛಾಯಾಪತಿಯವರ ಕೆಲವು ಕೃತಿಗಳಲ್ಲಿ ನಿಸ್ಪೃಹ ಸಾಮಾಜಿಕ ಸುಧಾರಣೆಯ ಕಳಕಳಿಯನ್ನು ಪ್ರಕಾಶನದ ಕೆಲವು ಮಹನೀಯರ ಅಭಿನಂದನ ಗ್ರಂಥಗಳನ್ನು ಕಂಡಾಗ ಇವರ ಸಾಂಸ್ಕೃತಿಯ ಪರಂಪರೆಯ ಬಗ್ಗೆ ಇರುವ ಗೌರವ ಮತ್ತು ಆಸ್ಥೆ ನಮಗೆ ಕಂಡು ಬರುತ್ತದೆ.

ಇವರ ತಂದೆಯವರಾದ ಪ್ರೊ. ತ.ಸು. ಶಾಮರಾಯರು 1950ರಲ್ಲಿ ಪ್ರಾರಂಭ ಮಾಡಿದ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯನ್ನು 1968ರಲ್ಲಿ ನೇತೃತ್ವ ವಹಿಸಿ ನಡೆಸಿಕೊಂಡು ಒಂದು ಸಾವಿರಕ್ಕೂ ಮಿಗಿಲಾಗಿ ಪ್ರಕಟಣೆಗಳು ಮಾಡಿ ಕನ್ನಡ ಸಾಹಿತ್ಯ ಲೋಕಕ್ಕೆ ಅಪಾರವಾದ ಕೊಡುಗೆ ನೀಡಿದ್ದಾರೆ. ನನ್ನ ತಂದೆಯವರಾದ ಪ್ರೊ. ಸಿ.ಡಿ. ನರಸಿಂಹಯ್ಯನವರು ಹಾಗೂ ಪ್ರೊ. ತ.ಸು. ಶಾಮರಾಯರು ಉಭಯ

ಸಿ.ಎನ್. ಶ್ರೀನಾಥ್

ಅಭಿಮಾನಿಗಳು, ಸ್ನೇಹಿತರೂ ಕೂಡ. ಹಾಗಾಗಿ ನನ್ನ ಛಾಯಾಪತಿಯವರ ಈಚಿನ ಸಂಬಂಧ ನನಗೆ ಆಪ್ಯಾಯಮಾನವಾಗಿದೆ.

ಇತ್ತೀಚೆಗಷ್ಟೇ ನನ್ನ ಕನ್ನಡದ ಅನುವಾದ 'ಟಿ.ಎಸ್. ಎಲಿಯಟ್: ಮುಖ್ಯ ಕವನಗಳು' ಕೃತಿಯನ್ನು ಬಹಳ ಶ್ರದ್ಧೆಯಿಂದ ಸುಂದರವಾಗಿ ಪ್ರಕಟಿಸಿದ್ದಾರೆಂದು ಹೇಳಲು ಹೆಮ್ಮೆ ಪಡುತ್ತೇನೆ. ಪ್ರತಿಷ್ಠಿತ ಪ್ರಕಾಶನ ಸಂಸ್ಥೆಗಳಾದ ಆಕ್ಸಫರ್ಡ್, ಮೆಕ್ ಮಿಲನ್, ಹಾರ್ಪರ್ ಕಾಲಿನ್ಸ್, ಓರಿಯಂಟ್ ಲಾಂಗ್ ಮನ್ಸ್, ಕಾವ್ಯಾಲಯ ಹೀಗೆ ಹಲವಾರು ಪ್ರಕಾಶನ ಸಂಸ್ಥೆಗಳು ಮಾಡಿದ ಸಾಧನೆಗಳಿಗಿಂತ ಕಡಿಮೆಯಲ್ಲದೆ ಏಕೈಕ ವ್ಯಕ್ತಿಯ ಸಂಸ್ಥೆಯಾಗಿ ಇದನ್ನು 60 ವರ್ಷಗಳಿಗೆ ಮೀರಿ ದಿನೆ ದಿನೇ ಖ್ಯಾತಿ ಚ್ಯುತಿಯಾಗದೆ, ವೃದ್ಧಿಯಾಗುವ ಹಾಗೆ ನಡೆಸಿಕೊಂಡು ಬರುತ್ತಿರುವುದು ಛಾಯಾಪತಿಯವರ ವಿಶೇಷ ವ್ಯಕ್ತಿತ್ವವೆಂದೇ ಹೇಳಬೇಕು.

ಕನ್ನಡ ಪುಸ್ತಕೋದ್ಯಮದಲ್ಲಿ ವಿವಿಧ, ಪ್ರಕಾರಗಳಲ್ಲಿ ಅಂದರೆ, ಕಾದಂಬರಿ, ಕವನ, ನಾಟಕ, ವಿಮರ್ಶೆ, ಜೀವನ ಚರಿತ್ರೆ, ಪ್ರವಾಸ ಕಥನ, ಸಂಶೋಧನೆ ಹೀಗೆ ವೈವಿಧ್ಯಮಯ ಕೃತಿಗಳನ್ನು ಪ್ರಕಟಿಸಿದ ಅಪೂರ್ವ ಸಾಧನೆ ಇವರದು ; ಇಂದಿನ ಪ್ರಸ್ತುತ ಸಮಾಜದಲ್ಲಿ, ಸಾರಸ್ವತ ಪ್ರಪಂಚದಲ್ಲಿ ಕಾದಂಬರಿ ಬಹಳ ವಿಶಿಷ್ಟಸ್ಥಾನ ಪಡೆದುಕೊಂಡಿರುವುದು ನಮಗೆಲ್ಲಾ ತಿಳಿದ ವಿಷಯವೇ. ಪಾಶ್ಚಾತ್ಯ ಸಾಹಿತ್ಯದಲ್ಲೂ ಕಾದಂಬರಿಯದೇ ಮೇಲುಗೈ. ಆದರೆ ಜೀವನ ದರ್ಶನವನ್ನು ಸೂಕ್ಷ್ಮವಾಗಿ ಅದರ ರಸಾನುಭವವನ್ನು ಪಾಕ ಹೊಯ್ದ ಶೈಲಿಯಲ್ಲಿ ಸ್ವಾದಿಸುವುದು ಕಾವ್ಯದಲ್ಲಿ ಮಾತ್ರ ಸಾಧ್ಯ ಅನ್ನುವ ಪಂಥಕ್ಕೆ ಸೇರಿದವನು ನಾನು. ಆದ್ದರಿಂದ ನಾನು ನನ್ನ ಮಿತ್ರ ಛಾಯಾಪತಿಯವರ ಧೈರ್ಯವನ್ನು ಮೆಚ್ಚುತ್ತೇನೆ. ಏಕೆಂದರೆ ಅವರ ಚೆನ್ನವೀರ ಕಣವಿಯವರ ಸಮಗ್ರ ಕವನಗಳನ್ನು 16 ಸಂಪುಟಗಳಿಗೂ ಮಿಗಿಲಾಗಿ ಪ್ರಕಟಿಸಿದ್ದಾರೆ. ಧೈರ್ಯ ಏಕೆಂದರೆ ಕಾವ್ಯಕ್ಕೆ ಈಗ ಮಾರ್ಕೆಟ್ ಇಲ್ಲ, ಇದು ಕಥೆ ಕಾದಂಬರಿ ಯುಗ.

ನಾನು ಇನ್ನೊಂದು ವಿಷಯವನ್ನು ಬಹಳ ಕರಾರುವಕ್ಕಾಗಿ ನಿವೇದಿಸಿಕೊಳ್ಳಲು ಇಚ್ಛಿಸುತ್ತೇನೆ. ಒಂದು ಸಾಹಿತ್ಯದ ಬೆಳವಣಿಗೆಯಾಗ ಬೇಕಾದರೆ ವಿಮರ್ಶೆಯ ಪರಿಸರ ತಿಳಿಯಾಗಿ ಮೌಲ್ಯಗಳಿಗೆ ಮಾತ್ರ ಸೀಮಿತವಾಗಿ ಬೇರೆ ಕಾರಣಗಳಿಂದ ಕಲುಷಿತವಾಗದೆ ಇದ್ದರೆ ಮಾತ್ರ ಸಾಧ್ಯ ಎಂದು. ಇಂತಹ ಸಂದರ್ಭದಲ್ಲಿ ವಿಮರ್ಶಕನ ಪಾತ್ರ ಬಹಳ ಮುಖ್ಯವಾದದ್ದು. ಆತ ಸ್ಥಿತಪ್ರಜ್ಞನಾಗಿ, ನೇರದೃಷ್ಟಿಯಿಂದ ಸಾಹಿತ್ಯದ ಮೌಲ್ಯಮಾಪನ ಮಾಡಿದಾಗ ವಾತಾವರಣ ಜೀವಂತವಾಗಿರುವುದು. ಹಾಗೆಯೇ ಒಬ್ಬ ಒಳ್ಳೆಯ ಪ್ರಕಾಶಕ ವಿಮರ್ಶಕನ ಪಾತ್ರವನ್ನೇ ಮಾಡುತ್ತಾನೆ. ಆತನ ಆಯ್ಕೆಯೇ ವಿಮರ್ಶೆಯ ಪ್ರತೀಕ. ಈ ದೃಷ್ಟಿಯಲ್ಲಿ ನೋಡಿದಾಗ ಛಾಯಾಪತಿಯವರು ಒಳ್ಳೆಯ ಪ್ರಕಾಶಕರೂ ಹೌದು, ವಿಮರ್ಶಕರೂ ಹೌದು.

ಛಾಯಾಪತಿ ಸ್ವತಃ ಲೇಖಕರಾದ್ದರಿಂದ ಪ್ರಕಾಶಕ ಮತ್ತು ಲೇಖಕ ಸಂಬಂಧ ನವಿರಾದದ್ದು, ಸೂಕ್ಷ್ಮತೆಯಿಂದ ಕೂಡಿರುವುದರಿಂದ ಈ ಸಂಬಂಧವನ್ನು ಗೌರವದಿಂದ ಕಾಯ್ದುಕೊಳ್ಳುವ ಶಕ್ತಿ ಇವರಿಗಿದೆ. ಸಜ್ಜನರೂ ಸುಸಂಸ್ಕೃತರೂ ಆದ ಛಾಯಾಪತಿ ಕನ್ನಡ ಸಾರಸ್ವತ ಲೋಕದ ವಿಶಿಷ್ಟ ಲೇಖಕರ ಸಮೂಹದಲ್ಲಿ ಒಬ್ಬ ಕ್ರಿಯಾಶೀಲ ಪ್ರಕಾಶಕನಾಗಿ, ಚಿಂತಕ ಬರಹಗಾರನಾಗಿ, ಮುಖ್ಯವಾದ ಕೊಂಡಿಯಾಗಿದ್ದಾರೆಂದೇ ಹೇಳಬಹುದು.

ಛಾಯಾಪತಿಯವರಿಗೆ ಹಲವು ಸನ್ಮಾನಗಳು ಸಂದಿವೆ. ಇನ್ನೂ ಬರಬೇಕಾದ್ದು ಇದೆ. ಆದರೆ ಮುಖ್ಯವಾಗಿ ಚಿರಸ್ಥಾಯಿಯಾಗಿ ಉಳಿಯುವ ಇವರ ಪ್ರಕಾಶನ ಸಂಸ್ಥೆ ಇವರ ಶ್ರದ್ಧೆ ಮತ್ತು ತ್ಯಾಗ ಮನೋಧರ್ಮವನ್ನು ಸೂಚಿಸುತ್ತದೆ. ನಮ್ಮ ಸಾಂಸ್ಕೃತಿಕ ಪರಂಪರೆಯಲ್ಲಿರುವ ಹಾಗೆ ಪಿತೃಋಣ ಹಾಗೂ ತಂದೆಯ ಆಕಾಂಕ್ಷೆಗಳ ಪರಿಪಾಲನೆ ರಾಮಾಯಣ ಕಾಲದಿಂದಲೂ ಹಾಸು ಹೊಕ್ಕಾಗಿರುವುದೂ ತಿಳಿದೇ ಇದೆ. ಅದೇ ರೀತಿ ಪ್ರೊ ತ.ಸು. ಶಾಮರಾಯರು ಹಿರಿಯ ವಿದ್ವಾಂಸರು ತಮ್ಮ ಹಿರಿಯ ಸಹೋದರ ಕನ್ನಡದ ಕಣ್ಮಣಿ ಪ್ರೊ ತ.ಸು. ವೆಂಕಣ್ಣಯ್ಯನವರ ಸ್ಮರಣೆಯ ಗೌರವದಲ್ಲಿ ಪ್ರಾರಂಭ ಮಾಡಿದ ಪ್ರಕಾಶನ ಮಾಲೆ ಛಾಯಾಪತಿಯವರು ಪ್ರೀತಿ ವಿಶ್ವಾಸಗಳಿಂದ ದಿನೇ ದಿನೇ ವೃದ್ಧಿಯಾಗುತ್ತಾ ಇರುವ ಹಾಗೆ ನಡೆಸಿಕೊಂಡು ಬರುತ್ತಿರುವುದು ನನ್ನ ಅವರ ಮಿತ್ರತ್ವವನ್ನು ಹತ್ತಿರ ತಂದಿದೆ. ಏಕೆಂದರೆ ನಮ್ಮ ತಂದೆಯವರ ಕನಸಿನ ಕೂಸು ಧ್ವನ್ಯಾಲೋಕ ಹಾಗೂ ಅವರೇ ಪ್ರಾರಂಭ ಮಾಡಿದ 62 ವರ್ಷದ ಸಾಪ್ತಾಹಿಕ The Literary Criterion ಅನ್ನು ನಾನು, ಸ್ನೇಹಿತರು ಹೇಳುವಂತೆ, ಸಮರ್ಥನಾಗಿ ನಡೆಸಿಕೊಂಡು ಹೋಗುತ್ತಿರುವುದು ತಿಳಿದ ವಿಚಾರವೇ. ಹಾಗಾಗಿ ನಾನು ಛಾಯಾಪತಿ ಯವರು ಒಂದೇ ದೋಣಿಯಲ್ಲಿ ತೇಲುತ್ತಿದ್ದೇವೆ. ಅದರ ಕಷ್ಟ ನಷ್ಟಗಳು ಕನಸುಗಳು ಸಂತೃಪ್ತಿ ಒಂದು ರೀತಿಯಲ್ಲಿ ನಮ್ಮನ್ನು ಪಾಲುದಾರರನ್ನಾಗಿ ಮಾಡಿದೆ.

ಛಾಯಾಪತಿಯವರ ಪ್ರಕಾಶನ ಮಾಲೆ ಇನ್ನೂ ಬೆಳೆದು ತಾರಾಮಂಡಲ ಶೋಭಿಸುವ ಹಾಗಾಗಲಿ ಎಂದು ಕೋರುತ್ತಾ ಅವರನ್ನು ನಾನು (ಈಗ ತಾನೆ 70 ದಾಟಿದ ಮೇಲೆ) ಅಭಿನಂದಿಸುತ್ತಿದ್ದೇನೆ.

# ಅಸಾಮಾನ್ಯ ಪ್ರಕಾಶಕ

ನನಗೂ ಭಾಯಾಪತಿಯವರಿಗೂ ಯಾವಾಗ ಪರಿಚಯವಾಯಿತು ಎಂದು ಹೇಳುವುದು ಕಷ್ಟ. ನಾನು Bsc ಓದುತ್ತಿರುವಾಗ ಮೂರ್ತಿಬುಕ್‌ಹಾಸ್‌ಗೆ ಹೋಗುತ್ತಿದ್ದಾಗ ನೋಡಿದ ನೆನಪು. ಆದರೆ ಅವರ ಹತ್ತಿರ ಪರಿಚಯವಾದದ್ದು ನಾನು ಜೆ.ಎಸ್.ಎಸ್. ನಿರ್ವಹಣಾ ಅಧ್ಯಯನ ಸಂಸ್ಥೆಯ ಪ್ರಾಧ್ಯಾಪಕ ಮತ್ತು ಇಲಾಖೆಯ ಮುಖ್ಯಸ್ಥನಾಗಿದ್ದಾಗ ಅವರ ಮಗನಾದ ಪವನ್ ನಮ್ಮ ವಿಭಾಗದ ವಿದ್ಯಾರ್ಥಿಯಾಗಿ ಬಂದಾಗ. ಅಗಿನಿಂದ ಇಲ್ಲಿಯವರೆಗೆ ಅವರ ಹಾಗೂ ನನ್ನ ಬಾಂಧವ್ಯವನ್ನು ವಿವರಿಸುವುದು ಕಷ್ಟ. ನನ್ನ ಅನೇಕ ಜ್ಯೋತಿಷ್ಯ ಪುಸ್ತಕಗಳನ್ನು ಅವರ ಪ್ರಕಾಶನ ಸಂಸ್ಥೆಯಲ್ಲಿ ಪ್ರಕಟಿಸಿದ್ದಾರೆ. ಜತೆಗೆ ನನ್ನ 'ಜ್ಯೋತಿಷ್ಯ ಜ್ಞಾನ'ವೆಂಬ ಪುಸ್ತಕವನ್ನು ಸಪ್ನ ಬುಕ್‌ಹೌಸ್‌ನಲ್ಲಿ ಪ್ರಕಟಿಸಲು ಸನ್ಮಾನ್ಯ ದೊಡ್ಡೇಗೌಡರನ್ನು ಪರಿಚಯ ಮಾಡಿಸಿ ನನಗೆ ಮಹದುಪಕಾರ ಮಾಡಿದ್ದಾರೆ.

ಪ್ರಕಾಶಕರೆಂದರೆ ಯಾರು? - ಯಾರು ಲೇಖಕರ ಬಗ್ಗೆ, ಅವರಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ತಿಳಿದು, ನಂತರ ಹಸ್ತಪ್ರತಿಯನ್ನು ಪರಿಶೀಲಿಸಿ, ಮುದ್ರಣಕ್ಕೆ ಕೊಟ್ಟು, ಕಾಗದವನ್ನು ಕೊಡಿಸಿ. ಕರಡನ್ನು ತಿದ್ದಿ ಒಳ/ಹೊರಗಿನ ವಿನ್ಯಾಸವನ್ನು ಮಾಡಿಸಿ, ಸುಂದರವಾಗಿ ಬರುವ ಹಾಗೆ ಮಾಡಿ, ಲೇಖಕರಿಗೆ ಸರಿಯಾಗಿ ಗೌರವಧನವನ್ನು ಕೊಟ್ಟು, ಪುಸ್ತಕವನ್ನು ಮಾರುಕಟ್ಟೆಗೆ ಬಿಡುಗಡೆ ಮಾಡುವುದು ಪ್ರಕಾಶಕರ ಕೆಲಸ. ಈ ಕೆಲಸವನ್ನು ನಿರಂತರವಾಗಿ ಮಾಡುತ್ತಿರುವ ಭಾಯಾಪತಿಯವರು ಸಾವಿರದ ಮೇಲೆ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಅದು ಸಾಮಾನ್ಯವೆ? ಇವರ ತಂದೆಯವರಾದ ದಿ. ತ.ಸು. ಶಾಮರಾಯರು ತಮ್ಮ ಅಣ್ಣಂದಿರ ನೆನಪಿಗಾಗಿ ಸ್ಥಾಪಿಸಿದ ಸಂಸ್ಥೆಯೇ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ'. ದಿ. ಶಾಮರಾಯರಿಗೆ ವೃದ್ಯಾಪ್ಯ ಬರುವ ಹೊತ್ತಿಗಾಗಲೆ ಎಂ.ಕಾಂ, ಪದವೀಧರರಾದ ಭಾಯಾಪತಿಯವರು ಕೆಲಸಕ್ಕೆ ಹೋಗದೆ ಈ ಪ್ರಕಾಶನಕ್ಕೆ ಬೆನ್ನೆಲುಬಾಗಿ ನಿಂತರು. ಈ ಗ್ರಂಥಮಾಲೆಯಲ್ಲಿ ಕನ್ನಡ ಭಾಷೆ, ಸಾಹಿತ್ಯಗಳಿಗೆ ಮೌಲಿಕವಾದ ಕೊಡುಗೆಯನ್ನು ನೀಡಿದೆ. ಕಾವ್ಯ, ಕಥೆ, ನಾಟಕ, ಪ್ರಬಂಧ,

---

**ಪ್ರೊ. ಎಚ್.ಎಸ್. ಗೋಪೀನಾಥ್**

---

ವಿಮರ್ಶೆ, ಜೀವನ ಚರಿತ್ರೆ, ಅಂಕಣ, ಸಂಶೋಧನ ಗ್ರಂಥ, ಅಭಿನಂದನ ಗ್ರಂಥಗಳು - ಹೀಗೆ ನಾನಾ ವಿಧವಾದ ಸಾಹಿತ್ಯಗಳು ಇಲ್ಲಿ ಪ್ರಕಟಿತವಾಗಿದೆ. ಇವರ ಪ್ರಕಾಶನ ಸಂಸ್ಥೆಯಲ್ಲಿ ಪ್ರಕಟವಾದ ಗ್ರಂಥಗಳು ತ.ಸು.ಶಾಮರಾಯ, ಡಿ.ಎಲ್.ಎನ್., ತೀನಂಶ್ರೀ, ದೇಜಗೌ, ಹಾಮಾನ, ಚನ್ನವೀರಕಣವಿ, ಜಿ.ಎಸ್. ಶಿವರುದ್ರಪ್ಪ, ಬರಗೂರು, ಭಗವಾನ್, ನಿಸಾರ್ ಅಹಮದ್, ವೆಂಕಟೇಶಮೂರ್ತಿ, ಎಚ್.ಎಸ್.ಕೆ., ಕಲಬುರ್ಗಿ, ಟಿ.ವಿ. ವೆಂಕಟಾಚಲ ಶಾಸ್ತ್ರಿಗಳು, ಎನ್.ಎಸ್. ತಾರಾನಾಥ್, ಜೀಕಂಪ, ಲಕ್ಕಪ್ಪಗೌಡ - ಇವರುಗಳಿಂದ ಬರೆಯಲ್ಪಟ್ಟಿವು. ಇನ್ನೂ ಅನೇಕ ಲೇಖಕರಿದ್ದಾರೆ. ಈಗಿನ ಈ ಸ್ಪರ್ಧಾತ್ಮಕ ಪ್ರಪಂಚದಲ್ಲಿ ಈ ಅಂತರ್ಜಾಲ ಯುಗದಲ್ಲಿ, ಪುಸ್ತಕಗಳನ್ನು ಓದಲು ಜನರು ಹಿಂದೇಟನ್ನು ಹಾಕುವ ಪರಿಸ್ಥಿತಿ ಇರುವಾಗ ಇದೊಂದು ಇವರ ಪವಾಡವೇ ಸರಿ. ಇವರ ಈ ಪುಸ್ತಕೋದ್ಯಮಕ್ಕೆ ಇತರ ಜತೆ ಬೆಂಬಲವಾಗಿ ನಿಂತಿರುವವರು ಅವರ ಶ್ರೀಮತಿಯವರು. ಅವರ ಬೆಂಬಲವಿಲ್ಲದಿದ್ದರೆ ಛಾಯಾಪತಿಯವರು ಈ ಮಟ್ಟಕ್ಕೆ ಬೆಳೆಯಲು ಸಾಧ್ಯವಾಗುತ್ತಿರಲಿಲ್ಲ ಎಂದು ನನ್ನ ನಂಬಿಕೆ. ಅದರ ಜತೆಗೆ, ತ.ವೆಂ. ಸ್ಮಾರಕ ಗ್ರಂಥಮಾಲೆಯ ಬಳ್ಳಿಯಾದ ಪ್ರತಿಭಾಪ್ರಕಾಶನ ತನ್ನದೇ ಆದ ಛಾಪನ್ನು ಮೂಡಿಸುತ್ತಿದೆ.

ಛಾಯಾಪತಿಯವರು ಸ್ವತಃ ಕೆಲವು ಪುಸ್ತಕಗಳನ್ನು ಬರೆದು ನಾನೇನೂ ಯಾವ ಲೇಖಕರಿಗಿಂತ ಕಮ್ಮಿ ಇಲ್ಲ ಎಂಬ ಸಂದೇಶವನ್ನು ಸಾರಿದ್ದಾರೆ.

ಇವರಿಗೆ ಹಾಗೂ ಇವರ ಪ್ರಕಾಶನ ಸಂಸ್ಥೆಗೆ ಅನೇಕ ಪ್ರತಿಷ್ಠಿತ ಸಂಘ ಸಂಸ್ಥೆಗಳು ಸನ್ಮಾನಿಸಿ ಗೌರವಿಸಿದ್ದಾರೆ. ಅದರ ಪಟ್ಟಿಯೂ ದೊಡ್ಡದು. ಆದರೆ ನನಗನ್ನಿಸುವ ಹಾಗೆ ಕನ್ನಡಕೋಸ್ಕರ ಇವರು ಇಷ್ಟು ಕೆಲಸ ಮಾಡಿದರೂ ರಾಜ್ಯೋತ್ಸವ ಪ್ರಶಸ್ತಿ ಬರಲಿಲ್ಲ ಎಂಬ ಚಿಂತೆ ನನ್ನನ್ನು ಕಾಡುತ್ತಿದೆ. ರಾಜ್ಯೋತ್ಸವ ಪ್ರಶಸ್ತಿಗೆ ಯಾಕೆ ಹಂಬಲ ಎಂದರೆ ಅದು ಸರ್ಕಾರದ ಗೌರವ ಸೂಚಕ. ಅಷ್ಟೆ, ಹಾಗಾಗಿ ಅದಕ್ಕೆ ಅಷ್ಟು ಪ್ರಾಶಸ್ತ್ಯ. ಕರ್ನಾಟಕ ಸರ್ಕಾರ ಹಾಗೂ ಕನ್ನಡ ಸಂಸ್ಕೃತಿ ಇಲಾಖೆಗೆ ನನ್ನ ಮನವಿ - ಈ ವರ್ಷವಾದರೂ ಇವರಿಗೆ ರಾಜ್ಯೋತ್ಸವ ಪ್ರಶಸ್ತಿ ಕೊಟ್ಟು ಇನ್ನೂ ಇವರಿಂದ ಕನ್ನಡ ಸೇವೆ ಮಾಡಲು ಒಂದು ಅವಕಾಶ ಕೊಡಿ ಎಂದು. ಕರ್ನಾಟಕದ ಜನತೆ ಆಗಲೇ ಇವರಿಗೆ ಅನೇಕ ಪ್ರಶಸ್ತಿಗಳನ್ನು ಕೊಟ್ಟಿದ್ದಾರೆ.

ಛಾಯಾಪತಿಯವರಿಗೆ ಎಪ್ಪತ್ತು ವರುಷವಾಗಿದೆ ಎಂದರೆ ಹುರುಪಿದೆ. ನಂಬುವುದು ಕಷ್ಟ. ಏಕೆಂದರೆ ಅವರಲ್ಲಿ ಮೂವತ್ತು ವರುಷದ ಹುರುಪಿದೆ. ಈ ಹುರುಪು ಸದಾ ಅವರಲ್ಲಿರಲಿ. ಇವರು ನೂರು ವರ್ಷಗಳ ಕಾಲ ಬಾಳಿ ಕನ್ನಡದ ಸೇವೆ ಮಾಡುವಂತಾಗಲಿ ಎಂದು ತಾಯಿ ಚಾಮುಂಡೇಶ್ವರಿಯನ್ನು ಪ್ರಾರ್ಥಿಸುತ್ತೇನೆ.

# ಕೊಟ್ಟ ಕುದುರೆ ಏರಿದವರು

ಮೊದಲ ಮಾನವನು ಮಾತನಾಡಿದ ಅನೇಕಾನೇಕ ವರ್ಷಗಳ ಅನಂತರವೇ ಅಕ್ಷರಗಳನ್ನು ಕಂಡು ಹಿಡಿದ. ಅಕ್ಷರಗಳನ್ನು ಕಂಡು ಹಿಡಿದ ಅನೇಕ ವರ್ಷಗಳ ಅನಂತರವೇ ಆತ ದೀರ್ಘ ಸಾಹಿತ್ಯವನ್ನು ರಚಿಸತೊಡಗಿದ್ದು. ಸಾಹಿತ್ಯ ಕೃತಿಗಳನ್ನು ಪ್ರತಿ ಮಾಡಿ ಇತರರಿಗೆ ದೊರಕುವಂತೆ ಮಾಡಿದ್ದೇ ಗ್ರಂಥ ಪ್ರಕಾಶನದ ಮೊದಲ ಯತ್ನಗಳೆನ್ನಬಹುದು. ಹೀಗೆ ಅಪಾರ ಸಂಖ್ಯೆಯಲ್ಲಿ ಪ್ರಸಿದ್ಧ ಕೃತಿಗಳ ಪ್ರತಿಗಳನ್ನು ನುರಿತವರಿಂದ ಮಾಡಿಸಿ ಹಂಚುವ ಪುಣ್ಯಕಾರ್ಯದಲ್ಲಿ ತೊಡಗಿ ಸಾಹಿತ್ಯ ಪ್ರಕಾಶನವನ್ನು ಪ್ರಚುರ ಗೊಳಿಸಿದವರೇ ಮೊದಲ ಪ್ರಕಾಶಕರೆನಿಸಿರಬೇಕು. ಹೀಗೆ ಗ್ರಂಥದಾನ ಮಾಡಿದ್ದೇ ಅಗ್ಗಳಿಕೆಯಾದ ಕನ್ನಡ ಭಾಷಾ ಪ್ರಕಾಶಕರೆಂದರೆ ದಾನ ಚಿಂತಾಮಣಿ ಅತ್ತಿಮಬ್ಬೆ.

ಮುದ್ರಣ ಕಲೆಯನ್ನು ಕಂಡು ಹಿಡಿಯುವವರೆಗೂ ಈ ಪದ್ಧತಿಯ ಪ್ರಕಾಶನವು ಜಗತ್ತಿನ ಇತರ ಭಾಷೆಗಳಲ್ಲೂ ಇದ್ದಿರಬೇಕು. ಅದೆಷ್ಟು ಅಮೂಲ್ಯವಾದ ಗ್ರಂಥಗಳು ಬೆಳಕು ಕಾಣದೆ ಕಣ್ಮರೆಯಾದವೋ ದೇವನಿಗೇ ಗೊತ್ತು. ಅಥವಾ ಆತನಿಗೂ ಗೊತ್ತಿರಲಾರದು?!

ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃತಿ ರಚನೆ ಮಾಡಿದ ಅನೇಕಾನೇಕ ಪ್ರಭೃತಿಗಳು ತಮ್ಮ ಕೃತಿ ಪ್ರಕಟಣೆಯಿಂದಾಗಿಯೇ ಜನಮನದಲ್ಲಿ ಅಳಿಯದೆ ಉಳಿದು ಬಂದಿದ್ದಾರೆ. ಗ್ರಂಥಕಾರ ಗೊತ್ತಿದ್ದರೆ, ಆತನ ಕೃತಿಯು ಲಭ್ಯವಿಲ್ಲ ಅಥವಾ ಕೃತಿಲಭ್ಯವಿದ್ದರೆ ಗ್ರಂಥ ಕಾರನ ಇತಿಹಾಸವೇ ತಿಳಿಯದೆ ಹೋದಂತಹ ಸನ್ನಿವೇಶಗಳೆಷ್ಟೋ? 'ನಾನು ಕಟ್ಟಿದ ಬಾಸಿಂಗವನ್ನು ಮುಡಿವರಿಲ್ಲ ಬಾಡಿ ಪೋಗುವುದೇ' ಎಂದು ರನ್ನನು ಹಲುಬಿದಾಗ ಆತ ತನ್ನ ಕೃತಿಯನ್ನು ಓದಿ ಆಹ್ವಾನಿಸುವವನನ್ನು ಮಾತ್ರವೇ ಗುರಿಮಾಡದೇ, ಅದನ್ನು ಆತನ ಕೈಗಿಡುವ ಪ್ರಕಾಶಕನೂ ಕೈ ಜೋಡಿಸಬೇಕೆಂದು ಕೊಂಡಿದ್ದನೇನೋ!!

ವಿದ್ವಾಂಸ, ಸಂಶೋಧಕ, ಕೃತಿಕಾರ, ಅಥವಾ ಇನ್ನಾರಿಂದಲೇ ಆದ ಗ್ರಂಥಪ್ರಸವಕ್ಕೆ ಪ್ರಕಾಶಕ ಸೂಲಗಿತ್ತಿಯಿದ್ದಂತೆ. ಗ್ರಂಥದ ಸುಖಪ್ರಸವವು ಜಗತ್ತಿನ ಬೆಳಕಿಗೆ ಪರಿಚಯ ವಾಗಲು ಆತನ ಪಾತ್ರ ಮತ್ತು ಹೊಣೆ ಎರಡೂ ಅಧಿಕ. ಅಥವಾ ಕೃತಿಕಾರನಷ್ಟೇ ಮಹತ್ವದ್ದು. ಅದೆಷ್ಟೋ ಮೊದಲ ಬರಹಗಾರರು ತಮ್ಮ ಬರಹಗಳ ಕರಡು ಪ್ರತಿಯು

ಪ್ರೊ. ವಿ. ನರಹರಿ

ಮುದ್ರಣಗೊಂಡು ಬೆಳಕು ಕಂಡೀತೇ ಎಂಬ ತವಕದಲ್ಲಿದ್ದರೆ, ಅದೆಷ್ಟೋ ವೃತ್ತಿಪರ ಪ್ರಕಾಶಕರು ಪ್ರಕಟಣೆಗೆ ಉತ್ತಮ ಗುಣಮಟ್ಟದ ಬರಹಗಳು ಮತ್ತು ಬರಹಗಾರರು ದೊರಕಿಯಾರೇ ಎಂದು ಅರಸುತ್ತಿರುತ್ತಾರೆ. ಅವರಿಬ್ಬರ ಸಮಾಗಮನವು ದೈವಾಯೋಗ ದಂತೆ ಅಕಸ್ಮಾತ್ತಾಗಿ ನಡೆದು ಹೋಗುವ ಸಂದರ್ಭಗಳಿರುತ್ತದೆ.

ಹಾಗೆಯೇ ಆಯಿತು ನನ್ನ ಮತ್ತು ಶ್ರೀ ಟಿ.ಎಸ್. ಛಾಯಾಪತಿಯವರ ಭೇಟಿ. ಅದಕ್ಕೂ ಮೊದಲು ನಾನವರನ್ನು ಕಂಡಿರಲಿಲ್ಲವೆಂದಲ್ಲ. ಹಲವಾರು ವರ್ಷಗಳಷ್ಟು ಹಿಂದೆಯೇ ಅವರ ಪರಿಚಯವಾಗಿದ್ದರೂ ಸಹ ಅದು ಔಪಚಾರಿಕ ಮಟ್ಟದಲ್ಲೇ ಇತ್ತು. ಹಾಸನದವರೇ ಆದ ಅವರ ಮೈದುನರ ಪರಿಚಯವಾದ ಪ್ರಾರಂಭದಲ್ಲೇ ಅವರು ಶ್ರೀ ಛಾಯಾಪತಿಯವರು ತನ್ನ ಭಾವ ಎಂದಿದ್ದರು. ಅರೆ! ಅವರು ನಮ್ಮ ಹಾಸನದ ಅಳಿಯಂದಿರಾದರಲ್ಲ ಎಂದು ಭೌಗೋಳಿಕ ಅಭಿಮಾನವನ್ನು ತಳೆದಿದ್ದೆ. ಅವರ ಮಾವಂದಿರು ನನಗೆ ಹಳೆಯ ಪರಿಚಯವದರೇ ಆಗಿದ್ದರು. ಆ ವಿಷಯವನ್ನು ತಿಳಿದ ಬಳಿಕ ನಾನವರನ್ನು ಹೆಚ್ಚು ಪೂಜ್ಯ ಭಾವದಿಂದ ಕಂಡೆ.

ಆ ವೇಳೆಗಾಗಲೇ ನಾನು ಹವ್ಯಾಸೀ ಬರಹಗಾರನಾಗಿ ಮೂರು ದಶಕಗಳನ್ನು ಸವೆಸಿದ್ದೆ. ವಿಜ್ಞಾನದ ಹಿನ್ನೆಲೆಯವನಾದ ನಾನು 1970ರಿಂದಲೂ ಕರ್ನಾಟಕದ ಪ್ರಮುಖ ಸುದ್ದಿ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತಿದ್ದೆ. ಪ್ರಜಾವಾಣಿ, ಸುಧಾ, ತರಂಗ, ಕಸ್ತೂರಿಗಳಲ್ಲಿ ಅವು ಪ್ರಕಟಗೊಳ್ಳುತ್ತಿದ್ದವು. ಭಾರತದ ಶಿಕ್ಷಣ ವಿಷಯವಾಗಿ ನಾನು ಪುಸ್ತಕವೊಂದನ್ನು ಬರೆದಿದ್ದು ಅದು ಜನಪ್ರಿಯವಾಗಿ ಎರಡನೆಯ ಮುದ್ರಣವನ್ನು ಕಂಡಿತ್ತು. ಈ ವಿಚಾರ ಶ್ರೀ ಛಾಯಾಪತಿಯವರಿಗೆ ಚೆನ್ನಾಗಿಯೇ ತಿಳಿದಿತ್ತು.

ಅವರೊಮ್ಮೆ ನಮ್ಮ ಕಾಲೇಜಿಗೆ ಬಂದು ತಾವು ಪ್ರಕಾಶನದ ಮಾಡಿದ ಹಲವಾರು ಪುಸ್ತಕಗಳನ್ನು ನಮ್ಮ ಗ್ರಂಥಾಲಯಕ್ಕೆ ಸರಬರಾಜು ಮಾಡಬಹುದೇ ಎಂದು ಕೇಳಿದರು. ನಾನು ಅಗತ್ಯವಾಗಿ ಆಗಲಿ ಎಂದೆ. ನಮ್ಮ ಔಪಚಾರಿಕಕ ಮಾತುಕತೆಯಲ್ಲಿ ಅವರು ನಾನು ಇನ್ನಾವುದಾದರೂ ಪುಸ್ತಕವನ್ನು ಬರೆದಿದ್ದೇನೆಯೇ ಎಂದು ಕೇಳಿದರು. ನಾನು ಸದ್ಯಕ್ಕೆ ಅದಾವುದೂ ಇಲ್ಲವೆಂದೆ. ಆದರೆ ಹಲವಾರು ವರ್ಷಗಳಿಂದ ನಾನು ಪತ್ರಿಕೆ ಅಥವಾ ನಿಯತಕಾಲಿಕೆಗಳಿಗೆ ಬರೆದು ಪ್ರಕಟಗೊಂಡ ಕ್ರೈಸ್ತಮತಕ್ಕೆ ಸಂಬಂಧಿಸಿದ ಲೇಖನಗಳಿವೆಯೆಂದೂ, ಅವನ್ನು ಒಟ್ಟಾಗಿಸಿ ಒಂದು ಪುಸ್ತಕವನ್ನು ಪ್ರಕಾಶನಗೊಳಿಸ ಬಹುದು ಎಂದೆ. ಅದಕ್ಕೆ ಅವರು ತಕ್ಷಣ ಆಗಲಿ ಎಂದರು.

ಕ್ರೈಸ್ತಮತಕ್ಕೆ ಸಂಬಂಧಿಸಿದ ಲೇಖನಗಳ ಸಂಗ್ರಹವನ್ನು ಅವರಿಗೆ ಅನಂತರ ಕಳುಹಿಸಿದೆ. ಅದಕ್ಕೊಂದು ಸೊಗಸಾದ ಮುಖ ಚಿತ್ರವನ್ನು ಶ್ರೀ ಸುಧಾಕರ ದರ್ಭೆಯ ವರಿಂದ ಅವರು ಮಾಡಿಸಿದರು. ಅದನ್ನು ನೋಡಿದಾಗ ನನಗೊಂದು ಆಲೋಚನೆ ಬಂದಿತು. ಯೇಸುವಿನ ಜನನ ಬಗೆಗೆ ಒಂದಿಷ್ಟು ಭಾಮಿನಿ ಷಟ್ಪದಿಗಳನ್ನು ಬರೆದು

ಕೊಟ್ಟರೆ ಸೇರಿಸುವಿರಾ ಎಂದೆ. ಅದಕ್ಕೂ ಅವರು ಆಗಬಹುದು ಎಂದರು. ಹೀಗೆ ಶುರುವಾಯಿತು ನನ್ನ 'ಯೇಸು ಜೀವನ ಚರಿತೆ'ಯ ಮಹಾಕಾವ್ಯಕ್ಕೆ ಬೀಜಾಂಕುರ. 'ಯೇಸು ಜನನಕಾಂಡ' ಎಂಬ ಶೀರ್ಷಿಕೆಯಲ್ಲಿ 29 ಭಾಮಿನಿ ಷಟ್ಪದಿಗಳನ್ನು ಬರೆದಿದ್ದೆ. ಮುಂದೆ ಶ್ರೀ ಛಾಯಾಪತಿಯವರು ಅದರ ಒಂದು ಪ್ರತಿಯನ್ನು ನಾಡೋಜ ಶ್ರೀ ದೇ.ಜ.ಗೌ.ರವರಿಗೆ ನೀಡಿವಂತೆ ಕಾಣುತ್ತದೆ. ಮುಂದೆ ಶ್ರೀ ದೇಜಗೌ ಸೂಚಿಸಿದ್ದಾರೆ ಎಂದು ಹೇಳಿ ನನ್ನ ಹಳೆಯ ಪರಿಚಯದವರಾದ ಖ್ಯಾತ ಸಾಹಿತಿ ಡಾ. ಮಳಲಿ ವಸಂತ ಕುಮಾರ್‌ರವರು ಅದರ ಒಂದು ಪ್ರತಿಯನ್ನು ನನ್ನಿಂದ ಇಸಿದುಕೊಂಡು ಹೋದರು.

ಅಲ್ಲಿಂದ ಮುಂದೆ ಶ್ರೀ ಟಿ.ಎಸ್. ಛಾಯಾಪತಿಯವರು ನನ್ನ ಬೆನ್ನು ಬಿಡಲಿಲ್ಲ. ನನ್ನ ವಿಜ್ಞಾನ ಲೇಖನಗಳ ಸಂಗ್ರಹವಾದ "ವಿಜ್ಞಾನಃ ವಿಚಾರ-ವಿಶೇಷ"ವನ್ನು ಪ್ರಕಟಿಸಿದರು. ಆ ಪುಸ್ತಕಕ್ಕೆ ಮುಖಪುಟ ವಿನ್ಯಾಸವನ್ನು ಸೂಚಿಸಿದವರು ಪ್ರೊ. ಮಲ್ಲೇಪುರಂ ವೆಂಕಟೇಶ್‌ರವರು. ಅದಕ್ಕಾಗಿ ನಾನು ಅವರಿಗೆ ದೂರವಾಣಿಯಿಂದ ಕೃತಜ್ಞತೆಯನ್ನು ಸಲ್ಲಿಸಿದೆ. ಶ್ರೀಛಾಯಾಪತಿಯವರ ಸಂಸರ್ಗಕ್ಕೆ ಒಳಗಾದರೆ ಆಗುವ ಲಾಭವಿದು. ಅನೇಕ ಪ್ರಸಿದ್ಧ ಪುರುಷರ ಒಡನಾಟ ಬೆಳೆಸಲು ಅವರೊಂದು ಸೇತುವೆಯಂತೆ ಆಗುತ್ತಾರೆ.

ಅನಂತರ ಬರವಣಿಗೆಗೆ ವಿಶ್ರಾಂತಿ ಕೊಡೋಣವೆಂದರೆ ಅವರೆಲ್ಲಿ ಬಿಡಬೇಕು? ಸರಿ, ನನ್ನಿಂದ 'ವಿಜ್ಞಾನ: ವಿಚಾರ - ವಿಸ್ಮಯ' ಬರೆಸಿ, ಸಂಕಲಿಸಿ ತಮ್ಮ ಪ್ರತಿಭಾ ಪ್ರಕಾಶನದಡಿಯಲ್ಲಿ ಪ್ರಕಟಿಸಿದರು. ಸುಮಾರು ನಾನೂರಿಪ್ಪತ್ತು ಪುಟಗಳ ಅರವತ್ತೆರಡು ಲೇಖನಗಳನ್ನು ಒಳಗೊಂಡ ಇದನ್ನು ಪತ್ರಿಕೆಯೊಂದು'....ಇದೊಂದು ಇತಿಹಾಸದ ವಿಶ್ವಕೋಶ' ಎಂದು ಬರೆಯಿತು. ಛಾಯಾಪತಿಯವರ ಸಾಧನಾ ಸಾರ್ಥಕ್ಯವಿರುವುದೇ ತನ್ನೊಂದಿಗೆ ಪುಸ್ತಕವನ್ನು ಮತ್ತು ಅದನ್ನು ಬರೆದವರನ್ನು ಮುಂಗಾಣುವಂತೆ ಮಾಡುವುದು. ನಾನು ಸ್ವಲ್ಪ ಅಂಜಿಕೆಯಿಂದಲೇ 'ವಿವಿಧ - ವಿಚಾರ- ವಿಶೇಷ'ದ ಮಾಮೂಲಿಯ ಛಾಪು ಇರದ ಪುಸ್ತಕದ ಪ್ರಕಟಣೆಯನ್ನು ಕೋರಿದಾಗ ಅದಕ್ಕೂ ಸೈ ಎಂದು ಪ್ರಕಟಿಸಿದರು.

ಮೇಲಿನ ಮೂರು ಪುಸ್ತಕಗಳನ್ನು ಹಾಸನದಲ್ಲಿ ಜರುಗಿದ ಒಂದು ಮನಮುಟ್ಟುವ ಕಾರ್ಯಕ್ರಮದಲ್ಲಿ ಬಿಡುಗಡೆ ಮಾಡಿದ ಖ್ಯಾತ ಸಾಹಿತಿ ನಾ. ಡಿಸೋಜಾರವರು ಈ ಪ್ರಕಾಶಕರ ವೈವಿಧ್ಯಮಯ ಪುಸ್ತಕ ಪ್ರಕಟನೆಗೆ ತೋರಿದ ಧೈರ್ಯವನ್ನು ಶ್ಲಾಘಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ನಾಡೋಜ ಶ್ರೀ ದೇ.ಜ.ಗೌ.ರವರು ಛಾಯಾಪತಿಯವರನ್ನು 'ನಮ್ಮ' ಪ್ರಕಾಶಕ ಎಂದೇ ಸಂಬೋಧಿಸಿ ಆತ್ಮೀಯತೆಯನ್ನು ಮೆರೆದರು.

ನನ್ನ ಕಾಲೇಜಿನ ನನ್ನನ್ನೂ ಒಳಗೊಂಡಂತೆ ಉಪನ್ಯಾಸಕ ವರ್ಗದವರಿಂದ ಪ್ರೌಢಶಾಲಾ ವಿದ್ಯಾರ್ಥಿಗಳಿಗಾಗಿ ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರ, ಗಣಿತಗಳ

ಮೂಲ ಪರಿಕಲ್ಪನೆಗಳು, ಭಾರತದ ಇತಿಹಾಸ ಪುರುಷರು, ಭಾರತದ ಸ್ವಾತಂತ್ರ್ಯ ಹೋರಾಟಗಾರರು, ಶಾಲಾ ಗ್ರಂಥಪಾಲಕರಿಗೊಂದು ಕೈಪಿಡಿ, ಕಂಪ್ಯೂಟರ್ ಬಳಕೆಯ ಕೈ ಪಿಡಿಗಳನ್ನು ಬರೆದು, ಬರೆಸಿ ಕೊಟ್ಟಾಗ ಅದನ್ನು ಅತ್ಯಂತ ಶ್ರದ್ಧೆಯಿಂದ ಮುದ್ರಿಸಿ, ಅನೇಕ ಶಾಲೆಗಳ ವಿದ್ಯಾರ್ಥಿಗಳಿಗೆ ಹಾಗೂ ಶಿಕ್ಷಕರಿಗೆ ನೆರವಾಗುವ ಸಾಹಸ ಮೆರೆದರು. ಅವು ಕಿರುಪುಸ್ತಕಗಳೆಂದು ಅಸಡ್ಡೆ ಮಾಡದೆ ಅವುಗಳ ಶೈಕ್ಷಣಿಕ ಮೌಲ್ಯವನ್ನು ಮನಗಂಡವರು ಅವರು. ಅವರ ವೈವಿಧ್ಯತೆಯ ಸರಮಾಲೆಗೆ ನಾನು 'ವಿಶೇಷ ವಿಜ್ಞಾನಿ: ಗೆಲಿಲಿಯೋ', 'ಅಳತೆಯ ಮೂಲಮಾನಗಳು', 'Extraordinary Use of English' ಅನ್ನೂ ಸೇರಿಸಿದಾಗ ಅವನ್ನೂ ಶ್ರದ್ಧೆಯಿಂದ ಪ್ರಕಟಿಸಿದರು.

ನನ್ನೊಬ್ಬನಿಂದಲೇ ಇವಿಷ್ಟು ಕೆಲಸಗಳನ್ನು ಸಾಹಸ ಸಂತೋಷದಿಂದ ಮಾಡಿಸಿದ ಇವರು ಇತರ ಹೆಸರಾಂತ ಕನ್ನಡದ ಲೇಖಕ ಸಾಹಿತಿಗಳನ್ನು ಬಿಟ್ಟಾರೆಯೇ? ಅವರ ಪ್ರಕಟಣೆಯ ಸಾಧನೆಯ ಹಾಸುಬೀಸಿನಲ್ಲಿ ಕನ್ನಡದ ಬಹುತೇಕ ಎಲ್ಲಾ ಅಗ್ರಗಣ್ಯ ಬರಹಗಾರರು ಸೇರಿದ್ದು ಅವರ ಪ್ರಕಟಣ ಶ್ರದ್ಧೆಗೊಂದು ಉದಾಹರಣೆ. ಸೃಜನಾತ್ಮಕ, ಸೃಜನೇತರ, ವಿಮರ್ಶೆ, ಅನುವಾದ, ಹೀಗೆ ಎಲ್ಲಾ ಪ್ರಕಾರಗಳನ್ನು ತಮ್ಮ ಪ್ರಕಾಶನದ ತೆಕ್ಕೆಗೆ ಅನಾಯಸವಾಗಿ ಸೇರಿಸಿಕೊಂಡವರವರು.

ತಳುಕಿನ ಸಾಹಿತಿಗಳ ಕುಟುಂಬದ ಕನ್ನಡ ಭಾಷಾ ಕೊಡುಗೆ ಅಸಾಮಾನ್ಯವಾದುದು. ಅದನ್ನು ಪ್ರಕಟಣ ರಂಗದಲ್ಲಿ ಅಪ್ರತಿಹತವಾಗಿ ಮುಂದುವರೆಸಿದವರಿವರು. 'ಸಾವಿರ ಪುಸ್ತಕಗಳ' ಸರದಾರ ಎಂದು ಕರೆಸಿಕೊಂಡದ್ದು ಹಳೆಯ ಮಾತು. ಈಗಾಗಲೇ 1600 ಪುಸ್ತಕ ಪ್ರಕಾಶನದ ಕಿರೀಟ ಧರಿಸಿದವರು ಅವರು. ಅದು 2000ವನ್ನು ಮುಟ್ಟಲಿ ಎಂದಾಶಿಸುವುದು ಸಹಜವೇ ತಾನೆ. ಬೇರೆಯುವರಿಂದ ಬರೆಸುವುದರ ಜೊತೆಗೆ ಹುಟ್ಟುಗುಣದಿಂದಾಗಿ ಇಪ್ಪತ್ತೈದು ಕೃತಿಗಳ ಲೇಖಕರೂ ಹೌದು.

ತಂದೆ ಕೀರ್ತಿಶೇಷ ಶ್ರೀ ತ.ಸು. ಶಾಮರಾಯರ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯು ಛಾಯಾಪತಿಯವರು ಪಡೆದ ಪಿತ್ರಾರ್ಜಿತ ಆಸ್ತಿ. ಎಂ.ಕಾಂ. ಸ್ನಾತಕೋತ್ತರ ಪದವೀಧರರಾಗಿದ್ದರೂ ಸಹ, ಈತ ಸಾಹಿತ್ಯ ಸಂವರ್ಧನೆ ಕಂಕಣಬದ್ಧ ರಾದವರು. ಪ್ರಕಾಶನದ ವಾಣಿಜ್ಯ, ವಿತರಣೆ, ಆಧುನಿಕತೆ, ಪ್ರಚಾರ, ಪ್ರಸಾರಗಳೆಲ್ಲ ದರಲ್ಲಿಯೂ ಕಾಲಕ್ಕೆ ತಕ್ಕಂತೆ ಹೊಂದಾಣಿಕೆಯ ಚಾಕಚಕ್ಯತೆ ತೋರಿದರೂ, ಸರಳ, ಸಜ್ಜನಿಕೆಯನ್ನು ಬಿಡದ ಛಲಗಾರ. ಕನ್ನಡ ಪ್ರಕಾಶನ ದಿಗಂತದ ಛಾಯಾರಹಿತ ಸೂರ್ಯ ಅವರು.

ತಂದೆ ಕೊಟ್ಟು ಹೋದ ಪ್ರಕಾಶನದ ಕುದುರೆಯನ್ನೇರಿ ದೌಡಾಯಿಸಿದ ಶ್ರೀ ಟಿ.ಎಸ್. ಛಾಯಾಪತಿಯವರು ಶೂರರೂ ಹೌದು, ಧೀರರೂ ಹೌದು.

'ಕೃತಂ ಸ್ಮರ, ಕೃತೋ ಸ್ಮರ'



## ಕನ್ನಡ ಸಾಹಿತ್ಯ ಪೋಷಕ ಟಿ.ಎಸ್. ಛಾಯಾಪತಿ

ಕರ್ನಾಟಕದಲ್ಲಿ ಸಾಕಷ್ಟು ಪ್ರಕಾಶನ ಸಂಸ್ಥೆಗಳಿವೆ. ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಈ ಪ್ರಕಾಶನ ಸಂಸ್ಥೆಗಳ ಪಾತ್ರ ಮಹತ್ವದ್ದು. ಮೈಸೂರು ನಗರದಲ್ಲಿರುವ 'ತ.ವೆಂ. ಸ್ಮಾರಕ ಗ್ರಂಥಮಾಲೆ'ಯು ಈ ನಿಟ್ಟಿನಲ್ಲಿ ಪ್ರಮುಖ ಪಾತ್ರ ವಹಿಸಿದೆ. ಈ ಸಂಸ್ಥೆಯು ಆರಂಭವಾಗಿದ್ದು ಕ್ರಿ.ಶ. 1950ರಲ್ಲಿ. ಸ್ಥಾಪಕರು ಶ್ರೀಯುತ ತ.ಸು. ಶಾಮರಾಯರು. ಈ ಪ್ರಕಾಶನ ಸಂಸ್ಥೆಯ ಮೂಲಕ ಹಲವಾರು ಶ್ರೇಷ್ಠ ಗ್ರಂಥಗಳು ಪ್ರಕಟವಾಗಿವೆ. ಕನ್ನಡ ಸಾಹಿತ್ಯ ಲೋಕಕ್ಕೆ ಈ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಕೊಡುಗೆ ಅನುಪಮವಾದುದು. ಈ ಪ್ರಕಾಶನದ ಮೂಲಕ ಈವರೆಗೆ ಒಂದು ಸಾವಿರಕ್ಕೂ ಹೆಚ್ಚು ಗ್ರಂಥಗಳು ಪ್ರಕಟವಾಗಿವೆ. ಇದೊಂದು ವಿಶೇಷ.

ಶ್ರೀಯುತ ಟಿ.ಎಸ್. ಛಾಯಾಪತಿ ಯವರು 1968ರಲ್ಲಿ ಈ ಸಂಸ್ಥೆಯ ಪ್ರಕಾಶಕರಾಗಿ ಕಾರ್ಯಾರಂಭ ಮಾಡಿದರು. ಇವರ ಧ್ಯೇಯ ಸಾಧನೆಗೆ ಇವರ ಧೈರ್ಯವೇ ಕಾರಣ. ಪುಸ್ತಕ ಪ್ರಕಟಣೆಯ ಕೆಲಸ ತುಂಬಾ ಕಷ್ಟಕರವಾದದ್ದು. ಅದರಲ್ಲಿಯೂ ಟಿ.ವಿ. ಯುಗದಲ್ಲಿ ಪುಸ್ತಕ ಪ್ರಕಾಶನವನ್ನು ಯಶಸ್ವಿಯಾಗಿ ನಡೆಸುವುದು ಒಂದು ಮಹಾಸಾಹಸವೇ ಸರಿ. ಈ ಸಾಹಸ ಮನೋಭಾವ, ಕೆಚ್ಚೆದೆ, ಶ್ರದ್ಧೆ, ಚಾಕಚಕ್ಯತೆ ಮೊದಲಾದ ಗುಣಗಳು ಛಾಯಾಪತಿಯವರಲ್ಲಿದೆ. ಹೀಗಾಗಿ ಇವರು ಮಹಾಮಹಾ ಪ್ರಕಾಶಕರ ಸಾಲಿನಲ್ಲಿ ನಿಲ್ಲುತ್ತಾರೆ. ಆ ಮೂಲಕ ಇವರು ಕನ್ನಡ ಸಾಹಿತ್ಯ ಪೋಷಕರೂ ಆಗಿದ್ದಾರೆ.

ಛಾಯಾಪತಿಯವರ ವಿಚಾರವನ್ನು ಹೇಳುವಾಗ ತ.ವೆಂ. ಸ್ಮಾರಕ ಗ್ರಂಥಮಾಲೆಯ ವಿಚಾರ ಹೇಳಲೇಬೇಕು.

ಪ್ರೊ || ಟಿ.ಎಸ್. ವೆಂಕಣ್ಣಯ್ಯನವರು ಮೈಸೂರು ವಿಶ್ವವಿದ್ಯಾನಿಲಯದ ಪ್ರಪ್ರಥಮ ಕನ್ನಡ ಪ್ರಾಧ್ಯಾಪಕರಾಗಿದ್ದವರು. ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅವರ ಕೊಡುಗೆ ಅಪಾರ. ಅವರು ಹೊಸ ಗನ್ನಡದ ಹೊಂಗನಸನ್ನು ಕಂಡವರು. ರಾಷ್ಟ್ರಕವಿ ಕುವೆಂಪು ಅವರ ಗುರುವರ್ಯರಾಗಿದ್ದ ವೆಂಕಣ್ಣಯ್ಯನವರು 'ಶ್ರೀ ರಾಮಾಯಣ ದರ್ಶನಂ'

ತಾ. ಶ್ರೀ ನಾಗರಾಜರಾಯ

ಮಹಾಕಾವ್ಯವನ್ನು ಕುವೆಂಪು ಅವರು ರಚಿಸಲು ಸ್ಫೂರ್ತಿದಾತರು ಹೌದು. ವೆಂಕಣ್ಣಯ್ಯನವರು ಕ್ರಿ.ಶ. 1939ರಲ್ಲಿ ನಿಧನರಾದರು. ಅವರ ಹೆಸರಿನಲ್ಲಿಯೇ ಅವರ ಸೋದರರೂ, ಶಿಷ್ಯರೂ ಆದ ತ.ಸು. ಶಾಮರಾಯರು 1950ರಲ್ಲಿ ತ.ವೆಂ. ಸ್ಮಾರಕ ಗ್ರಂಥಮಾಲೆಯನ್ನು ಆರಂಭಿಸಿದ್ದು. ಈ ಪ್ರಕಾಶನದ ಮುಖ್ಯ ಉದ್ದೇಶ ವೆಂಕಣ್ಣಯ್ಯ ನವರ ಹೆಸರನ್ನು ಶಾಶ್ವತವಾಗಿ ಉಳಿಸುವುದು ಹಾಗೂ ಯುವ ಸಾಹಿತಿಗಳಿಗೆ ಪ್ರೋತ್ಸಾಹ ನೀಡುವುದು. ಶಾಮರಾಯರು ಈ ಪ್ರಕಾಶನದಲ್ಲಿ ಮೊದಲು ಪ್ರಕಟಿಸಿದ ಕೃತಿ ಎಂದರೆ ಜಿ.ಎಸ್. ಶಿವರುದ್ರಪ್ಪನವರ ಕವನ ಸಂಗ್ರಹ 'ಸಾಮಗಾನ'. ಶಿವರುದ್ರಪ್ಪನವರ ಸಾಹಿತ್ಯ ಸೇವೆಯೂ ಮಹತ್ವದ್ದು. ಅವರು ರಾಷ್ಟ್ರಕವಿ ಎಂದು ಖ್ಯಾತಿ ಪಡೆದವರು.

ಪ್ರೊ. ಶಾಮರಾಯರು ತ.ವೆಂ. ಸ್ಮಾರಕ ಗ್ರಂಥಮಾಲೆಯ ಮೂಲಕ 'ಕನ್ನಡ ನಾಟಕ', 'ಕನ್ನಡ ಸಾಹಿತ್ಯ ಚರಿತ್ರೆ', 'ಭರತೇಶ ವೈಭವ', 'ಸವಿನೆನಪು', 'ಶಿವಶರಣ ಕಥಾರತ್ನಕೋಶ' ಮೊದಲಾದ ಉತ್ತಮ ಮೌಲ್ಯಿತ ಕೃತಿಗಳನ್ನು ಪ್ರಕಟಿಸಿದರು.

1968ರಲ್ಲಿ ಶಾಮರಾಯರು ಪ್ರಕಾಶನದ ಜವಾಬ್ದಾರಿಯನ್ನು ತಮ್ಮ ದ್ವಿತೀಯ ಪುತ್ರ ಟಿ.ಎಸ್. ಛಾಯಾಪತಿಗೆ ವಹಿಸಿಕೊಟ್ಟರು. ಆಗ ತಾನೇ ಛಾಯಾಪತಿಯವರು ವಾಣಿಜ್ಯ ಶಾಸ್ತ್ರದ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದರು. ಮನಸ್ಸು ಮಾಡಿದ್ದರೆ ಬ್ಯಾಂಕ್‌ನಲ್ಲಿ ಉದ್ಯೋಗ ಮಾಡಬಹುದಾಗಿತ್ತು. ಆಡಿಟರ್, ಇನ್‌ಕಂಟ್ಯಾಕ್ಸ್ ಕನ್ಸಲ್‌ಟೆಂಟ್ ಅಥವಾ ಯಾವುದಾದರೂ ಲಾಭ ದಾಯಕ ಉದ್ಯೋಗ ಕೈಗೊಳ್ಳಬಹು ದಾಗಿತ್ತು. ಆದರೆ ಅವರು ಪುಸ್ತಕ ಪ್ರಕಾಶನದ ಮೂಲಕ ಕನ್ನಡ ಸಾಹಿತ್ಯ ಸರಸ್ವತಿಯ ಸೇವೆ ಮಾಡಲು ಮುಂದಾದರು. ಆ ಕಾರ್ಯವನ್ನು ದಕ್ಷತೆಯಿಂದಲೇ ಮುಂದುವರೆಸು ತ್ತಿದ್ದಾರೆ. ಅಷ್ಟೇ ಅಲ್ಲ ಒಂದು ಸಾವಿರಕ್ಕೂ ಹೆಚ್ಚು ಗ್ರಂಥಗಳನ್ನು ಪ್ರಕಟಿಸಿದ್ದಾರೆ.

ಒಂದೆಡೆ ಛಾಯಾಪತಿಯವರು ಪತ್ರಿಕೆಯೊಂದಕ್ಕೆ (ಸಂದರ್ಶನದ ಸಂದರ್ಭ) ಕೊಟ್ಟ ಹೇಳಿಕೆ ಹೀಗಿದೆ.

'ತಂದೆಯವರ ಆದರ್ಶಕ್ಕೆ ಚ್ಯುತಿ ಬರದಂತೆ ಸದಭಿರುಚಿಯ ಸಾಹಿತ್ಯ ಗ್ರಂಥಗಳನ್ನೇ ಪ್ರಕಟಿಸುತ್ತ ಬಂದಿದ್ದೇನೆ. ಗ್ರಂಥಮಾಲೆ ಆರಂಭವಾಗಿ ಆರು ದಶಕಗಳೇ ಆಗಿವೆ. ಈ ಅವಧಿಯಲ್ಲಿ ಒಂದು ಸಹಸ್ರಕ್ಕೂ ಮಿಗಿಲಾಗಿ ಪುಸ್ತಕಗಳು ಪ್ರಕಟಗೊಂಡಿವೆ. ಟಿ.ಎಸ್. ವೆಂಕಣ್ಣಯ್ಯನವರು, ಡಿ.ಎಲ್. ನರಸಿಂಹಾಚಾರ್, ತ.ಸು. ಶಾಮರಾಯ, ನಾಡೋಜ ದೇ.ಜವರೇಗೌಡ, ಪ್ರೊ. ಹೆಚ್.ಎಸ್.ಕೆ., ಡಾ|| ಹಾ.ಮಾ. ನಾಯಕ್, ರಾಷ್ಟ್ರಕವಿ ಡಾ|| ಜಿ.ಎಸ್. ಶಿವರುದ್ರಪ್ಪ, ಚನ್ನವೀರಕಣವಿ, ಟಿ.ವಿ. ವೆಂಕಟಾಚಲಶಾಸ್ತ್ರಿ, ಕವಿ ನಿಸಾರ್ ಅಹಮದ್, ಚಂಪಾ, ಮತ್ತೂರು ಕೃಷ್ಣಮೂರ್ತಿ - ಹೀಗೆ ಕನ್ನಡ ನಾಡಿನ, ಪ್ರಮುಖ ಸಾಹಿತಿಗಳ ಕೃತಿಗಳನ್ನು ನಮ್ಮ ಗ್ರಂಥ ಮಾಲೆಯಲ್ಲಿ ಪ್ರಕಟಿಸಿದ್ದೇವೆ. ಪುಸ್ತಕೋದ್ಯಮವನ್ನು ಕಾಯಕಕೃಷಿ, ಅದೊಂದು ತಪಸ್ಸು ಎಂಬ ಭಾವನೆಯಲ್ಲೇ

ಮುಂದುವರೆಸಿಕೊಂಡು ಬಂದಿದ್ದೇವೆ' ಎಂದು. ಅವರು ಹೇಳಿರುವುದು ಅವರ ಉನ್ನತ ಮನೋಭಾವವನ್ನು ಸೂಚಿಸುತ್ತದೆ.

ತ.ವೆಂ. ಸ್ಮಾರಕ ಗ್ರಂಥಮಾಲೆಯಲ್ಲಿ ಪ್ರಕಟಗೊಂಡಿರುವ ಹಲವಾರು ಗ್ರಂಥಗಳಲ್ಲಿ ಡಾ. ತ.ಸು. ಶಾಮರಾಯರು ಬರೆದಿರುವ 'ಮೂರು ತಲೆಮಾರು' ಪುಸ್ತಕವೂ ಒಂದಾಗಿದೆ. ಈ ಗ್ರಂಥಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯು ಲಭಿಸಿದೆ.

ಈ ಪುಸ್ತಕದಲ್ಲಿ ಮೂವರು ಮಹಾನೀಯರ ಜೀವನ, ಸಾಧನೆ, ಸಾಹಿತ್ಯ ಸೇವೆಗಳನ್ನು ಕುರಿತ ವಿಚಾರಗಳಿವೆ. ವೆಂಕಣ್ಣಯ್ಯ -ತಳುಕಿನ ಸುಬ್ಬಣ್ಣ ಪ್ರೊ. ಟಿ.ಎಸ್. ವೆಂಕಣ್ಣಯ್ಯ ಇವರೇ ಮೂರು ತಲೆಮಾರು ಕೃತಿಯ ಮೂವರು ನಾಯಕರುಗಳು.

ವೆಂಕಣ್ಣಯ್ಯ (ಇವರು ಶಾಮರಾಯರ ಅಜ್ಜನವರು) ನವರನ್ನು ಕಂಡವರು ಯಾರೂ ಈಗ ಇಲ್ಲ. ಸ್ವತಃ ಶಾಮರಾಯರೇ ಅವರನ್ನು ನೋಡಿರಲಿಲ್ಲ. ಈ ವೆಂಕಣ್ಣಯ್ಯ ನವರ ಪುತ್ರರಾದ ಸುಬ್ಬಣ್ಣನವರನ್ನು ಹಾಗೂ ಇವರ ಪುತ್ರ ಟಿ.ಎಸ್. ವೆಂಕಣ್ಣಯ್ಯನವರನ್ನೂ ಪ್ರತ್ಯಕ್ಷವಾಗಿ ಕಂಡಿದ್ದವರು ಈಗಲೂ ಕೆಲವರಿದ್ದಾರೆ.

ತ.ಸು. ಶಾಮರಾಯರನ್ನು ಈ ತಲೆಮಾರಿನ ನಾಲ್ಕನೆಯವರು ಎಂದು ಹೇಳಬಹುದಾದರೆ, ಟಿ.ಎಸ್. ಛಾಯಾಪತಿಯವರು ಐದನೆಯ ತಲೆಮಾರಿನವರಾಗುತ್ತಾರೆ.

ಛಾಯಾಪತಿಯವರದ್ದು ಅಪಾರವಾದ ಸಾಧನೆ. ಕನ್ನಡ ಕ್ರಾಂತಿ ದಳದ ನಾಗಲಿಂಗ ಸ್ವಾಮಿಯವರು ಛಾಯಾಪತಿಯನ್ನು 'ಕನ್ನಡ ಪ್ರಕಾಶನ ರತ್ನ' ಎಂದು ಕರೆದಿದ್ದಾರೆ. ಅಷ್ಟೇ ಅಲ್ಲದೆ ಛಾಯಾಪತಿಯವರನ್ನು 'ಸೃಜನಶೀಲ ಪ್ರಕಾಶಕ', 'ಕನ್ನಡ ಪುಸ್ತಕ ಪ್ರಕಾಶನದ ಮೇರು' ಎಂದು ಕರೆಯಲಾಗಿದೆ. 1999ರಲ್ಲಿ ಛಾಯಾಪತಿಯವರನ್ನು ರಾಜ್ಯ ಸರಕಾರವು 'ಅತ್ಯುತ್ತಮ ಪ್ರಕಾಶಕ' ಎಂಬ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

ಛಾಯಾಪತಿಯವರು ಪ್ರಕಟಿಸಿರುವ ಪುಸ್ತಕಗಳಲ್ಲಿ 'ಸ್ವಸ್ತಿ' ಒಂದು ಅಮೂಲ್ಯ ಕೃತಿ. ಇದು ಶಾಮರಾಯರಿಗೆ ಅರ್ಪಿಸಿದ ಅಭಿನಂದನಾಗ್ರಂಥ. ಈ ಕೃತಿಯು ಸರ್ವರ ಮೆಚ್ಚುಗೆಗೆ ಪಾತ್ರವಾಯಿತು. ಕನ್ನಡ ಸಾಹಿತ್ಯ ಭಂಡಾರಕ್ಕೆ ಅದೊಂದು ಅಪೂರ್ವ ಕೊಡುಗೆ ಎಂದು ಓದುಗರಿಂದ ಹೇಳಿಸಿಕೊಂಡಿತು. 'ಅ ಅಭಿನಂದನಾ ಗ್ರಂಥ ನಿಜವಾಗಿಯೂ ಒಂದು ಅಪೂರ್ವ ಗ್ರಂಥ' ಎಂದು ಖ್ಯಾತ ಸಾಹಿತಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಹೇಳಿದ್ದಾರೆ.

'ಕನ್ನಡದ ಸಂಭಾವನ ಗ್ರಂಥಗಳ ಶ್ರೇಣಿಯಲ್ಲಿ ಇದೊಂದು ಶಿಖರ'ಎಂದು ಸಾಹಿತಿ ಹಂ.ಪ. ನಾಗರಾಜಯ್ಯನವರು ಹೇಳಿದ್ದಾರೆ.

'ಸ್ವಸ್ತಿ -ಗ್ರಂಥವು ಒಂದು ಬಗೆಯಬಾಗಿನ. ಈ ಬಾಗಿನವನ್ನು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಶ್ರೀ ಛಾಯಪತಿಯವರು ಧೈರ್ಯದಿಂದ ಪ್ರಕಟಿಸಿ ಧನ್ಯರಾಗಿ

ದ್ದಾರೆ' ಎಂದು ಖ್ಯಾತ ಕನ್ನಡದ ಕಾದಂಬರಿಗಾರ ಚದುರಂಗ ಅವರು ಹೇಳಿದ್ದಾರೆ.

'ಇದು ಛಾಯಾಪತಿಯವರ ಸುಂದರ ಪ್ರಕಟಣೆ' ಎಂದು ಶ್ರೇಷ್ಠ ಕಾದಂಬರಿಕಾರ ತ.ರಾ.ಸು. ಅವರು ಹೇಳಿದ್ದಾರೆ. 'ಸ್ವಸ್ತಿ' ಗ್ರಂಥದ ಹಿರಿಮೆಯನ್ನು ರಾಷ್ಟ್ರಕವಿ ಕುವೆಂಪು ಅವರು, 'ಈ ಗ್ರಂಥ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಗೆ ವಿದ್ವದ್ಪೂರ್ಣವಾದ ಮತ್ತು ಮಹತ್ವದ ಕೊಡುಗೆಯಾಗುತ್ತದೆ' ಎಂದು ಹೇಳಿದ್ದಾರೆ.

ಛಾಯಾಪತಿಯವರು ಪ್ರಕಟಿಸಿರುವ ಪುಸ್ತಕಗಳಲ್ಲಿ ಒಂದು ಸಾವಿರ ಪುಟಗಳಿಂದ ಕೂಡಿದ ಐದು ಗ್ರಂಥಗಳು ಸೇರಿವೆ. ಇದೊಂದು ಬೃಹತ್ಸಾಧನೆ. ಈ ಪ್ರಕಾಶನದಿಂದ ಮೂಡಿ ಬಂದ ಕೃತಿಗಳಲ್ಲಿ ಕಾವ್ಯ, ಕಥೆ, ನಾಟಕ, ಪ್ರಬಂಧ, ವಿಮರ್ಶೆ, ಜೀವನಚರಿತ್ರೆ, ಅಂಕಣಸಾಹಿತ್ಯ, ಪ್ರವಾಸಕಥನ, ಸಂಶೋಧನಾತ್ಮಕ ಕೃತಿಗಳು, ಅಭಿನಂದನಗ್ರಂಥಗಳು ಇರುವುದು ಗಮನಾರ್ಹ. ವೈವಿಧ್ಯಮಯ ಸಾಹಿತ್ಯ ಕೃತಿಗಳನ್ನು ಪ್ರಕಟಿಸಿರುವ, ಪ್ರಕಟಿಸುತ್ತಿರುವ ಛಾಯಾಪತಿಯವರು ಸಾಹಿತ್ಯ ಪೋಷಕರೂ ಆಗಿ ವಿಜೃಂಭಿಸಿದ್ದಾರೆ. ಈ ಪ್ರಕಾಶನದ ಮೂಲಕ ಕೃತಿಗಳು ಹಾಗೂ ಕೃತಿಕಾರರು ಓದುಗರ ಹೃನ್ಮನಗಳಲ್ಲಿ ಶಾಶ್ವತವಾಗಿ ಉಳಿಯುತ್ತಾರೆ.

ಕನ್ನಡದ ಖ್ಯಾತ ಕವಿ ಚೆನ್ನವೀರಕಣವಿಯವರ ಹದಿನಾರು ಕವನ ಸಂಕಲನಗಳನ್ನು ಮರುಮುದ್ರಣ ಮಾಡಿ, ಅವುಗಳನ್ನು ಏಕ ಕಾಲದಲ್ಲಿ ಬಿಡುಗಡೆ ಮಾಡಿದ ಹೆಗ್ಗಳಿಕೆ ಛಾಯಾಪತಿಯವರದ್ದು. ಖ್ಯಾತ ಲೇಖಕ ಹೆಚ್ಚೆಸ್ಕೆ (ಹೆಚ್.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್) ಯವರ ಅಂಕಣ ಸಾಹಿತ್ಯ ಕೃತಿಗಳಾದ 'ಬೆಳಕು ಚೆಲ್ಲಿದ ಬದುಕು', 'ಮಾನ್ಯರು -ಸಾಮಾನ್ಯರು' ಹಾಗೂ 'ಗಗನ ಚುಕ್ಕಿ ಭರಚುಕ್ಕಿ' ಪುಸ್ತಕಗಳನ್ನು ಪ್ರಕಟಿಸಿರುವ ಕೀರ್ತಿ ಛಾಯಾಪತಿಯವರದ್ದು. ಈ ಮೂರು ಕೃತಿಗಳು ಸಾವಿರ ಪುಟಗಳಿಂದ ಕೂಡಿದ ಅಮೂಲ್ಯ ಕೃತಿಗಳು.

ಡಾ. ಹಾ.ಮಾ. ನಾಯಕ್ ಅವರ ಪ್ರಣಯ ಪದಾವಳಿ' ಛಾಯಾಪತಿಯವರು ಪ್ರಕಟಿಸಿರುವ ಮತ್ತೊಂದು ಉತ್ತಮ ಕೃತಿ. ಇದರ ಬಗ್ಗೆ ಅಪಾರ ಮೆಚ್ಚುಗೆಯು ಮೂಡಿ ಬಂದಿದೆ. ಕವಿ ಕಣವಿಯವರು 'ಈ ಕೃತಿಯನ್ನು ಕೈತೊಳೆದು ಮುಟ್ಟಬೇಕು' ಎಂದು ಪ್ರಶಂಸೆ ಮಾಡಿರುವುದು ಒಂದು ಹೆಗ್ಗಳಿಕೆ. ತ.ವೆಂ. ಸ್ಮಾರಕ ಗ್ರಂಥಮಾಲೆಯಲ್ಲಿ ಪ್ರಕಟಗೊಂಡ ಕೆಲವಾರು ಕೃತಿಗಳು ಹತ್ತಾರು ಮರು ಮುದ್ರಣಗಳನ್ನು ಕಂಡಿವೆ. ಅಪಾರ ಬೇಡಿಕೆಗೆ ಪಾತ್ರವಾಗಿವೆ.

ಛಾಯಾಪತಿಯವರ ತಂದೆ ತ.ಸು. ಶಾಮರಾಯರು ಮಹಾನ್ ವ್ಯಕ್ತಿತ್ವ ಉಳ್ಳ ಸಾಧಕರು. ಅವರು ಉತ್ತಮ ಲೇಖಕರು, ಉತ್ತಮ ಶಿಕ್ಷಕರೂ, ಉತ್ತಮ ವಿಮರ್ಶಕರೂ, ಉತ್ತಮ ಬೋಧಕರೂ ಸಾಧಕರೂ ಆಗಿದ್ದರು. ಕನ್ನಡ ಸಾಹಿತ್ಯ ಲೋಕಕ್ಕೆ ಅವರ ಕೊಡುಗೆಯು ಅಮೂಲ್ಯವಾದದ್ದು. ಅವರು ತೊಂಭತ್ನಾಲ್ಕು

ವರ್ಷಗಳ ಅಮೂಲ್ಯ ಜೀವನ ನಡೆಸಿದವರು. ಶಾಮರಾಯರ ಜೀವನದ ಕೆಲವಾರು ಮಹತ್ವದ ಘಟನೆಗಳನ್ನು ಒಳಗೊಂಡ ಒಂದು ಕೃತಿಯಾದ 'ಅಣ್ಣನ ಸ್ಮರಣೆ'ಯನ್ನು ಛಾಯಾಪತಿಯವರು ಬರೆದು ಪ್ರಕಟಿಸಿದ್ದಾರೆ. ಈ ಪುಸ್ತಕದಲ್ಲಿ ದಿ. ಟಿ.ಎಸ್. ವೆಂಕಣ್ಣಯ್ಯನವರ, ರಾಷ್ಟ್ರಕವಿ ಕುವೆಂಪು ಅವರ, ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪನವರ, ಡಾ. ಪ್ರಭುಶಂಕರ್ ಅವರ, ಮುಖ್ಯ ಮಂತ್ರಿಗಳಾಗಿದ್ದ ಬಂಗಾರಪ್ಪನವರ, ಮಹಾರಾಜ ಕಾಲೇಜಿನ ಪ್ರಾಂಶುಪಾಲರಾಗಿದ್ದ ಸಿ.ಡಿ. ನರಸಿಂಹಯ್ಯನವರ, ಹೀಗೆ ಕೆಲವಾರು ಮಹನೀಯರಿಗೆ ಸಂಬಂಧಪಟ್ಟ, ಒಂದೊಂದು ಘಟನೆ ಚಿತ್ರಿತವಾಗಿದೆ.

ಛಾಯಾಪತಿಯವರ ಬಗ್ಗೆ ಬರೆಯುತ್ತಾ ಹೋದರೆ ಒಂದು ಉದ್ಗ್ರಂಥವೇ ಆಗಬಹುದು. ಛಾಯಾಪತಿಯವರನ್ನು ನಾನು ಸುಮಾರು ಐವತ್ತು ವರ್ಷಗಳಿಂದಲೂ ನೋಡುತ್ತಿದ್ದೇನೆ. ಅವರ ಸ್ನೇಹ ಮನೋಭಾವ, ಕಾರ್ಯೋತ್ಸಾಹ, ಸಹೃದಯತೆ, ಮೊದಲಾದ ಸದ್ಗುಣಗಳು ನನ್ನ ಹೃನ್ಮನಗಳನ್ನು ಸೂರೆ ಗೊಂಡಿವೆ. ಅವರಿಗೆ ಸದಾ ಸ್ಫೂರ್ತಿದಾತೆಯಾಗಿರುವ ಅವರ ಅರ್ಧಾಂಗಿ ಶ್ರೀಮತಿ ಪುಷ್ಪ ಅವರೂ ಆದರ್ಶ ವನಿತೆ, ಪ್ರಕಾಶನದ ಕೆಲಸದಲ್ಲಿ ಅವರ ಸಹಕಾರ ಸದಾ ಇರುತ್ತದೆ.

ಪ್ರಕಾಶಕರು, ಸಾಹಿತ್ಯ ಪೋಷಕರೂ ಆಗಿರುವಂತೆ ಛಾಯಾಪತಿಯವರು ಸ್ವಯಂ ಲೇಖಕರೂ ಆಗಿದ್ದಾರೆ. ಅವರು ಸುಮಾರು ಇಪ್ಪತ್ತೈದು ಪುಸ್ತಕಗಳನ್ನು ಬರೆದಿದ್ದಾರೆ. ಪುಸ್ತಕ ಪ್ರಕಟಣೆಯ ಆಗು ಹೋಗುಗಳ ಬಗ್ಗೆ ಆಕಾಶವಾಣಿಯಲ್ಲಿ ಅವರ ಭಾಷಣ ಮೂಡಿ ಬಂದಿದೆ. ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪ್ರಕಾಶನೋದ್ಯಮದ ವಿಚಾರವಾಗಿ ವಿಷಯ ಮಂಡನೆ ಮಾಡಿದ್ದಾರೆ. ಹೀಗಾಗಿ ಅವರ ಬಾಳಿನಲ್ಲಿ ಕನ್ನಡ ಸಾಹಿತ್ಯವು ಹಾಸುಹೊಕ್ಕಾಗಿ ಬಂದಿದೆ. ಅವರ ಸಾಹಿತ್ಯ ಸೇವೆ ನಿರಂತರವಾಗಿ ಸಾಗಲಿ. ಭಗವಂತ ಅವರಿಗೆ ಆಯುರಾರೋಗ್ಯ ಭಾಗ್ಯಗಳನ್ನು ಚಿರಕಾಲ ನೀಡಲಿ. ನಾವೆಲ್ಲಾ ಈ ಸಾಹಿತ್ಯ ಸೇವೆಯಲ್ಲಿ ಅವರೊಡನೆ ಕೈ ಜೋಡಿಸೋಣ.

ನಾವೆಲ್ಲರೊಡಗೂಡಿ ಒಡನಾಡಿ ಕಲೆತು
ಕನ್ನಡದ ಸೇವೆಯಲಿ ನಮ್ಮ ಮೈಮರೆತು
ಕುಂದುಕೊರತೆಗಳೊಂದೂ ಕಿಂಬಿಲ್ಲರಂತೆ
ನಮ್ಮ ಸಖ್ಯದ ಮೊಗ್ಗು ಬಿರಿದವಳುವಂತೆ
ದೇವಿ ಕರುಣಿಸಲಿವರವ| ಕನ್ನಡದ
ತಾಯಿ ಕೈಕೊಳಲಿ ಫಲವ||
(ಪೂಜ್ಯ ತೀ.ನಂ.ಶ್ರೀ ಯವರ ಪದ್ಯವನ್ನು ನೆನೆಯೋಣ.)

ಜೈ ಕರ್ನಾಟಕ ಮಾತೆ

# ಸಾಹಿತ್ಯರಥದ ಸಾರಥಿ

ರಾಷ್ಟ್ರಕವಿ ಕುವೆಂಪು ವಿರಚಿತ 'ರಾಮಾಯಣ ದರ್ಶನಂ' ಮಹಾಕಾವ್ಯವನ್ನು ಅಂಕಿತವನ್ನಾಗಿ ಪಡೆದ 'ಮಹಾಭಾಗ್ಯವಂತರು' ತಳುಕಿನ ವೆಂಕಣ್ಣಯ್ಯನವರು. ಇಂತಹ ಪುಣ್ಯ ಪರಂಪರೆಗೆ ಸೇರಿದ 'ಭ್ರಾತೃ ಭಕ್ತಿ'ಯಿಂದ ಮೆರೆದವರು ಶ್ರೀ ತ.ಸು. ಶಾಮರಾಯರು. ಅಣ್ಣನ ಪುಣ್ಯ ಸ್ಮರಣೆಗಾಗಿ ಸ್ಥಾಪಿಸಿದ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ' ಇಂದು ತನ್ನದೇ ಆದ ವೈಶಿಷ್ಟ್ಯತೆಯನ್ನು ಪಡೆದಿದೆ. ಈ ಮಾಲೆಯಲ್ಲಿ ಅರಳಿದ ಅನೇಕ ಪುಷ್ಪಗಳು, ನಾಡಿನ ಅನೇಕ ಕವಿ, ಸಾಹಿತಿಗಳಿಗೆ, ಕೀರ್ತಿ ಗೌರವಗಳನ್ನು ಗಳಿಸಿಕೊಟ್ಟಿದೆ. ಇಂತಹ ಸಾಹಿತ್ಯ ರಥದ ಸಾರಥಿಯೇ, ಶ್ರೀಛಾಯಾಪತಿ ಶ್ರೀ ತ.ಸು. ಶಾಮರಾಯರ ಮತ್ತು ಮಾತೃ ಶ್ರೀ ಸುಬ್ಬಮ್ಮನವರ ದ್ವಿತೀಯ ಪುತ್ರರು.

ಶ್ರೀಯುತ ಛಾಯಾಪತಿ ದಂಪತಿಗಳ ಪರಿಚಯ ನನಗೆ ಅನೇಕ ವರ್ಷಗಳಿಂದ ಆಗಿರುವುದು. ಇವರಿಬ್ಬರ ಮೃದು ಮಾತು ನಡೆನುಡಿ ನನಗೆ ತುಂಬಾ ಮೆಚ್ಚಿಗೆ, ಅವರ ಸರಳ ಸಜ್ಜನಿಕೆ, ಆತ್ಮೀಯತೆಯಿಂದಾಗಿ ದಿನಕಳೆದಂತೆ ನನ್ನ ಅವರ ಸ್ನೇಹ ಅರಿವಿಗೆ ಬಾರದಷ್ಟು ಗಾಢವಾಗಿದೆ ನಮ್ಮ ಮನೆಗೆ ತೀರ ಸಮೀಪದಲ್ಲಿರುವುದರಿಂದ ನಾನು ಅವರುಗಳನ್ನು ಹೆಚ್ಚಾಗಿ ಭೇಟಿ ಮಾಡಲು ಸಾಧ್ಯವಾಗಿದೆ. ಶ್ರೀ ಛಾಯಾಪತಿಯವರು ತಮ್ಮ ಅನುಭವಗಳನ್ನೂ ದೊಡ್ಡಪ್ಪ ವೆಂಕಣ್ಣಯ್ಯನವರು, ತಂದೆ ಶಾಮರಾಯರು ಹೇಳುತ್ತಿದ್ದ ಮಾತುಗಳನ್ನು ಮೆಲಕು ಹಾಕುತ್ತಿರುತ್ತಾರೆ.

ಶ್ರೀ ಛಾಯಾಪತಿಯವರು ತಂದೆಯ ಅಭಿಲಾಷೆಯಂತೆ ಧೀರ್ಘಕಾಲ ಸತತ ಸೇವೆ ಸಾಧನೆಯಿಂದ ಇಂದು ಅತ್ಯುತ್ತಮ 'ಸಂಪಾದಕರು', ಉತ್ತಮ ಅಭಿರುಚಿಯುಳ್ಳ ಕರ್ನಾಟಕದ ಉತ್ತಮ ಪ್ರಕಾಶಕರಾಗಿದ್ದಾರೆ. ಈ ಸಂಸ್ಥೆ ಪ್ರಕಟಣ ಲೋಕಕ್ಕೆ ಅಮೂಲ್ಯ ಕೊಡುಗೆ ಕೊಟ್ಟಿದೆ. ತ.ವೆಂ. ಸ್ಮಾರಕ ಗ್ರಂಥಮಾಲೆ ಇಂದು ಪ್ರಕಟಿಸುತ್ತಿರುವ 'ಕೃತಿಗಳ ಸೊಬಗು' ಹಾಗೂ ಪುಸ್ತಕಗಳ ಚಿತ್ತಾಕರ್ಷಕ ಮೇಲ್ಹೊದಿಕೆಯಿಂದ ಹಿಡಿದು ಅವುಗಳಲ್ಲಿನ 'ಹೂರಣವೂ' ಸವಿದಷ್ಟೂ ಅಮೃತೋಪಮವಾಗಿರುತ್ತದೆ ಕಾರಣ ಶ್ರೀ ಛಾಯಾಪತಿ ಯವರು ಆಯ್ದುಕೊಳ್ಳುವ ಸಾಹಿತ್ಯ, ಸಾಹಿತಿಗಳ ಆಯ್ಕೆಯೇ ಅಂತಹುದು.

---

**ವಿಮಲಾರಾಮಣ್ಣ**

---

ವೈವಿಧ್ಯಮಯವೂ, ಉಪಯುಕ್ತವೂ, ಮೌಲಿಕವೂ ಆದ ಈ ಒಂದೊಂದು ಕೃತಿಯೂ ತ.ವೆಂ. ಸ್ಮಾರಕ ಗ್ರಂಥಮಾಲೆಯ ಪರಂಪರೆಯ ಪ್ರತೀಕವಾಗಿದೆ.

ಇವರ ಪ್ರಕಟಣೆಗಳಲ್ಲಿ ಕೆಲವು ಪ್ರಕಟಣೆಗಳ ಬಗ್ಗೆ ವಿಮರ್ಶಕರು ಮತ್ತು ವಿದ್ವಾಂಸರು ಅಪಾರವಾದ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಇದರಲ್ಲಿ 'ಸ್ವಸ್ತಿ' ಎಂಬ ತ.ಸು. ಶಾಮರಾಯರಿಗೆ ಅರ್ಪಿಸಿರುವ ಸಂಭಾವನ ಗ್ರಂಥ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಗೆ ಒಂದು ಉತ್ತಮ ಕೊಡುಗೆ ಆಗುತ್ತದೆಂದು ಕುವೆಂಪು ಅವರು ಅಭಿಪ್ರಾಯಪಟ್ಟಿದ್ದಾರೆ. ಇದರೊಂದಿಗೆ ಹಂಪ ನಾಗರಾಜಯ್ಯನವರು 'ಅಭಿನಂದನಾ' ಗ್ರಂಥಗಳ ಸಾಲಿನಲ್ಲಿ ಇದೊಂದು ಶಿಖರ ಎನ್ನುತ್ತಾರೆ. ಸ್ವತಃ ಈ ಗ್ರಂಥದ ಸಂಪಾದಕರಾದ ಹಾ.ಮಾ. ನಾಯಕರು ಇಂಥ ಬೃಹತ್ ಪ್ರಕಟಣೆ ಪ್ರಕಟಿಸಲು ಯಮ ಧೈರ್ಯವೇ ಬೇಕು ಎನ್ನುವುದು ಓದಿದಾಗ ನಮಗೆ ಛಾಯಾಪತಿಯವರ ಬಗ್ಗೆ ಹುಬ್ಬೇರಿಸುವಂತಾಗುತ್ತದೆ.

ಇದರೊಂದಿಗೆ ಹಾ.ಮಾ. ನಾಯಕರು ಅನುವಾದಿಸಿರುವ ವಿದ್ಯಾಪತಿಯ ಹಾಡುಗಳು 'ಪ್ರಣಯ ಪದಾವಳಿ' ಪುಸ್ತಕ ಬಹುಶಃ ಕನ್ನಡ ಪ್ರಕಟಣ ಪ್ರಪಂಚದಲ್ಲೇ ಅತ್ಯಂತ ಸುಂದರವಾಗಿ ಪ್ರಕಟವಾಗಿರುವ ಪುಸ್ತಕ ಎಂದು ನಾನು ತಿಳಿದಿದ್ದೇನೆ. 'ಪ್ರಣಯ ಪದಾವಳಿ' ಬಗೆಗೆ ಈ ಚದುರಂಗರು ಪ್ರಕಾಶಕರ ಬಗ್ಗೆ ಈ ರೀತಿ ಹೇಳಿರುವುದನ್ನು ಓದಿದ್ದೆ. ಪ್ರಮಾಣದ ಚೆಲುವು ಹೊತ್ತ ಕೃತಿ, ಕನ್ನಡ ಪುಸ್ತಕ ಪ್ರಕಾಶನದ ಇತಿಹಾಸದಲ್ಲಿ ಒಂದು ಮೈಲಿಗಲ್ಲು ಎಂದಿದ್ದಾರೆ.

ಶ್ರೀಯುತ ಛಾಯಾಪತಿಯವರು ಸಾಹಿತಿ, ಬರಹಗಾರರೂ ಕೂಡ. ಪುಟ್ಟ ಮಕ್ಕಳಿಗೆ 'ಪುಟ್ಟನ ಸಚಿತ್ರ ರಾಮಾಯಣ' ರಚಿಸಿದ್ದಾರೆ. ಇದನ್ನು ಸರಳ ಸುಂದರವಾಗಿ ರೂಪಿಸಿದ್ದಾರೆ. ರಾಮಾಯಣದ ಯಾವ ಪ್ರಸಂಗವನ್ನೂ ಬಿಡದೆ, ಪುಟ್ಟ ಪುಟ್ಟ ವಾಕ್ಯಗಳಿಂದ ಸುಲಭವಾಗಿ ಜನಸಾಮಾನ್ಯರನ್ನು ಆಕರ್ಶಿಸುವಂತಾಗಿದೆ.

ಶ್ರೀ ಛಾಯಾಪತಿಯವರು ಪ್ರಕಾಶನದ ಯಶಸ್ಸು ಪಡೆಯಲು ಅವರ ಸಾಹಸ, ಶ್ರದ್ಧೆ, ಸಾಹಿತ್ಯ ಸೇವಾ ಆಸಕ್ತಿ ಸಾಧನೆ ಹೇಳಲಸಾಧ್ಯ. ಅವರಲ್ಲಿನ ಈ ಮನೋಧರ್ಮ ಪರಂಪರಾನುಗತವಾಗಿ ಅವರ ತಲೆಮಾರಿನಲ್ಲಿಯೇ ಹುದುಗಿದೆ. ಎಂದರೆ ಅತಿಶಯೋಕ್ತಿಯಲ್ಲ. ಈ ಸಾಹಸ ಕಾರ್ಯಗಳ ಪ್ರೇರಕ ಶಕ್ತಿಯಾದ ತಂದೆಯ ಅನಂತ ಆಶೀರ್ವಾದಗಳ ಜೊತೆಗೆ, ಕಾಣದ ಕೈಯಾಗಿ, ಸಹಕರಿಸುವ ಸಹೃದೆಯಾಗಿ ಧೈರ್ಯ ತುಂಬಿ, ಮುದ್ರಣ ಕಾರ್ಯಗಳಲ್ಲಿ ಶ್ರಮವಹಿಸಿ ನೆರವು ನೀಡುವ ಸಹ ಚಾರಿಣಿಯಾಗಿ ಶ್ರೀಮತಿ ಪುಷ್ಪ ಛಾಯಾಪತಿ ಅವರು ವಹಿಸುತ್ತಿರುವ ಪಾತ್ರ ಅಚ್ಚರಿ ಮೂಡಿಸುವಂತಹುದು. ಇಂತಹ ಗ್ರಂಥಮಾಲೆಗೆ ಐವತ್ತು ವರ್ಷಗಳು ಸಾಗಿ ಚಿನ್ನದ ಹಬ್ಬಕ್ಕೆ ಕಾಲಿರಿಸುತ್ತಿದೆ. ಈ ಸಂತೋಷ ಸಮಾರಂಭದಲ್ಲಿ ನನಗೆ ಆತ್ಮೀಯ ಮಿತ್ರರಾದ ಛಾಯಾಪತಿ ದಂಪತಿಗಳಿಗೆ ಹೃತ್ಪೂರ್ವಕವಾಗಿ ಅಭಿನಂದಿಸುತ್ತಾ ಇನ್ನೂ ಹೆಚ್ಚಿನ ಕೀರ್ತಿ ದೊರಕಬೇಕೆಂದು ಹಾರೈಸುತ್ತೇನೆ.

# ಮೆದುಮಾತಿನ ಬುದ್ಧಿಮತಿ

ಇಪ್ಪತ್ತನೆಯ ಶತಮಾನದ ಎಪ್ಪತ್ತರ ದಶಕ ಜಾನಪದ ಅಧ್ಯಯನದಲ್ಲಿ ಒಂದು ಮಹತ್ವದ ಕಾಲ. ಈ ಹೊತ್ತಿನಲ್ಲಿ ನಾನು ನನ್ನ 'ಕರ್ನಾಟಕ ಜನಪದ ಕಥೆಗಳು' ಪುಸ್ತಕವನ್ನು ಸಿದ್ಧಪಡಿಸುತ್ತಿದ್ದೆ; ನಾನೇ ಪ್ರಕಟಿಸಬೇಕೆಂದು ಅಚ್ಚಿಗೆ ಕೊಟ್ಟಿದ್ದೆ, ಬಹುತೇಕ ಅಚ್ಚಾಗಿತ್ತೆಂದು ಕಾಣುತ್ತದೆ. ಒಂದು ದಿವಸ ಇದ್ದಕ್ಕಿದ್ದಂತೆ ಶ್ರೀ ಟಿ.ಎಸ್. ಛಾಯಾಪತಿಯವರು ನನ್ನನ್ನು ಭೇಟಿಯಾಗಿ, ತಮ್ಮ ತಂದೆಯವರು ಬರೆದು ಕಳುಹಿಸಿದ್ದ ಪತ್ರವನ್ನು ಕೊಟ್ಟರು. ನನ್ನ ಈ ಪುಸ್ತಕವನ್ನು ತಮ್ಮ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯಲ್ಲಿ ಪ್ರಕಟಿಸಲು ಕೊಡಬೇಕೆಂದು ಬರೆದ ಪತ್ರ ಅದಾಗಿತ್ತು. ಶ್ರೀ ತ.ಸು. ಶಾಮರಾಯರು ನನ್ನ ವಿದ್ಯಾ ಗುರುಗಳು, ಪ್ರಕಾಶನ ಸಂಸ್ಥೆ ನಾನು ಗೌರವಿಸುವ ಮುಖ್ಯ ವ್ಯಕ್ತಿಗಳಲ್ಲಿ ಒಬ್ಬರಾದ ವೆಂಕಣ್ಣಯ್ಯನವರ ಹೆಸರಿನದಾಗಿತ್ತು; ನಾನು ನನ್ನ ಪುಸ್ತಕವನ್ನು ಕೊಡಲು ಇನ್ನೇನು ಬೇಕಾಗಿತ್ತು! ನನ್ನ ಪುಸ್ತಕವನ್ನು ಅಗತ್ಯವಾಗಿ ಪ್ರಕಟಿಸಬಹುದೆಂದು ಛಾಯಾಪತಿಯವರಿಗೆ ಹೇಳಿದೆ. ಛಾಯಾಪತಿಯವರು ಈ ಹಿಂದೆ ಪರಿಚಿತರಿದ್ದರೂ, ಈ ಮೂಲಕ ನಿಕಟವಾಗಲು ಇದು ಕಾರಣವಾಗಿತ್ತು. ತ.ವೆಂ. ಸ್ಮಾರಕ ಗ್ರಂಥಮಾಲೆಯನ್ನು ಶಾಮರಾಯರು ತಮ್ಮ ಅಣ್ಣನ ನೆನಪಿಗಾಗಿ ಸ್ಥಾಪಿಸಿ ಬಹಳ ದಿನಗಳು ಕಳೆದಿದ್ದವು. ಛಾಯಾಪತಿಯವರು ಅದನ್ನು ಉತ್ತರೋತ್ತರ ತುಂಬ ಘನವಾಗಿ ಬೆಳೆಸಿದರು ; ಅದರಲ್ಲಿ ನಾನಾ ತೆರನಾದ ಪುಸ್ತಕಗಳನ್ನು ನಿರಂತರವಾಗಿ ಪ್ರಕಟಿಸಿ ಕರ್ನಾಟಕದ ಬಹು ದೊಡ್ಡ ಪ್ರಕಾಶನ ಸಂಸ್ಥೆಯಾಗಲು ಕಾರಣರಾದರು. ಇದರಲ್ಲಿ ನನ್ನ ಜಾನಪದ ಕೃತಿ 'ಕರ್ನಾಟಕ ಜನಪದ ಕಥೆಗಳು' ಕೃತಿಯನ್ನಲ್ಲದೆ, ಆಮೇಲೆ ಒಂದು ಕವನ ಸಂಕಲನವನ್ನೂ, ಒಂದು ವಿಮರ್ಶಾ ಕೃತಿಯನ್ನೂ ಪ್ರಕಟಿಸಿದರು. ನನ್ನ ಸಾಹಿತ್ಯಿಕ ಜೀವನದ ಆರಂಭದಲ್ಲಿ ಹೀಗೆ ನನ್ನ ಪುಸ್ತಕಗಳನ್ನು ಪ್ರಕಟಿಸಿ ನನ್ನನ್ನು ಪ್ರೋತ್ಸಾಹಿಸಿದವರು ಶ್ರೀ ಛಾಯಾಪತಿಯವರು. ತ.ವೆಂ. ಸ್ಮಾರಕ ಗ್ರಂಥಮಾಲೆಯನ್ನು ನಾಡಿನ ಉದ್ದಗಲದಲ್ಲಿ ಹರಡಿದ, ಸಾಧನೆಯ ಬಾಹುಗಳನ್ನು ವಿಸ್ತರಿಸಿದ ಕೀರ್ತಿಗೆ ಛಾಯಾಪತಿಯವರು ಭಾಜನರಾಗಿದ್ದಾರೆ.

---

ಡಾ. ರಾಗೌ

---

ಛಾಯಾಪತಿಯವರು ವ್ಯಕ್ತಿಯಾಗಿ ಸರಳರು, ಸಜ್ಜನಶೀಲರು; ವಿನಯವಂತರು. ಮೆದುಮಾತಿನ ಬುದ್ಧಿಮತಿ; ಅವರೆಂದೂ ಗಟ್ಟಿಯಾಗಿ ಮಾತನಾಡಿದ್ದನ್ನು ನಾನು ಕಂಡಿಲ್ಲ. ಪಂಪಕವಿ ಒಂದು ಕಡೆ 'ಮೆಲ್ಪು ಬಲ್ಪನಟಿಗುಂ' ಎಂದು ಹೇಳಿದ್ದಿದೆ; ಅಂದರೆ 'ಮೆದುವಾದದ್ದು ಬಲವಾದದ್ದನ್ನು ಅಳಿಸುತ್ತದೆ' ಎಂದು ಅರ್ಥ. ಛಾಯಾಪತಿಯವರದು ಇಂತಹ ವ್ಯಕ್ತಿತ್ವ. ಮೃದುಮಾರ್ದವತೆ ಆಪ್ತತೆಗೆ ಸದಾ ಸಹಕಾರಿ; ಇದನ್ನು ಅವರು ಚೆನ್ನಾಗಿ ಬಲ್ಲರು. ಛಾಯಾಪತಿಯವರು ಬದುಕನ್ನು ತಿಳಿದವರು; ಅದನ್ನು ಅರ್ಥೈಸ ಬಲ್ಲವರು ಕೂಡ. ಸ್ನೇಹ ಮತ್ತು ಸೌಹಾರ್ದತೆಯ ಮೂಲಕ ಅವರು ಎಲ್ಲರಿಗೂ ಬೇಕಾದವರಾಗಿದ್ದಾರೆ; ಒಂದು ರೀತಿಯಲ್ಲಿ ಅವರು ಅಜಾತಶತ್ರು ಕೂಡ. ಪುಸ್ತಕ ಪ್ರಕಾಶನ ಮತ್ತು ಮಾರಾಟದಂತಹ ವೃತ್ತಿಯನ್ನು ನಡೆಸಿಕೊಳ್ಳುತ್ತಾ ಅವರು ಇದನ್ನೆಲ್ಲ ಸಾಧಿಸಿರುವುದರಿಂದ ಅವರ ವ್ಯಕ್ತಿತ್ವಕ್ಕೊಂದು ಹೊಸ ಮೆರುಗು ಪ್ರಾಪ್ತವಾಗಿದೆಯೆಂದೇ ಭಾವಿಸಬೇಕು.

ಕನ್ನಡದ ಒಬ್ಬ ಯಶಸ್ವೀ ಪ್ರಕಾಶಕರಾಗಿ ಛಾಯಾಪತಿಯವರು ಕಾಣಿಸಿಕೊಂಡಿದ್ದಾರೆ. ಪುಸ್ತಕ ಸಂಸ್ಕೃತಿಯ ಪ್ರಚಾರ ಪ್ರಸಾರಕ್ಕಾಗಿ ಅವರ ತಮ್ಮ ಇಡೀ ಜೀವನವನ್ನೇ ಮೀಸಲಾಗಿಟ್ಟಿದ್ದಾರೆ. ಲೇಖಕ ಮನೆತನದಿಂದ ಬಂದವರು ಅವರು. ಆದ್ದರಿಂದಲೇ ಕನ್ನಡದ ಗಟ್ಟಿತನ ಮತ್ತು ಗುಣಗೌರವಗಳು ಅವರನ್ನು ಸುತ್ತುವರಿದಿವೆ. ಕನ್ನಡದ ಅನೇಕ ಶ್ರೇಷ್ಠ ಲೇಖಕರ ಪುಸ್ತಕಗಳನ್ನು ಅವರು ಪ್ರಕಟಿಸಿದ್ದಾರೆ, ಅದರಲ್ಲಿ ಕನ್ನಡದ ಹಲವಾರು ಶ್ರೇಷ್ಠ ಪುಸ್ತಕಗಳು ಸೇರಿವೆ. ವೈವಿಧ್ಯಮಯ ಪುಸ್ತಕಗಳನ್ನು ಪ್ರಕಟಿಸುವುದರ ಮೂಲಕ ಉತ್ತಮ ಅಭಿರುಚಿಯನ್ನು ಓದುಗರಲ್ಲಿ ಅವರು ರೂಪಿಸಿದ್ದಾರೆ. ಹೀಗೆ ಪುಸ್ತಕ ಪ್ರಕಟನೆಯ ಮೂಲಕ ಕನ್ನಡವನ್ನು ಕಟ್ಟಿದ ಮಹನೀಯರಲ್ಲಿ ಅವರೂ ಒಬ್ಬರಾಗಿದ್ದಾರೆ. ಛಾಯಾಪತಿಯವರು ಈಗ ಒಬ್ಬ ಪ್ರಕಾಶಕರಾಗಿ ಮಾತ್ರ ಉಳಿದಿಲ್ಲ; ಸಾರ್ವಜನಿಕ ಆಸಕ್ತಿಯ ಕೇಂದ್ರವೂ ಆಗಿದ್ದಾರೆ.

ಛಾಯಾಪತಿಯವರು ಲೇಖಕರೂ ಆಗಿರುವುದು ಗಮನಿಸಬೇಕಾದ ವಿಚಾರ. ಕನ್ನಡದಲ್ಲಿ ಲೇಖಕರಾಗಿರುವವರು ತಮ್ಮ ಪುಸ್ತಕಗಳ ಪ್ರಕಾಶಕರೂ ಆಗಿರುವುದು ಒಂದು ಸಾಮಾನ್ಯ ವಿಷಯ. ಆದರೆ ಪ್ರಕಾಶಕರಾಗಿರುವವರು ಆಮೇಲೆ ಲೇಖಕರೂ ಆಗಿ ರೂಪುಗೊಂಡಿರುವುದು ಮಾತ್ರ ಒಂದು ವಿಶೇಷ. ಕನ್ನಡದ ಬಹುಮುಖ್ಯ ಪ್ರಕಾಶಕರಲ್ಲಿ ಕೆಲವರು ಲೇಖಕರಾಗಿಯೂ ಹೆಸರು ಮಾಡಿದ್ದಾರೆ. ಅಂಥವರಲ್ಲಿ ಛಾಯಾಪತಿಯವರೂ ಒಬ್ಬರಾಗಿರುವುದು ದಾಖಲಿಸಬೇಕಾದ ಸಂಗತಿ. ಅವರು ವಿವಿಧ ಆಸಕ್ತಿಯ ಇಪ್ಪತ್ತೆರಡು ಕೃತಿಗಳನ್ನು ಬರೆದಿರುವುದು ನನಗೆ ಆಶ್ಚರ್ಯವನ್ನು ತಂದಿದೆ; ಅದೇ ಕಾರಣಕ್ಕೆ ಸಂತೋಷವನ್ನೂ ಉಂಟು ಮಾಡಿದೆ. ವ್ಯಕ್ತಿಚಿತ್ರ, ಆಡಳಿತಭಾಷೆ, ರಾಮಾಯಣ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಅವರ ಪುಸ್ತಕಗಳಿವೆ.

ಛಾಯಾಪತಿಯವರ ಈ ಸಾಧನೆಯನ್ನು, ಅವರ ಪ್ರಕಟಣ ಸಾಧನೆಯೊಡನೆ ಖಂಡಿತವಾಗಿಯೂ ಪ್ರಸ್ತಾಪಿಸಬೇಕು. ಅವರು ಲೇಖಕರಾಗಿರುವ ವಿಷಯ ಅಷ್ಟೇನೂ ಸಾರ್ವಜನಿಕ ಗಮನಕ್ಕೆ ಬಂದಂತಿಲ್ಲ; ನಿಜವಾಗಿಯೂ ಇದು ಪರಿಗಣಿತವಾಗಬೇಕಾದ ವಿಚಾರ.

ಛಾಯಾಪತಿಯವರಿಗೆ ಹಲವಾರು ಪ್ರಶಸ್ತಿ ಪುರಸ್ಕಾರಗಳು ಸಂದಿವೆ. ಕನ್ನಡ ಪುಸ್ತಕ ಪ್ರಾಧಿಕಾರದಿಂದ 'ಅತ್ಯುತ್ತಮ ಪ್ರಕಾಶನ ಪ್ರಶಸ್ತಿ'ಯೂ ಬಂದಿದೆ. ಹಲವಾರು ಸಂಘ ಸಂಸ್ಥೆಗಳು ಅವರಿಗೆ ಪ್ರಶಸ್ತಿ ನೀಡಿ ಗೌರವಿಸಿವೆ. ಸಾಹಿತ್ಯ ಸಮ್ಮೇಳನ, ವಿಚಾರಗೋಷ್ಠಿಗಳ ಸಂದರ್ಭದಲ್ಲಿ ಅವರನ್ನು ಸನ್ಮಾನಿಸಲಾಗಿದೆ. ಅವರ ಪ್ರತಿಭೆ ಮತ್ತು ಸೇವೆಯನ್ನು ಕುರಿತಂತೆ, ಅನೇಕ ಸಾಹಿತ್ಯಿಕ ಸಮಾರಂಭ ಮತ್ತು ಪುಸ್ತಕೋದ್ಯಮ ಕುರಿತ ಸಂಕಿರಣಗಳಲ್ಲಿ ಉಲ್ಲೇಖಿಸಲಾಗಿದೆ. ಇದೆಲ್ಲವನ್ನೂ ನೋಡಿದರೆ ಅವರ ಸಾಧನೆಗಳು ಕನ್ನಡ ವಿಚಾರವಂತರ ಗಮನಕ್ಕೆ ಬಂದಿರುವುದು ಸ್ಪಷ್ಟವಾಗಿದೆ. ಅವರು ಅದೃಷ್ಟವಂತರು; ಏಕೆಂದರೆ ಅವರ ಸಾಧನೆಗಳು ಸಾರ್ವಜನಿಕ ಗಮನಕ್ಕೆ ಬಂದಿವೆ. ಸಾಹಿತ್ಯ ಕ್ಷೇತ್ರದಲ್ಲಿಯೂ ಅವರು ಪರಿಚಿತರು; ಪ್ರಕಟಣ ಪ್ರಪಂಚದಲ್ಲಂತೂ ಪ್ರಸಿದ್ಧರು.

ಅವರಿಗೆ ಈಗ ಎಪ್ಪತ್ತರ ಸಂಭ್ರಮ. ಈ ಸಂದರ್ಭದಲ್ಲಿ ಅವರನ್ನು ಕುರಿತು ಅಭಿನಂದನ ಗ್ರಂಥವೊಂದು ಹೊರ ಬರುತ್ತಿರುವುದು ಅತ್ಯಂತ ಸಂತೋಷದ ವಿಷಯ. ಮುಂದಿನ ದಿನಗಳಲ್ಲಿ ಸಾಧನೆಯ ನಿಚ್ಚಣಿಕೆಯಲ್ಲಿ ನಿರಂತರ ಪ್ರಗತಿ ಕಾಣುತ್ತಿರಲಿ, ತದನುಗುಣವಾದ ಗೌರವಾದರಕ್ಕೆ ಪಾತ್ರವಾಗುತ್ತಿರಲಿ ಎಂದು ಆಶಿಸುತ್ತೇನೆ. ನೂರು ವಸಂತಗಳನ್ನು ಅವರು ದಾಟಲಿ ಎಂದು ಈ ಸಂದರ್ಭದಲ್ಲಿ ಹಾರೈಸುತ್ತೇನೆ.



# ನೆನಪಿನಂಗಳದಿಂದ...

ಕನ್ನಡ ಭಾಷೆಯ ಉನ್ನತಿಗೆ ಶ್ರಮಿಸಿದ ತಳುಕು ಕುಟುಂಬದ ಪ್ರೇರಣೆ, ಪ್ರೋತ್ಸಾಹ ಪಡೆದವರು ಅನೇಕಾನೇಕರು. ಅಂಥವರಲ್ಲೊಬ್ಬನಾದ ನನ್ನ ನೆನಪಿನಂಗಳದಿಂದ ಸ್ಮರಣೀಯ ಅನುಭವಗಳನ್ನು ಹೆಕ್ಕಿ ತೆಗೆದು ನಿಮ್ಮ ಮುಂದಿಡುವ ಸೌಭಾಗ್ಯ ನನ್ನದಾಗಿದೆ.

ಸಾವಿರದ ಒಂಭೈನೂರ ನಲವತ್ತರ ದಶಕದಲ್ಲಿ ಸುಮಾರು 1948ರವರೆಗೆಂದು ನೆನಪು - ನನ್ನ ನೆಚ್ಚಿನ ಗುರು ಶ್ರೀ ತ.ಸು. ಶಾಮರಾಯರ ಕೃಷ್ಣಮೂರ್ತಿಪುರದ ಮನೆಗೆ ವಾರದಲ್ಲಿ ಎರಡು ಮೂರು ಬಾರಿಯಾದರೂ ಹೋಗಿ ಬರುತ್ತಿದ್ದೆ. ಕೆಲಹೊತ್ತು ಗುರುಗಳ ಪ್ರೀತಿಯ ಸಹಯೋಗ, ಮಾತೆ ಅನ್ನಪೂರ್ಣೆ ಶ್ರೀಮತಿ ಸುಬ್ಬಮ್ಮನವರ ಕೃಪೆಯಿಂದ ಊಟೋಪಚಾರಗಳನ್ನು ಪಡೆಯುತ್ತಿದ್ದೆ. ತಾಯಿ ಇಲ್ಲದ ಈ ತಬ್ಬಲಿಗೆ ತಾಯಿಯ ಮಮತೆ ತೋರಿಸಿದ ಆ ಉದಾರಿ ಮಹಾತಾಯಿಯನ್ನು ಎಂದೂ ಮರೆಯಲಾರೆ.

ಪ್ರೌಢಶಾಲಾ ಶಿಕ್ಷಣ ಮುಗಿಸಿ ಇಂಟರ್ ಮೀಡಿಯೆಟ್ ಕಾಲೇಜಿನಲ್ಲಿದ್ದಾಗ ಗುರುಗಳು ಪಾಠ ಹೇಳುತ್ತಿದ್ದ - ಲಕ್ಷ್ಮೀಶನ 'ಸೀತಾ ಪರಿತ್ಯಾಗ' ಇರಬಹುದು. ಬಿ. ವೆಂಕಟಾಚಾರ್ಯರು ಬೆಂಗಾಲಿಯಿಂದ ಕನ್ನಡಕ್ಕೆ ತಂದ 'ವಂಗ ವಿಜೇತ' ಇರಬಹುದು... ಅವುಗಳ ಚಾರಿತ್ರಿಕ ಹಿನ್ನೆಲೆ ಸಹಿತ ಪಾಠ ಹೇಳುತ್ತಿದ್ದುದು ಮರೆಯಲಾಗದು, ಇಂದಿಗೂ ಮನಸ್ಸಿನಲ್ಲಿ ಹಚ್ಚಹಸಿರು ನೆನಪು.

ಶ್ರೀ ಶಾಮರಾಯರ ಮನೆ ಯಾವಾಗಲೂ ಅವರ ನಿಕಟ ಶಿಷ್ಯರಾದ, ಶ್ರೀಯುತರುಗಳಾದ ಜಿ.ಎಸ್. ಶಿವರುದ್ರಪ್ಪ, ಪಿ.ಆರ್. ತಿಪ್ಪೇಸ್ವಾಮಿ, ಜೇಶಂಪ, ಕ.ರಾ.ಕೃ - ಇವರಂಥವರಿಂದ ತುಂಬಿರುತ್ತಿತ್ತು. ಅಂಥವರೆಲ್ಲರ ಒಡನಾಟ ದೊರೆತದ್ದು ನನ್ನ ಜೀವನದಲ್ಲಿ ತಳುಕಿನ ಕುಟುಂಬದಿಂದ ಪಡೆದ'ವರ'ವೇ ಸರಿ.

ಜಿ.ಎಸ್.ಎಸ್. ಹೆಚ್ಚು ಮಾತನಾಡುತ್ತಿರಲಿಲ್ಲ. ಅವರೊಡನೆ ಬರಿಗಾಲಲ್ಲಿ ನಡೆಯುತ್ತ ಕಬ್ಬಳ್ಳಿ ಹಾಸ್ಟೆಲ್‌ನಿಂದ ಗುರುಗಳ ಮನೆವರೆಗೆ ಮಾತಾಡಿಕೊಂಡು ಬರುತ್ತಿದ್ದುದು ಮತ್ತೊಂದು ನೆನಪು. ಚಿತ್ರಕಾರ ಪಿ.ಆರ್. ತಿಪ್ಪೇಸ್ವಾಮಿ ಬ್ರಹ್ಮಚಾರಿ,

ಪ್ರೊ. ಕೆ.ಜಿ. ಸತ್ಯನಾರಾಯಣ

ಚಿತ್ರಕಲಾಕಾರರ ಸಹವಾಸ ಸಿಕ್ಕಿದ್ದು ಗುರುಗಳ ಮನೆಯಿಂದಾಗಿ, ತಿಪ್ಪೇಸ್ವಾಮಿಯವರ ನನ್ನ ಶಿಷ್ಯ ಸುಶೀಲೇಗೌಡನನ್ನೂ ನೋಡಿಕೊಂಡದ್ದು ಸ್ನೇಹ ಸಂಯೋಗ, ಅಷ್ಟೇ ಅಲ್ಲದೆ, ಮುಂದೆ ನನ್ನ ನುಗ್ಗೇಹಳ್ಳಿ ಶಾಲಾ ವಿದ್ಯಾರ್ಥಿಗಳ 'ಕರಾವಳಿ ಪ್ರವಾಸದ ಸವಿ ನೆನಪು'ಗಳು ಎಂಬ ಪುಸ್ತಕಕ್ಕೆ ಜೀಶಂಪ, ಕರಾಕೃಗಳ ಲೇಖನದ ಕೊಡುಗೆ, ಪ್ರೀತಿ ಲೇಖನದ ಕೊನೆಗೆ ತಿಪ್ಪೇಸ್ವಾಮಿಯವರಿಂದ ರೇಖಾ ಚಿತ್ರ... ಇವೆಲ್ಲ ತಳುಕು ಕುಟುಂಬದಿಂದಾಗಿ ಒದಗಿಬಂದ ಅನುಬಂಧ,

ಕನ್ನಡ ಭಾಷಾ ಸಂಪತ್ತಿನ ಬೆಳವಣಿಗೆಗೆ ತಳುಕು ಕುಟುಂಬದ ದಿಗ್ಗಜರುಗಳಾದ ಶ್ರೀ ಟಿ.ಎಸ್. ವೆಂಕಣ್ಣಯ್ಯ, ಶ್ರೀ ತ.ಸು. ಶಾಮರಾಯ, ಶ್ರೀ ತ.ರಾ. ಸುಬ್ಬರಾಯರು - ಇವರುಗಳ ಕೊಡುಗೆ ಅಪಾರ. ಶಾಮರಾಯರು ತಮ್ಮ ಹಿರಿಯಣ್ಣನ ಮೇಲೆ ಇಟ್ಟಿದ್ದ ಗೌರವಾದರ ಸೂಚಕವಾಗಿ ತಮ್ಮ ಮೊದಲ ಮಗನಿಗೂ ವೆಂಕಣ್ಣಯ್ಯನೆಂದೇ ಹೆಸರಿಟ್ಟಿದ್ದು ಆತ ಶ್ರೀ ಛಾಯಾಪತಿಯವರ ಅಣ್ಣ, ಶೃಂಗೇರಿ ಕಾಲೇಜಿನಲ್ಲಿ ಉಪನ್ಯಾಸಕ ರಾಗಿದ್ದಲ್ಲದೆ ಹಲವಾರು ಪುಸ್ತಕಗಳನ್ನು ರಚಿಸಿದ್ದಾರೆ.

ತಳುಕಿನ ವೆಂಕಣ್ಣಯ್ಯಸ್ಮಾರಕ ಗ್ರಂಥಮಾಲೆಯ ಮೂಲಕ, ತಳುಕು ಕುಟುಂಬದ ಸವಿನೆನಪನ್ನು ಕನ್ನಡಿಗರಿಗೆ ಆಗಾಗ ಮಾಡಿಕೊಡುತ್ತಲಿರುವ ಆ ಕುಟುಂಬದ ನಾಲ್ಕನೇ ತಲೆಮಾರಿನ ಶ್ರೀ ಛಾಯಾಪತಿಯವರು ಸಾಹಸಿಗರು. ಅವರ ತಂದೆ 1950ರಲ್ಲಿ ಪ್ರಾರಂಭಿಸಿದ ಗ್ರಂಥಮಾಲೆಯನ್ನು ತಮ್ಮ ಇಪ್ಪತ್ತನಾಲ್ಕನೇ ತರುಣ ವಯಸ್ಸಿನಲ್ಲೇ ವಹಿಸಿಕೊಂಡು 1968ರಿಂದಲೂ ನಡೆಸುತ್ತಾ ಬಂದಿರುವುದು ಶ್ಲಾಘನೀಯ ವಿಚಾರವೇ ಸರಿ.

ಅದಮ್ಯ ಚಟುವಟಿಕೆ, ಅನವರತ ಪರಿಶ್ರಮದಿಂದ ನಾಡಿನ ಹಳೆಯ ಹಾಗೂ ಶ್ರೇಷ್ಠ ಕನ್ನಡ ಪುಸ್ತಕ ಪ್ರಕಾಶಕ ಸಂಸ್ಥೆಯನ್ನಾಗಿ ಬೆಳೆಸಿ ಅಭಿನಂದನೀಯರಾಗಿದ್ದಾರೆ. ನಾನಂತೂ ತೀರಾ ಹತ್ತಿರದಿಂದ ಅವರ ಕ್ರಿಯಾಶೀಲತೆ ಕಂಡು ಹರ್ಷಿಸಿದ್ದೇನೆ. ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ತಳುಕು ವಂಶದ ನಿಜವಾದ ಸಾರಸ್ವತ ಸತ್ವವನ್ನೂ ಮೈಗೂಡಿಸಿಕೊಂಡ ತಳುಕುವಂಶದ ಕುಡಿ ಛಾಯಾಪತಿಯೊಂದಿಗೆ ನನ್ನ ಮರು ಸಂಪರ್ಕ ಬಂದದ್ದು ದೈವಕೃಪೆ.. ಆತ ನನ್ನ ಸೋದರ ಸಂಬಂಧಿ ತಂಗಿಯ ಅಳಿಯನಾಗಿ ಕುಟುಂಬದವರೇ ಆಗಿಬಿಟ್ಟರು! ಹಿಂದೆ ಅವರ ತಂದೆ, ನನ್ನ ಗುರುಗಳು ನನ್ನನ್ನೇ ಅವರ ಮನೆ 'ಅಳಿಯ'ನನ್ನಾಗಿ ಮಾಡುವ ಪ್ರಸ್ತಾಪ ತಂದಿದ್ದರೊಮ್ಮೆ! ಆದರೀಗ ಅವರ ಮಗನೇ ನಮ್ಮ ಕುಟುಂಬದ ಅಳಿಯ ನಾದರು!

ನಾನು ಸಾಹಿತಿಯಲ್ಲ, ಆದರೆ ನನ್ನ ಹಾಗೂ ಛಾಯಾಪತಿಯವರ ಅನುಬಂಧದಿಂದ ಈ ಕೆಲವು ನೆನಪಿನ ನುಡಿಗಳು ಬರೆಯುವುದು ಸಾಧ್ಯವಾಯಿತು. ಪ್ರಕಾಶನ ಮಾಲೆಯಿಂದ

ಹೊರತಂದ ಪುಸ್ತಕಗಳನ್ನು ನಾಡಿನ ಮೂಲೆ ಮೂಲೆಗಳಿಗೂ ಪುಸ್ತಕಗಳ ಹೊರೆ ಹೊತ್ತು ಸಂಚರಿಸುತ್ತಾ ಸಾಹಿತ್ಯ ಪ್ರಚಾರ ಮಾಡಿದ ಪರಿಶ್ರಮ, ಏರಿಳಿತಗಳನ್ನು ಎದುರಿಸಿ ಸಂಸ್ಥೆಯನ್ನು ಮುನ್ನಡೆಸಿದ ಧಾರ್ಷ್ಟ್ಯ - ಎಲ್ಲರೂ ಮೆಚ್ಚತಕ್ಕುದೇ ಆಗಿದೆ.

ನಾನು ಹಾಸನ ಜಿಲ್ಲೆ ಮುಖ್ಯೋಪಾಧ್ಯಾಯರ ಸಂಘದ ಅಧ್ಯಕ್ಷನಾಗಿದ್ದಾಗ, ಮುಂದೆ ಅಖಿಲ ಕರ್ನಾಟಕ ಮುಖ್ಯೋಪಾಧ್ಯಾಯರ ಸಂಘದ ಅಧ್ಯಕ್ಷನಾಗಿದ್ದಾಗ ಹಾಗೂ ಅಲ್ಲಿಂದ ಮುಂದೆ ಅಖಿಲ ಕರ್ನಾಟಕ ಸ್ಥಳೀಯ ಪ್ರೌಢಶಾಲಾ ಸಂಘದ ಅಧ್ಯಕ್ಷನಾಗಿದ್ದಾಗಲೂ ಸುಮಾರು 547 ಶಾಲೆಗಳನ್ನು ಸರ್ಕಾರೀ ಶಾಲೆಗಳನ್ನಾಗಿ ಪರಿವರ್ತಿಸಲು ಹೋರಾಡಿದ ಕಾಲದಲ್ಲಿ - ಹೀಗೆ ಸದಾ ನನ್ನ ಸಂಪರ್ಕದಲ್ಲಿದ್ದು ಛಾಯಾಪತಿಯವರು ತಮ್ಮ ಪ್ರಕಾಶನದ ಕೃತಿಗಳನ್ನು ಹೊತ್ತು ತಂದು ಮಳಿಗೆ ತೆಗೆದು ಮಾರಾಟ ಮಾಡುತ್ತ ಸಂಸ್ಥೆ ಬೆಳೆಸುವಲ್ಲಿ ವಹಿಸಿದ ಶ್ರಮವನ್ನು ಕಣ್ಣಾರೆ ಕಂಡಿದ್ದೇನೆ. ಪರೋಕ್ಷವಾಗಿ ತಳುಕಿನ ಕುಟುಂಬಕ್ಕೆ ಅಲ್ಪವಾದರೂ ಸೇವೆ ಮಾಡಲು ಅವಕಾಶ ಒದಗಿದ್ದು ನನ್ನ ಪುಣ್ಯವೆಂದು ಭಾವಿಸುತ್ತೇನೆ. ಇದಲ್ಲದೆ ಛಾಯಾಪತಿಯವರು ತಮ್ಮ ಪ್ರಕಟಣೆಯನ್ನು ಉದ್ಗ್ರಂಥ ಶ್ರೀ ಜಿ.ಎಸ್.ಎಸ್.ರವರ 'ಸೌಂದರ್ಯ ಸಮೀಕ್ಷೆ' ಯಿಂದ ಹಿಡಿದು ಎಲ್ಲಾ ಪ್ರಕಟಣೆಗಳ ಗ್ರಂಥಗಳ ಪ್ರತಿಯೊಂದನ್ನು ತಪ್ಪದೇ ನನಗೆ ತಂದುಕೊಟ್ಟು ಅವುಗಳ ಸಾಹಿತ್ಯಿಕ ಹಿರಿಮೆಯನ್ನು ಅನುಭವಿಸುವಂತೆ ಮಾಡಿದ್ದಕ್ಕಾಗಿ ನಾನು ಅವರಿಗೆ ಎಂದಿಗೂ ಚಿರಋಣಿ.

ನನಗೆ ಚಿರಂಜೀವಿಯಾದರೂ ಛಾಯಾಪತಿಗೆ ಎಪ್ಪತ್ತು ತುಂಬಿತೆನ್ನುವುದೀಗ ಸಂಭ್ರಮದ ಸಂಗತಿ! ಅವರ ಕನ್ನಡ ಸೇವೆಯನ್ನು ನೋಡಿ ಅವರ ಸಾಹಿತ್ಯಾಭಿಮಾನಿಗಳು ಛಾಯಾಪತಿಯವರನ್ನು ಸನ್ಮಾನಿಸುತ್ತಿರುವುದು ಅಭಿನಂದನೀಯ ವಿಷಯವಾಗಿದೆ.

ಶ್ರೀ ರಾಮದೇವರಲ್ಲಿ ನನ್ನ ಪ್ರಾರ್ಥನೆ ಎಂದರೆ , ಶ್ರೀ ಛಾಯಾಪತಿಯವರು ಆರೋಗ್ಯವಂತರಾಗಿ ನೂರ್ಕಾಲ ಬಾಳಿ ಸಾಹಿತ್ಯ ಸೇವೆಯನ್ನು ಹೀಗೇ ಮುಂದುವರೆಸು ವಂತೆ ಹರಸಲಿ, ಅನುಗ್ರಹಿಸಲಿ ಎಂದೇ ಆಗಿದೆ.



## ಆತ್ಮೀಯ ಬಂಧು

ಸಾಹಿತ್ಯ ಕ್ಷೇತ್ರದಲ್ಲಿ ದಿವಂಗತ ವೆಂಕಣ್ಣಯ್ಯನವರ ಮತ್ತು ತ.ಸು. ಶಾಮರಾಯರ ಹೆಸರುಗಳನ್ನು ಅವರ ಗ್ರಂಥಮಾಲೆಯ ಹೆಸರುಗಳನ್ನು ಕೇಳದವರು ಬಹಳ ವಿರಳ.

ಸಾಹಿತಿಗಳಾದ ತ.ಸು. ಶಾಮರಾಯರು ಮತ್ತು ಅವರ ಪತ್ನಿ ಅನ್ನಪೂರ್ಣೇಶ್ವರಿ ಶ್ರೀಮತಿ ಸುಬ್ಬಮ್ಮನವರ ಎರಡನೇಯ ಮಗನಾಗಿ 1944ನೇ ಇಸವಿಯಲ್ಲಿ ಜನಿಸಿದವರೆ, ಶ್ರೀ ಟಿ.ಎಸ್. ಛಾಯಾಪತಿಯವರು.

ಮೊದಲಿಗೆ ಮೈಸೂರಿನ ಕೃಷ್ಣಮೂರ್ತಿಪುರಂನಲ್ಲಿದ್ದ ಅವರ ಮನೆಯಲ್ಲಿ ಅವರ ತಂದೆ, ತಾಯಿ, ಅಕ್ಕ, ತಂಗಿ, ಅಣ್ಣ, ತಮ್ಮ ಎಲ್ಲರೊಂದಿಗೂ ಕಷ್ಟ-ಸುಖಗಳಲ್ಲಿ ಭಾಗಿಯಾಗಿದ್ದ, ಶ್ರೀ ಛಾಯಾಪತಿಯವರು ಎಂ.ಕಾಂ. ಪದವೀಧರರಾದರು. ಸ್ನಾತಕೋತ್ತರ ಪದವೀಧರರಾದರೂ ಸಹ ಇನ್ಯಾವುದೋ ಸೌಕರಿಯನ್ನು ಅರಸಿ ಹೋಗದೆ, ಪರಂಪರಾನುಗತವಾಗಿ ಬಂದಂತಹ ಅವರ ಗ್ರಂಥಮಾಲೆಯ ಅಭಿವೃದ್ಧಿಗಾಗಿ ಹಗಲು - ರಾತ್ರಿ ಕಷ್ಟಪಟ್ಟು ದುಡಿದು ಅದನ್ನೇ ವೃತ್ತಿಯಾಗಿಸಿಕೊಂಡು ಜೀವನ ಸಾಗಿಸಿದವರು ಮತ್ತು ಇಂದು ಸಾಗಿಸುತ್ತಿರುವವರು. ಮಹಾನ್ ವ್ಯಕ್ತಿ ಶ್ರೀ ಛಾಯಾಪತಿಯವರು 'ಮಾತೃದೇವೋಭವ, ಪಿತೃದೇವೋಭವ' ಎಂಬಂತೆ ತಂದೆ ತಾಯಿಗಳನ್ನು ದೇವರೆಂದೇ ಭಾವಿಸಿದ್ದರು. ಅವರು ಕೇವಲ ಪ್ರಕಾಶಕರೇ ಆಗಿರದೆ ರಕ್ತಗತವಾಗಿ ಲೇಖಕರೂ ಆಗಿ ಅನೇಕ ಅಮೂಲ್ಯವಾದ ಪುಸ್ತಕಗಳನ್ನು ಸಹ ಬರೆದಿರುತ್ತಾರೆ. ಅವರ ಮೊದಲನೆಯ ಪುಸ್ತಕವೆ 'ಗುರುಶ್ರೇಷ್ಠ' ಅವರ ತಂದೆ ಶಾಮರಾಯರನ್ನು ಕುರಿತು. 1980- 81ನೇ ಇಸವಿಯಲ್ಲಿ ಛಾಯಾಪತಿಯವರು ಅವರ ಸ್ವಂತ ಧನಾರ್ಜನೆಯಿಂದ ಮೈಸೂರಿನ ಗೋಕುಲಂ ಬಡಾವಣೆಯಲ್ಲಿ ಸುಂದರವಾದ ಮನೆಯನ್ನು ನಿರ್ಮಿಸಿದರು. 1971ರಲ್ಲೇ ಶ್ರೀಮತಿ ಪುಷ್ಪಾ ಎಂಬುವರನ್ನು ವಿವಾಹವಾದರು. ಅವರ ಪತ್ನಿ ಶ್ರೀಮತಿ ಪುಷ್ಪಾರವರು ಸಹ ಸಹೃದಯಿ. ಕರುಣಾಮಯಿ, ಕಷ್ಟಸಹಿಷ್ಣೀ.... ಛಾಯಾಪತಿಯವರ ಸುಖ, ದುಃಖಗಳಲ್ಲಿ ಭಾಗಿಯಾಗಿ ಅತ್ತೆ ಮಾವಂದಿರನ್ನು ಗೌರವಪೂರ್ವಕವಾಗಿ ಕಾಣುತ್ತಾ ಸಹಬಾಳ್ವೆ ನಡೆಸಿಕೊಂಡು ಬಂದ ಓರ್ವ ಮೇಧಾವಿ.

---

ಎಚ್.ಎಸ್. ವೆಂಕಟಸುಬ್ಬಯ್ಯ

---

ತಳುಕಿನ ವೆಂಕಣ್ಣಯ್ಯನವರ ಗ್ರಂಥಮಾಲೆಯ ಅಭಿವೃದ್ಧಿಗಾಗಿ, ಮಾನ್ಯ ಛಾಯಾಪತಿಯವರು ಪ್ರಕಾಶಕರಾಗಿ ಪಟ್ಟ ಕಷ್ಟ ಅಷ್ಟಿಷ್ಟಲ್ಲ. ನನ್ನ ಅವರ ಒಡನಾಟ 1971ನೇ ಇಸವಿಯಿಂದ ಪ್ರಾರಂಭವಾಯಿತು. ನಾನು ಕಣ್ಣಾರೆ ಕಂಡಂತೆ ಅವರ ಗ್ರಂಥಮಾಲೆಯಲ್ಲಿ ಪ್ರಕಟಿಸಿದ ಅಮೂಲ್ಯವಾದ ಪುಸ್ತಕಗಳನ್ನು ಶಾಲಾ ಕಾಲೇಜುಗಳಿಗೆ ದೂರವಿರುವ ಊರುಗಳಿಗೆ ಕಟ್ಟುಕಟ್ಟುಗಳನ್ನು ಸಾರ್ವಜನಿಕ ವಾಹನಗಳಲ್ಲಿ ತೆಗೆದುಕೊಂಡು ಹೋಗಿ ಮಾರುತ್ತಿದ್ದರು. ಈ ರೀತಿ ಧನಾರ್ಜನೆ ಮಾಡಿ ಗೋಕುಲಂ ಬಡಾವಣೆಯಲ್ಲಿ ಮನೆಯನ್ನು ನಿರ್ಮಿಸಿ, ಇಬ್ಬರು ಮಕ್ಕಳನ್ನೂ ಸಹ ವಿದ್ಯಾವಂತರನ್ನಾಗಿ ಮಾಡಿದರು, ಹತ್ತಿರದ ಊರುಗಳಿಗೆ ಅವರಲ್ಲಿದ್ದ ದ್ವಿಚಕ್ರವಾಹನದಲ್ಲೇ ಹೋಗುತ್ತಿದ್ದರು. ಇಷ್ಟೆಲ್ಲಾ ಬವಣೆಗಳು ಇದ್ದರೂ ಸಹ ಅವರು ಅವರ ಪತ್ನಿ ಪುಷ್ಪಾ ಅವರು ಅಕ್ಷರದಾಸೋಹ ಮತ್ತು ಅನ್ನ ದಾಸೋಹವನ್ನು ಎಂದೂ ಕೈ ಬಿಟ್ಟವರಲ್ಲ. ಇಂದಿಗೂ ಸಹ ಅವರ ಮನೆಯಲ್ಲಿ ಯಾವ ಬೇಧಭಾವವು ಇಲ್ಲದೆ, ಅನ್ನ ದಾಸೋಹ ನಿರಂತರವಾಗಿ ಸಾಗುತ್ತಲೇ ಇದೆ.

ಮಾನ್ಯ ಛಾಯಾಪತಿಯವರು ಪಟ್ಟ ಕಷ್ಟಗಳಿಗೆ ಪ್ರತಿಫಲವಾಗಿ ಅವರ ಪುತ್ರ ಶ್ರೀ ಶ್ರೀನಿವಾಸ ಪವನ್ ರವರು ವಿದೇಶದಲ್ಲಿ ಉನ್ನತ ವ್ಯಾಸಂಗ ಮಾಡಿ ಬಂದು, ಈಗ ಭಾರತದಲ್ಲೇ ಇರುವ ಟಾಟಾ ಸಂಸ್ಥೆಯಲ್ಲಿ ಉನ್ನತ ಹುದ್ದೆಯಲ್ಲಿದ್ದಾರೆ. ಇನ್ನೋರ್ವ ಮಗಳು ಪ್ರತಿಭಾರವರು ಬೆಂಗಳೂರಿನಲ್ಲಿರುವ ಗಣಕಯಂತ್ರ ತಜ್ಞರೊಬ್ಬರನ್ನು ಲಗ್ನವಾಗಿ ಸುಖ ಜೀವನ ನಡೆಸುತ್ತಿದ್ದಾರೆ. ಅವರಿಗೂ ಸಹ ಇಬ್ಬರು ಗಂಡು ಮಕ್ಕಳಿದ್ದು, ಒಳ್ಳೆಯ ಶಿಕ್ಷಣ ಶಾಲೆಗಳಲ್ಲಿಶಿಕ್ಷಣ ಪಡೆಯುತ್ತಿದ್ದಾರೆ. ಮಾನ್ಯ ಛಾಯಾಪತಿಯವರ ವ್ಯಕ್ತಿತ್ವದ ಬಗ್ಗೆ ಹೇಳುವುದಾದರೆ ಅವರು ಬಹಳ ಸರಳ ಮತ್ತು ಸಂಕೋಚ ಸ್ವಭಾದವರು, ಅವರ ತಂದೆಯಂತೆಯೇ ಅವರೂ ಸಹ ಎಂದು ಯಾರನ್ನು ಏನನ್ನು ಕೇಳಿದವರಲ್ಲ, ಅವರ ಕೈಲಾದ ಸಹಾಯವನ್ನು ಕೇಳಿದವರಿಗೆ ಇಂದಿಗೂ ನಿರ್ವಂಚನೆಯಾಗಿ, ನಿರ್ಭಯವಾಗಿ ಮಾಡುತ್ತಾರೆ. ಆದರೆ ಅನ್ಯಾಯದ ಕೆಲಸಕ್ಕೆ ಯಾರಾದರೂ ಇವರ ಸಹಾಯವನ್ನು ಬಯಸಿ ಬಂದರೆ, ಅವರು ಯಾರೇ ಆಗಿರಲಿ ಇವರು ಸಹಾಯ ಮಾಡುವವರಲ್ಲ. ಇವರು ಸಾಹಿತ್ಯ ಕ್ಷೇತ್ರದಲ್ಲಿ ಮಾಡಿರತಕ್ಕ ಅಮೋಘವಾದ ಸೇವೆಗಾಗಿ ಪುರಸ್ಕಾರ ಪ್ರಶಸ್ತಿಗಳನ್ನು ಇವರು ಎಂದೂ ಅಪೇಕ್ಷಿಸಲೂ ಇಲ್ಲ.

ಇವರ ಒಡನಾಟ ದೊಡ್ಡ ದೊಡ್ಡ ಸಾಹಿತಿಗಳು, ಲೇಖಕರು, ಇತರೆ ಪ್ರಕಾಶಕರು, ರಾಜಕೀಯ ವ್ಯಕ್ತಿಗಳು ಮತ್ತು ಅನೇಕ ಗಣ್ಯವ್ಯಕ್ತಿಗಳ ಸಹವಾಸವೇ ಆಗಿರುತ್ತದೆ. ಇವರು ಅನ್ಯರ ಬಗ್ಗೆ ಟೀಕೆ ಟಿಪ್ಪಣೆಗಳನ್ನು ಎಂದೂ ಮಾಡಿದವರಲ್ಲ, 'ಸತ್ಯಮೇವ ಜಯತೆ' ಎಂದು ಸತ್ಯವನ್ನೇ ಹೇಳಿಕೊಂಡು ಬಂದಂತಹ ವ್ಯಕ್ತಿಯಾದ್ದರಿಂದ, ಇವರ

ವ್ಯಕ್ತಿತ್ವವನ್ನು ತಿಳಿದಂತಹ ಕೆಲವು ಗಣ್ಯವ್ಯಕ್ತಿಗಳು ಇವರಿಗೆ ಅನೇಕ ಸಲ ಸನ್ಮಾನಗಳನ್ನು ಮಾಡಿದ್ದಾರೆ.

ಆಗಾಗ್ಗೆ ಸನ್ಮಾನಗಳು ನಿರಂತರವಾಗಿ ನಡೆಯುತ್ತಲೂ ಇದೆ, ಇಷ್ಟೆಲ್ಲಾ ಕಷ್ಟಪಟ್ಟು ಸಾಹಿತ್ಯ ಕ್ಷೇತ್ರದಲ್ಲಿ ಮನ್ನಣೆ ಪಡೆದಿರುವ ಈ ವ್ಯಕ್ತಿ ಪ್ರತಿಷ್ಠಿತ ಪ್ರಶಸ್ತಿಗಳಿಗೆ ಅರ್ಹರೂ ಎಂದೂ ಹೇಳಿದರೂ ತಪ್ಪಾಗಲಾರದು. ಮಾನ್ಯ ಛಾಯಾಪತಿಯವರನ್ನು, ಹಾಡಿ ಹೊಗಳಿದ್ದಾನೆಂದು ಭಾವಿಸದೆ(ಇದರಲ್ಲಿ ವೈಯಕ್ತಿಕವಾಗಿ ನನಗೆ ಯಾವ ಲಾಭವೂ ಇಲ್ಲ) ಅವರು ಮಾಡಿರುವ ಕೆಲಸಗಳನ್ನು ವಿಮರ್ಶಿಸಿ ಅವರ ವ್ಯಕ್ತಿತ್ವಕ್ಕೆ ಮನ್ನಣೆ ನೀಡಬೇಕಾಗಿ ಕೋರಿಕೆ.

ಅಂದು ಸಾರ್ವಜನಿಕ ವಾಹನಗಳಲ್ಲಿ ಪುಸ್ತಕಗಳನ್ನು ಕೊಂಡೊಯ್ಯುತ್ತಿದ್ದ ಛಾಯಾಪತಿಯವರು, ಇಂದು ಸ್ವಂತವಾಹನದಲ್ಲಿ ಚಾಲಕನೊಡನೆ ಓಡಾಡುತ್ತಿರುವುದೂ ನಿಜವಾಗಿಯು ಒಂದು ಹೆಮ್ಮೆಯ ವಿಷಯವೇ. ಅವರಿಗೆ 2014 ನೇ ಮೇ ತಿಂಗಳಲ್ಲಿ ಎಪ್ಪತ್ತು ವರ್ಷಗಳು ತುಂಬಲಿದೆ.

ಸುಭಾಷಿತದಲ್ಲಿ ಹೇಳಿರುವಂತೆ ಸರ್ಪಂ ಪಿಬಂತಿ ಪವನಂ |

ನಚದುರ್ಬಲಸ್ಥತೇ |

ಶುರ್ಕ್ಲೀ ತೃಣೈ ವನಗಜಾ ಬಲಿನೋರ್ ಭವಂತಿ |

ಸಾತ್ವಿಕವಾದ ಮಿತವಾದ ಆಹಾರವನ್ನೇ ಸೇವಿಸುತ್ತಿದ್ದರೂ ಸಹ, ಆ ಆಂಜನೇಯ ಸ್ವಾಮಿಯ ದಯೆಯಿಂದಲೂ, ಪತ್ನಿ ಮಕ್ಕಳ ಆರೈಕೆ ಮತ್ತು ಹಾರೈಕೆಗಳಿಂದಲೂ ಗಟ್ಟಿಯಾಗಿದ್ದು, ದೇಹಾರೋಗ್ಯವನ್ನು ಕಾಪಾಡಿಕೊಂಡಿದ್ದು, ಅವರ ಗ್ರಂಥಮಾಲೆಗಳ ಕೆಲಸಗಳನ್ನೂ ಅನ್ನದಾಸೋಹವನ್ನೂ, ನಡೆಸಿಕೊಂಡು ಹೋಗುತ್ತಿರುವ, ಇವರಿಗೆ ಭಗವಂತನು ಆಯುರಾರೋಗ್ಯವನ್ನು ಕರುಣಿಸಲೀ ಎಂದು ಕೋರಿಕೊಳ್ಳುವೆ.

## ಪ್ರೀತಿಯ ಸೋದರ

ತಮ್ಮ ಹಿರಿಯಣ್ಣನ ಸ್ಮರಣಾರ್ಥ ತ.ಸು.ಶಾಮರಾಯರು 1950ರಲ್ಲಿ 'ತಳುಕಿನ ವೆಂಕಣ್ಣಯ್ಯ ಸ್ಮಾರ ಗ್ರಂಥಮಾಲೆ' ಯನ್ನು ಸ್ಥಾಪಿಸಿದರು. ಅವರು ತಮ್ಮ ಪ್ರಾಧ್ಯಾಪಕ ವೃತ್ತಿಯು ಜೊತೆಗೆ ಈ ಗ್ರಂಥಮಾಲೆಯನ್ನು ನಡೆಸುತ್ತಾ ಬಂದರು. ತಮ್ಮ ಅಣ್ಣ ವೆಂಕಣ್ಣಯ್ಯನವರ ವಿದ್ವತ್ಪೂರ್ಣ ಬರವಣಿಗೆ, ಅವರಿಗೆ ಪ್ರಿಯವಾಗಿದ್ದ ಕುಮಾರ ವ್ಯಾಸನ ಹಲವು ಪರ್ವಗಳ ಸಂಗ್ರಹವನ್ನು ತಮ್ಮ ಗ್ರಂಥಮಾಲೆಯಲ್ಲಿ ಪ್ರಕಟಿಸುವುದರ ಜೊತೆಗೆ ತಮ್ಮ ಸಮಕಾಲೀನ ಲೇಖಕರ ಹಲವಾರು ಗ್ರಂಥಗಳನ್ನು ಪ್ರಕಟಿಸಿ, ಕನ್ನಡ ಸಾಹಿತ್ಯಾರಾಧನೆಯನ್ನು ತಮ್ಮ ಬದುಕನ್ನು ಸಾರ್ಥಕಗೊಳಿಸಿದರು. ಹದಿನೇಳು ವರ್ಷಕಾಲ ಈ ಪ್ರಕಾಶನದ ಸಂಸ್ಥೆಯನ್ನು ಅಚ್ಚುಕಟ್ಟಾಗಿ ನಿರ್ವಹಿಸಿ, ಒಂದು ಪ್ರತಿಷ್ಠಿತ ಸಂಸ್ಥೆಯಾಗಿ ಮಾರ್ಪಡಿಸಿದರು. ತಮ್ಮ ಈ ಗ್ರಂಥಮಾಲೆಯನ್ನು ಸಮರ್ಥವಾಗಿ ನಡೆಸಬಲ್ಲ ಸಾಮರ್ಥ್ಯ, ಕಾರ್ಯದಕ್ಷತೆ, ಶ್ರದ್ಧೆ ತಮ್ಮ ಎರಡನೆಯ ಮಗ ಛಾಯಾಪತಿಯಲ್ಲಿ ಇರುವುದನ್ನು ಗಮನಿಸಿ. 1998ರಲ್ಲಿ ಅದರ ಸಂಪೂರ್ಣ ಹೊಣೆಯನ್ನು ಅವನಿಗೆ ನಿರ್ವಹಿಸಿದರು.

ತಳುಕು ವಂಶದ ಪ್ರಾತಃ ಸ್ಮರಣೀಯ ಹಿರಿಯ ವ್ಯಕ್ತಿ ಟಿ.ಎಸ್. ವೆಂಕಣ್ಣಯ್ಯ ನವರು ಬದುಕಿನ ರೀತಿ - ನೀತಿಗಳನ್ನು ಅರಿತ ಆದರ್ಶ ಪುರುಷ. ಮೈಸೂರು ವಿಶ್ವವಿದ್ಯಾ ನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ ಅವರು ಪ್ರಾಚೀನ ಹಾಗೂ ಆಧುನಿಕ ಸಾಹಿತ್ಯದ ಸಾರವನ್ನು ಹೀರಿ, ನವೋದಯ ಸಾಹಿತ್ಯಕ್ಕೆ ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ಸಲ್ಲಿಸಿದವರು. ಹೊಸ ಗನ್ನಡ ಸಾಹಿತ್ಯದ ಅಶ್ವಿನೀ ದೇವತೆ ಗಳಲ್ಲಿ ಒಬ್ಬರೆಂದು ಖ್ಯಾತರಾದ ಅವರ ಬದುಕಿನ ರೀತಿ - ನೀತಿಗಳನ್ನು, ಆದರ್ಶವನ್ನು ತಮ್ಮ ಬದುಕಿನಲ್ಲಿ ರೂಪಿಸಿಕೊಂಡು ಬಾಳಿ ಬದುಕಿದ ಹಿರಿಯ ಜೀವಿ, ತ.ಸು. ಶಾಮರಾಯರು. ಅವರಿಗೆ ವೆಂಕಣ್ಣಯ್ಯನವರು ಅಣ್ಣನು ಮಾತ್ರವಲ್ಲದೆ ಪೂಜನೀಯ ರಾದ ಗುರುಶ್ರೇಷ್ಠರೂ ಆಗಿದ್ದರು. 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ'ಯ ಹೊಣೆಯನ್ನು ಹೊತ್ತ ಟಿ.ಎಸ್. ಛಾಯಾಪತಿ, ತಮ್ಮ ತಂದೆಯವರ ಆಶಯವನ್ನು

**ಟಿ.ವಿ. ಸುಬ್ರಮಣ್ಯ**

ಪೂರ್ಣಗೊಳಿಸಲು ಪಣತೊಟ್ಟರು. ವಾಣಿಜ್ಯ ಶಾಸ್ತ್ರದಲ್ಲಿ ಅವರು ಸ್ನಾತಕೋತ್ತರ ಪದವಿಯನ್ನು ಪಡೆದಿದ್ದರೂ, ತಮ್ಮ ವೃತ್ತಿ ಜೀವನಕ್ಕೆ ಅದನ್ನು ಆಶ್ರಯಿಸದೆ, ತಮ್ಮ ತಂದೆಯಿಂದ ಬಳುವಳಿಯಾಗಿ ಬಂದ ಗ್ರಂಥಮಾಲೆಯನ್ನೇ ಜೀವನ ವೃತ್ತಿಯಾಗಿಸಿ, ಅದರ ಸರ್ವತೋಭಿವೃದ್ಧಿಗಾಗಿ ಶ್ರಮಿಸಿದರು, ಅದಕ್ಕಾಗಿ ಶ್ರದ್ಧೆಯಿಂದ ದುಡಿದರು. ಒಂದು ಪ್ರಕಾಶನ ಸಂಸ್ಥೆಯ ನಿರ್ವಹಣೆ ಸುಲಭ ಸಾಧ್ಯವಾದುದೇನೂ ಅಲ್ಲ. ಹಲವಾರು ಏಳು -ಬೀಳುಗಳನ್ನು ಎದುರಿಸಬೇಕಾಗುತ್ತದೆ. ಛಾಯಾಪತಿ ಅವೆಲ್ಲವನ್ನೂ ದಿಟ್ಟತೆ - ಸ್ಥಿರ ಮನಸ್ಸು - ಶ್ರದ್ಧೆಯಿಂದ ಎದುರಿಸಿ, ತಮ್ಮ ಕನಸನ್ನು ನನಸಾಗಿಸಿದರು. ತಮ್ಮ ಬದುಕಿಗೂ - ಗ್ರಂಥಮಾಲೆಗೂ ಭದ್ರವೂ - ಸುಂದರವೂ ಆದ ನಿಲು - ನೆಲೆಯನ್ನು ಒದಗಿಸಿದರು. ನಾವು ಇಂದು ಈ ಗ್ರಂಥಮಾಲೆಯಲ್ಲಿ ಕನ್ನಡ ಸಾಹಿತ್ಯದ ನಾನಾ ಪ್ರಕಾರಗಳ ವಿವಿಧ ವಿನ್ಯಾಸವುಳ್ಳ, ಅಚ್ಚುಕಟ್ಟಾದ ಸುಂದರ ಮುದ್ರಣದಿಂದ ಕೂಡಿರುವ ಹಲವಾರು ಗ್ರಂಥ ಸಮುದಾಯವನ್ನು ಕಾಣುತ್ತೇವೆ. ಪ್ರತಿಷ್ಠಿತ ಲೇಖಕರ ಜೊತೆಗೆ ಹೊಸ ಲೇಖಕರ ಕೃತಿಗಳಿಗೂ ಅವಕಾಶವನ್ನು ಕಲ್ಪಿಸಿಕೊಟ್ಟ, ಈ ಗ್ರಂಥಮಾಲೆ ಇಂದು ಕನ್ನಡ ನಾಡಿನ ಪ್ರತಿಷ್ಠಿತ ಗ್ರಂಥಮಾಲೆಯಾಗಿ, ಸಾಹಿತ್ಯಾಸಕ್ತರಾದ ಸಹೃದಯರ ಜ್ಞಾನ ದೇಗುಲವಾಗಿ ರೂಪುಗೊಂಡಿದೆ.

ಛಾಯಾಪತಿ ಪುಸ್ತಕ ಪ್ರಕಾಶಕರು ಮಾತ್ರವಲ್ಲದೆ ಸೃಜನಶೀಲ ಬರಹಗಾರರೂ ಆಗಿದ್ದಾರೆ. ಗುರುಶ್ರೇಷ್ಠ, ಗಾಂಧೀಜಿಯ ಕನಸು ನಜೀರರಿಂದ ನನಸು, ಆಡಳಿತಭಾಷೆ ಕನ್ನಡ - ಮುಂತಾದ ಇಪ್ಪತ್ತೆರಡು ಕೃತಿಗಳನ್ನೂ ರಚಿಸಿ, ಸಾಹಿತ್ಯ ಕೃತಿಯಲ್ಲಿ ತೊಡಗಿಸಿರುವುದನ್ನು ಗಮನಿಸುತ್ತೇವೆ. ತಮ್ಮ ಎಪ್ಪತ್ತರ ಹರೆಯದಲ್ಲಿಯೂ ಕ್ರಿಯಾಶೀಲರಾಗಿ ಪ್ರತಿಷ್ಠಿತರ ಗ್ರಂಥಗಳನ್ನು ಪ್ರಕಟಿಸುವುದರ ಮೂಲಕ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತ ಗೊಳಿಸಿದ ಯಶಸ್ಸು, ಇದೆರದು, ಸ್ನೇಹಜೀವಿ, ವಿವೇಚನಾಶೀಲ, ಸಮಯ ಪ್ರಜ್ಞೆಯುಳ್ಳ ಛಾಯಾಪತಿಯವರನ್ನು ಹಲವು ಸಂಘ ಸಂಸ್ಥೆಗಳು ಗೌರವಿಸಿ ಪ್ರಶಸ್ತಿಗಳನ್ನು ನೀಡಿರುವುದು ಅತಿಶಯವೇನೂ ಅಲ್ಲ. ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಕ್ರಿಯಾಶೀಲರಾದ ಛಾಯಾಪತಿಯವರಿಂದ ಮತ್ತಷ್ಟು ಸಮೃದ್ಧಿಯನ್ನು ಹೊಂದಲಿ ಎಂದು ಆಶಿಸುತ್ತೇನೆ.

# ಧೀಮಂತ ಪ್ರಕಾಶಕ

'ಮೈಸೂರಿನ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯನ್ನು 1999-2000ನೇ ಸಾಲಿನಲ್ಲಿ ಶ್ರೇಷ್ಠ ಪ್ರಕಾಶನ ಸಂಸ್ಥೆಯೆಂದು ಕರ್ನಾಟಕ ಸರ್ಕಾರ ಪ್ರಶಸ್ತಿ ನೀಡಿದೆ. ಪ್ರಶಸ್ತಿಯ ಅಂಗವಾಗಿ ಇಪ್ಪತ್ತೈದು ಸಾವಿರ ರೂಪಾಯಿ ನಗದು, ಪ್ರಶಸ್ತಿಪತ್ರ ಮತ್ತು ಸ್ಮರಣಿಕೆಯನ್ನು ಮುಂದೆ ನಡೆಯಲಿರುವ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ನೀಡಿ ಗೌರವಿಸಲಾಗುವುದು' - 'ಉದಯವಾರ್ತೆ'ಯಲ್ಲಿ ಪ್ರಸಾರವಾದ ಈ ಸುದ್ದಿಯನ್ನು ಆಲಿಸುತ್ತಿದ್ದಂತೆ ನನ್ನ ನೆನಪಿನ ಸುರುಳಿ ಬಿಚ್ಚಿಕೊಳ್ಳತೊಡಗಿತು.

1950ರ ದಶಕದಲ್ಲಿ ನನ್ನ ಪೂಜ್ಯ ತಂದೆ ದಿ. ತ.ಸು. ಶಾಮರಾಯರು ತಮ್ಮ ಗೆಳೆಯ ದಿ. ಹೆಚ್‌ಎಂ. ಶಂಕರನಾರಾಯಣರಾಯರೊಡಗೂಡಿ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯನ್ನು ಪ್ರಾರಂಭಿಸಿದರು. ಆರಾಧ್ಯದೈವವೆಂದೇ ತಾವು ನಂಬಿದ್ದ ತಮ್ಮ ಅಣ್ಣ ದಿ. ಟಿ.ಎಸ್. ವೆಂಕಣ್ಣಯ್ಯನವರ ಹೆಸರನ್ನು ಚಿರಶಾಶ್ವತಗೊಳಿಸುವ ಮಹದುದ್ದೇಶ ಈ ಪ್ರಯತ್ನದ ಹಿಂದೆ ಅಡಗಿತ್ತು. ಆರೋಗ್ಯಕರ ವಾಚನಾಭಿರುಚಿಯನ್ನು ಬೆಳೆಸುವ, ಉತ್ತಮ ಸಾಹಿತ್ಯವನ್ನು ಒದಗಿಸುವ ಸದುದ್ದೇಶವನ್ನು ಈ ಗ್ರಂಥಮಾಲೆ ಹೊಂದಿತ್ತು. ಹಲವು ಒಳ್ಳೆಯ ಪುಸ್ತಕಗಳೂ ಪ್ರಕಟವಾದವು. ಕಾರಣಾಂತರದಿಂದ ಶ್ರೀ ಹೆಚ್.ಎಂ. ಶಂಕರನಾರಾಯಣರಾಯರು ಸಂಸ್ಥೆಯನ್ನು ತೊರೆದು ತಮ್ಮದೇ ಆದ ಪ್ರಕಾಶನ ಸಂಸ್ಥೆಯನ್ನು ಪ್ರಾರಂಭಿಸಿದರು. ಸದಭಿರುಚಿಯ ಪ್ರಕಾಶಕರೆಂಬ ಕೀರ್ತಿಗೆ ಪಾತ್ರರೂ ಆದರು. ಒಬ್ಬಂಟಿಗರಾಗಿಯೇ ಪ್ರಕಾಶನದ ಹೊರೆಯನ್ನು ನಿರ್ವಹಿಸಿದ ನಮ್ಮ ತಂದೆ ತಮ್ಮ ಅಣ್ಣ ಟಿ.ಎಸ್. ವೆಂಕಣ್ಣಯ್ಯ, ಅಶ್ವತ್ಥ, ಆನಂದ, ಸಂಗೀತಕಲಾನಿಧಿ ಕೆ. ವಾಸುದೇವಚಾರ್ಯ, ಕೆ. ಗೋಪಾಲಕೃಷ್ಣ ರಾವ್, ಎನ್. ಸೂರಪ್ಪ, ನ. ಸುಬ್ರಹ್ಮಣ್ಯ, ಡಿ.ಎಲ್. ನರಸಿಂಹಾಚಾರ್ ಮುಂತಾದವರ ಪುಸ್ತಕಗಳನ್ನು ಪ್ರಕಟಿಸಿದ್ದಲ್ಲದೆ ತಾವೂ ಹಲವಾರು ಪುಸ್ತಕಗಳನ್ನು ಬರೆದು ಪ್ರಕಟಿಸಿದರು. ಉದಯೋನ್ಮುಖರಾಗಿದ್ದ, ಮುಂದೆ ಪ್ರಖ್ಯಾತ ಕವಿಗಳಾಗಿ ಪ್ರಸಿದ್ಧರಾದ ಶ್ರೀಯುತರಾದ ಜಿ.ಎಸ್. ಶಿವರುದ್ರಪ್ಪ, ಮುಂತಾದವರ ಕೃತಿಗಳನ್ನೂ ಹೊರತಂದರು. ತ.ವೆಂ. ಸ್ಮಾರಕ ಗ್ರಂಥಮಾಲೆ ಶ್ರೇಷ್ಠ ಪ್ರಕಾಶನ

ಸಂಸ್ಥೆಗಳಲ್ಲೊಂದೆಂಬ ಹೆಸರನ್ನು ಪಡೆಯಿತು. ಹಲವಾರು ಜನ ಹೊಸ ಬರಹಗಾರರನ್ನು ಸಾಹಿತ್ಯಲೋಕಕ್ಕೆ ಪರಿಚಯಿಸುವ ಸಾರ್ಥಕ ಕಾರ್ಯವೂ ನಮ್ಮ ತಂದೆಯವರಿಂದ ನಡೆಯಿತು.

ನನ್ನ ತಂದೆಯವರಿಗೆ ಪ್ರಕಾಶನದಿಂದ ಲಾಭ ಮಾಡುವುದು ಉದ್ದೇಶವಾಗಿಯೂ ಇರಲಿಲ್ಲ, ಅದರಿಂದ ಅವರು ಶ್ರೀಮಂತರಾಗಲೂ ಇಲ್ಲ. ಅವರು ಅಂದಿನ ಸೀಮಿತ ಮಾರುಕಟ್ಟೆಗೆ ಅನುಗುಣವಾಗಿ ಕನಿಷ್ಠ ಲಾಭ ಬರುವಂತೆ ಪುಸ್ತಕದ ಬೆಲೆಯನ್ನು ಇರಿಸುತ್ತಿದ್ದರು. ಆದರೂ ಇಂದಿನಷ್ಟು ದುಬಾರಿಯಲ್ಲದ ಅಂದಿನ ಜೀವನಕ್ರಮದಲ್ಲಿ ಪ್ರಕಾಶನದ ನೆರವಿನಿಂದಲೇ ಸ್ವಂತ ಮನೆಯನ್ನು ಮಾಡಿಕೊಂಡರು. ಪುಸ್ತಕಗಳ ವಿನ್ಯಾಸ, ಮುದ್ರಣ ಇತ್ಯಾದಿಗಳ ಬಗೆಗೆ ಅವರು ಹೆಚ್ಚಾಗಿ ತಲೆಕೆಡಿಸಿಕೊಂಡವರಲ್ಲ. ತಮ್ಮ ಪ್ರಾಧ್ಯಾಪಕ ವೃತ್ತಿಯೊಂದಿಗೆ ಪ್ರಕಾಶನದ ಕಾರ್ಯವನ್ನು ಒಂದು ಹವ್ಯಾಸವನ್ನಾಗಿ ಮಾತ್ರ ಅವರು ಇರಿಸಿಕೊಂಡಿದ್ದರು. ಅವರ ಶಿಷ್ಯರ, ಅಭಿಮಾನಿಗಳ ಸಹಾಯ, ಸಹಕಾರಗಳಿಂದ ಪ್ರಕಾಶನ ಸಂಸ್ಥೆ ಆರಕ್ಕೆ ಏರದೆ, ಮೂರಕ್ಕೆ ಇಳಿಯದೆ ಹೇಗೋ ನಡೆದುಕೊಂಡು ಹೋಗುತ್ತಿತ್ತು.

1960ರ ದಶಕದಲ್ಲಿ ನನ್ನ ತಮ್ಮ ಛಾಯಾಪತಿ ಪ್ರಕಾಶನದ ಚುಕ್ಕಾಣಿಯನ್ನು ಹಿಡಿಯಲು ತೀರ್ಮಾನಿಸಿದ. ಪ್ರಕಾಶನಕ್ಕೆ ಸಂಬಂಧಿಸಿದ ಕೆಲವು ಹೊರಗಿನ ಕಾರ್ಯಗಳಲ್ಲಿ ನಾನು ನನ್ನ ತಂದೆಯವರಿಗೆ ಕಿಂಚಿತ್ ನೆರವನ್ನು ನೀಡುತ್ತಿದ್ದೆ. ಆಗೆಲ್ಲ ನನ್ನ ತಮ್ಮ ಆ ಬಗ್ಗೆ ಕಿಂಚಿತ್ತೂ ಆಸಕ್ತಿಯನ್ನು ತೋರಿಸಿರಲಿಲ್ಲ. ಅವನು ಎಂ.ಕಾಂ. ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯೊಡನೆಯೇ ಉತ್ತೀರ್ಣನಾಗಿದ್ದ. ದಿಢೀರನೆ ಪ್ರಕಾಶನದ ಹೊಣೆ ಹೊರಲು ಅವನು ತೀರ್ಮಾನಿಸಿದ್ದು ನಮಗೆಲ್ಲ ಆಶ್ಚರ್ಯವನ್ನುಂಟುಮಾಡಿತ್ತು. ಬ್ಯಾಂಕ್, ಜೀವವಿಮೆ ಅಥವಾ ಬೇರಾವುದೇ ಆರ್ಥಿಕ, ಔದ್ಯೋಗಿಕ ಸಂಸ್ಥೆಗಳಲ್ಲಿ ಅವನಿಗೆ ಉದ್ಯೋಗ ದೊರೆಯುವುದು ಕಷ್ಟವಾಗಿರಲಿಲ್ಲ. ಒಳ್ಳೆಯ ವೇತನ, ಬಡ್ತಿ, ನೆಮ್ಮದಿಯ ಭವಿಷ್ಯದ ಭರವಸೆಗಳೆಲ್ಲ ಅವನ ಮುಂದೆ ಇದ್ದುವು. ಆದರೆ ಸುಖದ ಈ ಮಾರ್ಗಕ್ಕಿಂತ, ಸವಾಲುಗಳು ಎದುರಾಗಬಹುದಾದ ಕಠಿಣ ಮಾರ್ಗವನ್ನೇ ಅವನು ಆಯ್ದುಕೊಂಡ. ತಾನು ಕಲಿತ ವಿದ್ಯೆಯನ್ನು ಪ್ರಾಯೋಗಿಕವಾಗಿ ಅನುಷ್ಠಾನಕ್ಕೆ ತರುವ ತೀರ್ಮಾನವನ್ನು ಅವನು ತೆಗೆದುಕೊಂಡಿದ್ದ. ಸ್ವಂತ ಕಾಲ ಮೇಲೆ ನಿಂತು 'ಮನುಷ್ಯ'ನಾಗುವ ದೃಢ ನಿರ್ಧಾರ ಅವನದಾಗಿತ್ತು. ಅವನ ತೀರ್ಮಾನವನ್ನು ಟೀಕಿಸಿದವರು, ಮೂದಲಿಸಿದವರು, 'ಅಯ್ಯೋ ಪಾಪ' ಎಂದು ಮರುಕ ಪಟ್ಟವರು ಹಲವರು. ಆದರೆ ಆತ್ಮವಿಶ್ವಾಸ, ತನ್ನ ಸಾಮರ್ಥ್ಯದಲ್ಲಿ ದೃಢನಂಬಿಕೆ ಹೊಂದಿದ್ದ ನನ್ನ ತಮ್ಮ 'ಪ್ರಕಾಶನ ಸಮುದ್ರದಲ್ಲಿ ಎದುರಾಗಬಹುದಾದ ನೆರೆ, ತೆರೆಗಳಿಗೆ' ಹೆದರದೆ ಧುಮುಕಿಯೇ ಬಿಟ್ಟ!

ಪ್ರಕಾಶನ ಸಂಸ್ಥೆಯ ಹೊಣೆಯನ್ನು ನನ್ನ ತಮ್ಮ ಛಾಯಾಪತಿ ವಹಿಸಿಕೊಂಡಾಗ ಅವನಿಗೆ ಎದುರಾದ ಸಮಸ್ಯೆಗಳು ಒಂದೆರಡಲ್ಲ. 'ಖಚಿತವಾಗಿ ಮಾರಾಟವಾಗುತ್ತವೆಂಬ ಖಾತರಿ'ಯಿದ್ದ ಕೆಲವೇ ಪುಸ್ತಕಗಳೊಂದಿಗೆ ಅವನ ವ್ಯಾಪಾರೋದ್ಯಮದ ಸಾಹಸ ಸಾಗಬೇಕಿತ್ತು. ಎಪ್ಪತ್ತರ ದಶಕದಲ್ಲಿ ಆಗಲೇ ಹಲವಾರು ಪ್ರಕಾಶನ ಸಂಸ್ಥೆಗಳು ಪ್ರತಿಷ್ಠಿತವಾಗಿದ್ದುವು. ಅಲ್ಲಿನ ಪ್ರಕಟಣೆಗಳಲ್ಲಿ ವೈವಿಧ್ಯಮಯತೆ ಇತ್ತು, ಪುಸ್ತಕಗಳ ವಿನ್ಯಾಸದಲ್ಲಿ ಹೊಸತನವಿತ್ತು. ಜನಪ್ರಿಯರೂ, ಖ್ಯಾತನಾಮರೂ ಆದ ಬರಹಗಾರರ ಪಡೆಯೇ ಆ ಸಂಸ್ಥೆಗಳ ನೆರವಿಗಿತ್ತು. ವ್ಯಾಪಾರಲೋಕದ ಒಳಹೊರಗನ್ನು ಚೆನ್ನಾಗಿ ಬಲ್ಲ ಚಾಣಾಕ್ಷರಾಗಿದ್ದರು ಪ್ರಕಾಶಕರು, ಪಠ್ಯ ಪುಸ್ತಕಗಳ ಪ್ರಕಟಣೆ ದೊರಕಿಸಿಕೊಳ್ಳಬಲ್ಲ ಚಾತುರ್ಯ ಅವರಿಗಿತ್ತು. ಲೇಖಕರಿಗೆ ಒಳ್ಳೆಯ ಸಂಭಾವನೆ ನೀಡುವ ಶಕ್ತಿ, ಸಾಮರ್ಥ್ಯ ಅವರಿಗಿತ್ತು. ಇದೆಲ್ಲಕ್ಕಿಂತ ಹೆಚ್ಚಾಗಿ 'ಕತ್ತು ಹಿಸುಕುವಂತಹ ಪೈಪೋಟಿ' ಇತ್ತು. ಈ ಎಲ್ಲ ಸವಾಲುಗಳಿಗೂ ಎದುರಾಗಿ ನಿಂತು ತನ್ನ 'ಸ್ವಂತ ವ್ಯಕ್ತಿತ್ವ'ವನ್ನು ನನ್ನ ತಮ್ಮ ರೂಪಿಸಿಕೊಳ್ಳಬೇಕಾಗಿತ್ತು.

ನನ್ನ ತಮ್ಮ ಛಾಯಾಪತಿ ಈ ಎಲ್ಲ ಸವಾಲುಗಳನ್ನೂ ದಿಟ್ಟ ತನದಿಂದ ಎದುರಿಸಿ ಸಫಲನಾದುದು ಒಂದು ಸಾಹಸಮಯ ಯಶೋಗಾಥೆ. ಅವನಿಗೆ ಇದ್ದ ಒಂದೇ ಬಲವೆಂದರೆ ನನ್ನ ತಂದೆಯವರ ಆಶೀರ್ವಾದದ ಶ್ರೀರಕ್ಷೆ ಹಾಗೂ ಜೀವನದಲ್ಲಿ ಏನನ್ನಾದರೂ ಸಾಧಿಸಲೇಬೇಕೆಂಬ ಅಸೀಮ ಹಂಬಲ. ಈ ಬಲವನ್ನೇ ನಂಬಿ ಮುಂದೆ ಸಾಗಿದ ಅವನಿಗೆ ಪ್ರಾರಂಭದ ಹಂತಗಳಲ್ಲಿ ಎದುರಾದ ಕಷ್ಟಗಳು ಸಾಮಾನ್ಯರ ಧೈರ್ಯ, ನೆಮ್ಮದಿ ಕೆಡಿಸುವಂತಹವು. ಮನಸ್ಸು ತೀರಾ ಹತಾಶಗೊಂಡ ಎಷ್ಟೋ ಸಂದರ್ಭಗಳಲ್ಲಿ 'ಸರ್ಕಾರಿ ಉದ್ಯೋಗವೊಂದನ್ನು ಹಿಡಿದಿದ್ದರೆ ನೆಮ್ಮದಿಯಾಗಿರುತ್ತಿದ್ದೆ' ಎಂದು ಅವನು ಉದ್ಗಾರವೆಳೆದದ್ದೂ ಉಂಟು. ಆಗಿನ ದಿನಗಳಲ್ಲಿ ಸಕಾಲಕ್ಕೆ ಸರಿಯಾಗಿ ಅನ್ನ, ನೀರಿಲ್ಲದೆ, ವಿಶ್ರಾಂತಿಯಿಲ್ಲದೆ ಅಲೆದಾಡಿರುವುದಕ್ಕೆ ಲೆಕ್ಕವೇ ಇಲ್ಲ. ಪ್ರಕಾಶನದ ಏಳಿಗೆಗಾಗಿ ದುಡಿಯುವಾಗ ವೈಯಕ್ತಿಕ ಬೇಕು, ಬೇಡಗಳನ್ನು ನಿರ್ಲಕ್ಷಿಸಿರುವ ಸಂದರ್ಭಗಳೂ ಕಡಿಮೆಯೇನಲ್ಲ. ಜನದ ನಿಷ್ಠುರ, ಬೈಗಳು, ಟೀಕೆ - ಟಿಪ್ಪಣಿಗಳು, ಆರೋಪಗಳು, ಆಗದವರ ದ್ವೇಷಾಸೂಯೆಗಳು ಅವನನ್ನು ಅಪ್ಪಳಿಸಿದುದು ಅದೆಷ್ಟು ಬಾರಿಯೊ!? ಇವೆಲ್ಲಕ್ಕೂ ಅಚಲನಾಗಿ ನಿಂತು ಸಾಧನೆಯ ಮಾರ್ಗದಲ್ಲಿ ಸಾಗಿ ಯಶಸ್ವಿಯಾಗಿರುವುದು ಅವನ ಛಲವಂತಿಕೆಗೆ ಸಾಕ್ಷಿ.

ನನ್ನ ತಂದೆಯವರ ನಿರಂತರ ಮಾರ್ಗದರ್ಶನ, ಸಲಹೆ, ಸಹಕಾರಗಳೊಂದಿಗೆ ಪ್ರಕಾಶನದ ಉದ್ದಿಮೆಯಲ್ಲಿ ಹಂತಹಂತವಾಗಿ ಮೇಲೇರಿದ ನನ್ನ ತಮ್ಮ 1970ರ ದಶಕದ ಕೊನೆಯಲ್ಲಿ ಸಂಸ್ಥೆಯ ಪೂರ್ಣ ಮೇಲ್ವಿಚಾರಣೆಯನ್ನು ವೃದ್ಧಾಪ್ಯದ ದೆಸೆಯಿಂದ ದುರ್ಬಲರಾಗಿದ್ದ ನಮ್ಮ ತಂದೆಯವರಿಂದ ತಾನೇ ವಹಿಸಿಕೊಂಡ. ನನ್ನ

ತಂದೆಯವರು ಕಟ್ಟಿದ್ದ ಲೇಖಕರ ಬಳಗದೊಂದಿಗೆ ಧೀಮಂತರೂ, ಪ್ರತಿಭಾನ್ವಿತರೂ ಆದ ಅನೇಕ ಲೇಖಕರ ಪಡೆಯೊಂದನ್ನು ನಿರ್ಮಾಣ ಮಾಡಿದ. ದೇಜಗೌ, ಹಾಮಾನಾ, ಸಮೇತನಹಳ್ಳಿ ರಾಮರಾವ್, ಎಚ್ಚೆಸ್ಕೆ, ಚೆನ್ನವೀರಕಣವಿ, ಟಿ.ವಿ. ವೆಂಕಟಾಚಲಶಾಸ್ತ್ರೀ, ಸಂಗಮನಾಥ ಹಂಡಿ, ಡಾ. ಲಕ್ಕಪ್ಪಗೌಡ, ಸಿಪಿಕೆ, ಪಿ.ಎಸ್. ರಾಮಾನುಜಂ, ಡಾ. ತಿಪ್ಪೇರುದ್ರಸ್ವಾಮಿ, ಜಿ. ಶಂ. ಪರಮಶಿವಯ್ಯ, ಪಿ.ಆರ್. ತಿಪ್ಪೇಸ್ವಾಮಿ, ವಿಜಯ ಸಾಸನೂರ ಮುಂತಾದ ಹಿರಿಯ ಬರಹಗಾರರಲ್ಲದೆ, ಅವರ ನಂತರದ ತಲೆಮಾರಿನವರಾದ ಭಗವಾನ್, ಪ್ರಧಾನ ಗುರುದತ್ತ, ಎಸ್.ಎಸ್. ತಾರಾನಾಥ, ಜಯಸುದರ್ಶನ, ದೊಡ್ಡರಂಗೇಗೌಡ, ಶ್ರೀಮತಿ ರಾಧಾದೇವಿ ಮುಂತಾದ ಖ್ಯಾತನಾಮರ, ಉದಯೋನ್ಮುಖ ಬರಹಗಾರರಾದ ಶ್ರೀಮತಿ ಲತಾ ರಾಜಶೇಖರ್, ಶ್ರೀಮತಿ ಡಿ.ಬಿ. ರಜಿಯಾ, ಬಳಿಗಾರ್, ಲಿಂಗದೇವರು ಹಳೆಮನೆ, ಅಂಬಳಿಕೆ ಹಿರಿಯಣ್ಣ ಮುಂತಾದವರ ಕೃತಿಗಳನ್ನು ಹೊರತಂದ. ನಮ್ಮ ದೊಡ್ಡಪ್ಪ ಹಾಗೂ ನಮ್ಮ ತಂದೆಯವರ ಪುಸ್ತಕಗಳಂತೂ ಹೇಗೂ ಇದ್ದುವು. ಪುಸ್ತಕಗಳ ಮುದ್ರಣ, ಮುಖಪುಟ ವಿನ್ಯಾಸದಲ್ಲಿ ಕ್ರಾಂತಿಕಾರಕವೆನ್ನಬಹುದಾದ ಪರಿವರ್ತನೆಯನ್ನು ತಂದ. ಪ್ರಸಿದ್ಧ ಕಲಾವಿದರೊಂದಿಗೆ ಚರ್ಚಿಸಿ, ತನ್ನ ಅಂತರಾಭಿಲಾಷೆಯನ್ನು ಮನಗಾಣಿಸಿ ಸುಂದರ ಧ್ವನಿಪೂರ್ಣ, ಆಕರ್ಷಕ ರಕ್ಷಾಪುಟ ಚಿತ್ರಗಳನ್ನು ಬರೆಸಿದ. 'ಡಿಟಿಪಿ' ಚಾಲ್ತಿಗೆ ಬಂದನಂತರವಂತೂ ಮುದ್ರಣದಲ್ಲಿ ಅತ್ಯಾಧುನಿಕವಾದ ವಿಧಾನವನ್ನು ಅಳವಡಿಸಿದ. ಅರ್ಥಶಾಸ್ತ್ರ, ಆರೋಗ್ಯ, ವ್ಯಾಕರಣ, ಸಾಹಿತ್ಯ ವಿಮರ್ಶೆ, ಪ್ರಾಚೀನ ಕಾವ್ಯ ಸಂಗ್ರಹಗಳು, ಕಥೆ, ಕಾದಂಬರಿ, ಕವನ, ಜಾನಪದ, ಪ್ರವಾಸ, ನಾಟಕ, ರೂಪಕ, ಕಲೆ, ಮನಃಶಾಸ್ತ್ರ, ಶಾಸನಶಾಸ್ತ್ರ ಹೀಗೆ ಅಪಾರ ವಿಷಯ ವೈವಿಧ್ಯವುಳ್ಳ ನೂರಾರು ಪುಸ್ತಕಗಳನ್ನು ಪ್ರಕಟಿಸಿದ. ಅವನು ಪ್ರಕಟಿಸಿರುವ ಅನೇಕ ಪುಸ್ತಕಗಳು ಕರ್ನಾಟಕದ ಎಲ್ಲ ವಿಶ್ವವಿದ್ಯಾನಿಲಯಗಳಲ್ಲೂ ಪಠ್ಯಪುಸ್ತಕಗಳಾಗಿವೆ. ತನ್ನ ಲೇಖಕರೇ ತನ್ನ ಬಂಡವಾಳವೆಂದು ನಂಬಿರುವ ಅವನು ಲೇಖಕರಿಗೆ ಕೈತುಂಬ ಸಂಭಾವನೆ ನೀಡಿದ್ದಾನೆ. ಲೇಖಕರ ವಿಶ್ವಾಸ, ಪ್ರೀತಿಗಳೆಂಬ ಆಸ್ತಿಯನ್ನು ಗಳಿಸಿದ್ದಾನೆ. ತ.ವೆಂ. ಸ್ಮಾರಕ ಗ್ರಂಥಮಾಲೆಯಲ್ಲಿ ಪುಸ್ತಕ ಪ್ರಕಟವಾಗುವುದು ಒಂದು ಪ್ರತಿಷ್ಠೆಯ ಸಂಗತಿ ಎಂಬ ಎತ್ತರದ ಮಟ್ಟಕ್ಕೆ ಸಂಸ್ಥೆಯನ್ನು ಬೆಳೆಸಿದ್ದಾನೆ. ಇಂದು ಮಾಲೆಯ ಪುಸ್ತಕಗಳು ಬೇರಾವುದೇ ಪ್ರತಿಷ್ಠಿತ ಸಂಸ್ಥೆಯ ಪ್ರಕಟಣೆಗಳಿಗೆ ಸರಿಸಮಾನವಾಗಿ, ಕೆಲವೊಮ್ಮೆ ಅವುಗಳಿಗೆ ಸವಾಲು ಹಾಕುವಂತೆ ಇದ್ದರೆ ಅದರ ಹಿಂದೆ ನನ್ನ ತಮ್ಮನ ಅಪಾರ ಪರಿಶ್ರಮದ ದುಡಿಮೆ ಇದೆ.

ಒಬ್ಬ ಸಮರ್ಥ ಪ್ರಕಾಶಕನಾಗಿರುವಂತೆಯೇ ನನ್ನ ತಮ್ಮ ಒಳ್ಳೆಯ ಲೇಖಕನಾಗಿಯೂ ಹೊರಹೊಮ್ಮಿರುವುದೂ ಹರ್ಷಭರಿತ ವಿಸ್ಮಯದ ಸಂಗತಿ. ವಿದ್ಯಾರ್ಥಿದೆಸೆಯಲ್ಲಾಗಲೀ, ಅನಂತರದ ದಿನಗಳಲ್ಲಾಗಲಿ ಅವನಲ್ಲಿ ಲೇಖಕನಾಗಬಲ್ಲ

ಚಿಹ್ನೆಗಳನ್ನು ನಾನಂತೂ ಕಂಡಿರಲಿಲ್ಲ. ಇದ್ದಕ್ಕಿದ್ದಂತೆ ಅಂಕುರಿಸಿ, ಫಲದಾಯಕವಾಗಿ ಪರಿಣಮಿಸಿರುವ ಈ ಸುಪ್ತ ಪ್ರತಿಭೆಯ ಪರಿಣಾಮವಾಗಿ ಇಂದು ಹಲವಾರು ಪುಸ್ತಕಗಳು ಅವನ ಲೇಖನಿಯಿಂದ ಹೊರಬಂದಿವೆ. ವರಲೇಖಕ, ಗುರುಶ್ರೇಷ್ಠ, ತತ್ತ್ವನಿಷ್ಠ, ಹೃದಯ ಸಂಪನ್ನ, ದೇವಮಾನವ, ಕಲಾನಿಧಿ (ಸಂ) ಮುಂತಾದ ಜೀವನ ಚಿತ್ರಗಳು; ಪುಟ್ಟನ ಸಚಿತ್ರ ರಾಮಾಯಣ, ಪಂಚತಂತ್ರ ಕಥಾಮಾಲಿಕೆ, ಗಣಕ ಮುಂತಾದ ಮಕ್ಕಳ ಪುಸ್ತಕಗಳು; ಪ್ರೌಢ ಶಾಲಾ ವ್ಯಾಕರಣ (ತ.ಸು. ಶಾ. ರೊಂದಿಗೆ), ಗಾಂಧೀಜಿಯ ಕನಸು - ನಜೀರರಿಂದ ನನಸು, ವರದಕ್ಷಿಣೆ, ಏಳಿ- ಗ್ರಾಮಸ್ಥರೆ, ಆಡಳಿತ ಭಾಷೆ ಕನ್ನಡ, ಓದಲು ಕಲಿ-ಬದುಕಲು ತಿಳಿ - ಇವೇ ಮುಂತಾದ ಇಪ್ಪತ್ತೈದಕ್ಕೂ ಮೀರಿ ಪುಸ್ತಕಗಳನ್ನು ರಚಿಸಿ ಒಬ್ಬ ಒಳ್ಳೆಯ ಬರಹಗಾರ ಎನಿಸಿದ್ದಾನೆ.

ವಯಸ್ಸಿನಲ್ಲಿ ಚಿಕ್ಕವನಾದರೂ ನನ್ನ ತಮ್ಮ ಸಂಘ - ಸಂಸ್ಥೆಗಳ ಮನ್ನಣೆಗೆ ಈಗಾಗಲೇ ಪಾತ್ರನಾಗಿರುವುದು ಹೆಮ್ಮೆಯ ಸಂಗತಿ. ಮೈಸೂರು ಜಿಲ್ಲಾ ಕನ್ನಡ ಸಾಹಿತ್ಯಪರಿಷತ್ತು 1996ರಲ್ಲಿ ಟಿ. ನರಸೀಪುರದಲ್ಲಿ ಜರುಗಿದ ಮೈಸೂರು ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನಿಸಿ ಗೌರವಿಸಿದೆ. 1998ರಲ್ಲಿ ಚಿತ್ರದುರ್ಗದ ಶ್ರೀ ಮುರುಘರಾಜೇಂದ್ರಸ್ವಾಮಿಗಳು 'ಸಾಹಿತ್ಯ ಸೇವಾಧುರೀಣ' ಎಂಬ ಬಿರುದನ್ನು ನೀಡಿ ಸನ್ಮಾನಿಸಿದ್ದಾರೆ. ಇದೆಲ್ಲಕ್ಕೂ ಕಿರೀಟಪ್ರಾಯವೆಂಬಂತೆ ಪ್ರಸಕ್ತ ಸಾಲಿನ ಶ್ರೇಷ್ಠ ಪ್ರಕಾಶಕನೆಂಬ ಗೌರವವೂ ಸಂದಿದೆ.

ತ.ವೆಂ. ಸ್ಮಾರಕ ಗ್ರಂಥಮಾಲೆ ಐವತ್ತು ವರ್ಷಗಳ ಸಾಹಿತ್ಯ ಸೇವೆಯನ್ನು ಮುಗಿಸಲಿರುವ ಹೆಮ್ಮೆಯ , ಐತಿಹಾಸಿಕ ಘಟ್ಟವನ್ನು ತಲುಪಿದೆ. ಈ ಸಂದರ್ಭದಲ್ಲಿ ನನ್ನ ತಮ್ಮ 'ಬಂಗಾರದ ಬೆಳೆ' ಎಂಬ ಹೆಸರಿನಲ್ಲಿ ಐವತ್ತು ಪುಸ್ತಕಗಳನ್ನು ಹೊರತರಬೇಕೆಂಬ ಮಹತ್ವಾಕಾಂಕ್ಷಿ ಯೋಜನೆಯೊಂದನ್ನು ರೂಪಿಸಿರುವ ಸಂಗತಿ ನನಗೆ ಮಹದಾನಂದವನ್ನುಂಟು ಮಾಡಿದೆ. ಈ ಯೋಜನೆಯ ಮೊದಲ ಹತ್ತು ಪುಸ್ತಕಗಳು ಈಗಾಗಲೇ ಪ್ರಕಟಣೆಗೆ ಸಿದ್ಧವಾಗಿವೆ, ಸಧ್ಯದಲ್ಲೇ ಬಿಡುಗಡೆಯಾಗಲಿವೆ ಎಂಬುದೂ ನನಗೆ ಹೆಮ್ಮೆಯ ಸಂಗತಿ. ಸಾರಸ್ವತಲೋಕಕ್ಕೆ ಈ ಯೋಜನೆ ಬಹು ದೊಡ್ಡ ಕೊಡುಗೆಯಾಗಲಿದೆಯೆಂದು ನಾನು ನಂಬಿದ್ದೇನೆ.

ನನ್ನ ತಮ್ಮನ ಈ ಎಲ್ಲ ಸಾಧನೆಗಳು, ತ.ವೆಂ. ಸ್ಮಾರಕ ಗ್ರಂಥಮಾಲೆಗೆ ಸಂದಿರುವ ಗೌರವ ನನ್ನ ತಂದೆಯವರ ಆತ್ಮಕ್ಕೆ ಸಾರ್ಥಕತೆಯ, ನೆಮ್ಮದಿಯ ಭಾವನೆಯನ್ನು ಉಂಟು ಮಾಡುವುದೆಂದು ನಾನು ಹೃತ್ಪೂರ್ವಕವಾಗಿ ನಂಬಿದ್ದೇನೆ. ನನ್ನ ತಮ್ಮನ ಭಾವೀ ಜೀವನ ಮತ್ತೂ ಉಜ್ವಲವಾಗಿ ಬೆಳಗಲಿ, ಕೀರ್ತಿ ಶ್ರೀ ಮುಂದೆಯೂ ಒಲಿಯಲಿ ಎಂದಷ್ಟೇ ಹಾರೈಸುತ್ತೇನೆ.

# ತಂದೆಗೆ ತಕ್ಕ ಮಗ

ಕನ್ನಡ ಸಾಹಿತ್ಯ ಮತ್ತು ಪ್ರಕಾಶನ ಎಂಬುದು ನಮ್ಮ ಕನ್ನಡ ನಾಡು ನುಡಿ ಸಂಸ್ಕೃತಿಯ ಪ್ರತಿಬಿಂಬದಂತೆ. ರನ್ನ, ಪಂಪರ, ಕಾಲದಿಂದಲೂ ಒಂದು ವಿಶಿಷ್ಟತೆಯನ್ನು ಕಾಪಾಡಿಕೊಂಡು ಬಂದಿರುತ್ತದೆ. ಇದು ವಾಗ್ದೇವಿ ಮತ್ತು ಸರಸ್ವತಿಯ ಎರಡು ಕಣ್ಣುಗಳಂತೆ ಬೆಳೆದು ಬಂದಿದೆ. ಕನ್ನಡ ಕವಿಗಳು, ಸಾಹಿತಿಗಳು ತಮ್ಮ ಲೇಖನಗಳ ಮೂಲಕ ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದ ಹಾಗೇ ಪ್ರಕಾಶಕರುಗಳೂ ಸಹಾ ತಮ್ಮ ಅನರ್ಘ್ಯ ಸೇವೆಯನ್ನು ಪುಸ್ತಕ ಸಂಸ್ಕೃತಿಗೆ ಸಲ್ಲಿಸುತ್ತಲೇ ಬಂದಿರುತ್ತಾರೆ. ಇಂತಹ ಅಮೋಘ ಸೇವೆಯಲ್ಲಿ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಒಡೆಯರೂ ಮತ್ತು ಪ್ರಕಾಶಕರೂ ಆಗಿರುವ ನನ್ನ ಭಾವನವರೂ ಆಗಿರುವ ಮಾನ್ಯ ಶ್ರೀ ಛಾಯಾಪತಿಯವರು ಒಂದು ವಿಶಿಷ್ಟ ಸ್ಥಾನಗಳಿಸಿರುತ್ತಾರೆಂದರೆ ತಪ್ಪಾಗಲಾರದೆಂದು ನಾನು ಭಾವಿಸುತ್ತೇನೆ. ಶ್ರೀಯುತರು ಚಿತ್ರದುರ್ಗ ಜಿಲ್ಲೆಯ ತಳುಕಿನ ಕುಟುಂಬದಿಂದಲೇ ಬಂದು ಕನ್ನಡದ ಸುಪ್ರಸಿದ್ಧ ಕಾದಂಬರಿಕಾರರಾದ ದಿ. ತ.ರಾ. ಸುಬ್ಬರಾವ್ (ಅಣ್ಣ), ದೊಡ್ಡಪ್ಪ ಪ್ರೊಫೆಸರ್ ತಳುಕಿನ ವೆಂಕಣ್ಣಯ್ಯನವರು (ಕನ್ನಡ ಅಶ್ವಿನಿ ದೇವತೆಗಳೆಂದು ಪ್ರಸಿದ್ಧರಾದವರು)ಮತ್ತು ದಿವಂಗತ ಪ್ರೊಫೆಸರ್ ತ.ಸು. ಶಾಮರಾಯರ ಪುತ್ರರಾಗಿ ಜನಿಸಿ ಇವರುಗಳು ಹಾಕಿಕೊಟ್ಟ ಮಾರ್ಗದರ್ಶನದಲ್ಲಿ ನಡೆದು ಪ್ರಕಾಶನ ವೃತ್ತಿಯನ್ನು ಹಿಡಿದು ಹಲವಾರು ಮೌಲ್ಯಾಧಾರಿತ ಕೃತಿಗಳನ್ನು ಅವರ ಸ್ವಶ್ರಮದಿಂದ ಹೊರತಂದಿರುವುದು ಸಾಮಾನ್ಯ ವಿಷಯವೇನಲ್ಲ.

ಇವರ ಪರಿಶ್ರಮ, ಸಾಧನೆ, ಸುಮಾರು ನಲವತ್ತು ವರ್ಷಗಳಿಂದ ಬಂದಿರುವ ಹಾದಿಯನ್ನು ಅವಲೋಕನ ಮಾಡಿದಾಗ ವಾಮನನಂತೆ ಇದ್ದ ಇವರು ತ್ರಿವಿಕ್ರಮನ ಹಾಗೆ ಬೆಳೆದು ಈ ದಿನ ಈ ಮಟ್ಟಕ್ಕೆ ಬೆಳೆದು ನಿಂತಿರುವುದು ಸಹಾ ಸಾಮಾನ್ಯವಾದ ಸಂಗತಿಯಲ್ಲ. ಇವರು ಓದಿದ್ದು ಎಂ.ಕಾಂ. ಪದವಿ ಆದರೂ ವೃತ್ತಿಯನ್ನು ಆರಿಸಿಕೊಂಡದ್ದು ಮಾತ್ರ ಗುಲಾಬಿ ಹೂವಿನ ಹಿಂದೆ ಮುಳ್ಳುಗಳಿದ್ದಂತೆ ಅನಿಸುತ್ತದೆ. ಏಕೆಂದರೆ ಪ್ರಕಾಶನದ ಹೊಣೆಗಾರಿಕೆ ಅಷ್ಟು ಸುಲಭವಾದ ಹಾದಿಯೇನಲ್ಲ. ಇದಕ್ಕೆ ಆರ್ಥಿಕ

ಬಿ. ನರಸಿಂಹರಾವ್

ಬಲ, ದೈಹಿಕ ಬಲ, ಮನೋಬಲ, ಎಲ್ಲಕ್ಕಿಂತ ಹೆಚ್ಚಾಗಿ ಜನಬಲ ಅತ್ಯಗತ್ಯವಾಗಿರುತ್ತದೆ. ಈಗ್ಗೆ ಸುಮಾರು ನಲವತ್ತು ವರ್ಷಗಳ ಹಿಂದೆ ನನ್ನ ತಂಗಿ ಚಿ|| ಸೌ|| ಪುಷ್ಪಳನ್ನು ಮದುವೆಯಾದಾಗ, ಆಗಿನ್ನೂ ಎಂ.ಕಾಂ. ಪದವಿ ಮುಗಿಸಿ ಪ್ರಕಾಶನ ಮಾಲೆಯ ಸಾರಥ್ಯ ವಹಿಸಿಕೊಂಡಿದ್ದರು. ಆಗ ಮೈಸೂರು ವಿಶ್ವವಿದ್ಯಾನಿಲಯದ ಅಧ್ವರ್ಯುಗಳಾದ ದಿವಂಗತರುಗಳಾಗಿರುವ ಸನ್ಮಾನ್ಯ ರಾಷ್ಟ್ರಕವಿ ಕುವೆಂಪು, ಡಾ. ಹಾ.ಮಾ. ನಾಯಕ ಮತ್ತು ಸನ್ಮಾನ್ಯ ದೇ.ಜ.ಗೌ., ಕೆ.ಎಸ್. ಭಗವಾನ್, ತಿಪ್ಪೇಸ್ವಾಮಿ ಮತ್ತು ಇನ್ನೂ ಹಲವಾರು ಜನರ ಪ್ರೋತ್ಸಾಹ ಮತ್ತು ಒಡನಾಟಗಳಿಂದ ಹಲವಾರು ಅತ್ಯಮೂಲ್ಯ ಕೃತಿಗಳನ್ನು ಹೊರತಂದಿರುವುದು ಅಸಾಮಾನ್ಯ ವಿಷಯವೇ ಸರಿ. ಇದು ಒಂದು ಭಗೀರಥ ಪ್ರಯತ್ನ ಎಂದೇ ಕರೆಯಬಹುದು. ಹಲವಾರು ಕೌಟುಂಬಿಕ, ಸಾಮಾಜಿಕ ಅಡೆತಡೆಗಳು ಬಂದಾಗ್ಯೂ ಅವೆಲ್ಲವನ್ನೂ ನಿಭಾಯಿಸಿಕೊಂಡು, ಮನೆಯ ಸಂಸಾರದ ನೊಗಹೊತ್ತು, ಹಲವಾರು ಬುದ್ಧಿಜೀವಿಗಳ ಒಡನಾಟದಲ್ಲಿ ತನ್ನ ಕಾಯಕವನ್ನು ಎಡೆಬಿಡದೆ ಕಾಯಕವೇ ಕೈಲಾಸ ಎನ್ನುವ ಬಸವಣ್ಣನವರ ನುಡಿಯಂತೆ ಸಾಧನೆ ಮಾಡಿರುವುದು ಅತಿಶಯೋಕ್ತಿಯೇ ಸರಿ. ಇದಕ್ಕೆ ನನ್ನ ತಂಗಿ ಮತ್ತು ಅವರ ಧರ್ಮಪತ್ನಿ ಚಿ. ಸೌ. ಪುಷ್ಪ ರವರ ಸೇವೆಯೂ ಅತ್ಯಮೂಲ್ಯ. ಸಂಸಾರದ ಎಲ್ಲ ಕಷ್ಟ ಸುಖಗಳಲ್ಲಿ ಭಾಗಿಯಾಗಿ ತನ್ನ ವಿಶಿಷ್ಟ ಕೊಡುಗೆಯನ್ನು ನೀಡಿ ತನ್ನ ಪತಿಯವರ ಸಾಧನೆಗೆ ಸಹಕರಿಸುತ್ತಿರುವುದನ್ನು ನಾನು ಈ ಸಂದರ್ಭದಲ್ಲಿ ಸ್ಮರಿಸುವುದು ನನ್ನ ಆದ್ಯ ಕರ್ತವ್ಯವೆಂದು ಭಾವಿಸುತ್ತೇನೆ. ಮಾನ್ಯ ಭಾಯಾಪತಿಯವರು ನಮಗೆ ಒಬ್ಬ ಹಿರಿಯಣ್ಣನಂತಿದ್ದು ನಮ್ಮ ಕುಟುಂಬದಲ್ಲಿ ಯಾವುದೇ ಸಮಸ್ಯೆಗಳು ಬಂದಾಗ ಅವರು ನಮ್ಮಗಳಿಗೆ ಸೂಕ್ತ ಮಾರ್ಗದರ್ಶನ ನೀಡಿರುತ್ತಾರೆಂದೂ ಸ್ಮರಿಸಬಯಸುತ್ತೇನೆ. ಇವರ ಮನೆ, ಮನಸ್ಸು ಎರಡೂ ಸರಸ್ವತಿಯ ದೇಗುಲ.

ಇನ್ನು ಇವರ ಮಾಲೆಯಲ್ಲಿ ಪ್ರಕಾಶನಕ್ಕೆ ಬಂದಿರುವ ಹಲವಾರು ಉತ್ತಮ ಗ್ರಂಥಗಳಲ್ಲಿ ಬಹಳ ಹಿಂದೆಯೇ, ಬೆಳಕಿಗೆ ಬಂದಿರುವ 'ಸ್ವಸ್ತಿ' (ಇವರ ತಂದೆಯವರ ಅಭಿನಂದನಾ ಗ್ರಂಥ) ಮೂರು ತಲೆಮಾರು, ಕನ್ನಡ ಸಾಹಿತ್ಯ ಚರಿತ್ರೆ, ವಚನ ಭಾಗವತ, ವಚನರಾಮಾಯಣ, ಶಬ್ದಮಣಿದರ್ಪಣ ಮತ್ತು ಇನ್ನೂ ಹತ್ತಾರೂ ಕೃತಿಗಳು ಬಂದಿರುವುದನ್ನು ನಾನು ಸ್ಮರಿಸದಿದ್ದಲ್ಲಿ ತಪ್ಪಾಗುತ್ತದೆ. ಇವರು ಬರೀ ಪ್ರಕಾಶಕರಲ್ಲದೇ ಉತ್ತಮ ಬರಹಗಾರರೂ ಸಹಾ ಆಗಿರುತ್ತಾರೆ. ಮಕ್ಕಳಿಗಾಗಿ ಪುಟ್ಟನ ಸಚಿತ್ರ ರಾಮಾಯಣ, ಪಂಚತಂತ್ರದ ಕಥೆಗಳು, ಆಡಳಿತ ಭಾಷೆ ಕನ್ನಡ, ಶ್ರೀಯುತರು ಭಾಷಾ ಪ್ರಯೋಗದ ಮೇಲೆ ಸಾಧಿಸಿರುವ ಹಿಡಿತಕ್ಕೆ ಸಾಕ್ಷಿಯಾಗಿವೆ. ಇತ್ತೀಚೆಗೆ ಬಿಡುಗಡೆ ಯಾಗಿರುವ ಮಾನ್ಯ ಎಚ್.ಎಸ್. ವೆಂಕಟೇಶಮೂರ್ತಿಯವರ 'ಸಮಗ್ರ ಮಕ್ಕಳ ಸಾಹಿತ್ಯ

ಕೃತಿಗಳು ಮತ್ತು ಅದನ್ನು ಅತ್ಯದ್ಭುತವಾಗಿ ಪ್ರಕಾಶನದ ಹೊಣೆಹೊತ್ತು ಬೆಳಕಿಗೆ ತಂದಿರುವುದು ಅಸಾಮಾನ್ಯ ಸಾಹಸವೆಂದೇ ಹೇಳಬಹುದು.

ಇನ್ನು ಇಷ್ಟೆಲ್ಲಾ ಕಷ್ಟ, ಪಟ್ಟು, ಹೊರ ತಂದಿರುವ ಕೃತಿಗಳನ್ನು ಅಚ್ಚಿನ ಮನೆಯಲ್ಲಿ ಜನಮೆಚ್ಚುವ ಹಾಗೆ ಮುದ್ರಣ ಮಾಡಿಸಿ, ಬುದ್ಧ ಜೀವಿಗಳ ಮಾನಸ ಲೋಕದಲ್ಲಿ ತೇಲಾಡುವ ಹಾಗೆ ಮಾಡಿ ಆ ಕೃತಿಗಳನ್ನು ಮಾರಾಟ ಮಾಡಿ ತನ್ನ ಶ್ರಮಕ್ಕೆ ತಕ್ಕ ಪ್ರತಿಫಲ ಪಡೆಯುವುದು ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ ಬಹಳ ಕಷ್ಟವೇ ಸರಿ. ನಾನು ಅವರ ಭಾವ ಮೈದುನನಾಗಿ ಈ ಮಾತುಗಳನ್ನು ಬರೆಯುತ್ತಿಲ್ಲ. ಬಹುಶಃ ಎಲ್ಲ ಪ್ರಕಾಶಕರಿಗೂ ಅನುಭವ ವೇದ್ಯವಾಗಬಹುದಾದ ಸಂಗತಿ ಎಂದು ಭಾವಿಸುತ್ತೇನೆ. ಇಂತಹ ಅದ್ಭುತವಾದ ಸಾಧನೆಗಳನ್ನು ಸುಮಾರು ನಲ್ವತ್ತು ವರ್ಷಗಳಿಂದ ನಡೆಸಿಕೊಂಡು ಬರುತ್ತಾ ಹಲವಾರು ಕೃತಿಗಳನ್ನು ಜನಮಾನಸದಲ್ಲಿ ನಿಂತಿರುವುದು ಒಂದು ಮೂಕ ವಿಸ್ಮಿತವಾದ ತೃಪ್ತಿ, ಆಶ್ಚರ್ಯ ಹಾಗೂ ಆನಂದವನ್ನು ಕೊಡುವ ವಿಷಯವೇ ಸರಿ ಎಂದು ಭಾವಿಸುತ್ತೇನೆ. ಇವರ ಕಾರ್ಯಗಳನ್ನು ಮೆಚ್ಚಿ ಹಲವಾರು ಸಂಘಸಂಸ್ಥೆಗಳು, ಇವರನ್ನು ಆತ್ಮೀಯವಾಗಿ ಗೌರವಿಸಿ ಸನ್ಮಾನ ಸಮಾರಂಭಗಳನ್ನು ಮಾಡಿರುತ್ತಾರೆ. ದೈನಂದಿನ ಪತ್ರಿಕೆಗಳು, ಮಾಧ್ಯಮಗಳು ಮುಕ್ತಕಂಠದಿಂದ ಪ್ರಶಂಶಿಸಿರುವುದು ಶ್ರೀಯುತರ ತಪಸ್ಸಿಗೆ ಸಂದ ಗೌರವವೇ ಸರಿ. ಇತ್ತೀಚೆಗೆ ಸ್ಟೇಟ್‌ಬ್ಯಾಂಕ್ ಆಫ್ ಇಂಡಿಯಾದವರೂ ಸಹ ಇವರನ್ನು ಗೌರವಿಸಿ ಸನ್ಮಾನಿಸಿರುವುದೂ ಸಹಾ ನಾವೆಲ್ಲರೂ ಪತ್ರಿಕೆಗಳಲ್ಲಿ ಗಮನಿಸಬಹುದಾಗಿದೆ. ಆದರೆ ನಮ್ಮ ಘನ ಸರ್ಕಾರದವರು ಇಂತಹ ಪ್ರಕಾಶಕರುಗಳನ್ನು ಗುರುತಿಸಿ ಪ್ರೋತ್ಸಾಹಿಸದಿರುವುದು ಒಂದು ವಿಪರ್ಯಾಸವೇ ಸರಿ.

ಶ್ರೀಯುತರು ಎಪ್ಪತ್ತು ವಸಂತಗಳನ್ನು ಕಳೆದು ಸಾಂಸ್ಕೃತಿಕ ನಗರಿ ಮೈಸೂರಿನ ಜನರ ಮಧ್ಯೆ ಪ್ರಕಾಶಿಸುತ್ತಿರುವ ಇವರಿಗೂ ಇವರ ಕುಟುಂಬ ವರ್ಗಕ್ಕೂ ಭಗವಂತನು ಆಯುರಾರೋಗ್ಯ -ಐಶ್ವರ್ಯಗಳನ್ನು ಕೊಟ್ಟು ಕಾಪಾಡಲಿ, ಅವರಿಂದ ಇನ್ನೂ ಹೆಚ್ಚಿನ ಸೇವೆ ಸಾರಸ್ವತಲೋಕಕ್ಕೆ ಸಲ್ಲಲಿ ಎಂದು ಶ್ರೀ ರಾಘವೇಂದ್ರ ಗುರುಗಳಲ್ಲಿ ಪ್ರಾರ್ಥಿಸುತ್ತೇನೆ.

ಸಾಮಾನ್ಯರಲ್ಲಿ ಸಾಮಾನ್ಯನಾದ ನನಗೆ ಈ ಸಂದರ್ಭದಲ್ಲಿ ಇವರ ಸಾಧನೆಗಳ ಬಗ್ಗೆ ಈ ಎರಡು ಮಾತುಗಳನ್ನು ಈ ಲೇಖನದ ಮೂಲಕ ಹೇಳಲು ಅವಕಾಶ ಮಾಡಿಕೊಟ್ಟಿದ್ದಕ್ಕಾಗಿ ಅಭಿನಂದನಾ ಸಮಿತಿಯವರಿಗೆ ನನ್ನ ಅನಂತಾನಂತ ಕೃತಜ್ಞತೆಗಳನ್ನು ತಿಳಿಸಬಯಸುತ್ತೇನೆ.

# ನಾ ಕಂಡ ಯಜಮಾನರು

ನಾನು ಈಗ ಸುಮಾರು ನಲವತ್ತು ವರ್ಷಗಳ ಹಿಂದೆ ಸುಪ್ರಸಿದ್ಧ ಸಾಹಿತಿಗಳೂ ಜನಪ್ರಿಯ ಅಧ್ಯಾಪಕರೂ ಆಗಿದ್ದ ತ.ಸು. ಶಾಮರಾಯರ ಮಗನಾದ ಛಾಯಾಪತಿ ಯವರನ್ನು ಮದುವೆಯಾಗಿ ನನ್ನ ತವರಿನಿಂದ ಈ ಸರಸ್ವತಿ ನಿಲಯಕ್ಕೆ ಬಂದು ಸೇರಿದೆ. ಇಲ್ಲಿಗೆ ಬಂದ ಮೇಲೆ ಇಲ್ಲಿನ ಎಷ್ಟೋ ಅನೇಕ ಗಣ್ಯರ ಪರಿಚಯವಾಯಿತು. ನಾನು ಗ್ರಾಮಾಂತರ ಪ್ರದೇಶದಿಂದ ಬಂದವಳು. ನಮ್ಮ ತಂದೆ ಜಮೀನುದಾರರು, ಹಾಗಾಗಿ, ನನಗೆ ಮೊದ ಮೊದಲು ಹೇಗೆ ಈ ಮನೆಯಲ್ಲಿ ನಿಭಾಯಿಸಬೇಕು ಎಂಬ ಆಲೋಚನೆ ಕಾಡುತ್ತಿತ್ತು.

ನಮ್ಮ ಯಜಮಾನರಿಗೆ ಪುಸ್ತಕ ಪ್ರಕಾಶನ ಒಂದು ತಪಸಿದ್ದ ಹಾಗೆ. ಸ್ವಲ್ಪವೂ ಚ್ಯುತಿ ಬರಬಾರದು. ಅವರು ಸಮರ್ಥ ಪ್ರಕಾಶಕರೆಂದು ಹೆಸರು ಪಡೆಯುವುದಕ್ಕೆ ಇಂದು ಏನಾಗಿದ್ದಾರೋ ಅದಕ್ಕೆ ಅವರ ಶ್ರದ್ಧೆ, ತಲ್ಲೀನತೆಯೇ ಕಾರಣ.

ಅವರು ಒಂದು ಹಸ್ತಪ್ರತಿಯನ್ನು ಪ್ರಕಟಣೆಗೆ ತೆಗೆದುಕೊಂಡರೆ ಅದರ ಅಂದ, ಚೆಂದ, ಕಾಗದ, ವಿನ್ಯಾಸ ಮತ್ತು ಆದಷ್ಟು ತಪ್ಪಿಲ್ಲದಂತೆ, ಕರಡು ತಿದ್ದುವುದು, ಎಲ್ಲವನ್ನೂ ತುಂಬಾ ಶ್ರದ್ಧೆಯಿಂದ ಮಾಡುತ್ತಾರೆ. ನಾನು ಎಷ್ಟೋ ಬಾರಿ ಕರಡನ್ನು ತಿದ್ದುವಾಗ ಅವರಿಂದ ಬೇಸರಿಸಿಕೊಂಡಿದ್ದುಂಟು. ಸಾಮಾನ್ಯವಾಗಿ ಯಾವುದೇ ಪುಸ್ತಕ ವಾದರೂ ಸಹ, ನಾವಿಬ್ಬರೂ ಕುಳಿತು ಕರಡನ್ನು ತಿದ್ದುತ್ತೇವೆ. ಅದನ್ನು ಬಲು ಶ್ರದ್ಧೆಯಿಂದ ಬೇಸರಿಸಿಕೊಳ್ಳದೆ, ಪ್ರತಿಯೊಂದು ಅಕ್ಷರ -ಅಕ್ಷರಗಳನ್ನೂ ಕಣ್ಣಲ್ಲಿ ಕಣ್ಣಿಟ್ಟು ನೋಡಬೇಕು. ಪುಸ್ತಕ ಪ್ರಕಟಣೆಯೇ ಅವರ ಪ್ರಪಂಚ. ಇನ್ನಾವ ವಿಚಾರದಲ್ಲೂ ಅವರಿಗೆ ಹೆಚ್ಚು ಆಸಕ್ತಿ ಇರುವುದಿಲ್ಲ. ಮೊದಲು ನನ್ನ ಕಾಯಕ, ನಂತರ ನೀವುಗಳು ಎಂದು ನನಗೂ ಮಕ್ಕಳಿಗೂ ಎಷ್ಟೋ ಸಲ ಅವರು ಹೇಳಿದ್ದಾರೆ, ಆದರೆ ಅಷ್ಟೇ ಪ್ರೀತಿಯಿಂದ ನಮ್ಮನ್ನು ನೋಡಿಕೊಂಡಿದ್ದಾರೆ ಮತ್ತು ಅವರ ಜವಾಬ್ದಾರಿಗಳನ್ನು ಪೂರೈಸಿದ್ದಾರೆ.

ಶ್ರೀಮತಿ ಪುಷ್ಪ ಛಾಯಾಪತಿ

ನಾನು ಮದುವೆಯಾಗಿ ಬಂದಾಗ ನಮ್ಮ ಮಾವನವರ ಕನ್ನಡ ಸಾಹಿತ್ಯ ಚರಿತ್ರೆ; ಒಂದು ಸಮೀಕ್ಷೆ ಅಚ್ಚಾಗಬೇಕಾಗಿತ್ತು. ನಾನು ಕರಡು ತಿದ್ದುವುದರಲ್ಲಿ ಅವರಿಗೆ ಸಹಕರಿಸಿದ್ದೆ, ಆ ಪುಸ್ತಕದ ಮುನ್ನುಡಿಯಲ್ಲಿ ನನ್ನ ಮಾವನವರು ನನ್ನ ಹೆಸರನ್ನು ಬರೆದಿದ್ದರು. ಅದು ಅವರ ಆಶೀರ್ವಾದ. ಅದು ಇಂದಿಗೂ ನನ್ನ ಮನಸ್ಸಿನಲ್ಲಿ ಹಸುರಾಗಿ ನಿಂತಿದೆ.

ಅವರ ಕೆಲಸದ ಜವಾಬ್ದಾರಿಗಳನ್ನು ಯಾರ ಮೇಲೂ ಹೊರಿಸುವುದಕ್ಕೆ ಅವರು ಇಷ್ಟಪಡುವುದಿಲ್ಲ. ಯಾರನ್ನೂ ನಂಬುವುದಿಲ್ಲ. ಪ್ರತಿಯೊಂದನ್ನು ಅವರೇ ಮಾಡಬೇಕು. ಕೊನೆಗೆ ಒಂದು ಪತ್ರವನ್ನು ಅಂಚೆಗೆ ಹಾಕುವುದನ್ನೂ ಸಹ ಅವರೇ ಮಾಡಬೇಕು. ನನಗೆ ಒಂದೊಂದು ಸಲ ಇದು ಅತಿ ಎನಿಸುತ್ತದೆ. ಪ್ರತಿಯೊಂದಕ್ಕೂ ತಾವೇ ಓಡಾಡಬೇಕು. ಎಷ್ಟು ಸಲ ಬೇಕಾದರೂ ಪ್ರೆಸ್‌ಗಳಿಗೆ ತಾವೇ ಓಡಾಡುತ್ತಾರೆ, ತುಂಬಾ ಶ್ರಮಜೀವಿ. ನಾನು ಒಮ್ಮೊಮ್ಮೆ ಏಕಿಷ್ಟು ಶ್ರಮ ಪಡುತ್ತೀರಿ? ಎಂದಾಗ, ನನಗೆ ಇದು ಶ್ರಮವೇ ಅಲ್ಲ. ಇದು ನನ್ನ ವೃತ್ತಿ, ಸಂತೋಷವಾಗಿ ಮಾಡುತ್ತೇನೆ ಎಂದು ಹೇಳುತ್ತಾರೆ.

ಎಲ್ಲರಿಗೂ ತಿಳಿದಿರುವಂತೆ ಪ್ರಕಟಣೆಯ ಕಾರ್ಯ ತುಂಬಾ ಕಷ್ಟದ ಕೆಲಸ. ಎಲ್ಲಾ ವೃತ್ತಿಯೂ ಕಷ್ಟವೇ, ಆದರೆ ಪುಸ್ತಕ ಪ್ರಕಟಣೆಯಂತೂ ತುಂಬಾ ಕಷ್ಟ. ಈ ವೃತ್ತಿ ಹತ್ತಾರು ಜನಗಳ ಮೇಲೆ ಅವಲಂಬಿಸಿರುವ ವೃತ್ತಿ. ಯಾರೊಬ್ಬರು ಸರಿಯಾಗಿ ವರ್ತಿಸದಿದ್ದರೂ ಕೆಲಸ ಕೆಟ್ಟಂತೆಯೇ ಇನ್ನೊಂದು ಸಂಗತಿ ಎಂದರೆ ಇತ್ತೀಚಿನ ದೂರದರ್ಶನದ ಚಾಲ್ತಿಯಿಂದ ಓದುವ ಹವ್ಯಾಸವೇ ಜನಗಳಲ್ಲಿ ಬಹಳ ಕಡಿಮೆಯಾಗಿದೆ. ಹೀಗಿರುವಾಗ ಕನ್ನಡ ಪುಸ್ತಕ ವ್ಯಾಪಾರ ತುಂಬಾ ಕಷ್ಟ. ಹೀಗಿದ್ದರೂ ಕೂಡ ನಮ್ಮ ಯಜಮಾನರು ಸದಭಿರುಚಿ ಗ್ರಂಥಗಳನ್ನು ಪ್ರಕಟಿಸಿ, ಅದನ್ನು ವಿತರಿಸಿ, ನಮ್ಮ ಸಂಸಾರವನ್ನೂ ಸಹ ತೂಗಿಸಿಕೊಂಡು ಹೋಗುತ್ತಿದ್ದಾರೆ. ನಾನೂ ಸಹ ಸಂತೃಪ್ತಳಾಗಿದ್ದೇನೆ.

ನಮ್ಮ ಕುಟುಂಬ ಮಧ್ಯಮ ವರ್ಗದ ಕುಟುಂಬ. ಅಂದರೆ ಯಥೇಚ್ಛವಾದ ಆಸ್ತಿ, ಅಡವು ಏನೂ ಇಲ್ಲ. ಹಾಗೆಂದು ಜೀವಿಸುವುದಕ್ಕೆ ತೊಂದರೆ ಏನಿಲ್ಲ. ನಮ್ಮದು 'ಸಾರಸ್ವತ' ಕುಟುಂಬವೇ ಹೊರತು, 'ಸಿರಿವಂತ' ಕುಟುಂಬವಲ್ಲ. ಹಾಗಾಗಿ ಇವರು ಕಷ್ಟಪಟ್ಟು ದುಡಿಯಬೇಕು ನಾವು ಅನುಭವಿಸಬೇಕು ಅಷ್ಟೆ. ನಮ್ಮ ಮಾವನವರು ಪ್ರವೃತ್ತಿಯಾಗಿ ನಡೆಸುತ್ತಿದ್ದ ತ.ವೆಂ. ಸ್ಮಾರಕ ಗ್ರಂಥಮಾಲೆಯನ್ನು ಆಗ ತಾನೇ ಸ್ನಾತಕೋತ್ತರ ಪದವಿಯನ್ನು ಮುಗಿಸಿಬಂದ ಮಗನಿಗೆ ವೃತ್ತಿಯಾಗಿ ಸ್ವೀಕರಿಸಲು ಆದೇಶಿಸಿದರು. ಅದನ್ನು ಇವರು ಯಶಸ್ವಿಯಾಗಿ ನಡೆಸಿಕೊಂಡು, ಬಹಳ ಕಷ್ಟಪಟ್ಟು ಮೇಲೆ ಬಂದಿದ್ದಾರೆ.

ನಮ್ಮ ಯಜಮಾನರು ಉದಾರಿ ಹೃದಯದವರು. ಆದರೂ ಅವರ ಬಳಿ ಇರುವ ಹಣವನ್ನು ವಿತರಿಸುವಾಗ ಯೋಚಿಸುತ್ತಾರೆ. ದೂರಾಲೋಚನೆ ಹೊಂದಿದ್ದಾರೆ. ನಮ್ಮ ಮನೆಗೆ ಬರುವ ಬಂಧು ಬಳಗ ಸ್ನೇಹಿತರನ್ನು ಒಂದೇ ರೀತಿಯಾಗಿ ನೋಡಿಕೊಳ್ಳುತ್ತಾರೆ. ಆದ್ದರಿಂದ ನನಗೆ ಯಾವ ರೀತಿಯ ಮುಜುಗರವೂ ಆಗುತ್ತಿಲ್ಲ. ಏಕೆಂದರೆ ನನ್ನದೂ ಸ್ವಲ್ಪ ಧಾರಳ ಸ್ವಭಾವವೇ.

ನಮ್ಮ ಯಜಮಾನರು ಒಳ್ಳೆಯ ಬರಹಗಾರರು. ಅವರು 'ವ್ಯಕ್ತಿಚಿತ್ರ'ಗಳ ಕ್ಷೇತ್ರದಲ್ಲಿ ಬರವಣಿಗೆ ಮಾಡಿದ್ದಾರೆ. ಅವರ ಬರಹಗಳನ್ನು ಮೆಚ್ಚಿ 'ವ್ಯಕ್ತಿಚಿತ್ರ'ಗಳ ಕ್ಷೇತ್ರದಲ್ಲಿ ಅವರು ಮಾಡಿರುವ ಕೆಲಸಕ್ಕೆ ಅವರ ಗುರುಗಳಾದ ಎಚ್ಚೆಸ್ಕೆ ಅವರು 'ಒಮ್ಮೆ, ನನ್ನ ಶಿಷ್ಯ ನನ್ನ ಕ್ಷೇತ್ರದಲ್ಲೇ ನನ್ನನ್ನು ಮೀರಿ ಮುಂದೆ ನಡೆದಿದ್ದಾನೆ' ಎಂದು ಹೇಳಿದರು.

ನಮ್ಮ ಮಾವನವರು ಕೂಡ ಇವರ ಬರಹಗಳನ್ನು ಬಹಳವಾಗಿ ಮೆಚ್ಚಿ 'ನಿನ್ನ ಬರಹ ತುಂಬಾ ಚೆನ್ನಾಗಿದೆ. ಇದನ್ನು ನಿಲ್ಲಿಸದೇ ಮುಂದುವರಿಸಿಕೊಂಡು ಹೋಗು' ಎಂದು ಬೆನ್ನು ತಟ್ಟುತ್ತಿದ್ದರು.

ಇವರ ಇನ್ನೂ ಹಲವರು ಪುಸ್ತಕಗಳ ಪ್ರಕಟಣೆ ಮತ್ತು ಬರಹಗಳ ಬಗ್ಗೆ ಸುಪ್ರಸಿದ್ಧ ಸಾಹಿತಿಗಳಾದ ಕುವೆಂಪು, ಹಾ.ಮಾ.ನಾ, ಚದುರಂಗ, ಶಿವರುದ್ರಪ್ಪ, ಎನ್.ಎಸ್.ಎಲ್. ಭಟ್ಟ, ನಿಸಾರ್ ಅಹಮದ್ ಮುಂತಾದವರು ಅವರ ಅಭಿಪ್ರಾಯಗಳನ್ನು ನೀಡಿ, ಮೆಚ್ಚಿಗೆಯನ್ನು ವ್ಯಕ್ತಪಡಿಸಿದ್ದಾರೆ.

ನನಗೆ ನನ್ನ ಬಾಲ್ಯದಿಂದಲೂ ಸಂಗೀತ, ಸಾಹಿತ್ಯದ ಕಡೆ ಅಪಾರವಾದ ಒಲವಿತ್ತು. ನನ್ನ ತಾಯಿಯವರು ಒಳ್ಳೆಯ ಸಂಗೀತಗಾರ್ತಿ. ಪಿಟೀಲು ನುಡಿಸುತ್ತಿದ್ದರು. ನನ್ನ ಬಾಲ್ಯದ ಸಿಂಹಪಾಲು ನನ್ನ ಪೂಜ್ಯ ಸೋದರಮಾವ ನಾಗರಾಜ್ ಅವರ ಮನೆಯಲ್ಲಿ ಕಳಿಯುವಂತಾಯಿತು. ಅವರು ಸಾಹಿತ್ಯ, ಸಂಗೀತಪ್ರಿಯರಾಗಿದ್ದರು. ಅವರಿಗೆ ಮತ್ತು ಅವರ ಶ್ರೀಮತಿಗೆ ನಾನು ಮಗಳೇ ಆಗಿದ್ದೆ. ಅವರ ಒಡನಾಟದಿಂದ ನನಗೆ ಸಾಹಿತ್ಯ, ಸಂಗೀತದಲ್ಲಿ ಆಸಕ್ತಿ ಹೆಚ್ಚಾಯಿತು. ನನ್ನನ್ನು ಅನೇಕ ಸಾಂಸ್ಕೃತಿಕ ಸಭೆ ಸಮಾರಂಭಗಳಿಗೆ ಕರೆದುಕೊಂಡು ಹೋಗುತ್ತಿದ್ದರು.

ಕೇವಲ ಪತ್ರಿಕೆಗಳಲ್ಲಿ ಹಾಗೂ ಜನಗಳ ಬಾಯಿಂದ ವೆಂಕಣ್ಣಯ್ಯನವರ, ಶಾಮರಾಯರ ಹಾಗೂ ತ.ರಾ.ಸು ಅವರ ಹೆಸರನ್ನು ಕೇಳಿದ್ದೆ, ಪತ್ರಿಕೆಗಳಲ್ಲೂ ಓದಿದ್ದೆ. ಆದರೆ ಯೋಗಾಯೋಗವೆಂಬಂತೆ ನಾನೂ ಆ ವಂಶಕ್ಕೆ ಸೇರುವ ಅದೃಷ್ಟ ಲಭಿಸಿತು. ನನ್ನ ಅತ್ತೆ, ಮಾವಂದಿರಿಗೆ ನಾನು ಸೊಸೆಯಾಗಿರಲಿಲ್ಲ, ಮಗಳಾಗಿದ್ದೆ. ಇದರೊಂದಿಗೆ ಇತ್ತೀಚಿಗೆ ತೀರಿಕೊಂಡ ನಮ್ಮ ಯಜಮಾನರ ಅಣ್ಣ ವೆಂಕಣ್ಣಯ್ಯನವರು ನನಗೆ ಸ್ವಂತ

ಅಣ್ಣಾನಂತಿದ್ದರು. ನಾನು ಮಾಡುವ ಅಡಿಗೆಯನ್ನು ಸವಿಯುತ್ತಾ ಅವರ ತಾಯಿ ಮಾಡುತ್ತಿದ್ದ ಅಡಿಗೆಯನ್ನು ನೆನಪಿಸಿಕೊಳ್ಳುತ್ತಿದ್ದರು.

ನನ್ನ ಮೈದುನ ಸೂರಿ ಸಹ ನನ್ನ ತಮ್ಮನಂತೆಯೇ ಬಹಳ ಗೌರವದಿಂದ ನನ್ನನ್ನು ಅತ್ತಿಗೆ, ಅತ್ತಿಗೆ ಎಂದು ಸಂಬೋಧಿಸುತ್ತಾರೆ. ನನ್ನ ತಂದೆ, ತಾಯಿಯರಲ್ಲಿ ಅಪಾರವಾದ ಪ್ರೀತಿ, ಗೌರವಗಳನ್ನಿರಿಸಿಕೊಂಡಿದ್ದರು. ಬಹಳ ನೇರ ಹಾಗೂ ನಿಷ್ಠುರವಾದ ವ್ಯಕ್ತಿ. ನನ್ನ ಯಜಮಾನರ ಮೇಲೆ ಬಹಳ ಪ್ರೀತಿ ವಿಶ್ವಾಸ ಅಭಿಮಾನಗಳನ್ನಿರಿಸಿಕೊಂಡಿದ್ದಾರೆ. ಈಗಲೂ ನನ್ನ ಯಜಮಾನರಿಗೆ ಯಾವುದೇ ಗೌರವ, ಸನ್ಮಾನಗಳಾದರೆ ಸಂತೋಷದಿಂದ ವಿಶ್ವಾಸಗಳಿಂದ ಅಭಿಮಾನ ಪಡುತ್ತಾರೆ, ಅಭಿನಂದಿಸುತ್ತಾರೆ.

ಈ ಲೇಖನ ನಾನು ಬರೆದು ಹತ್ತು ವರ್ಷಗಳಾಗಿವೆ. ಈ ಹತ್ತು ವರ್ಷಗಳು ಸರಿದಂತೆ ನನ್ನ ಮುಂದೆ ನನ್ನ ಯಜಮಾನರ ವ್ಯಕ್ತಿ ಸಂಗತಿಗಳ ಮತ್ತಷ್ಟು ನೆನಪಿಗೆ ಬರುತ್ತಿವೆ. ಅವರ ಪ್ರಕಾಶನದ ಪರಿಶ್ರಮ ಹಾಗೂ ಅವರ ಕಾಯಕ ನಿಷ್ಠೆಯನ್ನು ಗುರುತಿಸಿ ಅವರನ್ನು ಒಂದು ಅವಧಿಗೆ ಕನ್ನಡ ಪುಸ್ತಕ ಪ್ರಾಧಿಕಾರದ ಸದಸ್ಯರನ್ನಾಗಿ ನೇಮಕ ಮಾಡಿತು. ಅವರಿಗೆ ಮೇಲಿಂದ ಮೇಲೆ ಅನೇಕ ಸನ್ಮಾನ ಗೌರವಗಳು ಲಭಿಸಿದವು. 2013ರ ನವೆಂಬರ್ 24 ರಂದು ಬೆಂಗಳೂರಿನಲ್ಲಿರುವ ಎಚ್.ಎಸ್. ವೆಂಕಟೇಶಮೂರ್ತಿಯವರ ಮನೆಯಲ್ಲಿ ಅವರ 'ಸಮಗ್ರ ಮಕ್ಕಳ ಸಾಹಿತ್ಯದ' ಬಿಡುಗಡೆಯ ಸಂದರ್ಭದಲ್ಲಿ ಸುಪ್ರಸಿದ್ಧ ಕವಿಗಳಾದ 'ಚೆನ್ನವೀರಕಣವಿ'; ಅವರಿಂದ ಸನ್ಮಾನಿಸಿದರು. ಇದು ಎರಡನೆಯ ಬಾರಿ ಕಣವಿಯವರಿಂದ ಸನ್ಮಾನಿಸುತ್ತಿರುವುದು. ಎರಡು ಬಾರಿ ಈ ಕವಿಗಳಿಂದ ನನ್ನ ಯಜಮಾನರನ್ನು ಗೌರವಿಸಿದಾಗ ನನ್ನ ಯಜಮಾನರ ಬಗ್ಗೆ, ಅವರ ಕಾರ್ಯ ನಿಷ್ಠೆಯ ಬಗ್ಗೆ ನನಗೆ ಅಭಿಮಾನ - ಇಮ್ಮಡಿಸಿತು. ಇದಕ್ಕೆ ಪೂರಕವಾಗಿ ನವೆಂಬರ್ 31, 2013ರಲ್ಲಿ 'ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ'ದ ಕನ್ನಡ ಸಂಘದ ವಾರ್ಷಿಕೋತ್ಸವ ಸಂದರ್ಭದಲ್ಲಿ, ಮೈಸೂರು ಪೇಟ ಇರಿಸಿ ಗೌರವಿಸಿದನ್ನು ನಾನು ವೀಕ್ಷಿಸಿ ಬಹಳ ಸಂತೋಷಪಟ್ಟೆ.

ನಮ್ಮ ಮಾವನವರ ಆಸೆ, ಆದರ್ಶಗಳು ಏನಿದ್ದವು ಅದು ಈ ಹೊತ್ತು ಕಾರ್ಯರೂಪಕ್ಕೆ ಬಂದಿವೆ. ಸುಮಾರು ಎಂಟು ಲೇಖನಗಳು ಈವರೆಗೆ ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ನಮ್ಮ ಯಜಮಾನರ ಬಗ್ಗೆ ಲೇಖನಗಳು ಮೂಡಿಬಂದಿವೆ. ಲೇಖಕರಾಗಿ ಈ ನಾಡಿನ ಅನೇಕ ಹಿರಿಯ ವಿದ್ವಾಂಸರ ಶಹಬಾಸ್‌ಗಿರಿಯನ್ನು ಪಡೆದಿದ್ದಾರೆ. ನಮ್ಮ ಮಾವನವರ ಮನೆಗೆ ಬರುತ್ತಿದ್ದ ಹಾಗೆ ನಮ್ಮ ಮನೆಗೂ ಅನೇಕ ವಿದ್ವಾಂಸರು, ರಾಜಕಾರಣಿಗಳು, ಚಲನಚಿತ್ರ ಕಲಾವಿದರು ಬಂದಿದ್ದಾರೆ, ಬರುತ್ತಿದ್ದಾರೆ. ಇದೆಲ್ಲಾ ನೋಡಿದಾಗ ನನ್ನ ಭಾವನವರಾದ ವೆಂಕಣ್ಣಯ್ಯನವರು ನಿನ್ನ ಯಜಮಾನರು ಬರೆದ ಮಾವನವರ ಜೀವನ ಚರಿತ್ರೆ 'ತಂಪು ನೆಳಲು' ಕೃತಿಯಲ್ಲಿ ಬರೆದಿರುವ ಮುನ್ನುಡಿಯ

ಈ ಮಾತುಗಳು ನಿಜ ಎನಿಸುತ್ತಿದೆ. ನನ್ನ ಯಜಮಾನರು ಪಿತೃ ಋಣ ತೀರಿಸಿದ್ದಾರೆ.

ಈಗ ಹತ್ತು ವರ್ಷಗಳ ಹಿಂದೆಯೇ ಇಂಥದೊಂದು ಅಭಿನಂದನ ಗ್ರಂಥ ನಮ್ಮ ಯಜಮಾನರನ್ನು ಕುರಿತು ಬರಬೇಕಿತ್ತು. ಆದರೆ ತಡವಾದರೂ ನಮ್ಮ ಕುಟುಂಬಕ್ಕೆ ಆತ್ಮೀಯರಾದ, ಮಲ್ಲೇಪುರಂ ಜಿ. ವೆಂಕಟೇಶ ಅವರು ನನ್ನ ಯಜಮಾನರ 70ನೇ ವರ್ಷದ ಸಮಾರಂಭ ಸಮಯಕ್ಕೆ ಛಾಯಾಭಿನಂದನ ಎಂಬ ಸಂಪುಟವನ್ನು ಹೊರ ತರುತ್ತಿರುವುದು ನನಗೆ ಅತ್ಯಂತ ಸಂತೋಷವಾಗಿದೆ. ಅವರಿಗೆ ನಾನು ಋಣಿಯಾಗಿದ್ದೇನೆ.

# ನಾ ಕಂಡಂತೆ ನಮ್ಮಣ್ಣ

ನಮ್ಮ ತಂದೆಯವರು, ದಿವಂಗತ ತ.ಸು. ಶಾಮರಾಯರು. ನಮ್ಮನ್ನು ಎಷ್ಟು ಪ್ರೀತಿಯಿಂದ ಬೆಳೆಸಿದರೋ, ಅದಕ್ಕಿಂತ ಹೆಚ್ಚಿನ ಕಟ್ಟುನಿಟ್ಟಿನಿಂದ ಬೆಳೆಸಿದರು. ಸ್ನಾತಕೋತ್ತರ ಪದವಿ ಮುಗಿಸಿದ ನಂತರವೂ ಅವರ ಇಚ್ಛೆಗೆ ವಿರುದ್ಧವಾಗಿ ನಡೆಯುವ ಎದೆಗಾರಿಕೆ ನಮಗ್ಯಾರಿಗೂ ಇರಲಿಲ್ಲ. ಅವರು ಹೊಂದಿದ್ದ ಜೀವನ ಮೌಲ್ಯಗಳ ಬಗ್ಗೆ ಇಂದು ನಾವು ಮೆಚ್ಚಿ ಅವರ ಬಗ್ಗೆ ಹೆಮ್ಮೆ ಪಡುತ್ತೇವಾದರೂ ನಮ್ಮ ಚಿಕ್ಕಂದಿನ ದಿನಗಳಲ್ಲಿ ಅವರ ಧ್ಯೇಯಗಳು. ನಮಗೆ ನುಂಗಲಾರದ ಕಹಿಗುಳಿಗೆಗಳಾಗಿದ್ದವು. ತಮಗೆ ಮತ್ತು ತಮ್ಮ ಸಂಸಾರಕ್ಕೆ ಅಗತ್ಯವಾದುದಕ್ಕಿಂತ ಹೆಚ್ಚು ಖರ್ಚು ಮಾಡುವುದನ್ನು ಅವರು ಸಹಿಸುತ್ತಿರಲಿಲ್ಲ. ಯಾರೇ ಆಗಲಿ ಅನವಶ್ಯಕ ಖರ್ಚು ಮಾಡುವುದನ್ನು ಅವರು ಖಂಡಿಸುತ್ತಿದ್ದರು. ಆದರೆ ಬಡತನದ ಬೇಗೆಯಲ್ಲಿ ಸಿಲುಕಿದ ಹಲವಾರು ಶಿಷ್ಯರು, ಆತ್ಮೀಯರು, ಸಂಘ ಸಂಸ್ಥೆಗಳಿಗೆ ಕೊಡುಗೈಯಿಂದ ಹಣ ಕೊಡುತ್ತಿದ್ದರು. ಅವರಷ್ಟು ಉನ್ನತ, ಉದಾತ್ತ ಮನೋಗುಣವಿರದಿದ್ದ ನನಗೆ ಅವರ ನಡವಳಿಕೆ ವಿಚಿತ್ರವಾಗಿ ಕಾಣುತ್ತಿತ್ತು ಮತ್ತು ಬಹಳ ಅಸಹನೆ ಉಂಟು ಮಾಡುತ್ತಿತ್ತು. ಈ ಒಂದು ತಲೆಮಾರಿನ ಅಂತರದಿಂದಾಗಿ ನನ್ನನ್ನು ಅರ್ಥಮಾಡಿಕೊಂಡು, ಆ ವಯಸ್ಸಿಗೆ ಸಹಜವಾದ ನನ್ನ ಆಸೆ ಆಕಾಂಕ್ಷೆಗಳನ್ನು ಈಡೇರಿಸುವವರಿಗಾಗಿ ಮನಸ್ಸು ಕಾಯುತ್ತಿತ್ತು. ಆ ಸಮಯದಲ್ಲಿ ಪ್ರಕಾಶನ ಸಂಸ್ಥೆಯ ಜವಾಬ್ದಾರಿಯನ್ನು ಹೊತ್ತುಕೊಂಡಿದ್ದ ನಮ್ಮ ಅಣ್ಣ ಛಾಯಾಪತಿ, ಸಮಾಧಾನ ಪಡಿಸಿ ತಲೆಮಾರಿನ ಅಂತರದ ಬಗ್ಗೆ ವಿವರಿಸಿ, ಹುಚ್ಚು ಹೊಳೆಯಂತಿದ್ದ ಮನಸ್ಸನ್ನು ತಹಬಂದಿಗೆ ಬರುವಂತೆ ಮಾಡಿ ನನ್ನ ಅವಶ್ಯಕತೆಗಳನ್ನು ಪೂರೈಸಿ ಸ್ಪಂದಿಸುತ್ತಿದ್ದ.

ನಮ್ಮ ತಂದೆಯವರು ತಮ್ಮ ವೃದ್ಧಾಪ್ಯದಿಂದಾಗಿ ತಾವು ಹುಟ್ಟುಹಾಕಿ ಬೆಳೆಸಿದ್ದ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಹೊಣೆಯನ್ನು ಛಾಯಾಪತಿಗೆ ಹೊರಿಸಿದ ಸಂದರ್ಭ ಅವನ ಜೀವನದ ಒಂದು ತಿರುವು ಅಂತಲೇ ಹೇಳಬೇಕು. ಅದೇ ತಾನೆ ಎಂ.ಕಾಂ. ಪದವಿಯನ್ನು ಪಡೆದು ಬ್ಯಾಂಕ್ ಆಫೀಸರ್ ಆಗಿಯೋ (ಅವನ

ಟಿ.ಎಸ್. ಸೂರ್ಯನಾರಾಯಣ

ಕೆಲವು ಸಹ ವಿದ್ಯಾರ್ಥಿಗಳು ಬ್ಯಾಂಕ್ ಆಫೀಸರುಗಳಾಗಿ ಕೆಲಸಕ್ಕೆ ಸೇರಿದ್ದರು) ಅಥವಾ ಯಾವುದಾದರೂ ಕಾಲೇಜಿನಲ್ಲಿ ಉಪನ್ಯಾಸಕನಾಗಿಯೋ ಆಗಬಹುದಿತ್ತು. ಪ್ರಾಯಶಃ ಅವನ ಆಸೆಯೂ ಅದೇ ಇದ್ದಿರಬಹುದು. ಆ ಸಮಯದಲ್ಲಿ ನಮ್ಮ ತಂದೆಯವರು ಛಾಯಾಪತಿಯನ್ನು ಬಳಿಯಲ್ಲಿ ಕೂಡಿಸಿಕೊಂಡು, ನನಗೆ ಪ್ರಕಾಶನ ಸಂಸ್ಥೆಯನ್ನು ಮುಂದುವರೆಸಿಕೊಂಡು ಹೋಗಲು ವಯಸ್ಸು ಅಡ್ಡಿಯಾಗಿರುವುದರಿಂದ, ನಿನ್ನಲ್ಲಿ ಭರವಸೆಯಿಟ್ಟು ಅದನ್ನು ನಿನ್ನ ಉಸ್ತುವಾರಿಗೆ ಕೊಡುತ್ತಿದ್ದೇನೆ. ಮುಂದಕ್ಕೆ ನೀನು ಪ್ರಕಾಶನ ಸಂಸ್ಥೆಯನ್ನು ನಡೆಸಿಕೊಂಡು ಹೋಗು' ಎಂದು ತಿಳಿಸಿದರು. ಆ ವೇಳೆಗೆ ನಮ್ಮ ದೊಡ್ಡಣ್ಣ ಟಿ.ಎಸ್. ವೆಂಕಣ್ಣಯ್ಯ ಶೃಂಗೇರಿಯ ಜೆ.ಸಿ.ಬಿ.ಎಂ. ಕಾಲೇಜಿನಲ್ಲಿ ಉಪನ್ಯಾಸಕನಾಗಿದ್ದ ನಾನಿನ್ನೂ ಆಟಕ್ಕುಂಟು ಲೆಕ್ಕಕ್ಕಿಲ್ಲ ಎನ್ನುವ ಸ್ಥಿತಿಯಲ್ಲಿದ್ದೆ. ಪ್ರಕಾಶನ ಸಂಸ್ಥೆಯನ್ನು ಯಶಸ್ವಿಯಾಗಿ ನಡೆಸಿಕೊಂಡು ಹೋಗಬಲ್ಲ ಸಾಮರ್ಥ್ಯವಿರುವುದು ಛಾಯಾಪತಿಗೆ ಮಾತ್ರ ಎನ್ನುವುದನ್ನು ನಮ್ಮ ತಂದೆಯವರು ಮನಗಂಡಿದ್ದರು, ತನ್ನ ಭವಿಷ್ಯದ ರೂಪುರೇಷೆಗಳನ್ನು ಹೆಣೆಯುತ್ತಿದ್ದ ಛಾಯಾಪತಿಗೆ ತಂದೆಯವರ ಸೂಚನೆ ಇಷ್ಟವಾಯಿತೊ ಇಲ್ಲವೊ ನನಗೆ ಗೊತ್ತಿಲ್ಲ. ಆದರೆ ತಾವು ಹುಟ್ಟುಹಾಕಿದ ಸಂಸ್ಥೆ ತನ್ನ ಮೌಲ್ಯಗಳನ್ನು ಉಳಿಸಿಕೊಂಡು ಚೆನ್ನಾಗಿ ಬೆಳೆಯಬೇಕೆಂಬ ತಂದೆಯವರ ಮನೋಭಿಲಾಷೆಯನ್ನು ಪೂರೈಸಿಕೊಡುವ ಉದ್ದೇಶದಿಂದ ತ.ವೆಂ. ಸ್ಮಾರಕ ಗ್ರಂಥ ಮಾಲೆಯ ಜವಾಬ್ದಾರಿಯನ್ನು ಹೊತ್ತುಕೊಂಡ. ಯಾವುದು ನಮ್ಮ ತಂದೆಯವರಿಗೆ ಹವ್ಯಾಸವಾಗಿತ್ತೋ ಅದು ಛಾಯಾಪತಿಗೆ ಜೀವನದ ದಾರಿಯಾಯಿತು.

ತ.ವೆಂ. ಸ್ಮಾರಕ ಗ್ರಂಥಮಾಲೆ - ನಮ್ಮ ದೊಡ್ಡಪ್ಪನವರಾದ ದಿ. ತಳುಕಿನ ವೆಂಕಣ್ಣಯ್ಯನವರ ಹೆಸರಿನಲ್ಲಿ ಸ್ಥಾಪಿತವಾದ ಪ್ರಕಟಣ ಸಂಸ್ಥೆ. ಉತ್ತಮ, ಸದಭಿರುಚಿಯ ಪುಸ್ತಕಗಳನ್ನು ಹೊರತರುವ ಸಂಸ್ಥೆ ಎಂದೇ ಪ್ರಸಿದ್ಧವಾಗಿದೆ. ಅನೇಕ ಉದಯೋನ್ಮುಖ ಬರಹಗಾರರನ್ನು ಬೆಳಕಿಗೆ ತಂದ ಸಂಸ್ಥೆ ಇದು. ಪುಸ್ತಕ ಪ್ರಕಟಣೆ ಎಷ್ಟು ಸಾಹಸದ ಕೆಲಸವೊ ಅದರ ದುಪ್ಪಟ್ಟು ಸಾಹಸದ ಕೆಲಸವೆಂದರೆ ಪುಸ್ತಕ ಮಾರಾಟ. ಪ್ರಕಟಣೆಯಿಂದಲೇ ಜೀವನ ಸಾಗಿಸಬೇಕಾದ ಪ್ರಮೇಯವಿಲ್ಲದಿದ್ದುದರಿಂದ ನಮ್ಮ ತಂದೆಯವರಿಗೆ ಅದೇನು ಅಂತಹ ಸಾಹಸದ ಕೆಲಸವಾಗಿರಲಿಲ್ಲ. ಆದರೆ ಪ್ರಕಾಶನದಿಂದಲೇ ಜೀವನ ಸಾಗಿಸಬೇಕಾಗಿದ್ದ ನಮ್ಮಣ್ಣನಿಗೆ ಅದು ನಿಜಕ್ಕೂ ಒಂದು ಸವಾಲೇ ಆಗಿತ್ತು. ತಂದೆಯವರ ಧ್ಯೇಯ, ಉದ್ದೇಶಗಳನ್ನು ರೂಢಿಸಿಕೊಂಡು ಸದಭಿರುಚಿಯ ಮೌಲಿಕ ಪುಸ್ತಕಗಳನ್ನು ಪ್ರಕಟಿಸುತ್ತಾ ಪಿತೃ ಋಣವನ್ನು ತೀರಿಸಿ ಧನ್ಯನಾಗಿದ್ದಾನೆ.

ನಮ್ಮ ಅಣ್ಣ ಪ್ರಕಾಶನದ ಜವಾಬ್ದಾರಿ ಹೊತ್ತ ತರುಣದಲ್ಲಿಯೇ ನಾನು ಸ್ನಾತಕೋತ್ತರ ಪದವಿಗಾಗಿ ಮಾನಸ ಗಂಗೋತ್ರಿಯ ಹೊಸಲು ಮೆಟ್ಟಿದೆ. ಮೊಟ್ಟ ಮೊದಲ ಬಾರಿಗೆ ಅಲ್ಲಿಯ ಸ್ನಾತಕೋತ್ತರ ತರಗತಿಗಳನ್ನು, ವಾತಾವರಣವನ್ನು,

ಪರಿಸರವನ್ನು ಕಂಡು ದಂಗಾಗಿ ಹೋಗಿದ್ದೆ. ವಿದ್ಯಾರ್ಥಿ ಮಿತ್ರರೊಡನೆ ಕ್ಯಾಂಟೀನ್‌ಗೆ ಹೋಗಿದ್ದು ಆಗಲೇ ಮೊದಲು. ಮಿತ್ರನೊಬ್ಬ ಕಾಫಿಯ ಬಿಲ್ ಕೈಗೆತ್ತಿಕೊಳ್ಳುವಾಗ ಮನಸ್ಸಿಗೆ ಏನೋ ಮುಜುಗರ. ಕೈಯಲ್ಲಿ ಕಾಸಿಲ್ಲ. ನಮ್ಮ ಮನೆಯಲ್ಲಿ 'ಪಾಕೇಟ್‌ಮನಿ' ಎನ್ನುವ ಪದವೇ ನಮಗೆ ಅಪರಿಚಿತ. ಆದರೂ ಧೈರ್ಯ ಮಾಡಿ ನಮ್ಮ ತಂದೆಯವರ ಬಳಿ 'ಪಾಕೇಟ್ ಮನಿ'ಗಾಗಿ ಕೈ ಚಾಚಿಯೇ ಬಿಟ್ಟೆ. ಅವರು ತಕ್ಷಣವೇ 'ನಿನಗೆ ಕಾಲೇಜಿಗೆ ಹೋಗಲು ಸೈಕಲ್ ಕೊಡಿಸಿದ್ದೇನೆ, ಓದಲು ಪುಸ್ತಕ ಸಾಮಗ್ರಿಗಳನ್ನು ಕೊಡಿಸಿದ್ದೇನೆ, ಮನೆಯಲ್ಲಿ ಊಟ ತಿಂಡಿ ಕಾಫಿ ಎಲ್ಲಾ ಆಗುತ್ತೆ. ನಿನಗೆ ಪಾಕೇಟ್ ಮನಿಯ ಅವಶ್ಯತೆ ಎಲ್ಲಿದೆ?' ಎಂದರು. 'ನಿನ್ನ ವಿದ್ಯಾರ್ಥಿ ಮಿತ್ರರು ಪರ ಊರಿನಿಂದ ಬಂದಿದ್ದಲ್ಲಿ ಅವರಿಗೆ ನಿನಗಿರುವ ಸೌಲಭ್ಯಗಳು ಇರುವುದಿಲ್ಲವಾದ್ದರಿಂದ ಹಣದ ಅವಶ್ಯಕತೆ ಇರುತ್ತದೆ. ಅದನ್ನು ಅವರ ತಂದೆ ತಾಯಿಯರು ಪೂರೈಸಿರುತ್ತಾರೆ. ಅವರೂ ಸಹಾ ಅನವಶ್ಯಕವಾಗಿ ಖರ್ಚು ಮಾಡಬಾರದು. ಅವರ ತಂದೆ ತಾಯಿಯರು ಅದೆಷ್ಟು ಕಷ್ಟಪಟ್ಟು ಹಣ ಜೊತೆ ಮಾಡಿ ಕಳಿಸಿರುತ್ತಾರೆಯೊ ಏನೊ!' ಎಂದು ಹೇಳಿ ನನ್ನ ಬಾಯಿ ಮುಚ್ಚಿಸಿದರು. ಅವರು ಹೇಳುತ್ತಿದ್ದುದು ಎಷ್ಟು ಸತ್ಯವೆಂದು ಇಂದು ಮನಸ್ಸಿಗೆ ಅರಿವಾಗುತ್ತದೆಯಾದರೂ ಆಗ ಬಹಳ ಬೇಸರ, ನಿರಾಸೆಗಳನ್ನುಂಟು ಮಾಡುತ್ತಿತ್ತು. ಮತ್ತೊಮ್ಮೆ ನಾವು Education Tour ಹೋಗಬೇಕಾದ ಸಂದರ್ಭದಲ್ಲಿಯೂ ಅಷ್ಟೇ ನಾವು ಟೂರ್‌ಗಾಗಿ ಪಾವತಿಸಬೇಕಾಗಿದ್ದ ಹಣವನ್ನು ಕೊಟ್ಟ ಮೇಲೆ ಕೇವಲ 20 ರೂ.ಗಳನ್ನು ಕೊಟ್ಟು ಕಳಿಸಿದ್ದರು. ಅಂತಹ ಸಂದರ್ಭಗಳಲ್ಲೆಲ್ಲಾ ಛಾಯಾಪತಿ, ನನ್ನ ಅವಶ್ಯಕತೆಗಳನ್ನು ಮನಗಂಡು ಕೈ ತುಂಬಾ ಹಣ ಕೊಟ್ಟು, ತಂದೆಯವರ ಬಗ್ಗೆ ಬೇಸರಗೊಳ್ಳದಿರಲು ತಿಳಿಸಿ ಸಮಾಧಾನಿಸುತ್ತಿದ್ದ. ಇಂದಿಗೂ ಸಹಾ ನನ್ನ ಹಲವಾರು ಪರಿಹರಿಸಿಕೊಳ್ಳಲಾಗದ ಸಮಸ್ಯೆಗಳಿಗೆ ಅವನಿಂದ ಪರಿಹಾರ ದೊರೆಯುತ್ತಿದೆ.

ಇಂದು ಬೇರೆಲ್ಲಾ ಕ್ಷೇತ್ರಗಳಂತೆ ಪ್ರಕಟಣ ಕ್ಷೇತ್ರವೂ ಬಹಳ ಮುಂದುವರಿದಿದೆ. ಹೊಸ ಹೊಸ ತಂತ್ರಜ್ಞಾನದ ಪ್ರಯೋಗ ಪ್ರಕಟಣ ಕ್ಷೇತ್ರದಲ್ಲಿಯೂ ಆಗುತ್ತಿದೆ. ದುಬಾರಿಯಾದರೂ ಪುಸ್ತಕವನ್ನು ಅಚ್ಚುಕಟ್ಟಾಗಿ ಹೊರತರುವುದು ಸುಲಭವೇನಲ್ಲ. ಅದಕ್ಕಾಗಿ ಬಹಳಷ್ಟು ಶ್ರಮವಹಿಸಬೇಕಾಗುತ್ತದೆ. ಈಗ ಸುಮಾರು 68-69 ವರ್ಷಗಳ ನಮ್ಮ ಅಣ್ಣ, ತನ್ನ ಆರೋಗ್ಯ, ಬೇಸರ, ಕಷ್ಟ, ಸಂಸಾರದ ಜವಾಬ್ದಾರಿಗಳನ್ನೆಲ್ಲಾ ನಿಭಾಯಿಸಿಕೊಂಡು ಪ್ರತಿಯೊಂದು ಹೊಸಪುಸ್ತಕವನ್ನು ಹೊರತರಲು ಬಹಳ ಶ್ರಮವಹಿಸುತ್ತಾನೆ. ಕೆಲವೊಮ್ಮೆ ಒಂದೆರಡು ದಿನಗಳಲ್ಲಿ ಸಾವಿರಾರು ಮೈಲಿ ಸುತ್ತಿ ಬರುತ್ತಾನೆ. ವಾರಕ್ಕೆ 3-4 ದಿನಗಳು ಬೆಂಗಳೂರಿಗೆ ಹೋಗಿ ಬರುವುದು ಬಹಳ ಸಾಮಾನ್ಯ ಸಂಗತಿ. ಪ್ರತಿ ಹೊಸ ಪುಸ್ತಕದ ರಕ್ಷಾಪುಟವನ್ನು ಬೆಂಗಳೂರಿನಲ್ಲಿ ಮುದ್ರಿಸಿಕೊಂಡು ಪುಸ್ತಕವು ಹೊರ ಬಂದ ನಂತರ ನಮಗೆಲ್ಲರಿಗೂ ತೋರಿಸಿ ನಮ್ಮೆಲ್ಲರೊಡನೆ

ಸಂತೋಷವನ್ನು ಹಂಚಿಕೊಳ್ಳುತ್ತಾನೆ. ತನ್ನ ಶ್ರಮದ ಸಾರ್ಥಕತೆಯನ್ನು ಅವರಲ್ಲಿ ಕಂಡುಕೊಳ್ಳುತ್ತಾನೆ.

ನಮ್ಮ ತಂದೆಯವರು ಇರುವಷ್ಟು ದಿನವೂ, ಛಾಯಾಪತಿ ತನ್ನ ಪ್ರಕಟಣೆಯ ಪ್ರತಿಯೊಂದು ಪುಸ್ತಕದ ಮೊದಲ ಪ್ರತಿಯನ್ನು ನಮ್ಮ ತಂದೆಯವರಿಗೆ ಕೊಟ್ಟು, ಅವರಿಂದ ಅದರ ಬಗ್ಗೆ ಮೆಚ್ಚುಗೆ ಪಡೆದರೇ ಅವನಿಗೆ ಸಮಾಧಾನ. ನಂತರವೂ ತನ್ನ ಪ್ರಕಟಣೆಯ ಪುಸ್ತಕದ ಮೊದಲ ಪ್ರತಿಯನ್ನು ನಮ್ಮ ತಾಯಿಯವರಿಗೆ ಕೊಟ್ಟು ಆಶೀರ್ವಾದ ಪಡೆಯುತ್ತಿದ್ದ.

ಪುಸ್ತಕ ಪ್ರಕಟಣೆಯಲ್ಲಿ ಅವನು ತೋರುವ ಅಚ್ಚುಕಟ್ಟುತನವನ್ನು ಬಹಳ ಮೆಚ್ಚಿ ಕನ್ನಡ ನಾಡಿನ ಅನೇಕ ಪ್ರಖ್ಯಾತ ಲೇಖಕರು ತ.ವೆಂ. ಸ್ಮಾರಕ ಗ್ರಂಥಮಾಲೆಯಲ್ಲಿ ತಮ್ಮ ಪುಸ್ತಕವೊಂದು ಪ್ರಕಟವಾಗುವುದು ಬಹಳ ಹೆಮ್ಮೆಯ ವಿಷಯವೆಂದು ಭಾವಿಸುತ್ತಾರೆ. ಪ್ರಕಾಶನ ಸಂಸ್ಥೆಯನ್ನು ಈ ಒಂದು ಮಟ್ಟಕ್ಕೆ ತರಲು ಅವನು ನಡೆಸಿರುವ ಹೋರಾಟ, ಶ್ರಮ, ತ್ಯಾಗಗಳು ಅತ್ಯಂತ ಶ್ಲಾಘನೀಯ.

ಈಗ ಸುಮಾರು 10 ವರ್ಷಗಳ ಹಿಂದೆ ನಾನು ಬರೆದಿದ್ದ ಲೇಖನದ ಮುಂದುವರಿದ ಭಾಗವಿದು. ಅಂದಿಗೂ ಇಂದಿಗೂ ಪುಸ್ತಕ ಪ್ರಕಟಣಾ ಪ್ರಪಂಚದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಹಾಗೆಯೇ ಬೆಳವಣಿಗೆಯಾಗಿವೆ. ಪುಸ್ತಕವೊಂದರ ಮೌಲ್ಯ ಎಷ್ಟು ಮುಖ್ಯವೊ ಅಷ್ಟೆ ಮುಖ್ಯ. ಅದರ ಆಕರ್ಷಕ ಹೊರ ಹೊದಿಕೆ. ಅಂತೆಯೇ ಅವರೆಡರ ಕಡೆಗೂ ಸಮಾನ ಗಮನವಿಟ್ಟು ಅತ್ಯಂತ ಮೌಲ್ಯಿಕ, ಆಕರ್ಷಕ ಪುಸ್ತಕಗಳನ್ನು ಹೊರತರುತ್ತಿದ್ದಾನೆ ಛಾಯಾಪತಿ. ಅವನ ನಿರಂತರ ಶ್ರದ್ಧೆ, ಶ್ರಮ, ಅರ್ಪಣಾ ಮನೋಭಾವ ಹಾಗೂ ವ್ಯವಹಾರಿಕ ನೀತಿಗಳಿಂದಾಗಿ ತ.ವೆಂ. ಸ್ಮಾರಕ ಗ್ರಂಥಮಾಲೆಯ ಬಳಗಕ್ಕೆ ಖ್ಯಾತನಾಮ ಲೇಖಕರು ಸೇರುತ್ತಲೇ ಇದ್ದಾರೆ.

ಹಲವು ವರ್ಷಗಳ ಹಿಂದೆಯೇ ಛಾಯಾಪತಿಗೆ ಸಾವಿರ ಪುಸ್ತಕಗಳ ಸರದಾರ ಎಂಬ ಬಿರುದು ಸಂದಿದೆ. ಪ್ರಖ್ಯಾತ ಪುಸ್ತಕ ಸಂಸ್ಥೆಗಳು ಮಾಡಬಹುದಾದಂತಹ ಕೆಲಸವನ್ನು ಅವನು ಏಕಾಂಗಿಯಾಗಿ ಮಾಡುತ್ತಿದ್ದಾನೆ, ಮಾಡಿ ಯಶಸ್ವಿಯಾಗಿ ಮುನ್ನಡೆಸುತ್ತಿದ್ದಾನೆ. ಇದು ನಿಜಕ್ಕೂ ಬೆರಗುಗೊಳಿಸುವಂತಹ ವಿಷಯ, ನನಗಂತೂ ಬಹಳ ಹೆಮ್ಮೆಯ ವಿಷಯ. ಪುಸ್ತಕ ಪ್ರಕಟಣ ಲೋಕವನ್ನು ಅರಿತವರೆಲ್ಲರೂ ನನ್ನ ಮಾತನ್ನು ಒಪ್ಪುತ್ತಾರೆಂದು ನಂಬಿದ್ದೇನೆ. ಅವನ ಈ ಮಹತ್ತರ ಸಾಧನೆಯ ಹಿಂದೆ ನಮ್ಮ ಅತ್ತಿಗೆ ಶ್ರೀಮತಿ ಪುಷ್ಪರವರ ಕೊಡುಗೆಯೂ ಸಾಕಷ್ಟಿದೆ. ಹಲವಾರು ಪುಸ್ತಕ ಬಿಡುಗಡೆ ಸಮಾರಂಭಗಳ ಯಶಸ್ಸಿನಲ್ಲಿ ಅವರ ಪಾತ್ರವೂ ಮಹತ್ತರವಾದದ್ದು.

ಈಚೆಗೆ ಛಾಯಾಪತಿಗೆ ಈ ಪುಸ್ತಕ ಪ್ರಕಾಶನದ ಕೆಲಸವನ್ನು ನಿಲ್ಲಿಸಲು ಮಕ್ಕಳಿಂದ ಒತ್ತಾಯವಿದೆ. ಆದರೂ ತ.ವೆಂ. ಸ್ಮಾರಕ ಗ್ರಂಥಮಾಲೆಯಲ್ಲಿ ತಮ್ಮ ಪುಸ್ತಕ

ಪ್ರಕಟಗೊಳ್ಳುವುದು ಅತ್ಯಂತ ಗೌರವ ಮತ್ತು ಹೆಮ್ಮೆಯ ವಿಷಯ ಎಂದು ಖ್ಯಾತನಾಮರಾದ ಲೇಖಕರೇಸಕರು ಭಾವಿಸಿರುವುದರಿಂದ ಹಾಗೂ ಪ್ರಕಟಣಾ ಕಾರ್ಯವನ್ನು ತನ್ನ ಜೀವನದ ಉಸಿರು ಎಂದು ನಮ್ಮ ಅಣ್ಣ ದೃಢವಾಗಿ ನಂಬಿರುವುದರಿಂದ ಪ್ರಕಾಶನ ಸಂಸ್ಥೆ ನಡೆದು ಬಂದ ದಾರಿ ಅವನನ್ನು ಕೈಹಿಡಿದು ಮುಂದೆ ನಡೆಸುತ್ತಿದೆ. ಸುಮಾರು 70 ವರ್ಷಗಳ ಅಂಚಿಗೆ ಬಂದಿರುವ ಅವನ ಬಗ್ಗೆ, ಅವನ ಆರೋಗ್ಯದ ಬಗ್ಗೆ ನಮಗೆಲ್ಲಾ ಕಾಳಯಿಜಿದ್ದರೂ, ಅವನು ಇನ್ನೂ ಹೆಚ್ಚಿನ ಸಾಧನೆಯನ್ನು ಮಾಡಲಿ ಎಂದು ಹಾರೈಸುತ್ತೇವೆ. ಅವನಿಗೆ ದೃಢ ಸಂಕಲ್ಪ ಇದೆ. ಖಂಡಿತ ಸಾಧಿಸುತ್ತಾನೆ ಎಂಬ ನಂಬಿಕೆ ನಮಗಿದೆ.

ಪುಸ್ತಕ ಪ್ರಕಟಣೆಯ ಕೆಲಸವೇ ಒಂದು ಸಾಹಸ ಪ್ರವೃತ್ತಿ, ಅದರ ಮಾರಾಟದ ವ್ಯವಸ್ಥೆಗೆ ಸಾಕಷ್ಟುಸಮಯ ಮುಡುಪಿಡಬೇಕಾಗುತ್ತದೆ ಮತ್ತು ಇದು ನಿರಂತರವಾಗಿ ನಡೆಯಬೇಕಾದ ಕ್ರಿಯೆ. ಜೊತೆಗೆ ನಮ್ಮ ದೈನಂದಿನ ಆಗುಹೋಗುಗಳಿಗೆ ಗಮನಕೊಡಬೇಕು. ದಿನದ 24 ಗಂಟೆಗಳೂ ಸಾಲದು ಎಂಬ ಪರಿಸ್ಥಿತಿ. ಆದರೆ ನಮ್ಮ ಅಣ್ಣ ಪುಸ್ತಕಗಳನ್ನು ಬರೆಯುವ ಸಾಹಸವನ್ನೂ ಮಾಡಿದ್ದಾನೆ, ಸಾಕಷ್ಟು ಯಶಸ್ವಿಯೂ ಆಗಿದ್ದಾನೆ. ಅವನು ನಮ್ಮ ತಂದೆಯವರನ್ನು ಕುರಿತಂತೆ ಬರೆದಿರುವ ಗುರುಶ್ರೇಷ್ಠ, ಕನ್ನಡದ ಕಲಿ, ಗಾಂಧೀಜಿಯ ಕನಸು ನಜೀರರಿಂದ ನನಸು, ನಮ್ಮ ಕ್ರಿಕೆಟ್ ಮುಂತಾದ ಕಿರು ಹೊತ್ತಿಗೆಗಳು ಸಾಕಷ್ಟು ಜನಪ್ರಿಯತೆಯನ್ನು ಗಳಿಸಿವೆ. ಅದರಲ್ಲೂ ನಮ್ಮ ತಂದೆಯವರನ್ನು ಕುರಿತು ಬರೆದ ಮತ್ತೊಂದು ಪುಸ್ತಕ 'ಅಣ್ಣನ ಸ್ಮರಣೆ'ಯನ್ನು ಓದಿದವರೆಲ್ಲಾ ಅವನ ಶೈಲಿ, ವಿಷಯ ಗ್ರಹಿಕೆ, ನಿರೂಪಣೆಯ ಬಗ್ಗೆ ಅಪಾರ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

ದಿ. ಡಾ. ಜಿ.ಎಸ್. ಶಿವರುದ್ರಪ್ಪನವರ ಡಾಕ್ಟರೇಟ್ ಪ್ರಬಂಧ ಸೌಂದರ್ಯ ಸಮೀಕ್ಷೆ, ದಿ. ಡಾ. ತ.ಸು.ಶಾಮರಾಯರ ಅಭಿನಂದನಾ ಗ್ರಂಥ ಸ್ಮೃತಿ, ಹೆಚ್.ಜೆ. ಲಕ್ಕಪ್ಪಗೌಡರ ಅಭಿನಂದನಾ ಗ್ರಂಥ ಹೊನ್ನಾರು, ಎಚ್ಚೆಸ್ಕೆ ಯವರ ಅಂಕಣ ಬರಹಗಳ ಸಂಗ್ರಹ ಬೆಳಕು ಚೆಲ್ಲಿದ ಬದುಕು, ಮುಂತಾದ ಗಾತ್ರದಲ್ಲೂ ಮಹತ್ತಿನಲ್ಲೂ ಮೌಲ್ಯದಲ್ಲೂ ಶ್ರೇಷ್ಠವಾದ ಗ್ರಂಥಗಳನ್ನು ಪ್ರಕಟಿಸಿರುವ ಛಾಯಾಪತಿಯಲ್ಲಿ ಇನ್ನೂ ಅಂತಹವೇ ಬೃಹತ್, ಮಹತ್ ಕೃತಿಗಳನ್ನು ಹೊರ ತರಬಲ್ಲ ಕನಸಿದೆ, ನನಸಾಗಿಸಬಲ್ಲ ಚೈತನ್ಯವಿದೆ, ಕನ್ನಡ ಪುಸ್ತಕ ಲೋಕಕ್ಕೆ ಅವನಿಂದ ಇನ್ನೂ ಮಹತ್ತರವಾದ ಸೇವೆ ಸಲ್ಲಲಿ ಎಂದು ಹಾರೈಸುತ್ತೇನೆ.

ಶ್ರೀ ಛಾಯಾಪತಿಯ ಈ ಶ್ರೇಷ್ಠ ಸಾಧನೆಯನ್ನು ಗಮನಿಸಿ ಹಲವಾರು ಸಂಘ ಸಂಸ್ಥೆಗಳು ಅವನನ್ನು ಸನ್ಮಾನಿಸಿ ಗೌರವಿಸಿವೆ. ಅದರಲ್ಲಿ ಭಾರತೀಯ ಸ್ಟೇಟ್ ಬ್ಯಾಂಕ್‌ನ ಕನ್ನಡ ಸಂಘ ಇತ್ತೀಚೆಗೆ ಮೈಸೂರಿನಲ್ಲಿ ಸನ್ಮಾನಿಸಿ ಗೌರವಿಸಿದೆ.

## ಚಿತ್ತದೊಳಗಿನ 'ಛಾಯಾ' ಚಿತ್ರ

ಇದೇ ಮೇ 2014ಕ್ಕೆ ತನ್ನ ಎಪ್ಪತ್ತರ ಹೊಸ್ತಿಲಿಗೆ ಕಾಲಿಡುತ್ತಿರುವ ಅಣ್ಣ ಟಿ.ಎಸ್. ಛಾಯಾಪತಿ, ತಳುಕಿನ ಹಿರಿ ತಲೆಗಳಂತೆಯೇ ಬದುಕನ್ನು'ಸಾಧನೆ'ಯ ದೃಷ್ಟಿಯಿಂದ ಸಾಗುವಣೆ ಮಾಡಿರುವಂಥ ಸೂಚನೆ ಕೊಟ್ಟಿದ್ದಾರೆ. ಒಂದು ಸಾವಿರಕ್ಕೂ ಹೆಚ್ಚಿನ ಮೌಲಿಕ ಕೃತಿಗಳ ಪ್ರಕಾಶಕರು, ಈ ಹೊತ್ತಿನಲ್ಲಿ ಅಭಿನಂದನಾ ಪ್ರಕಾಶನದಲ್ಲಿ ಪ್ರಕಾಶಿಸುತ್ತಿರುವುದು, ತಿಳುವಳಿಕೆ ದೃಷ್ಟಿಯಿಂದ ತುಂಬ ಹೆಮ್ಮೆ ಪಡುವ ವಿಚಾರ, ಈ ತಮ್ಮನಿಗೆ. ಎಷ್ಟೋ ಬಾರಿ, ಕುಟುಂಬ ಎಂದರೆ, ಕೇವಲ ದೊಡ್ಡಪ್ಪ, ತಂದೆ, ಅಣ್ಣ, ಅತ್ತಿಗೆ, ಇತ್ಯಾದಿಯಾಗಿ ಅರ್ಥವಾಗುತ್ತ ಕುಟುಂಬ ಸದಸ್ಯನೊಬ್ಬ ಏನೇ ಸಾಧನೆ ಮಾಡಿದರೂ ಅದೊಂದು ಸಣ್ಣ ವಿಚಾರವಾಗಿಯೇ ಉಳಿದುಬಿಡುತ್ತದೆ. 'ಸಾಧನೆ' ಏನಿದ್ದರೂ ಪರರ ಕಣ್ಣಿಗೆ, ಸಮಾಜದ ದೃಷ್ಟಿಯಲ್ಲಿಯೇ ವಿನಃ ಮನೆಯ ಪಡಸಾಲೆಯಲ್ಲಿ ಅಲ್ಲವೇ ಅಲ್ಲ! ಒಂದೊಮ್ಮೆ ದಿನಪತ್ರಿಕೆಯಲ್ಲಿ ಭಾವಚಿತ್ರ ಸಮೇತ ಪ್ರಕಟವಾದ ಈ 'ಸದಸ್ಯ'ನ ವಿವರ ಕೇವಲವಾಗಿ ಕಾಣುವುದೇ ವಿನಃ ಮನೆಯ ಪ್ರತಿಷ್ಠೆ, ಅಂತ ಅನ್ನಿಸುವುದೇ ಇಲ್ಲ. ಇಂಥ ವಾತಾವರಣದಲ್ಲಿ ಸಾಧಕನು ದಿನೇ ದಿನೇ ಗಟ್ಟಿಯಾಗುತ್ತಲೇ ಹೋಗುತ್ತಾನೆ. ಆ ಸಾಧನೆಗಳ ವಿಮರ್ಶೆ, ವಶೀಲಿ, ಎಲ್ಲಕ್ಕೂ ತನ್ನ ವಯಸ್ಸನ್ನೇ ಆತ ಪಣವಾಗಿಟ್ಟಿರುತ್ತಾನೆ!!

ಒಬ್ಬ ವ್ಯಕ್ತಿಯ ವೃತ್ತಿ ಜೀವನದಲ್ಲಿನ ನಲ್ವತ್ತಾರು ವರುಷಗಳ ಒಂದು ಅವಧಿ, ಅದರಲ್ಲೂ ಸಾಹಿತ್ಯ ಲೋಕದ ದಿಗ್ಗಜರ ಬರೆಹಗಳಲ್ಲಿ ಪ್ರಕಾಶನಕ್ಕೆ ಒಪ್ಪಿಸಿಕೊಂಡು, ಪುಸ್ತಕೋದ್ಯಮ ಕ್ಷೇತ್ರದಲ್ಲಿ ಅಳಿಸಲಾಗದ ಹೆಜ್ಜೆ ಗುರುತುಗಳನ್ನು ಮೂಡಿಸುವಂಥದು, ತನ್ನ ಜೊತೆಗೇ, ತಳುಕಿನ ಸಾಂಪ್ರದಾಯಿಕ ಸಾರಸ್ವತ ಮೌಲ್ಯಗಳನ್ನು ಉಳಿಸಿಕೊಂಡು ಬರುವುದು ಸವಾಲಿನ ಕವಾಯಿತು.

ಕನ್ನಡ ಅಕ್ಷರ ಲೋಕದ ದಿಗ್ಗಜರುಗಳಲ್ಲಿ ಅಗ್ರಮಾನ್ಯರಾದ ದಿ|| ಟಿ.ಎಸ್. ವೆಂಕಣ್ಣಯ್ಯ ತನಗೆ ದೊಡ್ಡಪ್ಪನವರು; ದಿ|| ತ.ಸು. ಶಾಮರಾಯರು ತನ್ನ ತಂದೆಯವರೇ.

ತಳುಕಿನ ಕುಟುಂಬದ ಅತಿ ಜನಪ್ರಿಯ ಕಾದಂಬರಿಕಾರ ದಿ|| ತ.ರಾ.ಸು, ಸಂಬಂಧದಲ್ಲಿ ಅಣ್ಣನೇ! ಇನ್ನೇನು ? ಪುಸ್ತಕ ಪ್ರಕಾಶನದ ಕೃಷಿ ಒಂದರ್ಥದಲ್ಲಿ ಸಲೀಸು. ಹಾಗೆಂದು ನಾವೆಲ್ಲ ಭಾವಿಸುವುದು ಸಹಜ ಮತ್ತು ಸುಲಭ. ಆದರೆ, ಪುಸ್ತಕ ಪ್ರಕಾಶನದ ಹಾದಿ ಅದೆಷ್ಟು ಕಷ್ಟಕರ ಎನ್ನುವುದಕ್ಕೆ 'ಸ್ವಸ್ತಿ' (ತ.ಸು. ಶಾಮರಾಯರ ಅಭಿನಂದನಾ ಗ್ರಂಥ)ಬಗ್ಗೆ ಹಾ.ಮಾ.ನಾ. ಬರೆದಿರುವ ಸಾಲು ಸಾಕ್ಷಿ; ಅದೆಂದರೆ; 'ಸಾವಿರ ಪುಟಗಳ, ಅದರಲ್ಲೂ ಈ ಬಗೆಯ ಪುಸ್ತಕ ಪ್ರಕಟಿಸಲು ಯಮ ಧೈರ್ಯವೇ ಬೇಕು'. ಇಂಥ ಹಲವಾರು 'ಸಾವಿರ ಪುಟಗಳ'ಹೊತ್ತಗೆಗಳನ್ನು ಛಾಯಾಪತಿ ಪ್ರಕಟಿಸಿದ್ದಾರೆ.

ಒಬ್ಬ ಪ್ರಕಾಶಕ ಇದ್ದಾನೆಂದರೆ, ಅವನ ಸುತ್ತಲೂ ಬರೆಹಗಾರರು ಯಾವ ಕಾಲಕ್ಕೂ ತಮ್ಮ ಕೃತಿಗಳ ಪ್ರಕಾಶನಕ್ಕೆ ಹಾತೊರೆಯುತ್ತಿರುತ್ತಾರೆ. ಕೆಲವರಂತೂ ಇಂಥದ್ದೇ ಪ್ರಕಾಶನ ಸಂಸ್ಥೆ ಯಾ ವ್ಯಕ್ತಿ ತಮ್ಮ ಕೃತಿಗಳನ್ನು ಪ್ರಕಟಿಸಬೇಕೆಂದು ನಿಯಮ ಮಾಡಿಕೊಂಡಿರುತ್ತಾರೆ. ಈ ಆವರಣದ ಕೇಂದ್ರ ಬಿಂದುವಾಗಿ ಮತ್ತು ಲೋಕಕ್ಕೆ ಅರ್ಪಣ ಆಗಬೇಕಿರುವ ಜ್ಞಾನ ಸಂಪತ್ತನ್ನು ಅರ್ಥಮಾಡಿಕೊಂಡು, ಸಾಹಿತ್ಯದ ವಾತಾವರಣವನ್ನು ಮತ್ತಷ್ಟು ಸಹನೀಯ ಮಾಡುವಂಥ ದೊಡ್ಡ ಜವಾಬ್ದಾರಿ ಅಥವಾ ತೊಡಕನ್ನು ನಿವಾರಿಸಿಕೊಳ್ಳುವ ಹಾದಿ ಎಷ್ಟು ಮಹಾ ಸುಗಮವಾಗಿದ್ದೀತು? ಹೀಗೇನೇ ಹತ್ತು ಹಲವಾರು ಜಟಿಲ ಸಮಸ್ಯೆಗಳ ಸುಳಿಯಲ್ಲಿ, ಇಳಿ ವಯಸ್ಸಿನಲ್ಲಿಯೂ ಸಾಹಿತ್ಯ ಪ್ರಕಾಶನದ ಬಂಡಿ ಎಳೆಯುತ್ತಿರುವ ಅಣ್ಣ ಛಾಯಾಪತಿ ನನಗೆ ಕೇವಲ ಒಬ್ಬ ಅಣ್ಣಯ್ಯ ಮಾತ್ರ, ಅಂತ ಕಾಣಿಸುತ್ತಿಲ್ಲ, ಎಂದು ಪ್ರಾಮಾಣಿಕವಾಗಿ ಹೇಳ ಬಯಸುತ್ತೇನೆ.

ತ.ಸು. ಶಾಮರಾಯರು ತಮ್ಮ ಅಕ್ಷರ ಕೊಡುಗೆಗಳಿಂದ ಸಾಹಿತ್ಯಲೋಕಕ್ಕೆ ಚಿರಪರಿಚಿತ. ಆದರೇನು? ಎಲ್ಲಕ್ಕೂ ಹೆಚ್ಚಾಗಿ ನನಗೆ ದೊಡ್ಡಪ್ಪನವರು. ಅದರಲ್ಲೂ ನನ್ನ ತಂದೆ 'ಮೇಚಣ್ಣ'ನವರು ತಮ್ಮ ಅಣ್ಣಂದಿರನ್ನು ಅಕ್ಷರಶಃ ಪೂಜಿಸುತ್ತಿದ್ದವರು. ಈ ಮಾತನ್ನು ಇವತ್ತಿನ ಪೀಳಿಗೆ ನಂಬದೇ ಹೋಗಬಹುದು. ಆದರೆ, ಅಂಥ ಪ್ರಸಂಗಗಳನ್ನು ನಾವು, ಕುಟುಂಬದವರು ಕಣ್ಣಾರೆ ಕಂಡಿದ್ದೀವಿ! ನಾನಂತೂ, ನಮ್ಮ ತಂದೆಯವರು ಅವರ ಅಣ್ಣನವರಿಗೆ ಸಾಷ್ಟಾಂಗ ನಮಸ್ಕಾರ ಹಾಕಿದ್ದನ್ನು ನೋಡಿ ದಂಗಾಗಿದ್ದೇನೆ. ಇಂಥ ಅನ್ಯೋನ್ಯತೆ ಅವರ ನಂತರದ ಪೀಳಿಗೆಗೆ ತೃಣಮಾತ್ರವೂ ಬಾರದೇ ಹೋದದ್ದು ಇಂದಿಗೂ ನನ್ನಲ್ಲಿ ವಿಸ್ಮಯವಾಗಿ ಕಾಣುತ್ತಿದೆ. ಕಲಿಯ ಪ್ರಭಾವ ಇರಬಹುದೆಂದು ಸಮಾಧಾನ ಪಟ್ಟುಕೊಂಡಿದ್ದೇನೆ. ಈ ಮಾತುಗಳ ಹಿಂದೆ ಒಂದು ಭಾವವಿದೆ. ಅದೆಂದರೆ, ಛಾಯಾಪತಿ ನನಗೆ ಅಣ್ಣ; ಶಾಮಣ್ಣ ದೊಡಪ್ಪನವರ ಪುತ್ರ. ಆತನನ್ನು ಪ್ರಕಾಶನದ ಕೃಷಿಯ ಹಿಂದಿನ ದೊಡ್ಡ ಸಾಧನೆಯ ನೆರಳಿನಲ್ಲಿ ಕಾಣಲು ನನಗೆ ಸಾಧ್ಯವಾಗುತ್ತಿದೆ. ಇವರು ಅಣ್ಣನಷ್ಟೇ ಅಲ್ಲ!

ಎಷ್ಟೆಂದರೂ, ಎಪ್ಪತ್ತು ವರ್ಷಗಳ ಜೀವನ ಪ್ರಯಾಣ ಸುಖಾ ಸುಮ್ಮನೆ ಸವೆಯ ಹೋಗತಕ್ಕುದ್ದಲ್ಲ. ತಳುಕಿನ ಕುಟುಂಬದ ಮೂಲ ಪುರುಷರ ಕತೆ ಹೇಳುವ 'ಮೂರು ತಲೆಮಾರು' ಓದಿದವರಿಗೆ, ಈ ಭಾವನೆ ಅರ್ಥವಾಗುತ್ತದೆ, ಎಂದರೆ, ಜೀವನದ ಮೈಲಿಗಲ್ಲುಗಳನ್ನು ಕೇವಲ ಎಣಿಸುತ್ತಾ ಸಾಗುವಂಥ ಜೀವ ತಾನಾಗಬಾರದು ಎನ್ನುವ ತುಡಿತವಿರುವ ಹಾಗೂ ಮೆದುಳಿನ ಮೂಲೆಯಲ್ಲಿ ಎಲ್ಲಿಯೋ, ತಾನೇನೂ ಆಗಲಿಲ್ಲವಲ್ಲಾ ಎನ್ನುವ ಕೊರಗು ಇರದ ಒಬ್ಬನೂ ಈ ತಳುಕಿನ ಮನೆತನದಲ್ಲಿ ಇಲ್ಲ. ಆದರೇನು? ಸಾಧನೆ ಕೇವಲ ತನ್ನೊಬ್ಬನ ಯೋಚನಾ ಶಕ್ತಿಯನ್ನಷ್ಟೇ ಅವಲಂಬಿಸುವುದಿಲ್ಲ. ಸಾಧನೆಗೆ ತಕ್ಕ ವಾತಾವರಣವನ್ನು ಯಾವುದೋ 'ಕಾಣದ ಕೈಗಳೂ' ಹಾಗೂ ತನ್ನವೇ ಆದ ಎರಡು ಕೈಗಳಿಂದ ನಿರಂತರವಾಗಿ ಸೃಷ್ಟಿಸುತ್ತಲೇ ಹೋಗಬೇಕಿದೆ.

ಒಂದು ಮಿತಿಯೊಳಗೆ ಎಲ್ಲಕ್ಕೂ ಅರ್ಥವಿದೆ; ಒಂದು ಮಿತಿಯನ್ನು ದಾಟಿದರೆ ಅರ್ಥದೊಳಗಿನ ಅರ್ಥವೇ ಹೊರ ಬರುತ್ತದೆ. ಬರಹಗಾರರ ಬರಹಗಳನ್ನು ಕೃತಿಯನ್ನಾಗಿಸಿ ಪ್ರಕಾಶಿಸುವಾಗ, ತಾನೂ ಪ್ರಕಾಶ ಹೊಂದುವುದು ಹೇಗೆ? ಇದೇ ಸವಾಲು. ಇದೇ ತೊಡಕು. ಅದನ್ನು ನಿವಾರಿಸಿಕೊಂಡು ಸಾಗುವ ಹಾಗೂ ಒಂದು ಉತ್ತುಂಗಕ್ಕೆ ಬಂದು ನಿಲ್ಲುವ ದೃಢತೆಗೆ ಸಾಮಾನ್ಯ ಶಕ್ತಿ ಸಾಲದು. ಇಂಥ ಸಾಧನೆಯ ಹಿಂದೆ ಧೀಃ ಶಕ್ತಿ ಇರಬೇಕೆಂಬುದು ನನ್ನ ನಮ್ರ ಭಾವನೆ.

ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ತಾನೂ ಉಳಿದುಕೊಂಡು ತನ್ನ ಹಿರಿಯರ ಹೆಸರನ್ನೂ ಉಳಿಸಿಕೊಂಡು, ಮಾಲೆಯಲ್ಲಿ ತಾಜಾ ಪುಷ್ಪಗಳನ್ನೇ ಧರಿಸುತ್ತ, ಎಂದೆಂದಿಗೂ ಬಾಡದಂತೆ, ನವನವೀನವಾಗಿ ಕಾಣುವಲ್ಲಿ ಕನ್ನಡದ ಸಾಹಿತ್ಯ ಲೋಕದ ಅಮರ ಜೀವಿಗಳು, ಕವಿಗಳು, ಕೃತಿಕಾರರು ಪಾಲುದಾರಿಕೆ ನೀಡಿದ್ದಷ್ಟೇ ಅಲ್ಲ, ಅಂಥ ಪ್ರಾಃಥ ಸ್ಮರಣೀಯರ ಪ್ರೀತಿ ವಿಶ್ವಾಸ ಗಳಿಸುವಲ್ಲಿ ಸ್ವತಃ ವ್ಯಕ್ತಿತ್ವದಲ್ಲಿ ಮಾದರಿಯಾಗಿ ನಿಂತಿದ್ದರಿಂದಲೇ ಈ ಹೊತ್ತು, ಈ ಅಭಿನಂದನೆ, ಅಣ್ಣ ಛಾಯಾಪತಿಗೆ.

ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪ್ರಕಾಶೋದ್ಯಮದ ಬಗ್ಗೆ ವಿಷಯ ಮಂಡನೆ, ಇವರ ಉದ್ಯಮ ಶೀಲತೆ ಪ್ರತಿಬಿಂಬಿಸುತ್ತದೆ. ಪ್ರಕಟಣಾ ಪ್ರಪಂಚದ ಆಗು ಹೋಗುಗಳ ಬಗ್ಗೆ ಇವರ ರೇಡಿಯೋ ಭಾಷಣ ಹಾಗೂ ತಾವೇ ಲೇಖಕರಾಗಿ ಪ್ರಕಟಿಸಿದ ಇಪ್ಪತ್ತಮೂರು ಪುಸ್ತಕಗಳಲ್ಲಿ ಅನನ್ಯತೆ ಪಡೆದ 'ಅಣ್ಣನ ಸ್ಮರಣೆ', 'ಆಡಳಿತ ಭಾಷೆ ಕನ್ನಡ', 'ವರದಕ್ಷಿಣೆ -ಸಾಮಾಜಿಕ ಪಿಡುಗು' ಇನ್ನು ಮುಂತಾದ ಕೃತಿಗಳು, ತಮ್ಮ ಬರಹಗಾರರ ಸಹವಾಸದಿಂದ ಬಂದ ಕೊಡುಗೆಗಳೆ ಆಗಿವೆ. ಬರೆಹಗಾರನಾಗಿ ಇವರು ಆಯ್ದುಕೊಂಡ ವಿಷಯಗಳು ಸಮಕಾಲೀನವಾಗಿದ್ದಷ್ಟೇ ಅಲ್ಲ, ವಸ್ತುನಿಷ್ಠವಾಗಿ, ಚಿಕ್ಕದಾಗಿ, ಚೊಕ್ಕವಾಗಿ, ಸಮಾಜಕ್ಕೆ ಸಂದೇಶ ತಲುಪಿಸುವಲ್ಲಿ ಯಶಸ್ವಿಯಾಗಿವೆ.

ಇನ್ನು ಪ್ರಶಸ್ತಿ ಪುರಸ್ಕಾರಗಳ ಬಗ್ಗೆ ಇಲ್ಲಿ ಮತ್ತೆ ಪ್ರತ್ಯೇಕವಾಗಿ ನಾನಾದರೂ ಏಕೆ ಉಲ್ಲೇಖಿಸಲಿ! ಅವುಗಳ ಆಗಮನ ಅಯಾಚಿತವಾಗಿದ್ದವು ಹಾಗೂ ಪ್ರತಿಭೆಗೆ ತಕ್ಕ ಪುರಸ್ಕಾರಗಳಿಂದಾಗಿ ಸುತ್ತಣ ಸಮಾಜ ತನ್ನನ್ನು ತಾನೇ ಗೌರವಿಸಿಕೊಂಡಿತು, ಎಂದಷ್ಟೇ ಹೇಳಬಹುದು. ಇದು ಕ್ಲೀಷೆಯ ಮಾತಲ್ಲ. ಕಲಾವಿದನಾಗಿ ರೂಪುಗೊಳ್ಳುವಾಗಿನ ಅನಂತದೆಡೆಗಿನ ನನ್ನ ಹಾದಿಯಲ್ಲಿ ಕಾರ್ಪಣ್ಯ ಕಟ್ಟಿಕೊಟ್ಟ ಅನುಭವದ ಮಾತು, ಇದು.

ಇವತ್ತಿನ ದೃಶ್ಯ, ಸಂವಹನ ಮಾಧ್ಯಮಗಳ ತೀವ್ರ ಪೈಪೋಟಿಯ ಮಧ್ಯೆ ಪುಸ್ತಕ ಓದುವ ಸಂಸ್ಕೃತಿ ಅದರಲ್ಲೂ 'ಕೊಂಡು' ಓದುವ ಸಂಸ್ಕೃತಿ ಬಗೆಗಿನ ಆತಂಕಕ್ಕೆ ಅಣ್ಣ ಛಾಯಾಪತಿ ಸ್ಪಂದಿಸುವ ರೀತಿ ಆಶಾದಾಯಕವಾಗಿದೆ. ಅವರೆನ್ನುತ್ತಾರೆ. 'ಒಳ್ಳೆಯ ಪುಸ್ತಕ ಮಾಡಿ ಕಡಿಮೆ ಬೆಲೆ ಇಟ್ಟರೆ, ಓದುಗರು ಕೊಂಡು ಓದುತ್ತಾರೆ'

ಅಕ್ಷರಶಃ ನಿಜವಾದ ಈ ಮಾತನ್ನು ಛಾಯಾಪತಿಯಂಥ ಪ್ರಕಾಶಕ ಮಾತ್ರ ಹೇಳಬಹುದು. ಈ ಗಂಡೆದೆಯ ಹಿಂದಿನ ಆ ಹೆಣ್ಣು ಹೃದಯ, ಪುಷ್ಪಾ ಅತ್ತಿಗೆಯವರ ನಸುನಗೆ ಯಾವತ್ತೂ ನನ್ನ ಕಣ್ಣ ಮುಂದೆ ನಿಲ್ಲುತ್ತದೆ. ಅಭಿನಂದನೆಗಳು !!

# ಅಪರೂಪದ ಸಹೋದರ

ಕೆಲವು ಅಪರೂಪದ ವ್ಯಕ್ತಿಗಳೇ ಹೀಗೆ. ಭವ್ಯವಾದ ಕನಸೊಂದನ್ನು ಕಾಣುತ್ತಾರೆ. ಅದು ನನಸಾಗಲು ಬೇಕಾದ ಎಲ್ಲ ಪರಿಶ್ರಮವನ್ನೂ ಮಾಡುತ್ತಾರೆ. ನಿರಂತರ ಪ್ರಯತ್ನದಿಂದ ಶ್ರದ್ಧೆಯಿಂದ ಸಾಧನೆ ಮಾಡುತ್ತಾರೆ. ಸಾಧಕರಾಗಿ ಬೇರೆಯವರಿಗೂ ಮಾರ್ಗದರ್ಶಿಗಳೂ ಆಗುತ್ತಾರೆ. ಇಂತಹ ಅಪರೂಪದ ವ್ಯಕ್ತಿ ನಮ್ಮ ಛಾಯಾಪತಿ ಅವರು.

ಕನ್ನಡದ ಅಶ್ವನಿ ದೇವತೆ ಪ್ರೊ. ಟಿ.ಎಸ್. ವೆಂಕಣ್ಣಯ್ಯನವರ ತಮ್ಮ, ಕನ್ನಡದ ಭೀಷ್ಮ ಪ್ರೊ. ತ.ಸು. ಶಾಮರಾಯರ ಎರಡನೆ ಪುತ್ರ ಶ್ರೀ ಛಾಯಾಪತಿ. ಔದಾರ್ಯ, ಪ್ರೀತಿ, ವಾತ್ಸಲ್ಯ, ಸಾತ್ವಿಕತೆ ತಳುಕಿನ ಮನೆತನದ ದೊಡ್ಡ ಗುಣ. ನಾನು ಮೈಸೂರಿಗೆ ಹೋದಾಗಲೆಲ್ಲ ತ.ಸು.ಶಾ. ಅವರು ತೋರುತ್ತಿದ್ದ ಪ್ರೀತ್ಯಾದರಗಳು ನನ್ನ ನೆನಪಿನಲ್ಲಿ ಸದಾ ಹಸಿರಾಗಿ ಇರುತ್ತದೆ. ಆ ಚಿಕ್ಕಂದಿನ ದಿನಗಳಿಂದ ಶ್ರೀ ಛಾಯಾಪತಿ ಅವರೊಂದಿಗೆ ಒಡನಾಟ. ಮನೆಗೆ ಬಂದ ಬಂಧುಗಳನ್ನೆಲ್ಲ ಆದರಿಸುವ ಅವರ ನಡೆ ನುಡಿ ಉದಹರಿಸುವಂಥದ್ದು.

ಸ್ನಾತಕೋತ್ತರ ಪದವಿ (ವಾಣಿಜ್ಯ) ಪಡೆದ ಛಾಯಾಪತಿ ಯಾವುದೇ ಉದ್ಯಮದಲ್ಲಿ ಅಧಿಕಾರಿಯಾಗಬಹುದಿತ್ತು. ಆದರೆ ಅವರು ಆರಿಸಿಕೊಂಡಿದ್ದು, ತಂದೆಯಿಂದ 1968ರಲ್ಲಿ ಬಳುವಳಿಯಾಗಿ ಬಂದ ತ.ವೆಂ. ಸ್ಮಾರಕ ಗ್ರಂಥಮಾಲೆಯ ಹೊಣೆಗಾರಿಕೆ. ಪ್ರಕಾಶನ ಸಂಸ್ಥೆಯ ಆಗು ಹೋಗುಗಳನ್ನು ಪ್ರತ್ಯಕ್ಷವಾಗಿ ಕಂಡಿದ್ದ ಇವರಿಗೆ, ಆ ಕ್ಷೇತ್ರದ ಮೂಲಕವೇ ಜೀವನವನ್ನೂ ಕಂಡುಕೊಂಡರು. ಪ್ರತಿಯೊಂದು ಪುಸ್ತಕ ಪ್ರಕಟವಾದಗಲೂ ಅವರ ಉತ್ಸಾಹ ಚಿರನೂತನ.

ಸ್ವತಃ ವಿದ್ವಾಂಸರೂ, ಲೇಖಕರೂ (ಸುಮಾರು 22 ಕೃತಿಗಳು) ಆದ ಛಾಯಾಪತಿ ತಮ್ಮ ಓದುಗನನ್ನು ಮುಟ್ಟಲು ಅದೆಷ್ಟು ಕ್ರಿಯಾಶೀಲಾರಾಗುತ್ತಿದ್ದರು! ಪ್ರತಿಯೊಂದು ಪುಸ್ತಕಕ್ಕೂ ಅಂದವಾದ ಅರ್ಥಗರ್ಭಿತ ಮುಖಪುಟದ ವಿನ್ಯಾಸ ಬರುವಲ್ಲಿ ಮಗ್ನರಾಗು

---

ವಿ. ನಾರಾಯಣ

---

ತ್ತಾರೆ. ಸಾಹಿತ್ಯ -ಅಂತಃ ಸತ್ವದೊಂದಿಗಿದ್ದರೆ, ಕಲೆ ಬಾಹ್ಯ ಸೌಂದರ್ಯವನ್ನು ಒಳಗೊಂಡು ಅಂದ ಚೆಂದದ ಪುಸ್ತಕಗಳು ಪ್ರಕಟವಾಗಿವೆ.

ಅವರಿಗೆ ಅಗಾಧ ಪುಸ್ತಕ ಪ್ರೀತಿ ಇದೆ. ಪುಸ್ತಕೋದ್ಯಮಕ್ಕೆ ಬದ್ಧತೆ ಇದೆ, ಹೊಣೆಗಾರಿಕೆಯ ಅರಿವೂ ಇದೆ. ಕನ್ನಡ ಸಾಹಿತ್ಯದ ಮೌಲಿಕ, ಸೃಜನಾತ್ಮಕ ಕೃತಿಗಳನ್ನು ಪ್ರಕಟಿಸಿ, ಸಾಮಾನ್ಯ ಓದುಗನಲ್ಲದೆ, ವಿದ್ವಾಂಸರ ಪ್ರಶಂಸೆಗೂ ಪಾತ್ರರಾಗಿದ್ದಾರೆ. ಬೃಹತ್ ಗಾತ್ರದ ಪುಸ್ತಕ ಪ್ರಕಟಿಸಿ, ಓದುಗರಿಗೆ ಮುಟ್ಟಿಸುವ ಧೈರ್ಯವಿದೆ. ಆ ಧೈರ್ಯದಿಂದಲೇ ಸಾವಿರ ಪುಟಗಳ ಹಲವಾರು ಗ್ರಂಥಗಳು ಹೊರಬಂದಿವೆ.

ಸಾಹಿತ್ಯ ಲೋಕದ ದಿಗ್ಗಜರಲ್ಲಿ ಅನೇಕರು ಅವರ ಮನೆಗೆ ಬಂದು ಹೋಗುತ್ತಿದ್ದರು. ಹಿರಿಯ ವಿದ್ವಾಂಸರನ್ನು ಅತ್ಯಂತ ಗೌರವದಿಂದ ನೋಡುತ್ತಿರುವ ಛಾಯಾಪತಿ ಅನೇಕರ ಪ್ರೀತಿ ಅದರಗಳಿಗೆ ಪಾತ್ರರಾಗಿದ್ದಾರೆ.

ಒಮ್ಮೆ, ನನಗೆ ಅವರೊಂದಿಗೆ ಡಾ. ಹಾ.ಮಾ. ನಾಯಕರ ಮನೆಗೆ ಹೋಗುವ ಸೌಭಾಗ್ಯ. ಸುವಿಖ್ಯಾತ ವಿದ್ವಾಂಸರಾದ ಅವರ ಸರಳತೆ ಅನನ್ಯ. ಛಾಯಾಪತಿ ಅಂತಹ ಹಿರಿಯರಿಂದ ಸಲಹೆ ಮಾರ್ಗದರ್ಶನಗಳನ್ನು ಪಡೆದಿದ್ದಾರೆ.

ಮನೆಗೆ ಬಂದ ಅತಿಥಿಗಳಿಗೆ ಪುಷ್ಪ, ಛಾಯಾಪತಿ ಇಬ್ಬರದೂ ಮುಗುಳ್ನಗೆಯ ಆತಿಥ್ಯ. ಛಾಯಾಪತಿ ಅವರ ಮಾತು ಮೃದು ಮತ್ತು ಸ್ಪಷ್ಟ. ಯಾವುದೇ ಕೆಲಸವಾಗಲಿ ಅಚ್ಚುಕಟ್ಟಾಗಿ ಮಾಡಬೇಕು ಎಂಬುದೇ ಅವರ ಇಂಗಿತ.

ಶಾಸ್ತ್ರೀಯ ಸಾಹಿತ್ಯ, ಸಂಭಾವನಾ ಗ್ರಂಥಗಳು, ಪ್ರಬಂಧ, ಅಭಿನಂದನಾ ಗ್ರಂಥ, ವ್ಯಕ್ತಿ ಚಿತ್ರಣ, ಕವಿತೆ, ಕಾವ್ಯ, ಕಾದಂಬರಿ, ನಾಟಕ ಹೀಗೆ ಬಹುಶಃ ಎಲ್ಲ ಪ್ರಾಕಾರಗಳ ಉತ್ತಮ ಕೃತಿಗಳು ಪ್ರಕಟವಾಗಲು ಕಾರಣರಾಗಿದ್ದಾರೆ. ರಾಷ್ಟ್ರಕವಿ ಜಿ.ಎಸ್.ಎಸ್., ನಾಡೋಜ ಚನ್ನವೀರಕಣವಿ, ದೇ.ಜ.ಗೌ., ಹಾ.ಮಾ. ನಾಯಕ, ತ.ಸು. ಶಾಮರಾಯ, ಡಿ.ಎಲ್. ನರಸಿಂಹಾಚಾರ್, ಸಿ.ಪಿ.ಕೆ., ಟಿ.ವಿ. ವೆಂಕಟಾಚಲಶಾಸ್ತ್ರಿ, ಮತ್ತೂರು ಕೃಷ್ಣಮೂರ್ತಿ, ಮಲ್ಲೇಪುರಂ ಜಿ. ವೆಂಕಟೇಶ, ಹೆಚ್.ಎಸ್. ವೆಂಕಟೇಶಮೂರ್ತಿ, ಇನ್ನೂ ಅನೇಕ ಹಿರಿಯ ವಿದ್ವಾಂಸರ ಸಾಹಿತ್ಯ ಕೃತಿಗಳನ್ನು ಹೊರತಂದ ಹೆಮ್ಮೆ ಈ ಗ್ರಂಥಮಾಲೆಗಿದೆ.

ಲೇಖಕರ ಆಯ್ಕೆ, ಉತ್ತಮವಾದ ತಪ್ಪಿಲ್ಲದ ಮುದ್ರಣ, ಆಕರ್ಷಕ ಅರ್ಥಗರ್ಭಿತ ಮುಖಪುಟದ ವಿನ್ಯಾಸ, ನಂತರದ ಮಾರಾಟ ಇವನ್ನೆಲ್ಲ ಯಶಸ್ವಿಯಾಗಿ ನಿರ್ವಹಿಸುತ್ತ, ಕನ್ನಡ ಪುಸ್ತಕ ಪ್ರಕಾಶನದಲ್ಲಿ ತಮ್ಮದೇ ಆದ ಛಾಪು ಮೂಡಿಸಿದ್ದಾರೆ. ಪುಸ್ತಕ ಸಂಸ್ಕೃತಿಯನ್ನು ಬೆಳೆಸಲು ಅವರದೇ ಆದ ಕೊಡುಗೆ ಗಮನಾರ್ಹ.

ತಮ್ಮ ಮನೆತನದ ಊರು ತಳುಕು, ಹೊಸಹಳ್ಳಿ ಚಿತ್ರದುರ್ಗ. ಅಲ್ಲಿನ ಐತಿಹ್ಯ ಹಿರಿಮೆ ಗರಿಮೆಗಳ ಬಗ್ಗೆ ಅವರಿಗೆ ವಿಶೇಷವಾದ ಹೆಮ್ಮೆ ಇದೆ.

ಹೀಗೆ ಪ್ರಕಾಶನದ ಸಂಸ್ಥೆಯೊಂದರ ಮೂಲಕ ಅಹರ್ನಿಶಿ ಸಾಹಿತ್ಯ ಸೇವೆಯನ್ನು ಮಾಡುತ್ತಿರುವ ಛಾಯಾಪತಿ ಅವರದ್ದು ಅನ್ಯೋನ್ಯ ದಾಂಪತ್ಯ. ಪತಿಗೆ ನಿರಂತರ ಪ್ರೋತ್ಸಾಹ ಶ್ರೀಮತಿ ಪುಷ್ಪ ಅವರದ್ದು.

ಈಗಾಗಲೇ ನೂರಾರು ಸತ್ವಯುತವಾದ ಶ್ರೇಷ್ಠ ಸಾಹಿತ್ಯ ಕೃತಿಗಳನ್ನು ಹೊರತಂದು, ಜನಮಾನಸದಲ್ಲಿ ತಳುಕಿನ ವೆಂಕಣ್ಣಯ್ಯನವರ ಹೆಸರು ಹಸಿರಾಗಿಸುವ ಕೈಂಕರ್ಯ ಮಾಡುತ್ತಿದ್ದಾರೆ. ಅವರ ಈ ಸರಸ್ವತಿ ಆರಾಧನೆ ನಿರಂತರವಾಗಿ ಮುಂದುವರಿಯಲಿ ಎಂದು ಆಶಿಸುತ್ತೇನೆ.

# ವನಸುಮ

ನಮ್ಮ ಛಾಯಾಪತಿಯವರಿಗೆ, ಎಪ್ಪತ್ತು ವರ್ಷ ತುಂಬಲಿದೆ, ಎಂದು ನಂಬಲು ಕಷ್ಟವಾದ ವಿಚಾರ. ತಿಳಿದು, ಬಹಳ ಸಂತೋಷವಾಯಿತು. ಈ ಸಂದರ್ಭದಲ್ಲಿ ಅವರಿಗೆ, ಸನ್ಮಾನ ಏರ್ಪಡಿಸಿರುವುದು, ಹಾಗೂ ಅಭಿನಂದನಾ ಗ್ರಂಥವನ್ನು ಹೊರತರುವುದು ಹೆಮ್ಮೆಯ ವಿಷಯ. ಕಳೆದ ನಲವತ್ತಾರು ವರ್ಷಗಳಿಂದ. ತಂ.ವೆಂ. ಸ್ಮಾರಕ ಗ್ರಂಥ ಮಾಲೆಯನ್ನು Successfulಆಗಿ, ಸಮರ್ಥವಾಗಿ, ಸಾರಥ್ಯ ವಹಿಸಿ, ಉತ್ತಮ ಕನ್ನಡ ಕೃತಿಗಳನ್ನು ಪ್ರಕಟಿಸಿ, ಸಾಹಿತ್ಯ ಸೇವೆಯನ್ನು ಮಾಡಿರುವ ಛಾಯಾಪತಿಯವರಿಗೆ, ಕರ್ನಾಟಕ ಸರ್ಕಾರ ಮನ್ನಣೆ ಮಾಡದಿದ್ದರೂ, ನಮ್ಮ ಸಮಾಜ ಅವರನ್ನು ಗೌರವಿಸುವುದಕ್ಕೆ ಹಮ್ಮಿಕೊಂಡಿರುವ ಈ ಶುಭ ಸಮಾರಂಭ ನಿಜಕ್ಕೂ ಶ್ಲಾಘನೀಯ ಮತ್ತು ಜನತೆಯ ಕೃತಜ್ಞತೆಯ ಸಂಕೇತ.

ಛಾಯಾಪತಿಯವರು, ನನಗೆ ನೆಂಟಸ್ತನದಲ್ಲಿ ಬಾವ, ನನ್ನ ಸೋದರತ್ತೆಯ ಅಳಿಯ. ಇವರ ಮೊದಲ ಪರಿಚಯ 1971ರಲ್ಲಿ ಹಾಸನದಲ್ಲಿ, ಅವರ ಮದುವೆಯ ಸಂದರ್ಭ. ಕನ್ನಡ ಸಾಹಿತ್ಯದ ಪರಿಚಯವಿಲ್ಲದ ನನಗೆ, ಇವರ ತಂದೆಯ ಹಿರಿತನ, Stature ತಿಳಿಯದೆ ಅವರ ಸಂಪರ್ಕವಿಲ್ಲದೆ ಹೋಯಿತು. ವರ್ಷಗಳು ಕಳೆದ ನಂತರ ಛಾಯಾಪತಿಯವರ ಸ್ವಭಾವ ಅರಿತೆ. ಇವರು ನಮ್ಮ ತಲೆಮಾರಿನವರು, ನಮ್ಮ ಹಿರಿಯರ ಮೌಲ್ಯಗಳನ್ನು ಅನುಕರಿಸಿದವರು. ಕಳೆದ ನಾಲ್ಕು ದಶಕಗಳಲ್ಲಿ ಯಾವುದೇ ಸಂದರ್ಭಗಳಲ್ಲೂ, ಅವರು ಕುಗ್ಗಿದ್ದು ನಾ ಕಂಡಿಲ್ಲ ಹಾಗೆಯೆ ಪ್ರಶಸ್ತಿ, ಸನ್ಮಾನಗಳಿಗೆ ಭಾಜನರಾದಾಗ, ಹಿಗ್ಗಿದ್ದು ನಾಕಾಣೆ. ಯಾವಾಗಲೂ ನಗುನಗುತ್ತಾ ಎಲ್ಲರಲ್ಲೂ ಪ್ರೀತಿ, ವಿಶ್ವಾಸಗಳಿಂದ ಬಹಳ ಗೌರವದಿಂದ ಮಾತನಾಡಿಸುವುದು ಅವರ ಸ್ವಭಾವ. ನಮ್ಮಲ್ಲಿ ಸಲುಗೆಯಿಂದ ಹಿರಿಯರನ್ನು (ನನ್ನ ಚಿಕ್ಕಪ್ಪ ಇತ್ಯಾದಿ) ಏಕೆ ವಚನದಲ್ಲಿ ಸಂಬೋಧಿಸುವುದು ವಾಡಿಕೆ. ಇಂತಹವರಲ್ಲಿ ಕಿರಿಯರನ್ನು ಬಹುವಚನದಲ್ಲಿ ಮಾತನಾಡಿಸುವ ಛಾಯಾಪತಿಯವರನ್ನು ಕಂಡು ಬಹಳ ಆಶ್ಚರ್ಯವಾದರೂ, ನಾನು ಅನುಕರಿಸಲಿಲ್ಲ.

---

ವಾಜಪೇಯಿ ಸುರೇಶ್

---

ನಮ್ಮ ಗುಂಪಿನಲ್ಲಿ ನಡೆದ ಎಲ್ಲಾ ಸಮಾರಂಭಗಳಿಗೆ, ತಪ್ಪದೇ ಹಾಜರಾಗುವುದು, ಅವರಿಗೆ ನಮ್ಮ ಮೇಲೆ ಇರುವ ಗೌರವ, ಪ್ರೀತಿ, ವಿಶ್ವಾಸಗಳಿಗೆ ನಿದರ್ಶನ. ಇನ್ನೊಬ್ಬರ ಬಗ್ಗೆ ಮಾತನಾಡುವಾಗ ಬಹಳ ಜಾಗರೂಕತೆ. ಇತರರನ್ನು ಹೀಯಾಳಿಸಿ, ಹಗುರವಾಗಿ ಮಾತನಾಡಿದ್ದು ನಾನು ಕಂಡಿಲ್ಲ. He is an embodiment of humility. ಕನ್ನಡ ಸಾಹಿತ್ಯದ ಎಲ್ಲಾ ದಿಗ್ಗಜರ ಸಂಪರ್ಕ, ಒಡನಾಟವಿದ್ದರೂ, ಅದನ್ನ ಹೆಮ್ಮೆಯಿಂದಲೋ, ಗರ್ವದಿಂದಲೋ ಇತರರಲ್ಲಿ ಹೇಳಿಕೊಳ್ಳುವ ಅಭ್ಯಾಸವಿಲ್ಲ.ಇವರಲ್ಲಿ ನಾನು ಕಂಡ ಮತ್ತೊಂದು ವಿಶೇಷ ಏನೆಂದರೆ, ಅವರ ಜೀವನೋತ್ಸಾಹ. ಇದೇ, ನಮ್ಮ ಇಂದಿನ ತಲೆಮಾರಿನವರಿಗೆ ಇದ್ದ ವಿಶೇಷ ಗುಣ just for life. ನಿರಂತರವಾಗಿ ಹೊಸ ಪ್ರಯತ್ನಗಳಲ್ಲಿ ತೊಡಗಿರುವುದು.

ಒಂದು ಪ್ರಕಾಶನ ಸಂಸ್ಥೆಯನ್ನು ನಡೆಸುವುದು ಬಹಳ ಕಷ್ಟಕರ. ನಮ್ಮ ಪೂರ್ವಿಕರು ಉದ್ಯಮದಲ್ಲಿ ಇದ್ದವರು. ಸುಮಾರು 1870ರಲ್ಲಿ BBD Press ಪ್ರಾರಂಭಿಸಿದವರು. ಕಾಲಾನಂತರ ವಾಜಪೇಯಿ ವೆಂಕಟಾದ್ರಿ ಪ್ರೆಸ್ಸನ್ನು ಸುಮಾರು ನೂರು ವರ್ಷಗಳ ಹಿಂದೆ ನನ್ನ ತಾತನವರು ಪ್ರಾರಂಭಿಸಿದ್ದರು. ಇದನ್ನು ನನ್ನ ತಂದೆ ಸುಮಾರು ಐವತ್ತು ವರ್ಷಗಳ ಕಾಲ ನಡೆಸಿಕೊಂಡು ಬಂದರು. ಈ ಉದ್ಯಮದ ಏರಿಳಿತಗಳನ್ನು ಕಷ್ಟ, ಕಾರ್ಪಣ್ಯಗಳನ್ನು ಅನುಭವಿಸಿದ ನನ್ನ ತಂದೆ, ನನ್ನನ್ನು ಸರ್ಕಾರಿ ಕೆಲಸಕ್ಕೆ ಸೇರಲು ನಿರ್ಧರಿಸಿದರು. ಇಂತಹ ಉದ್ಯಮವನ್ನು ಸ್ವ ಇಚ್ಛೆಯಿಂದ ಸ್ವೀಕರಿಸಿ ಸುಮಾರು ನಲವತ್ತಾರು ವರ್ಷಗಳ ನಡೆಸಿದ ಸಾಧನೆ ಶ್ಲಾಘನೀಯ. ಹಾಗೆ ನೋಡಿದರೆ ಛಾಯಾಪತಿ ದೊಡ್ಡ ಸಾಹಸಿ.

ತಮ್ಮ ಹಿರಿಯರ ಒಡನಾಟ, ಮಾರ್ಗದರ್ಶನ, ಸಜ್ಜನಿಕೆಯನ್ನು ತಮ್ಮ ಜೀವನ ದಲ್ಲಿ ಅಳವಡಿಸಿಕೊಂಡ, 'ಎಲ್ಲರೊಳಗೊಂದಾಗಿ' ಬಾಳ್ವೆ ನಡೆಸುತ್ತಿರುವ ಛಾಯಾಪತಿ ಯವರಿಗೆ ಭಗವಂತ ಆಯುರ್ ಆರೋಗ್ಯಗಳನ್ನು ಕೊಡಲಿ ಹಾಗೂ ನೂರು ವರ್ಷ ಬಾಳಲಿ ಎಂದು ದೇವರಲ್ಲಿ ನನ್ನ ಪ್ರಾರ್ಥನೆ. ಆ ಸುದಿನವನ್ನು ನೋಡುವ ಭಾಗ್ಯ ನನ್ನದಾಗಲಿ. ನಾನು ಕಂಡ -ಶ್ರೇಷ್ಠ ದಾರ್ಶನಿಕ ಡಿ.ವಿ.ಜಿ.ಯವರ ವಚನದಂತೆ, ನಮ್ಮ ಛಾಯಾಪತಿ ಒಬ್ಬ 'ವನಸುಮ'.

# ಸಹೃದಯ ಸೋದರ

ನನ್ನ ಅಣ್ಣ ಛಾಯಾಪತಿ ಸುಪ್ರಸಿದ್ಧ ಪ್ರಕಾಶಕ. ನನ್ನ ತಂದೆಯವರಾದ ತ.ಸು. ಶಾಮರಾಯರು ಕಟ್ಟಿದ ಪ್ರಕಾಶನ ಸಂಸ್ಥೆಯಾದ 'ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ'ಯನ್ನು ಬೆಳೆಸಿದ, ಇಂದು ಪ್ರತಿಷ್ಠಿತ ಪ್ರಕಾಶನ ಸಂಸ್ಥೆಯೆಂಬ ಹೆಗ್ಗಳಿಕೆಗೆ ಪಾತ್ರವಾಗಿ, ಉನ್ನತ ಸ್ಥಾಯಿಯಾಗಿ ನಿಲ್ಲಿಸಿದ ಕೀರ್ತಿ ನನ್ನ ಅಣ್ಣನದು.

ಈಗ್ಗೆ ಸುಮಾರು 40 ವರ್ಷಗಳ ಹಿಂದೆ ನನ್ನ ಅಣ್ಣ ಛಾಯಾಪತಿ ಎಂ.ಕಾಂ. ಸ್ನಾತಕೋತ್ತರ ಪದವಿಯನ್ನು ಪೂರೈಸಿದಾಗ ನನ್ನ ತಂದೆಯವರು. ತಮ್ಮ ಪ್ರಕಾಶನ ಸಂಸ್ಥೆಯನ್ನು ಇವನಿಗೆ ನೀಡುತ್ತಾ, 'ನೀನು ಈ ಸಂಸ್ಥೆಯನ್ನು ಯಶಸ್ವಿಗಾಗಿ ನಡೆಸಿಕೊಂಡು ಹೋಗ ಬಲ್ಲೆ ಎಂಬ ನಂಬಿಕೆ ನನಗಿದೆ. 'ನೀನೇ ಇದಕ್ಕೆ ಸಮರ್ಥ' ಎಂದು ಆಶೀರ್ವದಿಸಿ ನುಡಿದರು. ಅವರ ಹಾರೈಕೆಯಂತೆ ಅಂದಿನಿಂದ ಇಂದಿನವರೆಗೂ ಈ ಸಂಸ್ಥೆ ಉತ್ತಮ ಪ್ರಕಾಶನ ಸಂಸ್ಥೆ ಎಂದು ಹೆಸರು ಗಳಿಸಿದೆ.

ಈ ಪ್ರಕಾಶನ ಸಂಸ್ಥೆಯನ್ನು ಕೈಗೆತ್ತಿಕೊಂಡಾಗ ನನ್ನ ಅಣ್ಣ ಬರೀ ಸಂತೋಷವನ್ನೇ ಕಂಡನೆಂದಲ್ಲ. ಅದನ್ನು ಬೆಳಸುವಲ್ಲಿ ಆತನ ಪರಿಶ್ರಮ ಅಸಾಧಾರಣವಾದುದು. ನಾನಾ ರೀತಿಯ ಕಷ್ಟ ಕೋಟಲೆಗಳಿಗೆ ಒಳಗಾಗಿ ಅದನ್ನು ನಿಭಾಯಿಸಬೇಕಾಯಿತು. ಆದರೆ ಬಂದ ಕಷ್ಟ ಸಂಕಟಗಳನ್ನೆಲ್ಲ ಧೈರ್ಯದಿಂದ ಎದುರಿಸಿ ಅದನ್ನು ಸುಸ್ಥಿತಿಗೆ ತಂದನು.

ನನ್ನ ಅಣ್ಣ ಪ್ರಕಾಶಕನಷ್ಟೇ ಅಲ್ಲ. ಪುಸ್ತಕಗಳ ಮಾರಾಟಗಾರ ಕೂಡ. ಊರಿನಿಂದ ಊರಿಗೆ, ಹಳ್ಳಿ -ಹಳ್ಳಿಗಳಿಗೆ ಬಿಸಿಲು - ಮಳೆಗಳನ್ನು ಲೆಕ್ಕಿಸದೆ ಶಾಲಾ - ಕಾಲೇಜುಗಳಿಗೆ, ಗ್ರಂಥಾಲಯಗಳಿಗೆ ಪುಸ್ತಕಗಳನ್ನು ಕೊಂಡೊಯ್ದು ಮಾರಾಟ ಮಾಡುವುದು ಸುಲಭದ ಕೆಲಸವಲ್ಲ. ಅದನ್ನು ಸಮರ್ಪಕವಾಗಿ ನಿರ್ವಹಿಸಿದ ಹಿರಿಮೆ ಅವನದು.

ಈತನ ಪ್ರಕಾಶನ ಸಂಸ್ಥೆಯಲ್ಲಿ ಅತ್ಯುತ್ತಮವಾದ ಪುಸ್ತಕಗಳು ಹೊರಬಂದಿವೆ. ಅದನ್ನು ಪ್ರಕಟಿಸುವಲ್ಲಿ ಲೇಖಕರ ಮರ್ಜಿ ಹಿಡಿದು ಅವರಿಗೆ ತಕ್ಕಷ್ಟು ಸಂಭಾವನೆ ನೀಡಿ ಪುಸ್ತಕಗಳನ್ನು ಹೊರತರುವುದೆಂದರೆ ಅದೊಂದು ಸಾಹಸವೇ ಸರಿ. ಹೆಸರಾಂತ ಲೇಖಕರ ಪುಸ್ತಕಗಳು ಇಲ್ಲಿ ಪ್ರಕಟಗೊಂಡಿವೆ. ಡಾ|| ಹಾಮಾನಾ, ದೇಜಗೌ,

---

**ಟಿ.ಎಸ್. ಲಕ್ಷ್ಮೀದೇವಿ**

---

ಜಿ.ಎಸ್.ಎಸ್. ರವರ ಹಲವಾರು ಪುಸ್ತಕಗಳು ಪ್ರಕಟಗೊಂಡಿವೆ. ಇತರ ಸುಪ್ರಸಿದ್ಧ ಕವಿಗಳಾದ ಹೆಚ್.ಎಸ್. ವೆಂಕಟೇಶಮೂರ್ತಿ, ಬಿ.ಆರ್. ಲಕ್ಷ್ಮಣರಾವ್, ಚೆನ್ನವೀರ ಕಣವಿ ಅವರ ಕವನ ಸಂಕಲನಗಳೂ ಈ ಸಂಸ್ಥೆಯಿಂದ ಹೊರಬಂದಿವೆ.

ಈ ಯಶಸ್ವೀ ಪುಸ್ತಕ ಪ್ರಕಾಶಕನಿಗೆ 'ಸಾವಿರ ಪುಸ್ತಕಗಳ ಸರದಾರ' ಎಂಬ ಮೆಚ್ಚುಗೆ ಲಭಿಸಿದೆ. ಜನರೊಡನೆ ನನ್ನ ಅಣ್ಣ ವ್ಯವಹರಿಸುವ ರೀತಿ ಅನುಕರಣೀಯವಾದದ್ದು. ಏಕೆಂದರೆ 'ಮಾತಿನಿಂನಗೆ ನುಡಿಯು ಮಾತಿನಿಂ ಸರ್ವ ಸಂಪದವು' ಎಂಬಂತೆ ವ್ಯವಹಾರ ಪ್ರಪಂಚದಲ್ಲಿ ಜನರ ಸಂಪರ್ಕದಲ್ಲಿ ಹೊಂದಿಕೊಂಡು ಹೋಗುವುದು ಬಹು ಮುಖ್ಯ. ಸ್ವಲ್ಪ ಏರು - ಪೇರಾದರೂ ಅವ್ಯವಸ್ಥೆಗೆ ಒಳಗಾಗಬೇಕಾಗುತ್ತದೆ. ಅದನ್ನು ಗೆದ್ದವನು, ನನ್ನ ಅಣ್ಣ.

ಛಾಯಾಪತಿ ನನ್ನ ತಂದೆಯವರು ಬದುಕಿದ್ದಾಗಲೇ ಎಂದರೆ ಈಗ್ಗೆ ಹದಿನೈದು ವರ್ಷಗಳ ಹಿಂದೆಯೇ ಬರವಣಿಗೆಯ ಕಾಯಕವನ್ನು ಕೈಗೊಂಡು ತನ್ನ ತಂದೆಯವರ ಮೆಚ್ಚುಗೆಗೆ ಪಾತ್ರನಾಗಿದ್ದನು. ಗಾಂಧೀಜಿಯವರ ಕನಸು - ನಜೀರರಿಂದ ನನಸು. ಪುಟ್ಟನ ರಾಮಾಯಣ, ಗಣಕಯಂತ್ರ. ಆಡಳಿತ ಕೈಪಿಡಿ ಇತ್ಯಾದಿ ಪುಸ್ತಕಗಳನ್ನು ಬರೆದಿದ್ದಾನೆ. ತಂದೆಯವರ ಮೇಲಿನ ಪ್ರೀತಿಯ ದ್ಯೋತಕವಾಗಿ ಅಣ್ಣನ ಸ್ಮರಣೆ, ತ.ಸು. ಶಾಮರಾಯ -ಪೂಜ್ಯ ನೆನಪು. ಗುರು ಶ್ರೇಷ್ಠ ಮುಂತಾದ ಪುಸ್ತಕಗಳನ್ನು ರಚಿಸಿದ್ದಾನೆ. ಅದು ಜನ ಮೆಚ್ಚಿಗೆ ಗಳಿಸಿದೆ. ಅವರ ಅಭಿನಂದನಾ ಗ್ರಂಥ 'ಸ್ವಸ್ತಿ'ಯನ್ನು ಅವರಿಗೆ ಅರ್ಪಿಸಿ ಕೃತಾರ್ಥನಾದ.

ತ.ಸು. ಶಾಮರಾಯ - ಪೂಜ್ಯ ನೆನಪು ತಂದೆಯವರ ಮರಣಾನಂತರ ಅವರ ಶಿಷ್ಯರು, ಬಂಧು - ಬಾಂಧವರು ಅವರಿಗೆ ಅರ್ಪಿಸಿದ ಬಾಷ್ಪಾಂಜಲಿ. ಅದರಲ್ಲಿ ತ.ಸು. ಶಾಮರಾಯರನ್ನು ಹತ್ತಿರದಿಂದ ಕಂಡವರು ಅವರ ಎತ್ತರ ಬಿತ್ತರಗಳನ್ನು ಎತ್ತಿ ಹಿಡಿದಿದ್ದಾರೆ. ಇದೊಂದು ಸಂಗ್ರಹಯೋಗ್ಯ ಪುಸ್ತಕ.

'ಗುರು ಶ್ರೇಷ್ಠ'- ಪುಟ್ಟ ಮಕ್ಕಳಿಗಾಗಿ ಬರೆದ ಪುಸ್ತಕ ಇದರಲ್ಲಿ ತ.ಸು. ಶಾಮ. ರವರ ಬಾಲ್ಯ, ವಿದ್ಯಾಭ್ಯಾಸ, ವೃತ್ತಿಜೀವನ, ಅಧ್ಯಾಪಕ ಜೀವನದ ಸಾರ್ಥಕ್ಯಗಳನ್ನು ಚಿಕ್ಕ ಮಕ್ಕಳಿಗೆ ಸುಲಭವಾಗಿ ಅರ್ಥವಾಗುವಂತೆ ಸರಳ ರೀತಿಯಲ್ಲಿ ಬರೆದಿದ್ದಾನೆ. ನನ್ನ ಅಣ್ಣ ಛಾಯಾಪತಿ.

'ಅಣ್ಣನ ಸ್ಮರಣೆ'ಯಲ್ಲಿ ತಂದೆಯವರು ಬಾಳಿದ ರೀತಿ, ತನಗೆ ಹಾಕಿಕೊಟ್ಟ ಮೇಲ್ಪಂಗ್ತಿ, ಅವರಿಗಿದ್ದ ಜನ ಸಂಪರ್ಕ, ಅವರೊಡನೆ ತಂದೆಯವರ ಒಡನಾಟ ಹೇಗಿತ್ತೆಂಬುದನ್ನು ಸುಂದರವಾಗಿ ನಿರೂಪಿಸಿದ್ದಾನೆ. ಇದೊಂದು ಉತ್ತಮ ಕೃತಿ.

ನನ್ನ ಅಣ್ಣ ಛಾಯಾಪತಿಯೊಡನೆ ನಾನು ಹುಟ್ಟಿದಾಗಿನಿಂದಲೂ ಸುಮಾರು ಮೂವತ್ತು ವರ್ಷಗಳು ಬೆಳೆದೆ. ನನ್ನ ಜೊತೆ ಹುಟ್ಟಿದವರು ನಾಲ್ವರು. ಅಕ್ಕ, ಮೂವರು

ಅಣ್ಣಂದಿರು. ನಾನೇ ಕೊನೆಯವಳು. ನನ್ನ ಅಕ್ಕ ಎಲ್ಲರಿಗಿಂತ ಹಿರಿಯವಳು ಜಯಲಕ್ಷ್ಮೀ ವಿವಾಹವಾಗಿ ಬೆಂಗಳೂರಿನಲ್ಲಿದ್ದಳು. ನನ್ನ ಹಿರಿಯಣ್ಣ ವೆಂಕಣ್ಣಯ್ಯ ಶೃಂಗೇರಿಯ ಜೆ.ಸಿ.ಬಿ.ಎಂ. ಕಾಲೇಜಿನಲ್ಲಿ ಅಧ್ಯಾಪಕನಾಗಿ ಅಲ್ಲೇ ನೆಲೆಯೂರಿದ. ನನ್ನ ಕೊನೆಯ ಅಣ್ಣ ಸೂರ್ಯನಾರಾಯಣ ಬ್ಯಾಂಕ್ ನೌಕರಿ ಹಿಡಿದು ನಾಲ್ಕಾರು ಊರುಗಳ ವರ್ಗಾವಣೆ ಯಿಂದಾಗಿ ಬೇರೆ ಬೇರೆ ಸ್ಥಳಗಳಲ್ಲಿ ಇರುತ್ತಿದ್ದ. ನಮ್ಮ ತಾಯ್ತಂದೆಯ ರೊಡನೆ ಬಹುಕಾಲ ಒಟ್ಟಿಗೆ ಇದ್ದುದು ನಾನು ಹಾಗೂ ಛಾಯಾಪತಿ ಮಾತ್ರ. ನಾನಂತೂ ಹುಟ್ಟಿದಾಗಿನಿಂದ ಕೊನೆಯವರೆಗೂ (ತಾಯ್ತಂದೆ) ಅವರೊಡನೆಯೇ ಇದ್ದುಬಿಟ್ಟೆ.

ನನ್ನ ತಂದೆ ತ.ಸು. ಶಾಮರಾಯರು ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಕನ್ನಡದ ಪ್ರಾಧ್ಯಾಪಕರಾಗಿದ್ದರು. ಅವರ ಜೀವನವೆಲ್ಲ ಅಧ್ಯಾಪನ, ಅತಿಥಿ ಸತ್ಕಾರ, ಪರೋಪಕಾರಗಳಲ್ಲೇ ಕಳೆಯಿತು. ಅವರೊಡನೆ ಹೊಯ್ ಕೈಯಾಗಿ ದುಡಿದವರು ನನ್ನ ತಾಯಿ. ಆ ಅನ್ನಪೂರ್ಣೆಯ ಕೈನ ಕಾಫಿ, ತಿಂಡಿ, ರುಚಿಕರವಾದ ಊಟವನ್ನು ಉಂಡವರು ಅದೆಷ್ಟು ಸಾವಿರ ಜನರೋ.

ನಮ್ಮ ತಂದೆಯವರು ಪ್ರಕಾಶನ ಸಂಸ್ಥೆಯನ್ನು ನನ್ನ ಅಣ್ಣನಿಗೆ ಒಪ್ಪಿಸಿದರಷ್ಟೇ ಅಲ್ಲ. ಇಡೀ ಸಂಸಾರದ ಜವಾಬ್ದಾರಿಯನ್ನು ಅವನ ಹೆಗಲಿಗೇರಿಸಿದರು. ಅದನ್ನು ಆತ ಸಮರ್ಥವಾಗಿ ನಿರ್ವಹಿಸಿದ ಕೂಡ.

ನಂತರ ಅವನ ವಿವಾಹವಾಗಿ ಪುಷ್ಪ ಅವನ ಕೈಹಿಡಿದರು. ಅವರು ಪ್ರವೇಶಿಸಿದ ನಂತರ ಕುಟುಂಬದಲ್ಲಿ ಸಾಕಷ್ಟು ಸುಧಾರಣೆಗಳಾದವು. ಎಲ್ಲಕ್ಕಿಂತ ಮುಖ್ಯವಾಗಿ ನನ್ನ ತಾಯಿಯವರು ಸಂಸಾರ ನಿರ್ವಹಣೆಗೆ ಪಡುತ್ತಿದ್ದ ಬವಣೆ ತಪ್ಪಿತು. ಊರಿಗೆಲ್ಲ ದಾನಿಗಳಾದ ನನ್ನ ತಂದೆ ತಮ್ಮ ಮನೆಯ ನಿರ್ವಹಣೆಯ ವಿಚಾರದಲ್ಲಿ ಬಹಳ ಜಿಗುಟು ಸ್ವಭಾವದವರಾಗಿದ್ದು. ನನ್ನ ಅತ್ತಿಗೆ ಪುಷ್ಪ ಆ ಕೊರತೆಯನ್ನು ನೀಗಿದರು. ನನ್ನ ತಾಯಿಯವರೊಡನೆ ತುಂಬಾ ಚೆನ್ನಾಗಿ ಹೊಂದಿಕೊಂಡು ಅವರ ಎಲ್ಲ ಕೆಲಸ-ಕಾರ್ಯಗಳಲ್ಲಿ ಸಂಪೂರ್ಣ ಸಹಕಾರ ನೀಡುತ್ತಿದ್ದರು. ನನಗೂ ನನ್ನ ಅಣ್ಣ ಸೂರಿಗೂ ಅಗತ್ಯವಾಗಿ ಬೇಕಾಗಿದ್ದ ವಸ್ತು, ಹಣಗಳ ಪೂರೈಕೆ ಮಾಡುತ್ತಿದ್ದರು. ಅಂದರೆ ನಮಗೆ ಬೇಕಾಗಿದ್ದ ಬಟ್ಟೆ, ಹಣ - ಇತ್ಯಾದಿಗಳಿಗೆ ಕೊರತೆಯಾಗದಂತೆ ನೋಡಿಕೊಂಡರು. ಈ ವಿಚಾರದಲ್ಲಿ ಅಣ್ಣ - ಅತ್ತಿಗೆಯವರ ಪರಸ್ಪರ ಸಹಕಾರ ಗಮನಿಸಬೇಕಾದ ಅಂಶ.

ನನ್ನ ಅಣ್ಣ ಛಾಯಾಪತಿಯ ಮಗಳು ಪ್ರತಿಭಾ ನನಗೊಂದು ಆಟದ ಗೊಂಬೆ ಯಾಗಿದ್ದಳು. ಅವಳ ಆಟ - ಪಾಟಗಳಿಂದ, ಮುದ್ದಾದ ಮಾತುಗಳಿಂದ ಮನೆಯಲ್ಲಿ ಚಿಕ್ಕ ಮಕ್ಕಳಿಲ್ಲವೆಂಬ ಕೊರತೆಯನ್ನು ದೂರ ಮಾಡಿದಳು. ಅವಳ ಒಡನಾಟ ನನಗಂತೂ ಅತ್ಯಂತ ಆಪ್ಯಾಯಮಾನವಾಗಿತ್ತು. ಮೊದಲೇ ನನಗೆ ಚಿಕ್ಕ ಮಕ್ಕಳನ್ನು ಎತ್ತಿ ಆಡಿಸುವುದೆಂದರೆ ತುಂಬಾ ಇಷ್ಟ. ಈ ವೇಳೆಗೆ ನನ್ನ ಅಕ್ಕನ ಮಕ್ಕಳೆಲ್ಲ ನನಗೆ ಆಟದ

ಗೊಂಬೆಗಳಾಗಿದ್ದರು. ಪ್ರತಿಭಾ ನನ್ನನ್ನು ಎಷ್ಟು ಅಂಟಿಕೊಂಡಳೆಂದರೆ ಅವಳ ಆಟ - ಪಾಟಗಳಲ್ಲ ನನ್ನ ಮಡಿಲಿನಲ್ಲಿಯೇ. ಅಪ್ಪ - ಅಮ್ಮನಿಗಿಂತ ನನ್ನೊಡನೆಯೇ ಯಾವಾಗಲೂ ಇರುತ್ತಿದ್ದಳು. ನಾನೆಲ್ಲಿಗೆ ಹೋದರೂ ಅವಳನ್ನು ನನ್ನೊಡನೆ ಕರೆದೊಯ್ಯುತ್ತಿದ್ದೆ. ಇದರಿಂದ ನನ್ನ ಗೆಳತಿಯರಿಗೂ ಅವಳು ಅಚುಮೆಚ್ಚು. ಈಗ ಅವಳು ಎರಡು ಮಕ್ಕಳ ತಾಯಿ. ಇಂದಿಗೂ ಆ ಹಿಂದಿನ ಬಾಲ್ಯದ ನೆನಪುಗಳನ್ನು ಪರಸ್ಪರ ಭೇಟಿಯಾದಾಗ ಮೆಲುಕು ಹಾಕುತ್ತಿರುತ್ತೇವೆ.

ಇನ್ನು ಮಗ ಶ್ರೀನಿವಾಸ ಪವನ್ ಉರುಫ್ ಚೀನಿ ಕೂಡ ನನಗೆ ಪ್ರೀತಿಯ ಬೊಂಬೆಯೇ. ಅವನನ್ನು ಎತ್ತಿ ಆಡಿಸುತ್ತಿದ್ದೆ. ಆದರೆ ಅವನು ಸ್ವಲ್ಪ ತುಂಟ. ನನಗೆ ಅವನನ್ನು ನಿಭಾಯಿಸುವುದು ಕಷ್ಟವಾಗುತ್ತಿತ್ತು. ಆದರೆ ಅವನು ನಮ್ಮಮ್ಮನ ಮೋಹದ ಮೊಮ್ಮಗ. ಇದೆಲ್ಲ ನಡೆದಾಗ ನಾನು ಡಿಗ್ರಿ ಮುಗಿಸಿ ಮನೆಯಲ್ಲೇ ಇದ್ದೆ.

ನನ್ನ ಅಣ್ಣ ಛಾಯಾಪತಿ ನನ್ನ ವಿದ್ಯಾರ್ಥಿ ಜೀವನದಲ್ಲಿ ಅದಾಗಲೇ ಪ್ರಕಾಶನ ಸಂಸ್ಥೆಯ ಒಡೆಯನಾಗಿದ್ದು, ನನ್ನ ಅಗತ್ಯತೆಯನ್ನು ಪೂರೈಸುತ್ತಿದ್ದದು ಸರಿಯಷ್ಟೆ. ನಂತರ ನಾನು  ಕನ್ನಡದಲ್ಲಿ ಸ್ನಾತಕೋತ್ತರ ಪದವಿ ಮುಗಿಸಿ ಮುಂದೇನು ಮಾಡಬೇಕೆಂದು ಯೋಚಿಸಿದ್ದದಲ್ಲದೇ ನನ್ನ ತಂದೆಯವರೂ ಆ ಬಗ್ಗೆ ಚಿಂತಿತರಾದರು. ಅದನ್ನು ನನ್ನಣ್ಣ ಛಾಯಾಪತಿಗೆ ನಿವೇದಿಸಿದರು ಕೂಡ.

ನಾನು ಅಂಗವಿಕಲೆ, ವಿವಾಹವಾಗುವುದಿಲ್ಲ. ಸ್ವಂತ ಕಾಲಮೇಲೆ ನಿಲ್ಲಲು ನನ್ನ ಜೀವನಕ್ಕೆ ದಾರಿಮಾಡಬೇಕೆಂದು, ಅದಕ್ಕಿಂತ ಮುಖ್ಯವಾಗಿ ನನ್ನನ್ನು ನಿರಂತರವಾಗಿ ಯಾವುದಾದರೂ ಉದ್ಯೋಗದಲ್ಲಿ ತೊಡಗಿಸಬೇಕೆಂದು ನನ್ನ ತಂದೆ ಯೋಚಿಸಿದರು. ಅವರ ಚಿಂತೆಯನ್ನು ದೂರ ಮಾಡುವಂತೆ ನನ್ನ ಅಣ್ಣ ಛಾಯಾಪತಿ ಆಗಿನ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದ ಕೆ.ಎಸ್. ಹೆಗ್ಡೆಯವರಿಗೆ, ಹಾಗೂ ಕುಲಸಚಿವ ಫಾಲಾಕ್ಷರವರಿಗೆ ಡಾ|| ಹಾ.ಮಾ. ನಾಯಕರ ಮುಖಾಂತರ ಶಿಫಾರಸ್ ಮಾಡಿಸಿ ನನಗೆ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯಲ್ಲಿ (ಈಗಿನ ಕ.ರಾ.ಮು.ವಿ.) ದ್ವಿತೀಯ ದರ್ಜೆ ಗುಮಾಸ್ತೆಯ ಕೆಲಸ ಕೊಡಿಸಿದ. ಅಷ್ಟೇ ಅಲ್ಲ. ದಿನಾಂಕ 20-8-1983ರ ವರಮಹಾಲಕ್ಷ್ಮೀ ಹಬ್ಬದ ದಿನ. ನನಗೆ ಇಂದಿಗೂ ಹಚ್ಚ ಹಸುರಿನಂತೆ ನೆನಪಿದೆ. ತಾನೇ ನನ್ನನ್ನು ಕರೆದುಕೊಂಡು ಹೋಗಿ ಕೆಲಸಕ್ಕೆ ಸೇರಿಸಿದ. ಮೊದಲಿಗೆ ದಿನಗೂಲಿ ನೌಕರಳಾಗಿ ಸೇರ್ಪಡೆಯಾಗಿ ನಾನು ಹಂತ - ಹಂತವಾಗಿ ಮೇಲೇರುತ್ತ ದ್ವಿತೀಯ ದರ್ಜೆ ಗುಮಾಸ್ತೆ ಹುದ್ದೆಯಿಂದ ಸಹಾಯಕ ಕುಲಸಚಿವೆಯಾಗಿ ವಿವಿಧ ಹುದ್ದೆಗಳನ್ನಲಂಕರಿಸಿ 2012ನೇ ಏಪ್ರಿಲ್ 30 ರಂದು ನಿವೃತ್ತಳಾದೆ. ಈ ನನ್ನ ಅಭಿವೃದ್ಧಿಯನ್ನು ಕಂಡು ಹರ್ಷಿಸಲು ನನ್ನ ತಂದೆಯವರಿಲ್ಲವಾದರೂ ನನ್ನ ಅಣ್ಣ ಹರ್ಷಿಸಿದ, ಅಭಿಮಾನ ತಳೆದ. ಅವರಿಬ್ಬರ

ಆಶೀರ್ವಾದದ ಫಲವಾಗಿ ನಾನು ನನ್ನ ವೃತ್ತಿಯಲ್ಲಿ ಯಶಸ್ವಿಯಾದೆನೆಂಬುದನ್ನು ಅಭಿಮಾನದಿಂದ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಹೀಗೆ ಛಾಯಾಪತಿಯೊಡನೆ ಹಲವಾರು ವರ್ಷಗಳು ಒಟ್ಟಿಗೆ ಜೀವನ ನಡೆಸಿದೆವು. ನಂತರ ನಾನು, ನನ್ನ ತಂದೆ -ತಾಯಿ ಕಾರಣಾಂತರದಿಂದ ಗುಬ್ಬಿಯ ಚಿದಂಬರಾಶ್ರಮಕ್ಕೆ ಹೋದೆವು.

ಛಾಯಾಪತಿಯ ಸ್ವಭಾವವೆಂತದೆಂದರೆ ಯಾವಾಗಲೂ 'ದಿಲ್‌ದಾರ್' ಆಗಿರುತ್ತಿದ್ದುದು. ನನಗೆ ನೆನಪಿರುವಂತೆ ಅವನು ಒಂದು ದಿನವಾದರೂ ಕಳಪೆಯಾಗಿದ್ದುದನ್ನು ಕಂಡಿಲ್ಲ. ಆಗಿನ ಕಾಲಕ್ಕೇ ಬೆಲೆಬಾಳುವ ದಿರಿಸುಗಳನ್ನು ಧರಿಸುತ್ತಿದ್ದ. ಊಟ - ತಿಂಡಿಗಳ ವಿಚಾರದಲ್ಲಿಯೂ ರಸಿಕ. ಅದು ಈಗಲೂ ಹಾಗೆಯೇ ಮುಂದುವರಿದಿದೆ. ನೋಡುವವರಿಗೆ ಮಾದರಿಯಾಗಿದ್ದ. ಶ್ರೀಮಂತರಾದ ಗೆಳೆಯರಿದ್ದರು. ಈಗ್ಗೆ 40 ವರ್ಷಗಳ ಕೆಳಗೆ ಅವರೆಲ್ಲ ನಮ್ಮಣ್ಣನನ್ನು ಹುಡುಕಿಕೊಂಡು ಕಾರಿನಲ್ಲಿ ಬರುತ್ತಿದ್ದರು. ಅವರನ್ನೆಲ್ಲ ವಿಸ್ಮಯದಿಂದ ನೋಡುತ್ತಿದ್ದೆ. ಅವನು ಪ್ರಕಾಶನ ಸಂಸ್ಥೆಯನ್ನು ಕೈಗೆತ್ತಿಕೊಂಡಾಗ ನಮಗೆಲ್ಲ ಒಳ್ಳೊಳ್ಳೆಯ ಬಟ್ಟೆಗಳನ್ನು ಕೊಡಿಸುತ್ತಿದ್ದ. ನಮಗಷ್ಟೇ ಅಲ್ಲ. ನಮ್ಮಕ್ಕನ ಮಕ್ಕಳು, ಅಣ್ಣ ಮಕ್ಕಳಿಗೂ ಈ ಉಡುಗೊರೆ ಸಂದಾಯವಾಗು ತ್ತಿತ್ತು. ಇವೆಲ್ಲದರ ಹಿಂದೆ ನಮ್ಮ ಅತ್ತಿಗೆಯಿದ್ದರೆಂಬುದನ್ನು ಎಂದಿಗೂ ಮರೆಯು ಲಾಗದು.

ನಂತರ ಪ್ರಕಾಶನ ಸಂಸ್ಥೆಯ ಬೆಳವಣಿಗೆಯ ಜೊತೆ -ಜೊತೆಗೇ ತಾನು ಬರಹಗಾರನಾಗಿ ಹವ್ಯಾಸವನ್ನು ಬೆಳೆಸಿಕೊಂಡ. ನನ್ನ ಹಿರಿಯಣ್ಣ ವೆಂಕಣ್ಣಯ್ಯ ಬರೆದ ಪುಸ್ತಕಗಳನ್ನು ಪ್ರಕಟಿಸಿದ. ನನ್ನ ತಂದೆಯವರ ಹಲವಾರು ಪುಸ್ತಕಗಳನ್ನು ಪ್ರಕಟಿಸಿದುದೇ ಅಲ್ಲದೆ ಅವುಗಳು ಹಲವಾರು ಮುದ್ರಣಗಳನ್ನು ಕಾಣುವಂತೆ ಮಾಡಿ ಪ್ರಕಟಿಸಿದ ಕೀರ್ತಿ ನನ್ನ ಅಣ್ಣನದು.

ನನ್ನ ಅಣ್ಣ ಛಾಯಾಪತಿಯನ್ನು ಹಲವಾರು ಸಂಘ -ಸಂಸ್ಥೆಗಳು ಸನ್ಮಾನಿಸಿವೆ. ಉತ್ತಮ ಪ್ರಕಾಕರೆಂದು ಗುರುತಿಸಿ ಪ್ರಶಸ್ತಿ, ಫಲಕಗಳನ್ನಿತ್ತು ಗೌರವಿಸಿವೆ. ನಮ್ಮ ತಂದೆಯವರು ಕಂಡ ಕನಸನ್ನು ನನಸು ಮಾಡಿ ಸಂಸ್ಥೆಯನ್ನು ಅಭಿವೃದ್ಧಿ ಗೊಳಿಸಿದ ಕೀರ್ತಿ ನನ್ನ ಅಣ್ಣನಿಗೆ ಸಲ್ಲುತ್ತದೆ.

ಇದೀಗ 70 ವಸಂತಗಳನ್ನು ಪೂರೈಸುತ್ತಿರುವ ನನ್ನ ಅಣ್ಣ ಛಾಯಾಪತಿಗೆ ದೇವರು ಆಯುರಾರೋಗ್ಯವನ್ನು ನೀಡಿ ತುಂಬು ಜೀವನವನ್ನು ಅನುಗ್ರಹಿಸಲೆಂದು ಬೇಡಿಕೊಳ್ಳುತ್ತೇನೆ.

# ನನ್ನ ಪ್ರೀತಿಯ ಭಾವ

ಮೈಸೂರು ವಿಶ್ವವಿದ್ಯಾನಿಲಯದ ಮೊದಲ ಕನ್ನಡ ಪ್ರಾಧ್ಯಾಪಕರಾಗಿ ಬಂದ ಶ್ರೀ ತಳುಕಿನ ವೆಂಕಣ್ಣಯ್ಯನರು ಕನ್ನಡ ಸಾಹಿತ್ಯ ಲೋಕದ ಪ್ರಾತಃಸ್ಮರಣೀಯರು. ಅವರ ತಮ್ಮನವರಾದ ಶ್ರೀ ತ.ಸು. ಶಾಮರಾಯರವರು ಕೂಡ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಪ್ರೊಸರ್ ಆಗಿ ಹಲವಾರು ವರ್ಷಗಳು ನಿಸ್ವಾರ್ಥ ಸೇವೆಯನ್ನು ಸಲ್ಲಿಸಿದವರು. ಇಂತಹ ಕನ್ನಡ ಸಾರಸ್ವತ ಲೋಕದ ಕುಟುಂಬದಲ್ಲಿ ಜನಿಸಿದವರು. ಶ್ರೀ ಟಿ.ಎಸ್. ಛಾಯಾಪತಿ. ಇವರ ತಂದೆಯವರು 1940ನೇ ಇಸವಿಯಲ್ಲಿ ಇವರ ಅಣ್ಣನವರಾದ ಶ್ರೀ ಟಿ.ಎಸ್. ವೆಂಕಣ್ಣಯ್ಯನವರ ಹೆಸರಿನಲ್ಲಿ ಒಂದು ಪ್ರಕಾಶನ ಸಂಸ್ಥೆಯನ್ನು ಹವ್ಯಾಸಕ್ಕೆಂದು ಹಾಗೂ ಟಿ.ಎಸ್. ವೆಂಕಣ್ಣಯ್ಯನವರ ಹೆಸರು ಕನ್ನಡ ಸಾಹಿತ್ಯ ಲೋಕದಲ್ಲಿ ಚಿರಸ್ಥಾಯಿಯಾಗಲೆಂದು ಸ್ಥಾಪಿಸಿದರು. ಆದರೆ ಶ್ರೀ ಟಿ.ಎಸ್. ಛಾಯಾಪತಿಯವರು ಅವರ ಸ್ನಾತಕೋತ್ತರ ಪದವಿಯನ್ನು ಮುಗಿಸಿದ ನಂತರ ಎಲ್ಲೂ ಕೆಲಸಕ್ಕೆ ಸೇರದೆ ಪ್ರಕಾಶಕನ ಕೆಲಸವನ್ನು ತಮ್ಮ ಜೀವನದ ವೃತ್ತಿಯಾಗಿ ತೆಗೆದುಕೊಂಡು ಈ ದಿನದವರೆಗೆ ನಡೆಸಿಕೊಂಡು ಬರುತ್ತಿರುವುದು ಶ್ಲಾಘನೀಯವೆ ಸರಿ.

ಸುಮಾರು ನಲವತ್ತು ಮೂರು ವರ್ಷಗಳ ಹಿಂದೆ ನನ್ನ ಅಕ್ಕ ಶ್ರೀಮತಿ ಪುಷ್ಪ ಅವರಿಗೆ ಮದುವೆ ಮಾಡಬೇಕೆಂದು ನನ್ನ ತಂದೆಯವರು ವರಾನ್ವೇಷಯಲ್ಲಿ ಬೆಂಗಳೂರು, ಮೈಸೂರು ಮುಂತಾದ ಸ್ಥಳಗಳಲ್ಲಿ ತೊಡಗಿದ್ದರು. ಆಗ ತಮ್ಮ ಕುಟುಂಬಕ್ಕೆ ಆ ಭಗವಂತನ ದಯೆಯಿಂದ ದೊರಕಿದವರೆ ಶ್ರೀ ಟಿ.ಎಸ್. ಛಾಯಾಪತಿಯವರು. ಆಗ ನಾನು ಎಸ್.ಎಸ್.ಎಲ್.ಸಿ. ಯಲ್ಲಿ ಓದುತ್ತಿದ್ದೆ. ನಮ್ಮ ಕುಟುಂಬಕ್ಕೆ ಹೊಸದಾಗಿ ಬರುತ್ತಿರುವುದು, ಅದರಲ್ಲೂ ನನಗೆ ಭಾವನಾಗಿ ಕೇಳಿ ನನ್ನ ಮನಸ್ಸಿಗೆ ಆದ ಸಂತೋಷಕ್ಕೆ ಮಿತಿಯೇ ಇರಲಿಲ್ಲ. ಆದರೆ ನಮ್ಮ ತಂದೆಯವರು ಯಾರೋ ಸ್ನೇಹಿತರ ಕಛೇರಿಗೆ ಫೋನ್ ಮಾಡಿ ಅವರು ನಮ್ಮ ಮನೆಗೆ ಬಂದು ನಮ್ಮ ತಾಯಿಯವರನ್ನು ಕೂಡಲೆ ನೀವು ಮೈಸೂರಿಗೆ ಹೊರಡಬೇಕು, ನಿಮ್ಮ ಯಜಮಾನರು ಫೋನ್ ಮಾಡಿದ್ದರು

ರಾಜೇಂದ್ರ ಅ.ನ.

ಎಂದು ಹೇಳಿದರು. ನಮ್ಮ ತಾಯಿಯವರು ಕೂಡಲೇ ಮೈಸೂರಿಗೆ ಹೋದರು. ನಂತರ ಅಲ್ಲಿ ಲಗ್ನ ಪತ್ರಿಕೆ ಮಾಡಿಕೊಂಡು ಬಂದರು. ಅವರು ಮೈಸೂರಿನಿಂದ ಬಂದ ಮೇಲೆಯೇ ನಮಗೆ ವಿಷಯ ತಿಳಿದಿದ್ದು, ನಂತರ ಅಕ್ಟೋಬರ್ 31, 1971ನೇ ಇಸವಿಯಲ್ಲಿ ಇವರಿಬ್ಬರ ವಿವಾಹವೂ, ವಿಜೃಂಭಣೆಯಿಂದ ನೆರವೇರಿತು. ಹೀಗೆ ನನಗೆ ಇವರ ಪರಿಚಯ ಮತ್ತು ನನ್ನ ಭಾವನಾಗಿ ನಮ್ಮ ಮನೆಗೆ ಬಂದಿದ್ದು.

ನಂತರ ನನಗೆ ಇವರ ಮುಖಾಂತರ ಕನ್ನಡನಾಡಿನ ಅನೇಕ ದೊಡ್ಡ ದೊಡ್ಡ ಸಾಹಿತಿಗಳೆಲ್ಲ ಪರಿಚಯವಾಯಿತು. ಇವರಲ್ಲಿ ನನ್ನ ಮನಸ್ಸಿಗೆ ಹಿತವಾದವರು. ಕುವೆಂಪು, ತರಾಸು, ಡಾ. ಹಾ.ಮಾ. ನಾಯಕ, ಮಲ್ಲಾಡಿಹಳ್ಳಿ ಸ್ವಾಮಿಗಳಾಗಿದ್ದಂತ (ತಿರುಕ) ಶ್ರೀ ರಾಘವೇಂದ್ರ ಸ್ವಾಮಿಗಳು, ಜಿ.ಎಸ್. ಶಿವರುದ್ರಪ್ಪರವರು, ಎಚ್.ಎಸ್. ವೆಂಕಟೇಶ ಮೂರ್ತಿಯವರು ನಿಸ್ಸಾರ್ ಅಹಮದ್, ಕೆ.ಎಸ್. ಭಗವಾನ್ ಅವರು. ಮುಂತಾದವರುಗಳು. ನನ್ನ ಭಾವನವರಿಂದ ಹಲವಾರು ಕನ್ನಡ ಸಾಹಿತ್ಯ ಲೋಕದ ದಿಗ್ಗಜರುಗಳನ್ನು ಭೇಟಿಯಾಗುವ ಪುಣ್ಯ ನನ್ನ ಪಾಲಿಗೆ ಬಂತು.

ಈ ನಲವತ್ತಾಕು ವರುಷಗಳಲ್ಲಿ, ನನ್ನ ಭಾವನವರು ಕನ್ನಡ ಸಾಹಿತ್ಯ ಪ್ರಕಾಶನದಲ್ಲಿ ಮಾಡಿದ ಕೃಷಿಯನ್ನು ನೋಡಿದರೆ ನನಗೆ ಬಹಳ ಧಿಗ್ಭ್ರಮೆಯಾಗುತ್ತದೆ, ಏಕೆಂದರೆ ಅವರು ಪಟ್ಟ ಕಷ್ಟ ನಷ್ಟ ನೋವುಗಳು ಹೇಳಲಾರದು, ಆದರು ಅವರು ಬಂದದ್ದೆಲ್ಲ ಬರಲಿ, ಗೋವಿಂದನ ದಯೆ ಇರಲಿ ಎಂದು ಕೊಂಡು ಆ ಭೀಷ್ಮ ಪ್ರತಿಜ್ಞೆಯ ತರಹ ಪ್ರಕಾಶನ ವೃತ್ತಿಯನ್ನು ಮುಂದುವರಿಸಿಕೊಂಡು ಒಳ್ಳೆಯ ಕೆಲಸ, ಸಾಧನೆಯ ತರಹ ಮಾಡಿ ಕರ್ನಾಟಕ ರಾಜ್ಯದಲ್ಲಿ ಅತ್ಯುತ್ತಮ ಪ್ರಕಾಶಕರೆಂಬ ಬಿರುದನ್ನು ಪಡೆದಿದ್ದಾರೆ. ನಂತರ ಇವರಿಗೆ ತಂದ ಸನ್ನ ಮಾವಗಳು ಸರಮಾಲೆಯೇ ಆಗಿದೆ ಇನ್ನು ಆಗುತ್ತಿದೆ.

ಹಿಂದೆ ಒಮ್ಮೆ ಇವರ ಮದುವೆಯ ಸಂದರ್ಭದಲ್ಲಿ ನಡೆದ ಒಂದು ಘಟನೆ ನನ್ನ ನೆನಪಿಗೆ ಬರುತ್ತಿದೆ. ಮದುವೆಯ ಹಿಂದಿನ ದಿವಸ ದಿಬ್ಬಣವೆಲ್ಲ ಬಂದು ಸಾಯಂಕಾಲದ ಉಪಹಾರದ ನಂತರ ರಾತ್ರಿಯ ಭೂರಿ ಭೋಜನವಾಯಿತು. ಸುಮಾರು ರಾತ್ರಿ 10.30 ಗಂಟೆಯಿರಬೇಕು. ಶ್ರೀ ತ.ಸು. ಶಾಮರಾಯರು ತಮ್ಮ ತಂದೆಯವರಿಗೆ ಹೇಳಿ ಕಳುಹಿಸಿದರು. ಆಗ ನಮ್ಮ ತಂದೆಯವರಾದ ದಿ. ಎ.ಎಲ್. ಎನ್. ಮೂರ್ತಿಯವರು ಕೂಡಲೇ ಶ್ರೀ ಶಾಮರಾಯರ ಬಳಿಗೆ ಬಂದರು. ಶ್ರೀ ತ.ಸು.ಶಾಮರಾಯರು ನಮ್ಮ ತಂದೆಯವನ್ನು ಬರಮಾಡಿಕೊಂಡು, ಮೂರ್ತಿ ನಾನು ನಿಮ್ಮ ಹತ್ತಿರ ಸ್ವಲ್ಪ ಮಾತಾಡ ಬೇಕು ಎಂದರು. ಆಗ ನಮ್ಮ ತಂದೆಗೆ ಆಶ್ಚರ್ಯ, ಆತಂಕ ಒಮ್ಮೆಗೆ ಆಯಿತು. ಆದರೂ ಧೈರ್ಯ ತಂದುಕೊಂಡು ಏನು ಸ್ವಾಮಿ ಹೇಳಿ ಎಂದರು. ಆಗ ಶ್ರೀ ಶಾಮರಾಯರು ನೋಡಿಸ್ವಾಮಿ, ನಮ್ಮ ಮನೆಗೆ ನಿಮ್ಮ ಮಗಳನ್ನು ಕೊಡುತ್ತಿದ್ದೀರಿ, ಆದರೆ ನನ್ನದೊಂದು ಕೋರಿಕೆ ಇದೆ. ಅದೇನೆಂದರೆ ನಮ್ಮ ಮನೆಯಲ್ಲಿ ರಾತ್ರಿ ಹನ್ನೊಂದು ಗಂಟೆಯಾದರು

ಜನ ಬರುತ್ತಿರುತ್ತಾರೆ. ಯಾರು ಯಾವ ವೇಳೆಗೆ ಬಂದರೂ ನಿಮ್ಮ ಮಗಳು ಸೌಟು ಹಿಡಿಯಲು ಬೇಜಾರು ಮಾಡಿಕೊಳ್ಳಬಾರದು. ಇಷ್ಟೇ ಎಂದು ಹೇಳಿದರು. ಆಗ ನನ್ನ ತಂದೆಯವರಿಗೆ ಹೋದ ಜೀವ ಮತ್ತೆ ಬಂದಂತಾಗಿತ್ತು. ಕೂಡಲೆ ಅವರು ನಾನು ನನ್ನ ಮಗಳನ್ನು ಹಾಗೆ ಬೆಳೆಸಿದ್ದೇನೆ. ಹುಸಿಮಾಡಲಿಲ್ಲ. ತಾವು ಯಾವುದಕ್ಕೂ ಆತಂಕ ಪಡಬೇಕಾಗಿಲ್ಲ ಎಂದು ಹೇಳಿದರು. ಆ ನಂಬಿಕೆಯನ್ನು ನನ್ನ ಅಕ್ಕ ಹುಸಿ ಮಾಡಲಿಲ್ಲ. ಕಳೆದ, ನಲವತ್ತಾರು ವರುಷಗಳಿಂದ ಶಾಮರಾಯರ ಮನೆಯ ದಾಸೋಹಕ್ಕೆ ಒಂದು ದಿನವೂ ಚ್ಯುತಿ ಬರದಂತೆ ನಡೆದುಕೊಂಡು ಬಂದು ಈಗಲೂ ಅಂದರೆ ಶ್ರೀ ಶಾಮರಾಯರ ನಿಧನವಾದ ಮೇಲು ಅದನ್ನು ನಡೆಸಿಕೊಂಡು ಬರುತ್ತಿದ್ದಾಳೆ.

ಮತ್ತೊಂದು ವಿಷಯವೇನೆಂದರೆ ನಮ್ಮ ಸಂಸಾರ ಮೊದಲಿಂದಲೂ ಕೃಷಿ ಮೇಲೆ ಆಧಾರವಾಗಿದ್ದಂಥ ಕುಟುಂಬ. ಆದ್ದರಿಂದ ನೆಂಟರುಗಳು, ಸ್ನೇಹಿತರು, ಆಳುಕಾಳುಗಳು ಸದಾ ಮನೆಯಲ್ಲಿ ಜನ ತುಂಬಿರುತ್ತಿದ್ದರು. ಇದರಿಂದ ಅತಿಥಿ ಸತ್ಕಾರದಲ್ಲಿ ನಮ್ಮ ತಂದೆ ತಾಯಿಯು ಬಹಳ ಉದಾರಿಗಳಾಗಿದ್ದರು, ಇದೆಲ್ಲದರ ಹಿನ್ನೆಲೆಯಲ್ಲಿ ಬೆಳೆದಂತ ನಮ್ಮ ಅಕ್ಕನವರಿಗೆ ಬಹಳ ನಿರಾಯಾಸವಾಗಿ ನಡೆಸಿಕೊಂಡು ಬರುತ್ತಿದ್ದಾರೆ. ತವರು ಮನೆಗೂ ಸೇರಿದ ಮನೆಗೂ ಯಾವ ಅಪವಾದವೂ ಬರದಂತೆ ಕಾಪಾಡಿಕೊಂಡಿದ್ದಾರೆ.

ನನ್ನ ಪತ್ನಿ ದಿ. ಶ್ರೀಮತಿ ಗೀತ, ಕೂಡ ಬಹಳ ಸಾಹಿತ್ಯ ಪ್ರಿಯಾಳಾಗಿದ್ದಳು. ಯಾವುದೇ ಪುಸ್ತಕ ವೃತ್ತಪತ್ರಿಕೆ ದಿನಪತ್ರಿಕೆಗಳು ಯಾವುದಾದರು ಸರಿಯೇ, ಅವಳ ಕೈಗೆ ಸಿಕ್ಕಿತೆಂದರೆ ಅದನ್ನು ಓದಿ ಮುಗಿಸುವ ತನಕ ಬಿಡುತ್ತಿರಲಿಲ್ಲ. ಶ್ರೀ ಛಾಯಾಪತಿ ಯವರೆಂದರೆ ನನ್ನ ಪತ್ನಿಗೆ ದೊಡ್ಡಣ್ಣನ ಸಮಾನವಾಗಿ ಗೌರವ ಕೊಡುತ್ತಿದ್ದಳು. ಅವಳ ಮನೆಯಲ್ಲಿ ಗಂಡು ಮಕ್ಕಳಿರಲಿಲ್ಲ ಐದು ಜನ ಅಕ್ಕ ತಂಗಿಯರು. ನಾನು ನನ್ನ ಪತ್ನಿ ಯಾವಾಗ ಮೈಸೂರಿಗೆ ಹೋದರು, ನನ್ನ ಪತ್ನಿ ಅವರ ಪುಸ್ತಕದ ರೂಮಿಗೆ ಹೋಗದೆ ಹೊರಡುತ್ತಿರಲಿಲ್ಲ. ಶ್ರೀ ಛಾಯಾಪತಿಯವರು ಅಷ್ಟೇ ನನ್ನ ಪತ್ನಿಯನು ಅವರ ಒಡಹುಟ್ಟಿದ ಸಹೋದರಿಯಂತೆ ನೋಡಿಕೊಳ್ಳುತ್ತಿದ್ದರು. ಮತ್ತೆ ಯಾವಾಗಲೂ ಅವರು ಹೊಸದಾಗಿ ಪ್ರಕಾಶಿಸಿದ್ದ ಪುಸ್ತಕಗಳನ್ನು ಉಡುಗೊರೆಯಾಗಿ ಕೊಡುತ್ತಿದ್ದರು. ಅದನ್ನು ತಂದು ಓದಿದ ನಂತರ ನನ್ನ ಪತ್ನಿ ಅದರ ಬಗ್ಗೆ ಬಹಳವಾಗಿ ವಿಚಾರ ಮಾಡುತ್ತಿದ್ದಳು. ನನ್ನ ಭಾವನವರದು ಬಹಳ ದೊಡ್ಡ ಗುಣ, ಯಾವುದಕ್ಕೂ ಬೇಸರಪಟ್ಟುಕೊಳ್ಳದೆ ಸಮಾಧಾನವಾಗಿ ಉತ್ತರಿಸುತ್ತಿದ್ದರು.

ಇನ್ನೊಮ್ಮೆ ನಾನು ನನ್ನ ಪತ್ನಿ ಸಮೇತ ಮೈಸೂರಿಗೆ ಹೋದೆ. ಅಂದು ನಮ್ಮ ಭಾವನ ಮನೆಗೆ ಡಾ. ಹಾ.ಮಾ.ನಾಯಕ ಬಂದಿದ್ದರು. ನನ್ನ ಅಕ್ಕ ಒಳ್ಳೆಯ ಮಸಾಲೆ ದೋಸೆ ಮಾಡುತ್ತಿದ್ದಳು. ಅದರ ಸವಿಯನ್ನು ಉಂಡ ನನಗೆ ಹಾ.ಮಾ.ನಾಯಕರು ಇನ್ನು ಮೇಲೆ ಮಸಾಲೆ ದೋಸೆ ತಿನ್ನಬೇಕು ಅನಿಸಿದರೆ ಛಾಯಾಪತಿಯವರ ಮನೆಗೆ

ಬರುತ್ತಾರೆ ಎಂದರು. ನೋಡಿ ನನಗೆ ಸ್ವರ್ಗವೆ, ಭೂಮಿಗೆ ಬಂದಂತಾಗಿತ್ತು ಏಕೆಂದರೆ ಹಾಮಾನಿರಂಥ ಧೈತ್ಯ ಪ್ರತಿಭೆ. ಅಂಥವರ ಜೊತೆಯಲ್ಲಿ ನಾವು ಉಪಹಾರ ಮಾಡುವ ಭಾಗ್ಯ ಶ್ರೀ ಟಿ.ಎಸ್. ಛಾಯಾಪತಿಯುವರಿಂದ ನಮಗೆ ಲಭಿಸಿತ್ತು. ಹೀಗೆ ಹಾಮಾನಾಯಕರ ಮನೆಗೆ ನನ್ನನ್ನು ಮತ್ತು ನನ್ನ ಪತ್ನಿಯನ್ನು ನನ್ನ ಭಾವ ಕರೆದುಕೊಂಡು ಹೋಗಿದ್ದರು. ಅವರ ಮನೆಯಲ್ಲಿ ಅವರ ದರ್ಶನವಾಗಿದ್ದು ಅವರ ಜೊತೆಯಲ್ಲಿ ಸುಮಾರು ಒಂದು ಇಪ್ಪತ್ತು ನಿಮಿಷಗಳು ಮಾತಾಡಿದ್ದು ನನ್ನ ಜೀವನದಲ್ಲಿ ಮರೆಯುವುದಕ್ಕಾಗುವುದಿಲ್ಲ. ಒಟ್ಟಿನಲ್ಲಿ ನನ್ನ ಭಾವ ಶ್ರೀ ಟಿ.ಎಸ್. ಛಾಯಾಪತಿ ಯವರದು ಬಹಳ ದೊಡ್ಡ ಮನಸ್ಸು ಮತ್ತು ನನಗೆ ಈ ಮೇಲಿನ ಅನುಭವಗಳೆಲ್ಲ ಆಗುವುದಕ್ಕೆ ಅವರೆ ಕಾರಣ.

ಭಾವಮೈದುನನ್ನು ಅರ್ಧ ಹೆಂಡತಿ ಅನ್ನುತ್ತಾರೆ. ನನ್ನ ಮತ್ತು ಭಾವನವರ ಸಂಬಂಧ ಆ ರೀತಿ ಇತ್ತು. ಅವರು ಹಾಸನಕ್ಕೆ ಬಂದಾಗಲೆಲ್ಲ ನಾನೇ ನಿಂತು ಅವರಿಗೆ ಎಣ್ಣೆ ಸವರಿ ಅಭ್ಯಂಜನ ಮಾಡಿಸುತ್ತಿದ್ದೆ. ಅವರು ಇಂದಿಗೂ ಅದನ್ನು ಪ್ರೀತಿಯಿಂದ ನೆನಪಿಸಿಕೊಳ್ಳು ತ್ತಾರೆ. ನಮ್ಮ ಭಾವನವರಿಂದ ಸುಪ್ರಸಿದ್ಧ ಕಾದಂಬರಿಕಾರ ಚದುರಂಗ ಪರಿಚಯವಾಗಿತ್ತು. ಅವರ ಮಾತಿನಲ್ಲೇ ಹೇಳುವುದಾದರೆ ಪ್ರೀತಿಗಿಂತ ದೊಡ್ಡ ವಸ್ತು ಈ ಜಗತ್ತಿನಲ್ಲಿ ಯಾವುದಿದೆ?



# ಅಕ್ಷರ ಪ್ರೀತಿಯ ಬಿತ್ತಿ ಬೆಳೆದವರು

'ಎತ್ತಣ ಮಾಮರ ಎತ್ತಣ ಕೋಗಿಲೆ ಎತ್ತಣಿಂದೆತ್ತ ಸಂಬಂಧವಯ್ಯ' ಎಂದುಲಿದ ಸಮಾನತೆಯ ಹರಿಕಾರ, ಮಾನವತೆಯ ಮೂರ್ತರೂಪ, ಅನುಭವ ಮಂಟಪದ ಅನರ್ಘ್ಯರತ್ನ, ಅಲ್ಲಮ ಪ್ರಭುದೇವರ ಮಾತು ದುತ್ತೆಂದು ನೆನಪಾಗಿದ್ದು, ಹಿರಿಯರೂ, ಹಿತೈಷಿಗಳೂ ಮಾವನವರೂ ಆದ, ಸಾವಿರ ಪುಸ್ತಕಗಳ ಸರದಾರ, ಸರಿ ಸುಮಾರು ನಲವತ್ತು ವರ್ಷಗಳಿಂದಲೂ, ಕನ್ನಡ ನಾಡಿನ ಮನೆ ಮನೆಗೆ, ಅಕ್ಷರಶಃ ಅಕ್ಷರ ಬಿತ್ತಿದ ಅನುಪಮ ಕನ್ನಡಪ್ರೇಮಿ, ಕನ್ನಡ ಸಾಹಿತ್ಯಲೋಕದ ಅಶ್ವಿನಿದೇವತೆಗಳಲ್ಲೊಬ್ಬರಾದ, ತಳುಕಿನ ವೆಂಕಣ್ಣಯ್ಯನವರ ಸಹೋದರ, ತ.ಸು. ಶಾಮರಾಯರ ಸುಪುತ್ರ ಟಿ.ಎಸ್. ಛಾಯಾಪತಿಯವರ, ಅಭಿನಂದನಾ ಗ್ರಂಥಕ್ಕೆ, ಲೇಖನವೊಂದನ್ನು ಬರೆಯುವ, ಅವಕಾಶ (ಅದೃಷ್ಟ) ಅರಸಿ ಬಂದ ಕ್ಷಣದಲ್ಲಿ!

ನನಗಿನ್ನೂ ನೆನಪಿದೆ. ಸರಿ ಸುಮಾರು 1974-75ರ ಸಮಯದಲ್ಲಿ, ನಾನು ಮೊಟ್ಟ ಮೊದಲು, ಶ್ರೀಯುತ ಛಾಯಾಪತಿಯವರನ್ನು ನೋಡಿದ್ದು, ಮೈಸೂರಿನ ಕೃಷ್ಣಮೂರ್ತಿ ಪುರಂನಲ್ಲಿದ್ದ, ಅವರ ಮನೆಯಲ್ಲಿ ! ನನ್ನ ಪೂಜ್ಯ ಗುರುಗಳೂ, ಸಂವೇದನಾಶೀಲ ಬರಹಗಾರರೂ, ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಪ್ರಾಧ್ಯಾಪಕರೂ ಆದ ತ.ಹ. ನಾಗರಾಜನ್‌ರವರು, ಚಾಮರಾಜನಗರ ಸರ್ಕಾರಿ ಪ್ರೌಢಶಾಲೆಯಲ್ಲಿ ಅಧ್ಯಾಪಕರಾಗಿದ್ದರು. ನಾನು ಅವರ ಶಿಷ್ಯನಾಗಿದ್ದೆ. ಆಗ ನಾನು ಬರೆದ ಒಂದು ಪುಟ್ಟ ಕಾದಂಬರಿಯನ್ನು ಓದಿ ಖುಷಿ ಪಟ್ಟ ನನ್ನ ಗುರುಗಳು, ಅದನ್ನು ಪ್ರಕಟಿಸಲು ಸಹಾಯ ಮಾಡುವ ಇರಾದೆಯಿಂದ ತಮ್ಮ ಸ್ವಂತ ದೊಡ್ಡಪ್ಪನವರಾದ ತ.ಸು. ಶಾಮರಾಯರ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಗೆ ಕರೆದುಕೊಂಡು ಬಂದು ಪರಿಚಿಯಿಸಿದ್ದರು. ಅದು ಹೆಸರಾಂತ ಸಾಹಿತಿಯೊಬ್ಬರನ್ನು ನಾನು ಮೊಟ್ಟಮೊದಲು ಭೇಟಿ ಮಾಡಿದ ಕ್ಷಣ. ಮರೆಯಲಾಗದ ಅನುಭವ! ಆಗಿನ್ನೂ ಮೂವತ್ತರ ಹರೆಯದ ಟಿ.ಎಸ್. ಛಾಯಾಪತಿಯವರು, ಪ್ರಕಾಶನ ಸಂಸ್ಥೆಯ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರು. ನನ್ನ ಕಾದಂಬರಿಯನ್ನು ಓದಿ, ಪ್ರಕಟಿಸುವುದಾಗಿ ಒಪ್ಪಿಕೊಂಡಿದ್ದರು. ಆದರೇ, ಕಾರಣಾಂತರ

---

ಬಿ.ಎ.ಮಧು

---

ಗಳಿಂದ ಅದು ಸಾಧ್ಯವಾಗದೇ, ಅವರ ನನ್ನ ಸಂಬಂಧ ಒಂದೇ ಭೇಟಿಯಲ್ಲಿ ಮುಕ್ತಾಯಗೊಂಡಿದ್ದು. ಅಂದು ನನಗಾದ ನಷ್ಟವೇ ಸರಿ!

ನಂತರ, ಸುಮಾರು ಹತ್ತು ವರ್ಷಗಳ ಕಾಲ, ನಾನು ಮತ್ತೆ, ಶ್ರೀಯುತ ಛಾಯಾಪತಿಯವರನ್ನು ಭೇಟಿ ಮಾಡಲು ಸಾಧ್ಯವಾಗಲಿಲ್ಲ. ಆದರೇ, ನನ್ನ ಗುರುಗಳಾದ ತ.ಹ. ನಾಗರಾಜನ್‌ರವರ ಹಿರಿಯ ಮಗಳು, ತ.ನಾ.ಲಕ್ಷ್ಮೀಯವರನ್ನು ನಾನು ಮದುವೆಯಾದ ನಂತರ, ಮತ್ತೆ ಬಂಧುವಾಗಿ ಶ್ರೀ ಛಾಯಾಪತಿಯವರನ್ನು ನೋಡುವಂತಾಯಿತು. ಹಿಂದೆ ನಾನು ನೋಡಿದ್ದ 30ರ ಹರಯದ, ಉತ್ಸಾಹದ ಚಿಲುಮೆ, ಛಾಯಾಪತಿಯವರು, ಇಂದಿಗೂ ಅದೇ ಅಕ್ಷರ ಪ್ರೀತಿಯನ್ನು ಉಳಿಸಿ, ಬೆಳೆಸಿಕೊಂಡು ಬಂದಿರುವುದು, ಅವರ ಜೀವನೋತ್ಸಾಹದ ದ್ಯೋತಕವೇ ಸರಿ.

ಟೆಲಿವಿಷನ್ ಮಾಧ್ಯಮ ದಾಂಗುಡಿಯಿಟ್ಟ ಸಮಯದಲ್ಲಿ, ಜನಪ್ರಿಯ ಸಾಹಿತ್ಯ ಕ್ಷೇತ್ರ ಸೊರಗಿದ್ದು ಸುಳ್ಳಲ್ಲ. ಪುಸ್ತಕ ಓದುವ ಎಷ್ಟೋ ಜನರು, ಟಿ.ವಿ. ಮುಂದೆ ಕಳೆದುಹೋದರು. ಆಗ ಭಾರೀ ಹೊಡೆತ ಬಿದ್ದದ್ದು ಪುಸ್ತಕ ಪ್ರಕಾಶಕರಿಗೆ! ಆ ಸಂದರ್ಭದಲ್ಲಿ ಎಷ್ಟೋ ಮಂದಿ ಪ್ರಕಾಶಕರು, ಪುಸ್ತಕ ಪ್ರಕಟಣೆ ನಿಲ್ಲಿಸಬೇಕಾಯಿತು. ಮತ್ತು ವ್ಯವಹಾರಿಕವಾಗಿ ನಷ್ಟ ಅನುಭವಿಸಬೇಕಾಯಿತು. ಅಂತಹ ಕ್ಲಿಷ್ಟ ಪರಿಸ್ಥಿತಿಯನ್ನು, ದಿಟ್ಟವಾಗಿ ಎದುರಿಸಿದ, ಕೆಲವೇ ಕೆಲವು ಪ್ರಕಾಶಕರಲ್ಲಿ ನಮ್ಮ ಮಾವನವರೂ ಒಬ್ಬರೆಂದರೆ ತಪ್ಪಾಗಲಾರದು. ಅವರು, ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯನ್ನು ಉಳಿಸಿ-ಬೆಳೆಸಲು ಮಾಡಿರುವುದು ಅಕ್ಷರಶಃ ಏಕಾಂಗಿ ಹೋರಾಟ!

ನಾಡಿನ ಹೆಸರಾಂತ ಸಾಹಿತ್ಯ ದಿಗ್ಗಜರಾದ, ಟಿ.ಎಸ್. ವೆಂಕಣ್ಣಯ್ಯ, ಡಿ.ಎಲ್. ನರಸಿಂಹಾಚಾರ್, ತ.ಸು. ಶಾಮರಾಯ, ದೇಜಗೌ, ಎಚ್ಚೆಸ್ಕೆ, ಹಾಮಾನಾ, ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ, ಚಂಪಾ, ನಿಸಾರ್ ಅಹ್ಮದ್, ಚನ್ನವೀರಕಣವಿ, ಟಿ.ವಿ. ವೆಂಕಟಾಚಲ ಶಾಸ್ತ್ರಿ, ಸಿ.ಪಿ.ಕೆ., ಮಲ್ಲೇಪುರಂ ಜಿ. ವೆಂಕಟೇಶ್, ಎಚ್.ಜೆ. ಲಕ್ಕಪ್ಪಗೌಡ, ಎಸ್.ಎಸ್. ತಾರಾನಾಥ್, ಮತ್ತೂರು ಕೃಷ್ಣಮೂರ್ತಿಯವರಲ್ಲದೆ, ಇನ್ನೂ ಹಲವಾರು ಹಿರಿ-ಕಿರಿಯ ಸಾಹಿತಿಗಳ, ಸಾವಿರಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆಂದರೆ, ಅವರ ಸಾಹಸ ಊಹೆಗೂ ನಿಲುಕದ್ದು! ಸಾಹಿತ್ಯ ಕೃತಿಗಳನ್ನು ಪ್ರಕಟಿಸಲು ಅಕ್ಷರ ಪ್ರೀತಿಯಿದ್ದ ರಷ್ಟೇ ಸಾಲದು. ಆ ಕೃತಿಗಳನ್ನು, ಶ್ರದ್ಧೆಯಿಂದ, ಓದುಗರಿಗೆ ತಲುಪಿಸುವ ಜವಾಬ್ದಾರಿ ಮತ್ತು ವ್ಯವಹಾರ ಚತುರತೆಯೂ ಇರಬೇಕು. ನಾನು ಕಂಡಂತೆ, ಅವರು ಜೀವನ ದುದ್ದಕ್ಕೂ, ಶ್ರದ್ಧೆಯಿಂದ ಆ ಕೆಲಸವನ್ನು ಮಾಡಿದ್ದಾರೆ!

ಬಸ್ಸು - ರೈಲು-ಕಾರಿನಲ್ಲಿ ಪುಸ್ತಕಗಳನ್ನು ಹೇರಿಕೊಂಡು, ಕನ್ನಡನಾಡಿನ ಉದ್ದಗಲಕ್ಕೂ ಸಾವಿರಾರು ಮೈಲು ಸಂಚರಿಸಿದ್ದಾರೆ. ಪ್ರತಿಯೊಂದು ಶಾಲೆ-ಕಾಲೇಜು - ಲೈಬ್ರರಿಗಳನ್ನು ಸಂಪರ್ಕಿಸಿ, ಅಧ್ಯಾಪಕರು -ವಿದ್ಯಾರ್ಥಿಗಳಲ್ಲಿ, ಪುಸ್ತಕ ಓದುವ

ಅಭಿರುಚಿಯನ್ನು ಬಿತ್ತಿ ಬೆಳೆಸಿದ್ದಾರೆ. ಕಥೆ - ಕಾದಂಬರಿಗಳಷ್ಟೇ ಜನಪ್ರಿಯ ಸಾಹಿತ್ಯವೆಂಬ ಮನೋಭಾವವನ್ನು ಅಳಿಸಿ, ಕಾವ್ಯ - ನಾಟಕ - ಪ್ರಬಂಧ - ವಿಮರ್ಶೆ - ಜೀವನ ಚರಿತ್ರೆ- ಅಂಕಣ ಬರಹ- ಪ್ರವಾಸ ಕಥನ - ಸಂಶೋಧನೆ - ಅಭಿನಂದನಾ ಗ್ರಂಥ - ಹೀಗೆ, ಸಾಹಿತ್ಯದ ನಾನಾ ಪ್ರಕಾರಗಳ, ವೈವಿಧ್ಯಮಯ ಕೃತಿಗಳನ್ನು ಹೊರತಂದು, ಸಾಹಿತ್ಯಲೋಕದ ಶ್ರೀಮಂತಿಕೆಯನ್ನು ಎತ್ತಿ ಹಿಡಿದ ಸತ್ಕೀರ್ತಿ ಶ್ರೀಯುತರದು!

ಅವರ ಸಾಹಿತ್ಯ ಸೇವೆ, ಪ್ರಕಾಶನಕ್ಕಷ್ಟೇ ಸೀಮಿತವಾಗಿಲ್ಲ. ತಮ್ಮ ವಂಶದ ಸಾಹಿತ್ಯ ದಿಗ್ಗಜರಾದ, ಟಿ.ಎಸ್. ವೆಂಕಣ್ಣಯ್ಯ, ತ.ಸು. ಶಾಮರಾಯರು, ತ.ರಾ.ಸು, ತ.ಹ. ನಾಗರಾಜನ್ ರಂತೆ, ಇವರೂ ಸಹ ಇಪ್ಪತ್ತಕ್ಕೂ ಹೆಚ್ಚು ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ರಾಷ್ಟ್ರಕವಿ ಕುವೆಂಪು, ತರಾಸು, ಜಿ.ಎಸ್. ಶಿವರುದ್ರಪ್ಪ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಪುತಿನ, ಕಣವಿಯವರಂಥಹ ಶ್ರೇಷ್ಟ ಸಾಹಿತಿಗಳ ಪ್ರಶಂಸೆಗೂ ಪಾತ್ರರಾಗಿದ್ದಾರೆಂದರೆ ಸುಮ್ಮನೆ ಮಾತಲ್ಲ!

ಇಷ್ಟಾದರೂ, ಅವರ ಸಜ್ಜನಿಕೆ, ಸರಳತೆ, ವಿನಯಶೀಲತೆ ನಮಗೆಲ್ಲಾ ಆದರ್ಶ ಪ್ರಾಯವಾದುದು. ಅರವತ್ತೊಂಬತ್ತರ ಹರಯದಲ್ಲೂ ಇಪ್ಪತ್ತರ ಯುವಕರನ್ನೂ ನಾಚಿಸುವಂತೆ, ಕ್ರಿಯಾಶೀಲರಾಗಿರುವ ಅವರ ಹಸನ್ಮುಖಿ ಬದುಕು ನೋಡಿದಾಗ, ಹೆಮ್ಮೆಯೆನಿಸುತ್ತದೆ. ಇತ್ತೀಚೆಗೆ, ಅನಿರೀಕ್ಷಿತವಾಗಿ ಬಂದೊದಗಿದ ಆಘಾತವೊಂದರಿಂದ, ನಾನು ಮತ್ತು ನನ್ನ ಶ್ರೀಮತಿ ತೀವ್ರವಾಗಿ ತತ್ತರಗೊಂಡಿದ್ದಾಗ, ಛಾಯಾಪತಿಯವರು ಮತ್ತು ಅವರ ಶ್ರೀಮತಿಯವರು ನಮ್ಮನ್ನು ಮಕ್ಕಳಂತೆ ಸಂತೈಸಿ, ಧೈರ್ಯ ತುಂಬಿ, ಮಾನಸಿಕವಾಗಿ ಚೇತರಿಸಿಕೊಳ್ಳುವಂತೆ ಮಾಡಿರುವುದನ್ನು, ನಾನೆಂದಿಗೂ ಮರೆಯಲು ಸಾಧ್ಯವಿಲ್ಲ! ಇಂತಹ, ಸರಸ್ವತಿ ಪುತ್ರರ ಕುಟುಂಬದಲ್ಲಿ ನಾನೂ ಒಬ್ಬ ಸದಸ್ಯನೆಂಬುದೇ ಹೆಮ್ಮೆಯ ವಿಷಯ !

ಇಂತಹ ಸಾಧಕರಿಗೆ ಸಂದ ಪ್ರಶಸ್ತಿ - ಪುರಸ್ಕಾರಗಳು ಕಡಿಮೆಯೆಂದೇ ಹೇಳಬೇಕು. ಎಷ್ಟೋ ಜನ ಯೋಗ್ಯರಲ್ಲದವರೂ, ಪ್ರಶಸ್ತಿಗಳನ್ನು ಪಡೆದು ಬೀಗುವ, ಹಣಕೊಟ್ಟು ಡಾಕ್ಟರೇಟ್ ಪಡೆಯುವ ಈ ಕಾಲದಲ್ಲಿ, ಶ್ರೀಯುತ ಟಿ.ಎಸ್. ಛಾಯಾಪತಿ ಯವರಂತಹ ಸಾಧಕರನ್ನು, ಕನ್ನಡದ ಕಟ್ಟಾಳುಗಳನ್ನೂ ಗೌರವಿಸುವ ಕೆಲಸವನ್ನು ಸರ್ಕಾರ ಮಾಡಬೇಕಾಗಿದೆ!

ಕೊನೆಯದಾಗಿ, ಅವರ ಈ ಎಪ್ಪತ್ತರ ಸಂತಸ, ನೂರರ ಸಂಭ್ರಮಕ್ಕೆ ಮುನ್ನುಡಿ ಯಾಗಲಿ, ಎಂದು ಎದೆ ತುಂಬಿ ಹರಸುತ್ತಾ,

# ಪಿತೃದೇವೋ ಭವ

ತಳುಕಿನ ವಂಶದ ಕುಡಿಯಾದ ನನ್ನ ಹೆಸರು ಪ್ರತಿಭ. 'ಪ್ರತಿಭ' ಎಂದು ನಾಮಕರಣ ಮಾಡಿದವರೇ ನಮ್ಮ ತಾತ ತ.ಸು. ಶಾಮರಾಯರು. ಅವರ ಎರಡನೆಯ ಮಗ ಛಾಯಾಪತಿಯವರು ನನ್ನ ತಂದೆ.

ನಾನು ಜನಿಸಿದ ವೇಳೆಯಲ್ಲಿ ನಮ್ಮ ತಾತನವರಿಗೆ 'ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ' ಬಂದಿದೆ ಎಂದು, ರೇಡಿಯೋದಲ್ಲಿ ಪ್ರಸಾರವಾಯಿತು. ಆಗ ನಮ್ಮ ತಾತನವರು ನಮ್ಮ ತಂದೆಯವರನ್ನು ಕುರಿತು ನಿನ್ನ ಮಗಳ ಪ್ರತಿಭೆಯಿಂದ ನನಗೆ ಈ ಪ್ರಶಸ್ತಿ ಬಂದಿದೆ. ಆದ್ದರಿಂದ ನಿನ್ನ ಮಗಳಿಗೆ 'ಪ್ರತಿಭಾ' ಎಂದು ನಾಮಕರಣ ಮಾಡು ಎಂದು ತಿಳಿಸಿದರು.

ನಮ್ಮದು ಒಟ್ಟು ಕುಟುಂಬ. ತಾತ, ಅಜ್ಜಿ, ಅಪ್ಪ, ಅಮ್ಮ, ಚಿಕ್ಕಪ್ಪ, ಅತ್ತೆ, ಇವರೆಲ್ಲರಿಗೂ ನಾನು ಪ್ರೀತಿ ಪಾತ್ರಳಾದವಳು. ಕಾಲಸರಿದಂತೆ ನನ್ನ ಪ್ರೀತಿಯನ್ನು ಹಂಚಿಕೊಳ್ಳಲು ನನ್ನ ತಮ್ಮ ಶ್ರೀನಿವಾಸ್ ಪವನ್ ಜನಿಸಿದ. ನಮ್ಮ ತಂದೆ, ತಾಯಿಯವರ ಪ್ರೀತಿ, ವಿಶ್ವಾಸಗಳ ನೆರಳಿನಲ್ಲಿ ನಾವು ಸುಖವಾಗಿ ಬೆಳೆದೆವು. ನಮ್ಮನ್ನು ಬಾಲ್ಯದಿಂದಲೇ ಧೈರ್ಯ ಹಾಗೂ ಆತ್ಮಸ್ಥೈರ್ಯದಿಂದ ಮುನ್ನುಗ್ಗಲು ಅವರು ಪ್ರೋತ್ಸಾಹ ನೀಡುತ್ತಿದ್ದರು. ನಾನು ಮತ್ತು ನನ್ನ ತಮ್ಮನಿಗೆ ಯಾವ ಕ್ಷೇತ್ರದಲ್ಲಾದರೂ ಮುಂದುವರಿಯಲು, ವಿದ್ಯೆ ಕಲಿಯಲು ಒಪ್ಪಿದರು. ಅಂತೆಯೇ ನಾನು 'ಫೋಟೋಗ್ರಫಿ ಜರ್ನಲಿಸಂ' ತೆಗೆದುಕೊಂಡು ಮುಂದುವರೆದೆ. ನನ್ನ ತಮ್ಮ ಎಂ.ಬಿ.ಎ. ಮಾಡಿ ಮುಂದೆ ನ್ಯೂಜಿಲ್ಯಾಂಡ್‌ನಲ್ಲಿ ಎಂ.ಹೆಚ್.ಎಂ. ಮಾಡಿ ಈಗ ಚೆನ್ನೈನಲ್ಲಿ ದೊಡ್ಡ ಹುದ್ದೆಯಲ್ಲಿ ದ್ದಾನೆ. ನಾನೂ ಸಹ ಅಧ್ಯಾಪಕಿಯಾಗಿ ಕೆಲಸ ಮಾಡುತ್ತಿದ್ದೇನೆ.

ನಮ್ಮ ತಂದೆಯವರು ಸಂಗೀತ ಪ್ರಿಯರೂ ಕೂಡ. ನಾವು ಚಿಕ್ಕಮಕ್ಕಳಾದಾಗಿನಿಂದ ಅವರು 'ಚಿತ್‌ಚೋರ್' ಹಾಡುಗಳು ಹಾಗೂ ಹಳೆಯ ಕನ್ನಡ, ಹಿಂದಿ ಗೀತೆಗಳನ್ನು ಹಾಡುವುದನ್ನು ಕೇಳಿದ್ದೇನೆ. ಅಷ್ಟೇ ಅಲ್ಲ ಅವರು ಒಳ್ಳೆಯ ಕ್ರಿಕೆಟ್ ಆಟಗಾರರೂ

---

ಪ್ರತಿಭಾ ಮುರಳಿ

---

ಕೂಡ. ಅವರು ಬಸುಮಯ್ಯ ಕಾಲೇಜಿನಲ್ಲಿ ಓದುತ್ತಿದ್ದಾಗ 'ಟೀಂ ಓಪನರ್' ಆಗಿದ್ದರು. ಕ್ರಿಕೆಟ್ ಮೇಲೆ 'ನಮ್ಮ ಕ್ರಿಕೆಟ್' ಎಂಬ ಪುಸ್ತಕವನ್ನೂ ಬರೆದಿದ್ದಾರೆ.

ನಮ್ಮ ತಂದೆಯವರು ಒಳ್ಳೆಯ ಲೇಖಕರು. ಅವರು ಸುಮಾರು ಇಪ್ಪತ್ತೈದು ಕೃತಿಗಳನ್ನು ರಚಿಸಿದ್ದಾರೆ. ವ್ಯಕ್ತಿ ಚಿತ್ರಗಳಲ್ಲಿ ಅಗ್ರಗಣ್ಯರು. ಅವರ 'ಅಣ್ಣನ ಸ್ಮರಣೆ', 'ಗಾಂಧೀಜಿಯ ಕನಸು ನಜೀರರಿಂದ ನನಸು', 'ತಂಪು ನೆಳಲು' ಮತ್ತು 'ಆಡಳಿತ ಭಾಷೆ ಕನ್ನಡ'.

ತಂದೆಯವರು 1999ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರದಿಂದ ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ಪಡೆದಿದ್ದಾರೆ. ಅವರನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಕನ್ನಡ ಸಂಘದವರು ಸನ್ಮಾನಿಸಿದ್ದಾರೆ. ಅನೇಕ ಸಂಘ ಸಂಸ್ಥೆಗಳು ಸನ್ಮಾನ ಮಾಡಿದ್ದಾರೆ. ಅವರು 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥ ಮಾಲೆ'ಯನ್ನು ಯಶಸ್ವಿಯಾಗಿ ಕರ್ನಾಟಕ ರಾಜ್ಯದಲ್ಲಿ ನಮ್ಮ ತಾತಂದಿರ ಹೆಸರನ್ನು ಚಿರಸ್ಥಾಯಿಯಾಗಿರುವಂತೆ ಮುನ್ನಡೆಸುತ್ತಿದ್ದಾರೆ. ನಮ್ಮ ತಂದೆಯವರದು ಸ್ವಭಾವತಹಃ ಗಂಭೀರ ಪ್ರವೃತ್ತಿ, ಮೌನಿ.

ನಾನು ನನ್ನ ವಿದ್ಯಾರ್ಥಿ ಜೀವನದ ಒಂದು ಘಟನೆ ಈಗಲು ನನಗೆ ............ ಎಸ್.ಎಸ್.ಎಲ್.ಸಿ ಪರೀಕ್ಷೆ ಬರೆಯಲು ಹೋಗುವಾಗ ನನ್ನ ಬಿಡಲು ಅವರೇ ಬರುತ್ತಿದ್ದರು. ನನ್ನ ಗೆಳತಿಯರು ನನ್ನನ್ನು 'ನೋಡೆ ನಿಮ್ಮ ಅಣ್ಣ ಬಂದರು' ಎನ್ನುತ್ತಿದ್ದರು. ನಮ್ಮಪ್ಪ ಯಾವಾಗಲೂ ಸ್ಮಾರ್ಟ್ ಆಗಿಇರುತ್ತಿದ್ದರು. ನಾವು ಚಿಕ್ಕ ಮಕ್ಕಳಾಗಿದ್ದಾಗ ನಮ ತಾಯಿಯವರು ಹಾಸನಕ್ಕೆ, ಹೋದರೆಂದರೆ ತಂದೆಯವರಿಂದ ನಮಗೆ ತಿಂಡಿಗಳ ಸುರಿಮಳೆ, ರೋಸ್, ಮಿಲ್ಕ್, ಐಸ್‌ಕ್ರಿಮ್ ಇತ್ಯಾದಿ.

ನಮ್ಮ ತಂದೆಯವರು ಸ್ನೇಹ ಜೀವಿ. ನಮ್ಮ ಪ್ರಕಾಶನ ಹೇಗೆ ಬೆಳಿಯಿತೋ ಹಾಗೆ ಅವರ ಸ್ನೇಹವಲಯವು ಬೆಳೆಯಿತು. ನಮ್ಮ ಮನೆಗೆ ಅನೇಕ ಜನ ಗಣ್ಯರು ಬರುತ್ತಿರುತ್ತಾರೆ. ಹಾ.ಮಾ.ನಾ., ಚದುರಂಗ, ತಿಪ್ಪೇಸ್ವಾಮಿ, ಬಳಿಗಾರ್, ನಿಸಾರ್ ಅಹಮದ್, ಶಿವರುದ್ರಪ್ಪ, ಕೆಂಪಯ್ಯ, ಹೆಚ್.ಎಸ್. ಮಲ್ಲೇಪುರಂ ಜಿ. ವೆಂಕಟೇಶ ಎಲ್ಲಾ ಅತಿರಥರೂ ಬರುತ್ತಿರುತ್ತಾರೆ. ನಮಗೆ ಇವೆಲ್ಲರನ್ನೂ ನೋಡುವ, ಮಾತನಾಡಿಸುವ ಸುಯೋಗ ದೊರೆತಿದೆ. ಯಾರೇ ಮನೆಗೆ ಬಂದರೂ ಅವರನ್ನು ನಮ್ಮ ತಾಯಿಯವರು ಪವಿತ್ರ ಕರ್ತವ್ಯವೆಂಬಂತೆ ಸತ್ಕರಿಸುತ್ತಾರೆ. ಇಷ್ಟೇ ಅಲ್ಲದೆ ಅವರೆ ಅತ್ತೆ, ಮಾವಂದರಿಗೂ ಕೂಡ, ಪ್ರೀತಿಯ ಸೊಸೆಯಾಗಿ ಮನೆಯ ಮಗಳಂತೆಯೇ ಇದ್ದರು. ದೇವರಲ್ಲಿ ನನ್ನ ಪ್ರಾರ್ಥನೆ ಏನೆಂದರೆ 'ಈಶ್ವರ - ಪಾರ್ವತಿ'ಯಂತಿರುವ ನಮ್ಮ ತಂದೆ - ತಾಯಿಯರು ಚಿರಕಾಲ ಚೆನ್ನಾಗಿ ಬಾಳಲಿ. ನಮ್ಮ ತಂದೆಯವರು ಯಾವಾಗಲೂ ಹೇಳುತ್ತಿರುತ್ತಾರೆ. 'ಧರ್ಮೋ ರಕ್ಷತಿ ರಕ್ಷಿತಹಃ' ಎಂದು ನಾವು ನ್ಯಾಯವಾಗಿದ್ದಲ್ಲಿ ನಮ್ಮನ್ನು ದೇವರು ಕೈ ಬಿಡುವುದಿಲ್ಲ. ಅವರು ಇನ್ನೊಂದು ಮಾತು ಹೇಳುತ್ತಿರುತ್ತಾರೆ.

ಏನೆಂದರೆ 'We are like four pillers of the house', we are one, without any cracks. ಹೀಗೆಯೇ ಯಾವಾಗಲೂ ನಿಲ್ಲಬೇಕು ಎಂದು. ಅವರ ಆಶೀರ್ವಾದದಿಂದ ನಾನು ನನ್ನ ಸಂಸಾರ ಮತ್ತು ನನ್ನ ತಮ್ಮ ಅವನ ಸಂಸಾರ, ಚೆನ್ನಾಗಿರಲಿ ಎಂದು ಆಶಿಸುತ್ತೇನೆ.

# ನಾ ಕಂಡಂತೆ ಅಣ್ಣ

ನನ್ನ ಅಣ್ಣನ ಒಡನಾಟ ಶುರುವಾಗಿ ಕೇವಲ ಒಂದೂವರೆ ವರುಷವಷ್ಟೆ ಕಳೆದಿದೆ. ಸಂಬಂಧದಲ್ಲಿ ನಾವಿಬ್ಬರೂ ಮಾವ - ಸೊಸೆ. ಆದರೆ ಅವರು ನನ್ನನ್ನು ಮಗಳಂತೆಯೇ ಕಾಣುತ್ತಾರೆ. ಪುಟ್ಟಿ, ಪುಟ್ಟ ಎಂದೇ ಸಂಭೋಧಿಸುತ್ತಾರೆ. ನಾನು ಅವರಲ್ಲಿ ಸ್ವಂತ ತಂದೆಯವರ ವಾತ್ಸಲ್ಯವನ್ನು ಕಾಣುತ್ತಿದ್ದೇನೆ. ನಾನು ಅವರನ್ನು 'ಅಣ್ಣ' ಎಂದು ಹಾಗೂ ನನ್ನ ಅತ್ತೆಯನ್ನು 'ಅಮ್ಮ' ಎಂದೇ ಕರೆಯುತ್ತೇನೆ. ಅತ್ತೆಯವರು ಕೂಡ ಮಮತೆಯ ಸಾಗರ.

ನನ್ನದೊಂದು ಕನಸಿತ್ತು. ಆ ದೇವರನ್ನು ಸದಾ ಪ್ರಾರ್ಥಿಸುತ್ತಿದ್ದೆ, ನನ್ನ ಅತ್ತೆ - ಮಾವಂದಿರಲ್ಲಿ ನನ್ನ ತಂದೆ-ತಾಯಿಯನ್ನು ಕಾಣುತ್ತೆನೆ ಎಂದು ಹಾಗೆಯೇ ಅವರು ನನ್ನನ್ನು ಮಗಳೆಂದೇ ಬಾವಿಸಬೇಕು ಅಂತ. ನನ್ನ ಕನಸು ನನಸಾಗಿದೆ. ನಿಜಕ್ಕೂ ನಾನು ಅದೃಷ್ಟವಂತಳು. ಈ ಸಂಬಂಧ ಕೂಡಿ ಬಂದ ದಿನ ನನ್ನ ತಂದೆ -ತಾಯಿಯ ಸಂತೋಷವಂತೂ ಹೇಳತೀರದು.

ಪವನ್ ಅವರ ಕೈ ಹಿಡಿದು ಈ ಮನೆಯ ಸೊಸೆಯಾಗಿ ಬಂದದ್ದು ನನ್ನ ಪುಣ್ಯ ಹಾಗೂ ನನ್ನ ತಂದೆ - ತಾಯಿ ಮಾಡಿರುವ ಪುಣ್ಯದ ಫಲ ಎಂದು ನಾನು ದೃಢವಾಗಿ ನಂಬಿದ್ದೇನೆ. ನನ್ನ ಇನ್ನೊಂದು ಕನಸೇನೆಂದರೆ ನನ್ನ ಕೈ ಹಿಡಿಯುವವರಿಗೆ ಯಾವುದೇ ವರದಕ್ಷಿಣೆಯ ಫಲಾಪೇಕ್ಷೇ ಇರಬಾರದೆಂದುಕೊಂಡಿದ್ದೆ. ಈ ಕನಸು ಕೂಡ ಈಡೇರಿತು. ಈ ವಿಚಾರದಲ್ಲಿ ನನ್ನ ಅಣ್ಣ ಒಂದು ಹೆಜ್ಜೆ ಮುಂದೆಯೇ. ಶಾಸ್ತ್ರದ ಪ್ರಕಾರ ನನ್ನ ತಂದೆಯವರು ಅಳಿಯನಿಗಾಗಿ ಬಟ್ಟೆಯನ್ನು ಕೊಂಡುಕೊಳ್ಳಲು ಹಣವನ್ನು ಅಣ್ಣನ ಕೈಗಿತ್ತರು. ಬಟ್ಟೆಯನ್ನು ಕೊಂಡ ಮೇಲೆ ಮಿಕ್ಕಿದ ಹಣವನ್ನು ಅಣ್ಣ ನನ್ನ ತಂದೆಯವರಿಗೆ ಹಿಂದುರಿಗಿಸಿದರು. ನನ್ನ ತಂದೆ ಇದು ಏಕೆ ಎಂದು ಕೇಳಿದಾಗ ಅಣ್ಣ ಹೇಳಿದ ಮಾತು 'ಕೆರೆಯ ನೀರನು ಕೆರೆಗೆ ಚೆಲ್ಲಿ'. ನನ್ನ ತಂದೆ ಅವರು ಕೊಟ್ಟ ಹಣವನ್ನು ಹಾಗೆಯೇ ಜೋಪಾನವಾಗಿ ಇಟ್ಟಿದ್ದಾರೆ.

---

**ಕಾಂಚನ ಪವನ್**

---

ಅಣ್ಣ ಸರಳ ಜೀವಿ. ಅವರ ಬಳಿ ಆಡಂಬರ ಹಾಗೂ ತೋರಿಕೆಗೆ ಜಾಗವಿಲ್ಲ. ಈ ವಿಚಾರದಲ್ಲಿ ಅವರ ಮಗನಾದ ನನ್ನ ಯಜಮಾನರೂ ಕೂಡ ತಂದೆಯಂತೆ ಪಡಿಯಚ್ಚು. ನನ್ನ ತಂದೆ ತಮ್ಮ ಶಕ್ತಿ ಮೀರಿ ನನ್ನ ಮದುವೆಯನ್ನು ಬಹು ವಿಜೃಂಭಣೆಯಿಂದ ಹಾಗೂ ಅಚ್ಚುಕಟ್ಟಾಗಿ ಮಾಡಿದರು. ಈ ವಿಷಯಕ್ಕೆ ಅಣ್ಣ ನನ್ನನ್ನು ಕುರಿತು ನಿನ್ನ ತಂದೆಯವರು ಮದುವೆಗೆ ತುಂಬಾ ಖರ್ಚು ಮಾಡಿದರು ಅದರ ಅಗತ್ಯವಿರಲಿಲ್ಲ ಎಂದು ಆಗಾಗ ಹೇಳುತ್ತಿರುತ್ತಾರೆ. ನಿಶ್ಚಿತಾರ್ಥ ಹಾಗೂ ಮದುವೆಯ ಸಂದರ್ಭದಲ್ಲಾಗಲಿ ತಾವು ಗಂಡನ ಕಡೆಯವರೆಂದು ಕಿಂಚಿತ್ತು ದರ್ಪ ತೋರಿಸದೆ ವಿನಮ್ರತೆಯಿಂದ ನಡೆದುಕೊಂಡರು.

ಅಮ್ಮನೇ (ಅತ್ತೆ)ಹೇಳಿದ ಹಾಗೆ ನನ್ನ ಯಜಮಾನರು ಹೆಣ್ಣಿನ ಕಡೆಯವರಿಗೆ ಯಾವುದೇ ತೊಂದರೆ ಕೊಡಬೇಡಿ ಹಾಗೂ ಯಾವುದೇ ಅಪೇಕ್ಷೆ ಇಟ್ಟುಕೊಳ್ಳಬೇಡಿ. ನಾನು ಒಂದು ದೇವಸ್ಥಾನದಲ್ಲಿ ತಾಳಿ ಕಟ್ಟಲು ಸಿದ್ಧ ಎಂದಿದ್ದರಂತೆ. ಅಮ್ಮನೂ ಕೂಡ ವಿಶಾಲ ಮನೋಭಾವದವರು. ಮದುವೆಯ ಕಾರ್ಯ ಮುಗಿದು ಹೊರಡಲನುವಾದಾಗ ಅಮ್ಮ ನನ್ನ ತಾಯಿಯ ಬಳಿ ಬಂದು 'ಮದುವೆಯ ಸಂದರ್ಭದಲ್ಲಿ ನಮ್ಮಿಂದೇನಾದರೂ ತಪ್ಪಾಗಿದ್ದರೆ ದಯವಿಟ್ಟು ಕ್ಷಮಿಸಿ' ಎಂದು ಹೇಳಿ ತಮ್ಮ ಸಿರಿತನವನ್ನು ಮೆರೆದರು.

ಅಣ್ಣ ಒಬ್ಬ ಸಮಯಪ್ರಜ್ಞೆ, ಭೋಜನಪ್ರಿಯ ಹಾಗೂ ಸೂಕ್ಷ್ಮ ವ್ಯಕ್ತಿತ್ವದವರು. ಅಣ್ಣ ಸಮಯಕ್ಕೆ ಬದ್ಧರು. ಸಮಯಕ್ಕೆ ಸರಿಯಾಗಿ ಅಥವಾ ಮೊದಲೇ ತಲುಪಬೇಕಾದ ಸ್ಥಳವನ್ನು ತಲುಪುತ್ತಾರೆ. ಅಣ್ಣನೇ ಹೇಳಿದ ಹಾಗೆ ಅವರ ಈ ಸಮಯ ಪ್ರಜ್ಞೆಗೆ ಖ್ಯಾತ ಕವಿ, ಸಾಹಿತಿ 'ಎಚ್.ಎಸ್. ವೆಂಕಟೇಶಮೂರ್ತಿ' ಅವರು ಕೂಡ ಆಶ್ಚರ್ಯ ಹಾಗೂ ಸಂತೋಷಪಡುತ್ತಾರೆ.

ಇತ್ತೀಚೆಗೆ ಅಮ್ಮ ಮತ್ತು ಅಣ್ಣ ಮದ್ರಾಸಿಗೆ ಬಂದಿದ್ದರು. ಆಗ ಅಣ್ಣ ಇಲ್ಲಿಯೂ ಕೂಡ ಸಮಯ ವ್ಯರ್ಥ ಮಾಡದೆ ರಾಷ್ಟ್ರಕವಿ ಜಿ.ಎಸ್.ಎಸ್. ಅವರ ಬಗ್ಗೆ ಅನೇಕ ಪ್ರಸಂಗಗಳನ್ನು ಬರೆಯುತ್ತಿದ್ದರು. ಆ ಸಮಯದಲ್ಲಿ ಪಕ್ಕದಲ್ಲೇ ಕುಳಿತಿದ್ದ ನಾನು ಮತ್ತು ಅಮ್ಮ ಆಗ ತಾನೇ ಹೊಸದಾಗಿ ಕೊಂಡುಕೊಂಡಿದ್ದ ಮೊಬೈಲ್ ಬಗ್ಗೆ ಚರ್ಚೆ ಮಾಡುತ್ತಿದ್ದೆವು. ನಾನು ಅಮ್ಮನಿಗೆ ಆ ಮೊಬೈಲ್‌ನ್ನು ಉಪಯೋಗಿಸುವುದರ ಬಗ್ಗೆ ಹೇಳಿಕೊಡುತ್ತಿದ್ದೆ. ಆಗ ಅಣ್ಣ ನೀವಿಬ್ಬರೂ ಎಷ್ಟು ಗಲಾಟೆ ಮಾಡುತ್ತಿದ್ದೀರಿ, ನನ್ನ ಹೆಂಡತಿ ಮತ್ತು ಸೊಸೆಯ ಕಿರುಕುಳದ ನಡುವೆ ನಾನು ಈ ಲೇಖನವನ್ನು ಬರೆಯುತ್ತಿದ್ದೇನೆ ಮತ್ತು ಇದನ್ನು ಲೇಖನದಲ್ಲಿ ಸೇರಿಸುತ್ತೇನೆ ಎಂದು ಹೇಳಿ ಹಾಸ್ಯ ಮಾಡಿದರು. ಅಣ್ಣನ ಈ ಮಾತಿನಿಂದ ನಾನು ಮತ್ತು ಅಮ್ಮ ಬಿದ್ದು ಬಿದ್ದು ನಕ್ಕೆವು.

ಅಮ್ಮ ಮತ್ತು ಅಣ್ಣನ ಜೊತೆ ಟಿವಿ ನೋಡುವುದೇ ಒಂದು ಸೊಗಸು. ಅದರಲ್ಲಿ ಬರುವ ಧಾರಾವಾಹಿ, ನ್ಯೂಸ್ ಅಥವಾ Reality show ಏನೇ ಇರಲಿ ಅಣ್ಣನು

ಸ್ಪಂದಿಸುವ ರೀತಿ ಹಾಸ್ಯಮಯ. ಅಣ್ಣ ಮಾಡುವ ವಿಶ್ಲೇಷಣೆಯಿಂದ ನಾನು, ಅಮ್ಮ ನಕ್ಕು ನಕ್ಕು ಸುಸ್ತಾಗುತ್ತೇವೆ. ನಾನಂತು ಅಣ್ಣನ ಮಾತನ್ನು ನೆನಸಿಕೊಂಡು ಆಗಾಗ ನಗುತ್ತಿರುತ್ತೇನೆ.

ಅಣ್ಣ ಸೂಕ್ಷ್ಮಮತಿಯು ಕೂಡ ಹೌದು. ಟಿವಿಯಲ್ಲಿ ಬರುವ ಮನಮಿಡಿಯುವಂಥ ದೃಶ್ಯವನ್ನು ನೋಡಿದಾಗ ಅಣ್ಣನ ಕಣ್ಣು ತುಂಬಿ ಬರುತ್ತದೆ. ಈ ವಿಷಯದಲ್ಲಿ ನಾನು ಕೂಡ ಅಣ್ಣನ ಹಾಗೆ.

ಅಣ್ಣ ಭೋಜನಪ್ರಿಯರು. ಅಣ್ಣನೇ ಹೇಳುವ ಹಾಗೆ 'ಬ್ರಾಹ್ಮಣ ಭೋಜನಪ್ರಿಯ': ಅಣ್ಣನಿಗೆ ಇಷ್ಟವಾದ ತಿನಿಸುಗಳೆಂದರೆ ಅಂಬೋಡೆ, ಅಡೆದೋಸೆ, ಬಿಸಿಬೇಳೆಬಾತ್, ಒತ್ತು ಶ್ಯಾವಿಗೆ, ಕಡುಬು, ಮಸಾಲದೋಸೆ, ಬಾದಾಮಿ ಹಲ್ವ, ಮೂಸಂಬಿ ಜ್ಯೂಸ್ ಇತ್ಯಾದಿ. ಅಣ್ಣನ ಅಭಿರುಚಿಗೆ ತಕ್ಕಂತೆ ಅಮ್ಮ ರುಚಿರುಚಿಯಾಗಿ ಊಟ ಬಡಿಸುತ್ತಾರೆ.

ಅಣ್ಣನಿಗೆ ಅವರಕೆಂಪು ಬಣ್ಣದ ಗೆಟ್ಸ್ ಕಾರ್ ಎಂದರೆ ಬಲೂ ಪ್ರೀತಿ. ಅವರು ಅದನ್ನು ಕೊಂಡು ಸುಮಾರು ಎಂಟು ವರ್ಷಗಳೇ ಕಳೆದಿರಬಹುದು. ಆದರೆ ಈಗಲೂ ಅದು ಹೊಚ್ಚಹೊಸದರಂತಿದೆ. ಅಣ್ಣ ಆ ರೀತಿ ಅದನ್ನು maintain ಮಾಡಿದ್ದಾರೆ. ಅಣ್ಣನ ಈ car ವ್ಯಾಮೋಹಕ್ಕೆ ಅಮ್ಮನ ತಮ್ಮನವರಾದ ವೆಂಕಟೇಶ್ ಮಾಮ 'ಭಾವ ನೀವು ನನ್ನ ಅಕ್ಕನಿಗಿಂತ ಈ ಕಾರನ್ನು ಚೆನ್ನಾಗಿ ನೋಡಿಕೊಂಡಿದ್ದೀರಾ' ಎಂದು ಹಾಸ್ಯ ಮಾಡುತ್ತಾರಂತೆ.

ಅಂದು ಜುಲೈ, 23, 2012ನೇ ಸೋಮವಾರ. ನಾನು ನನ್ನ ತಂದೆ - ತಾಯಿಯರೊಡನೆ ಮದುವೆಗೆ ಮುನ್ನ ಮೊದಲ ಬಾರಿಗೆ ಗೋಕುಲಂನಲ್ಲಿರುವ ಅಮ್ಮ -ಅಣ್ಣನ ಮನೆಗೆ ಹೋಗಿದ್ದೆ. ನಾವು ಹಿಂದಿರುಗುವಾಗ ಅಣ್ಣ ನಮ್ಮ ಸೊಸೆಯನ್ನು ನಮ್ಮ ಕಾರಿನಲ್ಲಿ ಕರೆದುಕೊಂಡು ಬರುತ್ತೇವೆ ಎಂದು ಹೇಳಿ ತುಂಬ ಆತ್ಮೀಯವಾಗಿ ಅಮ್ಮ-ಅಣ್ಣ ಇಬ್ಬರೂ ನನ್ನನ್ನು ನಮ್ಮ ಮನೆಗೆ ಬೀಳ್ಕೊಟ್ಟರು.

ಅಣ್ಣ ಒಬ್ಬ ಪ್ರಕಾಶಕರು ಹಾಗೂ ಬರಹಗಾರರು. ಅವರು ಅನೇಕ ಪುಸ್ತಕಗಳನ್ನು ಬರೆದಿದ್ದಾರೆ ಹಾಗೂ ಈಗಲೂ ಬರೆಯುತ್ತಿದ್ದಾರೆ. 'ಪ್ರತಿಭಾ ಪ್ರಕಾಶನ', 'ಪ್ರಥಮ ಛಾಯ' ಎಂಬ ಹೆಸರಿನಲ್ಲಿ ಅನೇಕ ಪುಸ್ತಕಗಳನ್ನು ಹೊರತಂದಿದ್ದಾರೆ. ಪ್ರತಿ ಬಾರಿ ನಾನು ಅಣ್ಣ ನನ್ನ ಭೇಟಿಯಾದಾಗ ಅಣ್ಣ ಸ್ನೇಹಿತರಂತೆ ಕೈ ಕುಲುಕಿ ಓದಲು ಪುಸ್ತಕಗಳನ್ನು ನೀಡುತ್ತಾರೆ. ಅಣ್ಣನ ಈ ಕೊಡುಗೆಗೆ ಅನೇಕ ಪುರಸ್ಕಾರಗಳು ಸಂದಿವೆ, ಸಲುತ್ತಲಿದೆ ಹಾಗೂ ಮುಂದೆಯೂ ಸಲ್ಲಲಿ ಎಂದು ದೇವರಲ್ಲಿ ಬೇಡುತ್ತೇನೆ.

ಅಣ್ಣನ ಸಂಪರ್ಕ ಸಾಕಷ್ಟು ಪ್ರತಿಷ್ಠಿತ ವ್ಯಕ್ತಿಗಳೊಂದಿಗೆ ಇದೆ. ಇದರ ಸಾಲಿನಲ್ಲಿ ದಿವಗಂತ ಹಾ.ಮಾ. ನಾಯಕ, ದಿವಂಗತ ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ, ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ಕೆಂಪಯ್ಯ, ಕವಿ ಬಿ.ಆರ್. ಲಕ್ಷ್ಮಣ್‌ರಾವ್, ಸುತ್ತೂರು

ಮಠದ ಸ್ವಾಮೀಜಿ, ಮೈಸೂರು ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀನಿವಾಸಪ್ರಸಾದ್, ಶಾಸಕರಾದ ವಾಸು ಹಾಗೂ ಇನ್ನೂ ಅನೇಕರು.

ಇದೇ ಬರುವ ಮೇ 10, 2014ಕ್ಕೆ 70ವರ್ಷ ವಸಂತಗಳನ್ನು ಪೂರೈಸುತ್ತಿರುವ ಅಣ್ಣನಿಗೆ ಆ ದೇವರು ಆಯಸ್ಸು, ಆರೋಗ್ಯ, ಐಶ್ವರ್ಯ, ಶಕ್ತಿ ಹಾಗೂ ನೆಮ್ಮದಿಯ ಬಾಳು ನೀಡಲೆಂದು ಸದಾ ಪ್ರಾರ್ಥಿಸುತ್ತೇನೆ.

Last But not the least ಈ ಸಂಬಂಧದ ಎಳೆಯನ್ನು ಬೆಸೆಯಲು ಕಾರಣರಾದ ಉದಯರವಿ ಮುದ್ರಣಾಲಯದ ಬ್ರಹ್ಮಣ್ಯ ಹಾಗೂ ಅವರ ಶ್ರೀಮತಿಯವರಿಗೆ ನನ್ನ ಹೃದಯಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

# ನನ್ನ ಬಹುಪಾಲು ಕೃತಿಗಳನ್ನು ತೆಕ್ಕೆಗೆತ್ತಿಕೊಂಡ ವಾತ್ಸಲ್ಯ ಸ್ವರೂಪಿ ಟಿ.ಎಸ್. ಛಾಯಾಪತಿ

ಶ್ರೀ ಟಿ.ಎಸ್. ಛಾಯಾಪತಿಯವರನ್ನು ನಾನು ಮೊದಲು ನೋಡಿದ್ದು ಎಲ್ಲಿ? ಯಾವಾಗ? ಒಬ್ಬ ವ್ಯಕ್ತಿ ನಮಗೆ ತುಂಬ ಆಪ್ತರಾದಾಗ ಕಾಲ ದೇಶದ ಗಣನೆ ನಮ್ಮ ಕೈ ತಪ್ಪಿ ಹೋಗುತ್ತದೆ. ಹಳೆಯ ನೀನು, ಗೆಳೆಯ ನಾನು ಎಂಬಂಥ ಮಾತುಗಳು ಹುಟ್ಟುವುದೇ ಆಗ. ಅನಾದಿ ಕಾಲದಿಂದ ನಾನಿವರನ್ನು ಬಲ್ಲೆ ಎಂಬಂತಾಗಿ ಬಿಟ್ಟಿದೆ! ನಿಯಮಿತವಾಗಿ ನನ್ನೊಂದಿಗೆ ದೂರವಾಣಿ ಸಂಪರ್ಕದಲ್ಲಿ ಇರುವ ಗೆಳೆಯರು ಛಾಯಾಪತಿಯವರು. ನನ್ನ ಬಹುಪಾಲು ಗೆಳೆಯರಿಗೆ ನಾನು ಸಂಪರ್ಕಿಸಿದಾಗ ಮಾತ್ರ ಅನ್ಯೋನ್ಯ ಸಂಪರ್ಕ. ಸಂಬಂಧವು ಒಂದು ಏಕಮುಖಿ ಪ್ರವಾಹವೇ ಎಂದು ನಾನು ಅನೇಕ ವೇಳೆ ಅಚ್ಚರಿ ಪಟ್ಟಿದ್ದೇನೆ. ಕಾರಣವೇ ಇಲ್ಲದೆ ಛಾಯಾಪತಿಯವರ ದೂರವಾಣಿ ಮೊಳಗುತ್ತದೆ. ಅಥವ ನಾನು ಅವರಿಗೆ ದೂರವಾಣಿ ಮೂಲಕ ಸಂಪರ್ಕಿಸುತ್ತೇನೆ. ಯಾವ ಘನಂಧಾರಿ ರಾಜಕಾರಣವು ಅದಕ್ಕೆ ಗತ್ಯವಿಲ್ಲ. ಕೇವಲ ಒಂದು ಸದ್ಭಾವದ ವಿನಿಮಯಕ್ಕಾಗಿ ನಾವು ಆಗಾಗ ಮಾತಾಡುವುದುಂಟು. ವ್ಯಾವಹಾರಿಕತೆ ಹೆಚ್ಚಾಗುತ್ತಿರುವ ಆಧುನಿಕ ಸಂದರ್ಭದಲ್ಲಿ ಇದೊಂದು ಅಪರೂಪದ ವಿದ್ಯಮಾನವೇ ಸೈ. ಇವತ್ತು ಬೆಳಿಗ್ಗೆ ದೂರವಾಣಿ ಬಜಾಯಿಸುತ್ತಿದೆ. ಆಕಡೆಯಿಂದ ಛಾಯಾಪತಿಯವರ ಧ್ವನಿ. ಏನು ಸ್ವಾಮಿ? ಆರೋಗ್ಯವೇ? ಎಂದರೆ, ನಾನು ಆರೋಗ್ಯ, ನೀವು ಹೇಗಿದ್ದೀರಿ ಎಂಬ ಲೋಕಾಭಿರಾಮ ಶುರುವಾಗುತ್ತದೆ. ನಾನು ಮೈಸೂರಿನಿಂದ ಹೊರಟಿದ್ದೇನೆ. ನಿಮ್ಮನ್ನು ನೋಡಿಕೊಂಡು ಆಮೇಲೆ ಮಗಳ ಮನೆಗೆ ಹೋಗುತ್ತೇನೆ. ಹನ್ನೆರಡು ಮೂವತ್ತಕ್ಕೆ ನಿಮ್ಮಲ್ಲಿಗೆ ಬಂದು, ಐದು ನಿಮಿಷ ನಿಮ್ಮೊಂದಿಗೆ ಇರುತ್ತೇನೆ! ಆಗಬಹುದಷ್ಟೇ? ಇದು ಛಾಯಾಪತಿಯವರ ಶೈಲಿ. ಐದು - ಹತ್ತು ನಿಮಿಷ ತಡವಾಗುವುದಾದರೆ ಮತ್ತೆ ಅವರಿಂದ ದೂರವಾಣಿ. ಸ್ವಲ್ಪ ವಿಳಂಬವಾಗಿದೆ! ಹನ್ನೆರಡು ನಲವತ್ತಕ್ಕೆ ಬಂದರೆ ತೊಂದರೆ ಇಲ್ಲವಷ್ಟೆ?!

---

**ಎಚ್.ಎಸ್. ವೆಂಕಟೇಶಮೂರ್ತಿ**

---

ಇದೊಂದು ಬಗೆಯ ಡಿಸಿಪ್ಲೀನ್. ತಾವು ಯಾರನ್ನೂ ಕಾಯಿಸಬಾರದು. ಪ್ರತಿಯೊಬ್ಬರ ಕಾಲವು ಬೆಲೆಯುಳ್ಳದ್ದು. ಛಾಯಾಪತಿಯವರ ಈ ಬಗೆಯ ತಾತ್ವಿಕತೆ ನನಗೆ ತುಂಬ ಪ್ರಿಯವಾದುದು. ಶ್ರೀಯುತರ ಆರೋಗ್ಯ ತುಂಬಾ ಸೂಕ್ಷ್ಮವಾದುದರಿಂದ ಹೆಚ್ಚಾಗಿ ಅವರು ತಿಂಡಿ, ತೀರ್ಥ ಏನನ್ನು ತೆಗೆದುಕೊಳ್ಳುವುದಿಲ್ಲ. ತೆಗೆದುಕೊಂಡರು ನಮ್ಮ ಸಂಬಂಧಕ್ಕಾಗಿ ಕೇವಲ ಬಾಯಿಂಜಲು ಮಾಡುತ್ತಾರಷ್ಟೆ. ಕಾಫಿ ಬೇಡ ; ಟೀ ಬೇಡ. ಒಂದು ಗುಟುಕು ಕುಡಿದರು ಅದು ಸಕ್ಕರೆ ರಹಿತವಾದ ಸಪ್ಪೆ ಕಷಾಯ. ಇದು ತಮ್ಮ ಆರೋಗ್ಯದ ಬಗ್ಗೆ ಅವರು ವಹಿಸುವ ಎಚ್ಚರ. ಆದರೆ ಬೇರೆಯವರಿಗೆ ಆತಿಥ್ಯಮಾಡುವುದರಲ್ಲಿ ಮಾತ್ರ ಛಾಯಾಪತಿ ದಂಪತಿಗಳದ್ದು ಅತಿ ಧಾರಾಳ. ನೀವು ಮೈಸೂರಿಗೆ ಬರುತ್ತಿದ್ದೀರೆಂದು ತಿಳಿಯಿತು. ನಿಮಗಾಗಿ ನಮ್ಮಾಕೆ ಮಸಾಲೆದೋಸೆ ಮಾಡುತ್ತಿದ್ದಾರೆ! ನಮ್ಮಲ್ಲೆ ನಾಳೆ ನಿಮ್ಮ ಬ್ರೇಕ್‌ಫಾಸ್ಟ್ ಆಗಬೇಕು. ನಿಮಗೆ ಅಡ್ಡಿ ಇಲ್ಲವಷ್ಟೆ?

ಕರೆದು ಔತಣ ಮಾಡುತ್ತೇವೆಂದರೆ ಯಾವ ಅಡ್ಡಿ ಹೇಳಿ? ನನಗೆ ನೆನಪಿದೆ. ಡಾ. ಜಿ.ಎಸ್.ಎಸ್. ಮತ್ತು ನಾನು ಛಾಯಾಪತಿಯವರ ಮನೆಯಲ್ಲಿ ಒಟ್ಟಿಗೆ ದೋಸೆ ಸವಿದದ್ದು, ಮೃದು, ಮುರಿಮುರಿ, ಗಮ್ ಎನ್ನುವ ಕಂಪು. ಅದ್ಭುತವಾಗಿದೆ ಎಂದು ಹಿರಿಯ ಕವಿಗಳು ಉದ್ಗಾರ ತೆಗೆದದ್ದು ನೆನಪಿನಲ್ಲಿದೆ! ನಮಗೆ ಕಂಪನಿಕೊಡಲು ಛಾಯಾಪತಿಯವರ ಅನೇಕ ಆಪ್ತರು ಆ ದಿನ ಉಪಹಾರಕ್ಕೆ ಬಂದಿದ್ದರು. ನಾಗಣ್ಣ, ತಾರಾನಾಥ್ ಆ ದಿನ ಬಂದಿದ್ದರು ಎಂಬುದು ಸ್ಥೂಲ ನೆನಪು.

ನನ್ನ ಬಹುಪಾಲು ಪುಸ್ತಕಗಳನ್ನು ಛಾಯಾಪತಿ ತಮ್ಮ ಪ್ರತಿಷ್ಠಿತ ತ.ವೆಂ. ಸ್ಮಾರಕ ಗ್ರಂಥಮಾಲೆಯ ಮೂಲಕ ಪ್ರಕಟಿಸಿದ್ದಾರೆ. ಇಂಥ ದಿನ ಇಷ್ಟು ಹೊತ್ತಿಗೆ ಬಂದು ತಮಗೆ ಗೌರವಾರ್ಪಣೆ ಮಾಡುತ್ತೇವೆ ಸ್ವಾಮಿ ಎಂಬುದಾಗಿ ಅವರ ದೂರವಾಣಿ ಹೇಳಿರುತ್ತದೆ. ಸರಿಯಾಗಿ ಆ ಸಮಯಕ್ಕೆ ನೀಳ ಶರೀರಿಯಾದ ಛಾಯಾಪತಿ ನಮ್ಮ ಮನೆಯ ಬಾಗಿಲ ಮುಂದೆ ಪ್ರತ್ಯಕ್ಷರಾಗುತ್ತಾರೆ! ಮತ್ತೆ ಹತ್ತೆ ನಿಮಿಷ ವ್ಯವಹಾರ ಮುಗಿಸಿ, ನಮ್ಮಗೆ ಇನ್ನೂ ಅಪ್ಪಣೆ ಕೊಡಿ ಕವಿಗಳೇ ಎನ್ನುತ್ತ ಅವರು ನಿರ್ಗಮಿಸಿರೆಂಬೇ ಲೆಕ್ಕ. ಈ ಕ್ಲುಪ್ತತೆ ಛಾಯಾಪತಿಯವರದ್ದೆ ಟ್ರೇಡ್ ಮಾರ್ಕ್.

ನಾನು ಸಾಹಿತ್ಯ ಅಕಾಡೆಮಿ ಅಧ್ಯಕ್ಷನಾಗುತ್ತೇನೆಂದು ಯಾವುದೋ ಪತ್ರಿಕೆಯಲ್ಲಿ ಗಾಳಿ ಸುದ್ದಿ ಪ್ರಕಟವಾಗಿತ್ತಂತೆ. ತಕ್ಷಣ ಛಾಯಾಪತಿಯವರ ಫೋನ್. ಬಹಳ ಸಂತೋಷವಾಯಿತು. ನೀವು ಅಧ್ಯಕ್ಷರು ಆಗಬೇಕು. ನಾನು ಅವರ ಉತ್ಸಾಹವನ್ನು ತುಂಬಾಸಾರಿ ಕಡಿತಗೊಳಿಸುತ್ತೇನೆ. ಗಾಳಿ ಮಾತೆಲ್ಲ ನೀವು ನಂಬಬೇಡಿ. ನನಗೆ ಮಾಡಬೇಕಾದ ಸ್ವಂತ ಕೆಲಸಗಳೇ ಬೇಕಾದಷ್ಟಿವೆ. ಯಾರಾದರೂ ಕರೆವರು ನಾನು

ಒಪ್ಪಿಕೊಳ್ಳಲಿಕ್ಕಿಲ್ಲ! ಹೀಗೆಂದರೆ ಹೇಗೆ ಸ್ವಾಮಿ? ಎಂದು ಅಸ್ಪುವಾಗ ಛಾಯಾಪತಿಯವರ ಧ್ವನಿಯಲ್ಲಿ ಒಂದು ಎಳೆ ಸಣ್ಣನೋವು.

ನಿಮ್ಮ ಎಲ್ಲಾ ಪುಸ್ತಕಗಳನ್ನು ನಮಗೆ ಕೊಡಿ. ಹೀಗೆ ಛಾಯಾಪತಿ ಯಾವಾಗಲು ಹೇಳುತ್ತಿರುತ್ತಾರೆ. ನನ್ನ ಬರವಣಿಗೆ ಬಗ್ಗೆ ಅದೆಷ್ಟು ಅಭಿಮಾನವೋ ಅವರಿಗೆ. ನನ್ನ ಎಲ್ಲಾ ಪುಸ್ತಕ ಅವರಿಗೆ ಕೊಡುವುದು ಅಭಿಮಾನದ ವಿಷಯವೇ. ಆದರೆ ನನ್ನ ಬೇರೆ ಕೆಲವರು ಪ್ರಕಾಶಕ ಮಿತ್ರರು ಇದ್ದಾರೆ. ಅದು ಬಹು ವರ್ಷಗಳಿಂದ ನಡೆದು ಬಂದ ಸಂಬಂಧ. ಬೇಸರ ಪಟ್ಟುಕೊಳ್ಳಬೇಡಿ. ನಿಮಗೆ ಯಾವುದಾದರು ಕೃತಿ ನಾನು ಕೊಡುತ್ತಲೇ ಇರುತ್ತೇನೆ. ಛಾಯಾಪತಿ ತೆಳ್ಳಗೆ ನಗುತ್ತಾರೆ. ಆಯಿತು ಸ್ವಾಮಿ.... ಒಟ್ಟಿನಲ್ಲಿ ನಮ್ಮ ನಿಮ್ಮ ಸಂಬಂಧ ಮಾತ್ರ ಹೀಗೆ ಮುಂದುವರೆಯಬೇಕು. ಛಾಯಾಪತಿಯವರು ಮಾತ್ರವಲ್ಲ ಅವರ ಪತ್ನಿ, ಮಗಳು ಸಹ ನನ್ನ ಅಮ್ಮ ಸೊಸೆಯರಿಗೆ ಬೇಕಾದವರು. ಅವರು ಬಂದರೆ ಅದೇನೊ ಸಂಭ್ರಮವೊ? ಮೈಸೂರಲ್ಲಿ ಛಾಯಾಪತಿಯವರ ಮಗನ ಮದುವೆ ಆದಾಗ, ನಾನು ಮತ್ತು ನನ್ನ ಸೊಸೆ ಮೈಸೂರಿಗೆ ಹೋಗಿ ಬಂದೆವು, ಈ ವಯಸ್ಸಲ್ಲಿ ಪ್ರಯಾಣ ಶ್ರಮಸಾಧ್ಯವೆಂದು ಗೊತ್ತಿದ್ದೂ. ಹಾಗೇ ನಮ್ಮ ಮನೆಯ ಕಾರ್ಯಕ್ರಮಕ್ಕೆ ಅಭಿಮಾನದಿಂದ ಛಾಯಾಪತಿ ದಂಪತಿ ಬಂದಿದ್ದಾರೆ. ಕೆಲವೊಮ್ಮೆ ಅವರ ಸುಪುತ್ರಿಯನ್ನೂ ಜೊತೆ ಮಾಡಿಕೊಂಡು.

ಯಾವ ಸಂಬಂಧವೂ ವ್ಯವಹಾರದ ನೆಲೆಯಲ್ಲೇ ಉಳಿಯಬಾರದು. ವ್ಯವಹಾರ ದಿಂದ ಶುರುವಾಗುವ ಸಂಬಂಧ ವ್ಯವಹಾರಾತೀತವಾಗಿ ಕುಟುಂಬಗಳನ್ನು ಅವರಿಸಿ ನಿಲ್ಲಬೇಕು. ಅಂತಹ ಸಂಬಂಧದ ಬಗ್ಗೆ ನನಗೆ ವಿಶೇಷ ಮೆಚ್ಚುಗೆ. ನಮ್ಮೆರೆಡು ಕುಟುಂಬಗಳ ಸಂಬಂಧ ಹೀಗೆ ವ್ಯವಹಾರಿಕತೆಯ ಹಂಗಿಲ್ಲದ ಸದ್ಭಾವ ಸಂಬಂಧ ಎಂಬುದು ತೃಪ್ತಿಯಿಂದ ನಮೂದಿಸಬೇಕಾದ ವಿಷಯ.

ಆರೋಗ್ಯ ಎಂಬುದು ದೇಹಕ್ಕೆ ಸಂಬಂಧಿಸಿದ್ದೆಂದೆ ನಮ್ಮ ಸಾಮಾನ್ಯ ತಿಳುವಳಿಕೆ. ಆರೋಗ್ಯ ದೇಹಕ್ಕಿಂತ ಹೆಚ್ಚಾಗಿ ಮನಸ್ಸಿಗೆ ಸಂಬಂಧಿಸಿದ್ದು. ಆ ದೃಷ್ಟಿಯಿಂದ ಛಾಯಾಪತಿ ಆರೋಗ್ಯವಂತರು. ಅಂಥ ಆರೋಗ್ಯ ನನಗೂ ಲಭಿಸಲೆಂದು ನನ್ನ ಮನದಾಳದ ಬಯಕೆ.

# ವೈಶ್ವಾನರ ಛಾಯಾಪತಿ ಉಘೇ!

ಹಿಂದು ಧರ್ಮದಲ್ಲಿ ಅಗ್ನಿಯ ಸ್ಥಾನ ಹಿರಿದು. ಆತ ನಾವು ಯಜ್ಞಯಾಗಾದಿಗಳಲ್ಲಿ ಅರ್ಪಿಸುವ ಹವಿಸ್ಸನ್ನು ದೇವತೆಗಳಿಗೆ ತಲುಪಿಸುವನಂತೆ. ಪುಸ್ತಕ ಪ್ರಕಾಶಕರೂ ಸಹ ಅಗ್ನಿಯ ಹಾಗೆ. ಲೇಖಕರು ಬರೆದ ಅತ್ಯುತ್ತಮ ಕೃತಿಗಳನ್ನು ನಾಡಿನ ಎಲ್ಲ ಸಹೃದಯರಿಗೆ ತಲುಪಿಸುವ ವೈಶ್ವಾನರರು. ಈ ವೈಶ್ವಾನರರು ಇರದಿದ್ದಲ್ಲಿ ಕವಿ ಸಾಹಿತಿಗಳ ಹವಿಸ್ಸು ಅವರಲ್ಲೇ ಶಾಶ್ವತವಾಗಿ ಉಳಿದುಹೋಗುತ್ತಿತ್ತೇನೋ! ಪಾಠಕ ದೇವಾನುದೇವತೆಗಳು ಪಾಠನ ಹವಿಸ್ಸಿಲ್ಲದೇ ಕೃಶರಾಗಿ ಹೋಗುತ್ತಿದ್ದರೇನೋ! ಹೋಮೋ ಸೆಪಿಯನ್ಸ್, ಸೆಪಿಯನ್ಸ್ ಆಗಲು ಬಹಳ ಕಷ್ಟವಾಗುತ್ತಿತ್ತು! ತಳುಕಿನ ಶಾಮರಾಯ ಛಾಯಾಪತಿ ಯವರು ಯಾವುದೇ ಭಾಷೆಯ ಜನರು ಹೆಮ್ಮೆ ಪಡಬಹುದಾದಂತಹ ಪುಸ್ತಕ ಪ್ರಕಾಶಕರು! ಇವರು ಕನ್ನಡನಾಡಿನಲ್ಲಿಯೇ ತಮ್ಮ ವೃತ್ತಿ - ಪ್ರವೃತ್ತಿಗಳೆರಡನ್ನು ತಮ್ಮ ಪುಸ್ತಕ ಪ್ರಕಾಶನದಲ್ಲಿಯೇ ಕಂಡುಕೊಂಡು ಬರುತ್ತಿರುವುದು ಕನ್ನಡಿಗರ ಸುದೈವ!

ಛಾಯಾಪತಿಯವರು ತಳುಕಿನ ಮನೆತನಕ್ಕೆ ಸೇರಿದವರು. ತ.ಸು. ಶಾಮರಾಯರ ದ್ವಿತೀಯ ಪುತ್ರರು. ಕನ್ನಡಿಗರು ಛಾಯಾಪತಿಯವರನ್ನು ಗೌರವಿಸಲು ಈ ಎರಡು ಅರ್ಹತೆಗಳೇ ಸಾಕು!

ಆಧುನಿಕ ಕನ್ನಡ ಸಾಹಿತ್ಯವು ಸರ್ವತೋಮುಖಿ ಶ್ರೀಮಂತಿಕೆಯನ್ನು ಗಳಿಸಿ, ಭಾರತದ ಇತರ ಸೋದರ ಭಾಷೆಗಳ ನಡುವೆ ಏಕಮೇವಾದ್ವಿತೀಯವಾಗಿ ಮೆರೆಯಲು ತಳುಕಿನ ಮನೆತನದ ಕೊಡುಗೆ ಅಪಾರ. ತಳುಕಿನ ಸುಬ್ಬಣ್ಣ ವೆಂಕಣ್ಣಯ್ಯ, ತಳುಕಿನ ರಾಮಸ್ವಾಮಿ ಸುಬ್ಬರಾವ್ (ತರಾಸು) ಹಾಗೂ ತಳುಕಿನ ಸುಬ್ಬಣ್ಣ ಶಾಮರಾಯ ಇವರ ಪ್ರಸ್ತಾಪವಿಲ್ಲದೇ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ ಪೂರ್ಣಗೊಳ್ಳುವುದಿಲ್ಲ. ವೆಂಕಣ್ಣಯ್ಯನವರು ಬರೆದದ್ದು ಕಡಿಮೆಯಾದರೂ ವಿಶ್ವವಿಖ್ಯಾತ ಕೃತಿಗಳನ್ನು ಬರೆಯಬಲ್ಲಂತಹ ಶಿಷ್ಯ ಪರಂಪರೆಯಲ್ಲಿ ಹುಟ್ಟುಹಾಕಿದ ಮಹಾನುಭಾವರು. ಕನ್ನಡದ ಅಶ್ವಿನಿದೇವತೆಗಳಲ್ಲಿ ಒಬ್ಬರು. (ಮತ್ತೊಬ್ಬರು ಎ.ಆರ್. ಕೃಷ್ಣಶಾಸ್ತ್ರಿಯವರು) ಕುವೆಂಪು ತಮ್ಮ ಶ್ರೀ ರಾಮಾಯಣ ದರ್ಶನಂ ಮಹಾಕೃತಿಯನ್ನು ವೆಂಕಣ್ಣಯ್ಯನವರಿಗೆ

---

ಡಾ. ನಾ. ಸೋಮೇಶ್ವರ

---

ಅರ್ಪಿಸಿರುವುದೇ ಅವರ ಶ್ರೀಮಂತ ವ್ಯಕ್ತಿತ್ವಕ್ಕೆ ಸಾಕ್ಷಿ! ತರಾಸು ಕನ್ನಡ ನವ್ಯ ಚಳವಳಿಯ ಪ್ರವರ್ತಕರಲ್ಲಿ ಆದ್ಯರು! ದುರ್ಗಾಸ್ತಮಾನದಂತಹ ಮಹತ್ಕೃತಿಯನ್ನು ಕನ್ನಡಕ್ಕೆ ನೀಡಿದವರು! ಇನ್ನು ತ.ಸು. ಶಾಮರಾಯರು! ಶಿಷ್ಯರನ್ನು ತಮ್ಮ ಸ್ವಂತ ಮಕ್ಕಳಿಗಿಂತಲೂ ಹೆಚ್ಚಾಗಿ ಪ್ರೀತಿಯಿಂದ ಬೆಳೆಸಿದವರು. ಅವರ ಶಿಷ್ಯಕೋಟಿ ಅರ್ಪಿಸಿದ 'ಸ್ವಸ್ತಿ' ಅಭಿನಂದನಾ ಗ್ರಂಥವನ್ನು ಒಮ್ಮೆ ನೋಡಿದರೆ ಸಾಕು, ಅವರು ಎಂತಹ ಉತ್ತಮೋತ್ತಮ ಶಿಷ್ಯರನ್ನು ಕನ್ನಡಿಗರ ಮಡಿಲಿಗೆ ಹಾಕಿರುವರು ಎನ್ನುವುದು ಗೊತ್ತಾಗುತ್ತದೆ. ವೆಂಕಣ್ಣಯ್ಯ ಹಾಗೂ ಶಾಮರಾಯರು 'ಮಾನವೀಯತೆ'ಯ ಪ್ರತೀಕ. ತಮ್ಮ ಸ್ವಂತ ಕಷ್ಟ, ನಷ್ಟಗಳನ್ನು ಲೆಕ್ಕಿಸದೇ ಗೆಳೆಯರು, ಬಂಧುಗಳು, ಸಹೋದ್ಯೋಗಿಗಳು ಹಾಗೂ ವಿದ್ಯಾರ್ಥಿಗಳನ್ನು ನಡೆಸಿಕೊಂಡ ರೀತಿ ಅಸದೃಶ, ಅದ್ವಿತೀಯ! ಅನುಕರಣೀಯ!! ಇಂತಹ ಶ್ರೀಮಂತ ಸಾಂಸ್ಕೃತಿಕ ಮನೆತನದಲ್ಲಿ ಜನಿಸಿದ ಛಾಯಾಪತಿಯವರು ಹಿರಿಯರು ಹಾಕಿಕೊಟ್ಟ ಹಾದಿಯಲ್ಲಿ ನಡೆಯುತ್ತಿರುವುದು ಶ್ಲಾಘನೀಯ ವಿಚಾರ!

ತ.ಸು. ಶಾಮರಾಯರು ಅಧ್ಯಯನ - ಅಧ್ಯಾಪನಗಳ ಜೊತೆಯಲ್ಲಿ, ಎಲ್ಲ ಪಾಠಕ ದೇವರುಗಳಿಗೆ ಶುದ್ಧ ಕನ್ನಡ ಸಾಹಿತ್ಯ ಹವಿಸ್ಸನ್ನು ಅರ್ಪಿಸುವ ಏಕೈಕ ಉದ್ದೇಶದಿಂದ ಪುಸ್ತಕ ಪ್ರಕಟಣೆಯ ಕೈಂಕರ್ಯವನ್ನು ಆರಂಭಿಸಿದುದು ನಮ್ಮ ಪುಣ್ಯ. 1950ರಲ್ಲಿ ಅವರು ತಮ್ಮ ಅಣ್ಣ ಹಾಗೂ ಗುರುವಿನ ಹೆಸರಲ್ಲಿ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ'ಯನ್ನು ಹುಟ್ಟು ಹಾಕುತ್ತಾರೆ. ಈಗ ಗ್ರಂಥಮಾಲೆಗೆ 64 ವರ್ಷಗಳ ತುಂಬು ವಯಸ್ಸು! ಕನ್ನಡನಾಡಿನಲ್ಲಿ ಇಷ್ಟು ಸುದೀರ್ಘವಾಗಿ ಕನ್ನಡ ಕೃತಿಗಳನ್ನು ಪ್ರಕಟಿಸಿ ಕೊಂಡು ಬರುತ್ತಿರುವ ಮಾಲೆ ಯಾವುದಾದರೂ ಇದೆಯೆ ಎಂದು ಯೋಚಿಸಿದರೆ, ಥಟ್ ಅಂತ ನನಗೆ ಹೊಳೆಯುತ್ತಿರುವುದು ಮನೋಹರ ಗ್ರಂಥಮಾಲೆ ಮಾತ್ರ! ಈ 64 ವರ್ಷದ ಸಾಹಿತ್ಯಯಾನದಲ್ಲಿ 46 ವರ್ಷಗಳ ಕಾಲ ಪುಸ್ತಕ ಪ್ರಕಟಣೆಯನ್ನು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿರುವುದು ಛಾಯಾಪತಿಯವರ ಪೂರ್ವಜನ್ಮದ ಸುಕೃತ ಹಾಗೂ ಹಿರಿಯರ ಆಶೀರ್ವಾದ! ಛಾಯಾಪತಿಯವರು 70ರ ಹರಯಕ್ಕೆ ಕಾಲಿಡುತ್ತಿರುವ ಈ ಕ್ಷಣದಲ್ಲಿ ಪ್ರಕಾಶಕರಾಗಿ ಹಾಗೂ ಲೇಖಕರಾಗಿ ಅವರ ಸಾಧನೆಯನ್ನು ತುಸು ಗಮನಿಸುವುದು ಒಳ್ಳೆಯದು.

* ಛಾಯಾಪತಿಯವರು ಇದುವರೆಗು ಸುಮಾರು 1500 ಪುಸ್ತಕಗಳನ್ನು ಪ್ರಕಟಿಸಿರುವರು.
* ಇವರ ಪ್ರಕಾಶನದಡಿಯಲ್ಲಿ ಕನ್ನಡ ಸಾಹಿತ್ಯ ಎಲ್ಲ ಮೇರು ಪರ್ವತ ಸದೃಶ ಸಾಹಿತಿಗಳು ತಮ್ಮ ಒಂದಲ್ಲ ಒಂದು ಕೃತಿಯನ್ನು ಪ್ರಕಟಿಸಿರುವರು. ಟಿ.ಎಸ್. ವೆಂಕಣ್ಣಯ್ಯ, ಡಿ.ಎಲ್. ನರಸಿಂಹಾಚಾರ್, ತ.ಸು. ಶಾಮರಾಯ, ದೇ. ಜವರೇಗೌಡ, ಎಚ್ಚೆಸ್ಕೆ, ಹಾ.ಮಾ. ನಾಯಕ, ಜಿ.ಎಸ್. ಶಿವರುದ್ರಪ್ಪ,

ಚೆನ್ನವೀರಕಣವಿ, ಟಿ.ವಿ. ವೆಂಕಟಾಚಲಶಾಸ್ತ್ರಿ, ಸಿಪಿಕೆ, ನಿಸಾರ್ ಅಹಮದ್, ಮತ್ತೂರು ಕೃಷ್ಣಮೂರ್ತಿ, ಚಂಪಾ, ಎಚ್.ಎಸ್.ವಿ., ಬಿ.ಆರ್. ಲಕ್ಷ್ಮಣರಾವ್, ಎಚ್.ಜೆ. ಲಕ್ಕಪ್ಪಗೌಡ, ಮಲ್ಲೇಪುರಂ ಜಿ. ವೆಂಕಟೇಶ ಮುಂತಾದವರು ಮುಖ್ಯರು.

* ಕಥೆ, ಕಾವ್ಯ, ಕಾದಂಬರಿ, ವಿಮರ್ಶೆ, ನಾಟಕ, ಪ್ರವಾಸ ಕಥನ, ಜೀವನ ಚರಿತ್ರೆ, ಅಂಕಣ, ವಿಜ್ಞಾನ, ವೈದ್ಯಕೀಯ, ಸಂಶೋಧನೆ, ಅಭಿನಂದನಾ ಗ್ರಂಥ ಹೀಗೆ ಹತ್ತು ಹಲವು ಪ್ರಕಾರಗಳಲ್ಲಿ ಕೃತಿಗಳನ್ನು ಪ್ರಕಟಿಸಿರುವುದು ಗಣನೀಯ ಹಾಗೂ ಗಮನೀಯ.
* ಕನ್ನಡ ಸಾಹಿತ ಚರಿತ್ರೆ, ಶಬ್ದಮಣಿದರ್ಪಣಂ, ಬಸವರಾಜದೇವ ರಗಳೆ, ಜಾನಪದ ಸ್ವರೂಪ, ಸೌಂದರ್ಯ ಸಮೀಕ್ಷೆ, ಮೂರು ತಲೆಮಾರು, ಸ್ವಸ್ತಿಯಂತಹ ಸಾರ್ವಕಾಲಿಕ ಶ್ರೇಷ್ಠ ಕೃತಿಗಳು ಪ್ರಕಟವಾಗಿವೆ.
* ಶಾಶ್ವತವೆನಿಸುವಂತಹ ಕೃತಿಗಳನ್ನು ಪ್ರಕಟಿಸಿ ಆದರೆ ಅವು ಶಾಶ್ವತವಾಗಿ ಪ್ರಕಾಶಕರಲ್ಲಿ ಉಳಿಯವೆ, ಬೆಳೆದ ಮಗಳನ್ನು ಸಕಾಲದಲ್ಲಿ ಗಂಡನ ಮನೆಗೆ ಕಳುಹಿಸುವಂತೆ, ಉತ್ತಮ ಕೃತಿಗಳನ್ನು ಓದುಗರ ಮನೆ ಮುಟ್ಟಿಸುವುದು ಛಾಯಾಪತಿಯವರ ವಿಶೇಷ. ಹಾಗಾಗಿ ಅವರು ಪ್ರಕಟಿಸುವ ಹಲವು ಕೃತಿಗಳು 5-10ಬಾರಿ ಪುನರ್ಮುದ್ರಣವಾಗಿವೆ.
* ಸಾವಿರ ಪುಟಗಳ ಐದು ಗ್ರಂಥಗಳನ್ನು ಒಟ್ಟಿಗೆ ಪ್ರಕಟಿಸಿ 'ಸಾವಿರ ಪುಟಗಳ ಸರದಾರ' ಹಾಗೂ 'ಸಾವಿರ ಪುಸ್ತಕಗಳ ಸರದಾರ' ಎಂಬ ಅಭಿದಾನಕ್ಕೆ ಪಾತ್ರರಾಗಿರುವುದು ಪ್ರಕಾಶನ ಮಾಧ್ಯಮಕ್ಕೆ ಅವರ ಬದ್ಧತೆಯನ್ನು ತೋರಿಸುತ್ತದೆ.
* ಛಾಯಾಪತಿಯವರು 23 ಪುಸ್ತಕಗಳನ್ನು ಬರೆದಿರುವರು. ಈ ಪುಸ್ತಕಗಳ ಬಗ್ಗೆ ಕುವೆಂಪು, ತರಾಸು, ಪುತಿನ, ಗೊರೂರು, ಚದುರಂಗ, ಚೆನ್ನವೀರಕಣವಿ, ಜಿ.ಎಸ್.ಎಸ್., ಹಂಪನಾ, ಹಾಮಾ ನಾಯಕ, ನಿಸಾರ್ ಅಹಮದ್, ಯು.ಆರ್. ಅನಂತಮೂರ್ತಿ, ಮುಂತಾದ ಹಿರಿಯರು ಮುಕ್ತ ಕಂಠದಿಂದ ಹೊಗಳಿರುವುದು ಪುಸ್ತಕಗಳ ಗುಣಮಟ್ಟವನ್ನು ಹಾಗೂ ವಿಷಯ ಅನನ್ಯತೆಯನ್ನು ಎತ್ತಿ ತೋರುತ್ತದೆ.
* ತ.ಸು. ಶಾಮರಾಯರಿಗೆ ಪುಸ್ತಕ ಪ್ರಕಾಶನವು ಜೀವನಧರ್ಮವಾಗಿತ್ತು. ಛಾಯಾಪತಿಗಳಿಗೆ ಅದು ವೃತ್ತಿ, ಪ್ರವೃತ್ತಿ ಹಾಗೂ ಜೀವನಧರ್ಮಗಳೆಲ್ಲವೂ ಆಗಿವೆ. ಹಾಗಾಗಿಯೇ ಅವರು ಶ್ರೀಸಾಮಾನ್ಯರ ಕೈಗೆಟುಕುವ ಬೆಲೆಯಲ್ಲಿ ಪುಸ್ತಕ ಮಾರಾಟ ಮಾಡುತ್ತಿರುವರು.

* ಛಾಯಾಪತಿಯವರು ಮುದ್ರಣ ಹಾಗೂ ಪ್ರಕಾಶನ ಕ್ಷೇತ್ರದಲ್ಲಿ ಆಗುತ್ತಿರುವ ಹೊಸ ಸುಧಾರಣೆ ಹಾಗೂ ಬೆಳವಣಿಗೆಗಳನ್ನು ಸ್ವಾಗತಿಸಿ ಅವನ್ನು ತಮ್ಮ ಕೃತಿಗಳ ಮೂಲಕ ಪ್ರಯೋಗಕ್ಕೆ ತಂದಿರುವರು. ಅತ್ಯಂತ ಸುಂದರವಾದ ಹಾಗೂ ಅರ್ಥವತ್ತಾದ ಮುಖಪುಟ ಅವರ ಪ್ರಕಾಶನದ ಹೆಗ್ಗುರುತು. ಉತ್ತಮ ಕಾಗದ ಹಾಗೂ ಸುಂದರ ಮುದ್ರಣ ಅವರ ಹೆಗ್ಗಳಿಕೆ. ಉದಾಹರಣೆಗೆ ಇತ್ತೀಚೆಗೆ ಪ್ರಕಟವಾದ ಎಚ್.ಎಸ್.ವಿ. ಹಾಗೂ ಬಿ.ಆರ್.ಎಲ್. ಅವರ ಪುಸ್ತಕಗಳನ್ನು ನೋಡಬಹುದು.

ಛಾಯಾಪತಿ ಹಾಗೂ ನನ್ನ ನಂಟನ್ನು 'ಥಟ್ ಅಂತ ಹೇಳಿ' ಕಾರ್ಯಕ್ರಮವು ಬೆಸಿದಿದೆ. ಅವರ ಮನೆಮಂದಿಗೆಲ್ಲ ಕಾರ್ಯಕ್ರಮದ ಅಭಿಮಾನಿಗಳು. ಅವರೆಲ್ಲರಿಗೂ ನನ್ನ ಕೃತಜ್ಞತೆಗಳು. ಕನ್ನಡದಲ್ಲಿ ಈಗ ಪ್ರಕಾಶನ ಉದ್ಯಮ ಸಾಕಷ್ಟು ಸುಧಾರಿಸಿದೆ. ಆದರೆ ನೆರೆಯ ಕೇರಳ, ತಮಿಳುನಾಡು, ಮಹಾರಾಷ್ಟ್ರಗಳಿಗೆ ಹೋಲಿಸಿದರೆ ನಮ್ಮ ಉದ್ಯಮ ಇನ್ನೂ ಬೆಳೆಯಬೇಕಿದೆ. ಉತ್ತಮ ಕೃತಿಗಳಿಗೆ ಕನ್ನಡದಲ್ಲಿ ಬರವಿಲ್ಲ. ಎಂಟು ಜ್ಞಾನಪೀಠ ಪ್ರಶಸ್ತಿಗಳ ಜೊತೆಯಲ್ಲಿ ಮತ್ತೆ ಎಂಟು ಜ್ಞಾನಪೀಠ ಪ್ರಶಸ್ತಿಗಳಿಗಾದರೂ ಯೋಗ್ಯರಾಗಬಲ್ಲ ಲೇಖಕ ಮಾನ್ಯರು ಹಾಗೂ ಅವರ ಮೇರುಕೃತಿಗಳು ನಮ್ಮಲ್ಲಿವೆ. ಇತ್ತೀಚಿನ ದಿನಗಳಲ್ಲಿ ಅತ್ಯುತ್ತಮ ಗುಣಮಟ್ಟದ ಪುಸ್ತಕಗಳನ್ನು ಪ್ರಕಟಿಸಬಲ್ಲ ಪ್ರಕಾಶರಿಗೂ ಕೊರತೆಯಿಲ್ಲ. ಕೊರತೆ ಏನೇ ಇದ್ದರೂ ವ್ಯವಸ್ಥಿತ ಮಾರಾಟ ಜಾಲದ್ದು! ಈ ಅಂತರ್ಜಾಲ ಯುಗದಲ್ಲಿ ಮಾರಾಟಜಾಲ ಒಂದು ಸಮಸ್ಯೆ ಆಗಲೇಬಾರದು. ಆದರೆ ತಂತ್ರಜ್ಞಾನವನ್ನು ಸಮರ್ಪಕವಾಗಿ ಉಪಯೋಗಿಸಿಕೊಳ್ಳಬೇಕಾದ ಚಾಣಾಕ್ಷರು ಇಂದು ಬೇಕಾಗಿದೆ. ಛಾಯಾಪತಿಯವರು ಮತ್ತಷ್ಟು ಒಳ್ಳೆಯ ಕನ್ನಡ ಕೃತಿಗಳನ್ನು ಪ್ರಕಾಶಿಸಲಿ ಎಂದು ನಾವೆಲ್ಲ ಹಾರೈಸೋಣ. ಅವರಿಗೆ ಪ್ರಕಾಶನಕ್ಕಾಗಿ ಹಲವು ಪ್ರಶಸ್ತಿಗಳು ಬಂದಿವೆಯಾದರೂ, ಬರಬೇಕಾದ ಪ್ರಶಸ್ತಿಗಳ ಸಾಲು ಮತ್ತಷ್ಟು ಇದೆ ಎನ್ನಬೇಕಾಗಿದೆ. ಕನ್ನಡದಲ್ಲಿ ಜಡಭರತರನ್ನು ಬಿಟ್ಟರೆ ಉಳಿದ ಯಾವ ಪ್ರಕಾಶಕರಿಗೂ ಪದ್ಮಶ್ರೀ ಬಂದ ಹಾಗೆ ಕಾಣುವುದಿಲ್ಲ. ಛಾಯಾಪತಿಗಳಿಗೆ ಆ ಪ್ರಶಸ್ತಿ ಬರಲಿ ಎಂದು ನಾವು ಹಾರೈಸೋಣ.

# ಅನನ್ಯ ಸಾಹಿತ್ಯ ಪರಿಚಾರಕ

ಛಾಯಾಪತಿ ಅವರು ನಾನು ವೃತ್ತಿ ಸಂಬಂಧ ಮೈಸೂರಿನಲ್ಲಿ ಎರಡು ವರ್ಷ ಕಳೆದಿದ್ದ ದಿನಗಳಲ್ಲಿ ಸಂಪರ್ಕಕ್ಕೆ ಬಂದಿರಲಿಲ್ಲ. ಪತ್ರಿಕೆಯ ವರದಿಗಾರನಾಗಿ ಬೇರೆ ಬೇರೆ ನಗರಗಳಲ್ಲಿ ಕೆಲಸ ಮಾಡಿದ್ದರೂ ಆ ಭಾಗದ ಸಾಹಿತಿ ಕಲಾವಿದರ ಜೊತೆ ಮಧುರ ಬಾಂಧವ್ಯ ಉಳಿಸಿಕೊಳ್ಳುವ ಪ್ರವೃತ್ತಿಯ ನನಗೆ ಅದು ಹೇಗೆ ಅವರು ನನ್ನ ಮೈಸೂರು ವಾಸ್ತವ್ಯದ ದಿನಗಳಲ್ಲಿ ಪರಿಚಯವಾಗಲಿಲ್ಲವೋ. ಆದರೆ, ಬೆಂಗಳೂರಿನಲ್ಲಿ ನೆಲೆ ನಿಂತ ಮೇಲೆ ಅವರು ಪರಿಚಯವಾದಾಗ ಅವರು ಹೊಸಬರೆಂಬ ಭಾವವೇ ನನ್ನಲ್ಲಿ ಮೂಡಲಿಲ್ಲ. ದಶಕಗಳ ಹಿಂದಿನಿಂದಲೂ ಅವರು ನಿಕಟ ಬಾಂಧವ್ಯ ಇದ್ದವರಂತೆಯೇ ನನಗೆ ಕಂಡಿದ್ದಾರೆ. ಅವರ ಜೊತೆ ಸಂಬಂಧ ಲೇಖಕ - ಪ್ರಕಾಶಕರ ಮಧ್ಯೆ ಇರುವ ವ್ಯವಹಾರಿಕ ಸಂಬಂಧ ಎಂದು ನನಗೆ ಯಾವತ್ತೂ ಅನಿಸಿಲ್ಲ. ಅದಕ್ಕೆ ಮುಖ್ಯ ಕಾರಣ ಅವರ ಸಾರಸ್ವತ ವ್ಯಕ್ತಿತ್ವ; ಬದುಕು ಮತ್ತು ಸಾಹಿತ್ಯವನ್ನು ಅವಿನಾಭಾವದಿಂದ ನೋಡುವ ಅವರ ಸುಸಂಸ್ಕೃತ ಜೀವನ ದೃಷ್ಟಿ.

ನಾಡಿನ ಪ್ರತಿಷ್ಠಿತ ಸಾರಸ್ವತ ಕುಟುಂಬಕ್ಕೆ ಸೇರಿದ ಛಾಯಾಪತಿ ಅವರು ಪುಸ್ತಕೋದ್ಯಮದ ದುರ್ಗಮ ಹಾದಿಯನ್ನು ಹಿಡಿದರು. ದೊಡ್ಡಪ್ಪ ಪ್ರಾಧ್ಯಾಪಕ ಟಿ.ಎಸ್. ವೆಂಕಣ್ಣಯ್ಯನವರಂತೆ, ತಂದೆ ತ.ಸು. ಶಾಮರಾಯರಂತೆ, ಅಣ್ಣ ಪ್ರಾಧ್ಯಾಪಕ ವೆಂಕಣ್ಣಯ್ಯನವರಂತೆ ಉಪನ್ಯಾಸಕ ವೃತ್ತಿಯನ್ನು ಹಿಡಿಯಲಿಲ್ಲ. ಪುಸ್ತಕ ಪ್ರೀತಿಯನ್ನು ನಾಡಿನಲ್ಲಿ ಬಿತ್ತುವ ಪರಿಚಾರಕ ಮಾರ್ಗವನ್ನು ಹಿಡಿದರು. ಸದಭಿರುಚಿಯ ಪುಸ್ತಕ ಪ್ರಕಟಣೆಗಳ ಮೂಲಕ ಜ್ಞಾನ ಪ್ರಸಾರಕ್ಕೆ ಮುಂದಾದರು. ಇದು ಈ ಕುಟುಂಬದ ಹಿರಿಯರು ಹಾಕಿಕೊಟ್ಟ ಶ್ರೇಷ್ಠ ಪರಂಪರೆಯ ಮುಂದುವರಿಕೆ. ಅದರಲ್ಲಿಯೇ ಸಾರ್ಥಕತೆಯನ್ನು ಕಂಡಿರುವ ಛಾಯಾಪತಿ ಅವರದು ಅನನ್ಯವಾದ ಸಾಹಿತ್ಯ ಪರಿಚಾರಿಕೆ.

ನನ್ನ ಪರಿಚಯಕ್ಕೆ ಬಂದ ಒಂದೆರಡು ತಿಂಗಳಲ್ಲಿಯೇ ಅವರ ಸಾಹಿತ್ಯ ಪರಿಚಾರಿಕೆಯ ಸ್ವಭಾವ ನನ್ನ ಅನುಭವಕ್ಕೆ ಬಂದಿತು. ದೂರವಾಣಿ ಸಂಪರ್ಕದಲ್ಲಿನ ನಮ್ಮ ಮಾತುಕತೆಗಳಲ್ಲಿ ನನ್ನ ಅವಶ್ಯಕತೆಗಳನ್ನು ಅರಿತಿದ್ದ ಅವರು ಮುಂದಿನ

**ಲಕ್ಷ್ಮಣ ಕೊಡಸೆ**

ಭೇಟಿಯಲ್ಲಿಯೇ ನನಗೆ ಬೇಕಾಗಿದ್ದ ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಮಾಲಿಕೆಯ ಅನೇಕ ಪುಸ್ತಕಗಳನ್ನು ನನಗೆ ಒದಗಿಸಿದರು. ಪತ್ರಿಕೆಯ ಸಾಪ್ತಾಹಿಕ ಪುರವಣಿಯ ಮುಖ್ಯಸ್ಥನಾಗಿ ಅವರ ಪ್ರಕಟಣೆಯ ಕೆಲವು ಮಹತ್ವದ ಪುಸ್ತಕಗಳನ್ನು ಪುರವಣಿಯಲ್ಲಿ ಪರಿಚಯಿಸಿದ ಸಣ್ಣ ಮಟ್ಟದ ಸೇವೆಗಾಗಿ ಅವರು ನನ್ನ ಅನೇಕ ಕೃತಿಗಳನ್ನು ಪ್ರಕಟಿಸುವ ಔದಾರ್ಯ ತೋರಿದರು. ಅಷ್ಟೇ ಅಲ್ಲದೆ, ಲೇಖಕನಿಗೆ ಪ್ರಕಾಶಕರಿಂದ ಸಿಗಬಹುದಾದ ಪರಮಾವಧಿ ಗೌರವವನ್ನೂ ನೀಡಿದ್ದಲ್ಲದೆ ತಮ್ಮ ಆಪ್ತ ವಲಯದಲ್ಲಿ ನನ್ನನ್ನು ಸೇರಿಸಿಕೊಂಡು ಬಿಟ್ಟರು. ಛಾಯಾಪತಿ ಅವರದು ಸಹೃದಯ ಶ್ರೀಮಂತಿಕೆ. ವ್ಯಾವಹಾರಿಕ ನೆಲೆಯ ಪುಸ್ತಕೋದ್ಯಮದಲ್ಲಿ ಅಪರೂಪವಾದ ಸಜ್ಜನಿಕೆ.

ಪುಸ್ತಕೋದ್ಯಮದಲ್ಲಿ ಐದು ದಶಕಗಳಿಂದ ತೊಡಗಿಸಿಕೊಂಡಿರುವ ಛಾಯಾಪತಿ ಅವರು ಈವರೆಗೆ ಒಂದೂವರೆ ಸಾವಿರಕ್ಕೂ ಹೆಚ್ಚಿನ ಸಂಖ್ಯೆಯ ಪುಸ್ತಕಗಳನ್ನು ಪ್ರಕಟಿಸಿರುವುದು ಅವರ ಸಾಹಸಪ್ರಿಯತೆಗೆ ನಿದರ್ಶನ. ಮುದ್ರಣ ತಾಂತ್ರಿಕತೆ ಈಗಿನಷ್ಟು ಆಧುನಿಕ ಆಗಿರದ ದಿನಗಳಲ್ಲಿಯೂ ಅಚ್ಚುಕಟ್ಟಾಗಿ ಪುಸ್ತಕಗಳನ್ನು ಹೊರತರುತ್ತಿದ್ದ ಅವರು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಗೆ ತನ್ನದೇ ಆದ ವಿಶಿಷ್ಟ ಗುಣಮಟ್ಟದ ಛಾಪನ್ನು ಒದಗಿಸಿದ್ದನ್ನು ಗಮನಿಸಬೇಕು. ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಪುಸ್ತಕಗಳು ಎಂದರೆ ಅವು ಸಮಾಜೋಪಯೋಗಿ, ಸದಭಿರುಚಿಯ ಪುಸ್ತಕಗಳೆಂದೇ ಅರ್ಥ. ಪ್ರಕಾಶನದ ಹೆಸರಿನಿಂದಲೇ ಪುಸ್ತಕಗಳಿಗೆ ಮಾರುಕಟ್ಟೆಯನ್ನು ಸೃಷ್ಟಿಸಿಕೊಳ್ಳುವ ಸಾರಸ್ವತ ಕೌಶಲ್ಯಕ್ಕೆ ತಮ್ಮನ್ನು ಮುಡಿಪಾಗಿಟ್ಟಿದ್ದಾರೆ ಛಾಯಾಪತಿ.

ಮುದ್ರಣ ತಾಂತ್ರಿಕತೆ ಈಗ ತುಂಬ ಮುಂದುವರಿದಿದೆ. ಕಂಪ್ಯೂಟರ್ ಬಳಕೆಯಿಂದ ಮೊಳೆ ಜೋಡಿಸುವ ಕೆಲಸ ವಿಭಿನ್ನ ಸ್ವರೂಪದಲ್ಲಿದೆ. ಪುಟಗಳ ವಿನ್ಯಾಸ ಮೊದಲಿಗಿಂತ ಹೆಚ್ಚು ಕಲಾತ್ಮಕವಾಗಿದೆ. ಮುಖಪುಟದ ವಿನ್ಯಾಸಕ್ಕೆ ಕಂಪ್ಯೂಟರ್ ತಾಂತ್ರಿಕತೆಯ ಪರಿಕರಣಗಳು ಉಪಯುಕ್ತವಾಗಿವೆ. ತಾಂತ್ರಿಕತೆಯಲ್ಲಿ ಎಷ್ಟು ಮುನ್ನಡೆ ಆಗಿದ್ದರೂ ಸಾಹಿತ್ಯದ ಸತ್ವ ಮತ್ತು ಸ್ವರೂಪಗಳು ಎಂದಿನಂತೆಯೇ ಉಳಿದಿವೆ. ಗುಣಮಟ್ಟದಲ್ಲಿ ಶ್ರೇಷ್ಠತೆಯನ್ನು ಉಳಿಸಿಕೊಳ್ಳದಿದ್ದರೆ ಎಷ್ಟು ಮುಂದುವರಿದ ತಾಂತ್ರಿಕತೆಯೂ ಪ್ರಯೋಜನಕ್ಕೆ ಬರುವುದಿಲ್ಲ. ಛಾಯಾಪತಿ ಅವರದು ಗುಣಮಟ್ಟಕ್ಕೆ ಆದ್ಯತೆ ಇರುವ ಮುದ್ರಣ ತಾಂತ್ರಿಕತೆ. ಆದ್ದರಿಂದಲೆ ಅವರ ಎಲ್ಲ ಪ್ರಕಟಣೆಗಳಲ್ಲಿಯೂ ಗುಣಮಟ್ಟದ ಛಾಪು ಎದ್ದು ಕಾಣುತ್ತದೆ. ಪುಟಗಳ ವಿನ್ಯಾಸದಿಂದ ಹಿಡಿದು, ಕರಡಚ್ಚು ನೋಡುವವರೆಗೆ, ಪುಸ್ತಕದ ಒಳಗಿನ ಹೂರಣವನ್ನು ಅರ್ಥಪೂರ್ಣವಾಗಿ ಬಿಂಬಿಸುವ ಚಿತ್ರವನ್ನು ಮುಖಪುಟದಲ್ಲಿ ಬಿಂಬಿಸುವವರೆಗೆ ಅವರ ಪರಿಶ್ರಮ ಎದ್ದು ತೋರುತ್ತದೆ.

ಛಾಯಾಪತಿ ಅವರು ಪ್ರಕಾಶನ ಕ್ಷೇತ್ರಕ್ಕೆ ಕಾಲಿರಿಸಿದ ದಿನಗಳಿಂದ ಇಂದಿನವರೆಗೂ ಒಂದು ಅಂಶ ಸಾಮಾನ್ಯವಾಗಿ ಉಳಿದುಕೊಂಡಿದೆ. ಅದು ಉತ್ತಮ ಪುಸ್ತಕಗಳನ್ನು ಕೊಂಡುಕೊಳ್ಳುವುದರಲ್ಲಿ ಕನ್ನಡ ಓದುಗರ ಕೃಪಣತೆ. ಉಚಿತವಾಗಿ ಗೌರವ ಪ್ರತಿ ಸಿಕ್ಕಿದರೆ ಮಾತ್ರ ಓದುವುದಾಗಿ ಹೆಚ್ಚಿನ ಸಂಖ್ಯೆಯ ಸಾಹಿತ್ಯಾಸಕ್ತರು ವೀರ ಪ್ರತಿಜ್ಞೆ ಮಾಡಿದ್ದಾರೋ ಎನ್ನುವಷ್ಟರ ಮಟ್ಟಿಗೆ ಕನ್ನಡ ಪುಸ್ತಕಗಳ ಮಾರುಕಟ್ಟೆ ಇದೆ. ಪ್ರಕಟವಾಗುವ ಎಲ್ಲ ಪುಸ್ತಕಗಳನ್ನು ಎಲ್ಲರೂ ಕೊಂಡುಕೊಳ್ಳುವುದು ಅಷ್ಟಾಗಿ ಕಾಣುತ್ತಿಲ್ಲ. ಇದು ಓದುಗರ ವರ್ಗ ಸೃಷ್ಟಿಯಾದ ದಿನದಿಂದಲೂ ಉಳಿದುಕೊಂಡು ಬಂದಿರುವ ಸಾಂಸ್ಕೃತಿಕ ಪ್ರವೃತ್ತಿ. ಸಾಹಿತ್ಯವನ್ನು ಜನತೆಯಲ್ಲಿ ಪ್ರಚಾರ ಮಾಡುವ ಸಾಂಸ್ಕೃತಿಕ ಹೊಣೆಯನ್ನು ಹೊತ್ತಿರುವ ಅಧ್ಯಾಪಕ ವರ್ಗದಲ್ಲಿಯೂ ಸ್ವಂತಕ್ಕೊಂದು ಗ್ರಂಥಾಲಯ ಮಾಡಿಕೊಳ್ಳಬೇಕೆಂಬ ಮನಃಸ್ಥಿತಿ ಲುಪ್ತವಾಗಿರುವ ಪರಿಸ್ಥಿತಿ ಈಗ ಉಳಿದುಕೊಂಡಿದೆ.

ಕನ್ನಡ ನವೋದಯದ ಕಾಲದಲ್ಲಿ ಅಂದರೆ ಹತ್ತೊಂಬತ್ತನೆಯ ಶತಮಾನದ ಕೊನೆಯ ವರ್ಷಗಳು ಹಾಗೂ ಇಪ್ಪತ್ತನೆಯ ಶತಮಾನದ ಆರಂಭದ ದಶಕಗಳಲ್ಲಿ ಕನ್ನಡ ಸಾಹಿತ್ಯದ ಓದು ಸಾಮಾನ್ಯ ಜನತೆಯಲ್ಲಿ ಪ್ರಾರಂಭವಾಗುತ್ತಿದ್ದಾಗ ಎಷ್ಟೋ ಲೇಖಕರು ತಾವೇ ಹಣ ಹಾಕಿ ಮುದ್ರಿಸಿದ ಪುಸ್ತಕಗಳನ್ನು ತಲೆಯ ಮೇಲೆ ಹೊತ್ತು ಊರೂರು ತಿರುಗಿ ಮಾರಾಟ ಮಾಡುವಂತಿದ್ದ ದಿನಗಳಿದ್ದವು. ಅಂಥ ಸ್ಥಿತಿ ಈಗ ಇಲ್ಲ, ಆದರೆ, ಹೆಚ್ಚಿನ ಬದಲಾವಣೆಗಳಿಲ್ಲ. ಉತ್ತಮ ಸಾಹಿತ್ಯ ಕೃತಿಗಳಿಗೆ ಈಗಲೂ ಮಾರುಕಟ್ಟೆ ಇಲ್ಲ. ಕೆಲವು ಲೇಖಕರ ಕೃತಿಗಳಿಗೆ ಮಾರುಕಟ್ಟೆ ಇದೆ ಎನಿಸಿದರೂ ಅವೆಲ್ಲ ದೀರ್ಘಕಾಲೀನ ಎನಿಸುವಂಥ ಬೆಳವಣಿಗೆ ಅಲ್ಲ. 'ನೀವು ಬರೆಯುವ ಎಲ್ಲ ಕಗ್ಗವನ್ನೂ ಓದುಗರು ಗಮನಿಸಬೇಕು ಎಂದು ನಿರೀಕ್ಷೆ ಮಾಡಬೇಡಿ' ಎಂಬಂಥ ಉಡಾಫೆಯ ಮಾತುಗಳನ್ನು ಕೆಲವು ಜನಪ್ರಿಯ ಲೇಖಕರು ಸಂದರ್ಶನಗಳಲ್ಲಿ ಹೇಳಿದ್ದುಂಟು. ಆದರೂ ಅವರ ಪುಸ್ತಕಗಳಿಗೂ ಬೇಡಿಕೆ ಸೀಮಿತವಾಗಿರುವುದನ್ನು ಗಮನಿಸಬೇಕು. ಮನಸ್ಸನ್ನು ಕೆರಳಿಸುವ ಸಾಹಿತ್ಯ, ಮನಸ್ಸನ್ನು ಅರಳಿಸುವ ಸಾಹಿತ್ಯ ಎನ್ನುವ ವಿಶ್ಲೇಷಣೆಯನ್ನೂ ಕೆಲವರು ಮಾಡುವುದಿದೆ. ಇಂಥ ಪ್ರಯತ್ನ ತತ್ಕಾಲದ ಕಸರತ್ತು. ಪುಸ್ತಕಗಳು ಜ್ಞಾನ ಭಂಡಾರ. ಅವು ಮನೆಯ ಸಾಂಸ್ಕೃತಿಕ ಸಂಪತ್ತು. ಈ ಮನೋಭಾವ ಛಾಯಾಪತಿ ಅವರದು. ಆದ್ದರಿಂದಲೇ ಅವರ ಹೆಚ್ಚಿನ ಪ್ರಕಟಣೆಗಳು ಸಮಾಜದ ಆರೋಗ್ಯ ರಕ್ಷಣೆಯನ್ನು ಉದ್ದೇಶಿಸಿದವು. ಪ್ರಕಾಶಕನಿಗೆ ಸಾಮಾಜಿಕ ಬದ್ಧತೆ ಇರಬೇಕು ಎಂಬುದನ್ನು ಛಾಯಾಪತಿ ಅವರು ತಮ್ಮ ವೈವಿಧ್ಯಮಯ ಪ್ರಕಟಣೆಗಳ ಮೂಲಕ ಈಗಾಗಲೇ ತೋರಿಸಿಕೊಂಡಿದ್ದಾರೆ.

ಪುಸ್ತಕೋದ್ಯಮದ ಅಭಿವೃದ್ಧಿಯ ಹೆಸರಿನಲ್ಲಿ ಸಾರ್ವಜನಿಕರ ತೆರಿಗೆಯ ಹಣ ಬಳಕೆಯಾಗುವ ವ್ಯವಸ್ಥೆ ಈಚಿನ ದಶಕಗಳಲ್ಲಿ ಆರಂಭವಾಗಿದೆ. ಇದು ಸದಭಿರುಚಿಯ ಪುಸ್ತಕಗಳನ್ನು ಪ್ರಕಟಿಸುತ್ತಿದ್ದ ಪ್ರಕಾಶಕರಿಗೆ ಒತ್ತಾಸೆ ನೀಡುವಂಥ ಉಪಕ್ರಮ. ಉತ್ತಮ ಸಾಹಿತ್ಯ ಕೃತಿಗಳು ಸಾರ್ವಜನಿಕ ಗ್ರಂಥಾಲಯಗಳಲ್ಲಿ ಸಿಕ್ಕಿ ಓದುಗರಿಗೆ ಉಚಿತವಾಗಿ ಬಳಕೆಗೆ ಲಭ್ಯವಾಗಬೇಕು ಎಂಬುದು ಸರ್ಕಾರದ ಇಂಥ ಕ್ರಮಗಳ ಉದ್ದೇಶ. ಸಾರ್ವಜನಿಕ ಗ್ರಂಥಾಲಯಗಳಿಗೆ ಸಗಟು ಲೆಕ್ಕದಲ್ಲಿ ಸಾಹಿತ್ಯ ಕೃತಿಗಳನ್ನು ಕೊಳ್ಳುವ ಯೋಜನೆಗಳು ಇವೆ. ಸಾರ್ವಜನಿಕ ಗ್ರಂಥಾಲಯಗಳು ಮಾತ್ರವಲ್ಲದೆ, ಶಾಲಾ ಕಾಲೇಜುಗಳು, ವಿಶ್ವವಿದ್ಯಾಲಯ ಗ್ರಂಥಾಲಯಗಳು ಹೊಸ ಸಾಹಿತ್ಯ ಕೃತಿಗಳು ಸಿಗುವ ಜ್ಞಾನಕೇಂದ್ರ ಗಳಾಗಬೇಕು ಎಂಬುದೂ ಇಂಥ ಯೋಜನೆಗಳ ಉದ್ದೇಶ. ನಗರ ಪ್ರದೇಶಗಳಲ್ಲಿ ಯಾವುದೇ ಸರ್ಕಾರಿ ಸೇವೆಯನ್ನು ಪಡೆಯುವಾಗಲೂ ಸಾರ್ವಜನಿಕರು ಗ್ರಂಥಾಲಯ ಸೌಲಭ್ಯಕ್ಕೆ ಉಪಕರವನ್ನು ನೀಡುವ ಪದ್ಧತಿ ಇಂಥ ಜ್ಞಾನಕೇಂದ್ರಗಳ ಅಭಿವೃದ್ಧಿಗೆ ಕಾರಣವಾದದ್ದು. ಪ್ರಕಟಿಸುವ ಪುಸ್ತಕಗಳನ್ನು ಸರ್ಕಾರದ ಕಡೆಯಿಂದ ಕೊಳ್ಳುವುದಕ್ಕೆ ಅವಕಾಶ ಇದೆ ಎಂಬ ಸಂಗತಿಯೇ ಪುಸ್ತಕೋದ್ಯಮವನ್ನು ಸೇವಾ ಮಾರ್ಗದಿಂದ ವ್ಯಾವಹಾರಿಕ ಲೋಕಕ್ಕೆ ನೂಕಿತು. ವ್ಯವಹಾರ ಎಂದರೆ ವ್ಯಾಪಾರಿ ಕ್ಷೇತ್ರ ನಿರೀಕ್ಷೆ ಮಾಡುವ ಎಲ್ಲ ತಂತ್ರ ಕುತಂತ್ರಗಳಿಗೂ ಮಾರ್ಗವನ್ನು ಮುಕ್ತಗೊಳಿಸಿತು.

ಸರ್ಕಾರದಿಂದ ಪುಸ್ತಕ ಖರೀದಿ ಎಂಬ ಅವಕಾಶ ಪ್ರಾಪ್ತವಾದೊಡನೆ ಪ್ರಕಾಶನ ಸಂಸ್ಥೆಗಳ ಸಂಖ್ಯೆ ದಿಢೀರನೆ ಹೆಚ್ಚಾಯಿತು. ಒಂದು ಪ್ರಕಾಶನ ಸಂಸ್ಥೆಗೆ ವರ್ಷಕ್ಕೆ ನಿರ್ದಿಷ್ಟ ಮೊತ್ತವನ್ನಷ್ಟೇ ನೀಡಲಾಗುವುದು ಎಂದು ಷರತ್ತು ಬಂದೊಡನೆ, ಒಂದೇ ಪ್ರಕಾಶನ ಸಂಸ್ಥೆ ಬೇರೆ ಬೇರೆ ಹೆಸರಲ್ಲಿ ಮಾರಾಟ ಕ್ಷೇತ್ರಕ್ಕೆ ಪೈಪೋಟಿಯಿಂದ ಇಳಿಯುವುದಕ್ಕೆ ನೆಪವಾಯಿತು. ಸರ್ಕಾರದ ಜೊತೆ ವ್ಯವಹರಿಸುವುದು ಎಂದೊಡನೆ ಜನಪ್ರತಿನಿಧಿಗಳ ಪ್ರವೇಶ, ಅಧಿಕಾರಿಗಳ ಹಸ್ತಕ್ಷೇಪ, ಕಮೀಷನ್ ದಂಧೆ, ಕಳಪೆ ಪುಸ್ತಕಗಳ ಪೂರೈಕೆ ಇತ್ಯಾದಿ ಅವ್ಯವಹಾರಗಳಿಗೆ ಅವಕಾಶವಾಯಿತು. ಇಂಥಬೆಳವಣಿಗೆ ಆರಂಭವಾಗಿ ಕೆಲವು ದಶಕಗಳಾಗಿವೆ. ಗ್ರಂಥಾಲಯ ಇಲಾಖೆಯ ಒಳಗಿನ ವ್ಯವಹಾರಗಳನ್ನು ಬಲ್ಲವರು ಈ ವರ್ಷಗಳಲ್ಲಿ ಯಶಸ್ವೀ ಪ್ರಕಾಶಕರಾಗಿ ಬೆಳೆದಿದ್ದಾರೆ. ಗ್ರಂಥಾಲಯ ಇಲಾಖೆ ಯಲ್ಲಿದ್ದ ನಿವೃತ್ತರಾದವರು ಪ್ರಕಾಶಕರಾಗಿ ಉದ್ಯಮ ಪ್ರವೇಶ ಮಾಡಿದ್ದಾರೆ. ಅವರಲ್ಲಿ ಪ್ರಭಾವಶಾಲಿಗಳಾದವರು ಸರ್ಕಾರದ ಪುಸ್ತಕ ಪ್ರಾಧಿಕಾರದಲ್ಲಿ ಸದಸ್ಯತ್ವ ಪಡೆಯುತ್ತಾರೆ. ಪುಸ್ತಕೋದ್ಯಮ ಎಂಬುದು ಹಣ ತೊಡಗಿಸಿ ಹಣ ಮಾಡುವ ದಂಧೆಯಾಗುವ ಪರಿಸ್ಥಿತಿಗೆ ಬಂದು ಮುಟ್ಟಿದೆ.

ಇಂಥ ಬೆಳವಣಿಗೆಗಳ ಮಧ್ಯೆಯೂ ಛಾಯಾಪತಿ ಅವರಂಥ ಪುಸ್ತಕ ಪ್ರಕಾಶಕರು ಸದಭಿರುಚಿಯ ಪುಸ್ತಕ ಪ್ರಕಟಣೆಯ ಕೈಂಕರ್ಯವನ್ನು ಸಾರಸ್ವತ ತಪಸ್ಸಿನಂತೆ

ಮುಂದುವರಿಸಿದ್ದಾರೆ. ತಮ್ಮ ಪ್ರಕಟಣೆಗಳು ಶಾಲಾ ಮಕ್ಕಳಿಂದ ಹಿಡಿದು ನವ ಸಾಕ್ಷರರವರೆಗೆ, ಕಾಲೇಜು ವಿದ್ಯಾರ್ಥಿಗಳಿಂದ ವಿದ್ವಜ್ಜನರ ವರೆಗೆ ಜ್ಞಾನೋಪಾಸನೆಯ ಮೆಟ್ಟಿಲುಗಳಾಗಬೇಕೆಂದು ಶ್ರಮಿಸುತ್ತಿದ್ದಾರೆ. ಪ್ರತಿ ಶೈಕ್ಷಣಿಕ ವರ್ಷಾರಂಭದಲ್ಲಿ ತಮ್ಮ ಉಪಯುಕ್ತ ಪ್ರಕಟಣೆಗಳನ್ನು ಶಾಲಾ ಕಾಲೇಜುಗಳಿಗೆ ಪರಿಚಯಿಸುವ ಪರಿಚಾರಿಕೆಯನ್ನು ಛಾಯಾಪತಿ ಅವರು ಈಗಲೂ ಕೈಗೊಳ್ಳುತ್ತಾ ಇರುವುದನ್ನು ಗಮನಿಸಿದರೆ ಸಾರಸ್ವತ ಸೇವೆ ನಿರಂತರ ಪರಿಶ್ರಮವನ್ನು ಬೇಡುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಪುಸ್ತಕ ಮತ್ತು ಓದುಗರ ಮಧ್ಯೆ ಪ್ರಕಾಶಕ ನೈಜ ಸೇತುವೆಯಂತೆ ಕಾರ್ಯ ನಿರ್ವಹಿಸಬೇಕು ಎಂಬುದಕ್ಕೆ ಛಾಯಾಪತಿ ಅವರು ಪ್ರತ್ಯಕ್ಷ ನಿದರ್ಶನವಾಗಿದ್ದಾರೆ.

ಛಾಯಾಪತಿ ಅವರು ಪ್ರಾರಂಭದಲ್ಲಿ ಸಾಹಿತ್ಯದ ಕೃತಿಗಳು ಆಧುನಿಕ ಓದುಗರಿಗೆ ಸಿಗಬೇಕೆಂಬ ಉದ್ದೇಶದಿಂದ ಪ್ರಕಟಣೆಗಳನ್ನು ಹೊರತಂದರು. ಕಾಲೇಜು ವಿದ್ಯಾರ್ಥಿಗಳಲ್ಲಿ ಸಾಹಿತ್ಯದ ಅಭಿರುಚಿ ಬೆಳೆಯುವಂಥ ಕೃತಿಗಳತ್ತ ಲಕ್ಷ್ಯ ವಹಿಸಿದರು. ಕನ್ನಡ ಸಾಹಿತ್ಯದ ಪರಂಪರೆಯನ್ನು ಸರಳವಾಗಿ ತಿಳಿಸಿಕೊಡುವ ಕೃತಿಗಳು ಹೊರಬಂದವು. ಆಧುನಿಕ ಕನ್ನಡ ಸಾಹಿತ್ಯ ನಾನಾ ಬಗೆಯಲ್ಲಿ ಬೆಳೆಯುತ್ತಾ ಇದ್ದುದನ್ನು ತಮ್ಮ ಪ್ರಕಾಶನ ಸಂಸ್ಥೆಯಲ್ಲಿ ದಾಖಲಿಸಿದರು. ಇದಕ್ಕಾಗಿ ವಿದ್ವಾಂಸರ ಬಳಗವನ್ನು ರೂಪಿಸಿದರು. ಸಾಮಾನ್ಯ ಓದುಗರು ಸಾಹಿತ್ಯವನ್ನಷ್ಟೇ ಅಲ್ಲದೆ, ಇತರ ಜ್ಞಾನಶಿಸ್ತುಗಳಲ್ಲಿಯೂ ಅರಿವನ್ನು ಹೆಚ್ಚಿಸಿಕೊಳ್ಳುವುದಕ್ಕೆ ಅನುವಾಗುವಂತೆ ಅಂಥ ವಸ್ತು ವಿಷಯಗಳ ಕೃತಿಗಳನ್ನೂ ಪ್ರಕಟಿಸಿದರು. ವಿಜ್ಞಾನವನ್ನು ಕನ್ನಡದಲ್ಲಿ ಬರೆಯಬಲ್ಲ ಲೇಖಕರನ್ನೂ ಗುರುತಿಸಿದರು. ಸಾಹಿತ್ಯದ ಜೊತೆಗೆ ವಿಚಾರ ಸಾಹಿತ್ಯ ಪ್ರಚಾರಕ್ಕೂ ಅವರು ಆದ್ಯತೆ ನೀಡಿದರು. ಇಂಥ ಸಮಾಜೋಪಯೋಗಿ ದೃಷ್ಟಿಯ ಕಾರಣದಿಂದ ಛಾಯಾಪತಿ ಅವರು ಇತರ ಪ್ರಕಾಶಕರಿಗಿಂತ ಭಿನ್ನವಾಗಿ ಕಾಣುತ್ತಾರೆ. ಆದ್ದರಿಂದಲೇ ಒಮ್ಮೆ ಅವರ ಲೇಖಕ ಬಳಗಕ್ಕೆ ಸೇರಿಕೊಂಡವರು ತಮ್ಮ ಮುಂದಿನ ಪ್ರಕಟಣೆಗಳನ್ನು ಛಾಯಾಪತಿ ಅವರಿಗಾಗಿಯೇ ಸಿದ್ಧಪಡಿಸುವ ವಿಶ್ವಾಸ ಪ್ರಕಟಿಸುತ್ತಾರೆ. ಇದು ಛಾಯಾಪತಿ ಅವರು ಪುಸ್ತಕ ಪ್ರಕಟಣಾ ಕ್ಷೇತ್ರದಲ್ಲಿ ಗಳಿಸಿದ ವಿಶ್ವಾಸಾರ್ಹತೆಗೆ ನಿದರ್ಶನವಾಗಿದೆ.

ಸದಭಿರುಚಿಯ ಕೃತಿಗಳನ್ನೇ ದಶಕಗಳಿಂದ ಪ್ರಕಟಿಸುತ್ತಾ ಬಂದಿರುವ ಛಾಯಾಪತಿ ಅವರು ಈ ಮೂಲಕ ಕನ್ನಡಕ್ಕೆ ಸಲ್ಲಿಸುತ್ತಿರುವ ಸೇವೆ ದೊಡ್ಡದಾಗಿದೆ. ನೂರಾರು ಮಂದಿ ಹೊಸ ಲೇಖಕರನ್ನು ಅವರ ಪ್ರೋತ್ಸಾಹಿಸಿದ್ದಾರೆ. ಕನ್ನಡದಲ್ಲಿ ವಿವಿಧ ಜ್ಞಾನ ಶಿಸ್ತುಗಳ ಸಾಹಿತ್ಯ ಬೆಳೆಯುವುದಕ್ಕೆ ಪರೋಕ್ಷವಾಗಿ ನೆರವಾಗಿದ್ದಾರೆ. ನಾಡಿನ ಸಂಸ್ಕೃತಿಯ ದೃಷ್ಟಿಯಿಂದ ಮಹತ್ವದ್ದಾಗಿರುವ ಇಂಥ ಕೆಲಸಕ್ಕೆ ವ್ಯಾಪಾರ ವ್ಯವಹಾರದ ದೃಷ್ಟಿಯಿಂದ ಬೆಲೆ ಕಟ್ಟುವುದು ಸರಿಯಾದ ಕ್ರಮವಲ್ಲ. ಇದನ್ನು ಸಾಂಸ್ಕೃತಿಕ ಕೊಡುಗೆಯ ದೃಷ್ಟಿಯಿಂದ ಗಮನಿಸುವುದು ಸಮಾಜದ ಕರ್ತವ್ಯ. ಜನತೆಯ ಪ್ರತಿನಿಧಿಯಾಗಿರುವ

ಸರ್ಕಾರ ಇಂಥ ಸೇವಾ ಕ್ಷೇತ್ರವನ್ನು ವಿಶೇಷ ರೀತಿಯಿಂದ ಗಮನಿಸಬೇಕು. ಪುಸ್ತಕೋದ್ಯಮದಲ್ಲಿ ಒಂದು ಶಿಷ್ಟ ಪರಂಪರೆಯನ್ನು ಆರಂಭಿಸಿ ಅದನ್ನು ಬೆಳೆಸಿಕೊಂಡು ಬರುತ್ತಿರುವ ಛಾಯಾಪತಿ ಅವರ ಅನುಭವ ಶ್ರೀಮಂತಿಕೆ ನಾಡಿನ ಪ್ರಕಟಣಾ ಕ್ಷೇತ್ರಕ್ಕೆ ಲಾಭಕರವಾಗಿ ಬಳಕೆಯಾಗುವಂತೆ ಸರ್ಕಾರ ನೋಡಿಕೊಳ್ಳಬೇಕು. ಹಾಗೆ ನೋಡಿದರೆ ರಾಜ್ಯದಲ್ಲಿ ಪುಸ್ತಕೋದ್ಯಮ ಒಂದು ಶಿಸ್ತುಬದ್ಧ ವ್ಯಾವಹಾರಿಕ ಕ್ಷೇತ್ರವಾಗಿ ಇನ್ನೂ ಬೆಳೆಯಬೇಕಿದೆ. ಜನತೆಯ ಕೊಳ್ಳುವ ಅಭಿರುಚಿಯನ್ನು ಅವಲಂಬಿಸಿ ಪುಸ್ತಕ ಸಂಸ್ಕೃತಿ ಅಭಿವೃದ್ಧಿಯಾಗಬೇಕಿದೆ. ಜನತೆಯಲ್ಲಿ ಕೊಂಡು ಓದುವ ಮನಃಸ್ಥಿತಿ ವ್ಯಾಪಕವಾಗುವ ಹೊರತು ಪ್ರಕಾಶಕರು ಹಾಕಿದ ಬಂಡವಾಳ ವಾಪಸಿಗೆ ವರ್ಷಗಟ್ಟಲೆ ಕಾಯುವುದು ಮುಂದುವರಿಯುತ್ತದೆ. ಇಂಥ ನಿರುತ್ತೇಜಕ ಪರಿಸ್ಥಿತಿಯಲ್ಲಿ ಪ್ರಕಾಶನ ಉದ್ಯಮ ಅಸ್ತಿತ್ವ ಉಳಿಸಿಕೊಳ್ಳಲು ಶ್ರಮಿಸಬೇಕಿದೆ. ತತ್ವನಿಷ್ಠೆ, ಒಳ್ಳೆಯದನ್ನೇ ಜನತೆಗೆ ನೀಡಬೇಕು ಎಂಬ ಸಾತ್ವಿಕ ಹಂಬಲ, ಸಮಾಜಕ್ಕೆ ಉಪಯುಕ್ತವಾದುದನ್ನೇ ಪ್ರಕಟಿಸಬೇಕು ಎಂಬ ನಿಷ್ಠುರ ಧೋರಣೆಯನ್ನು ಇಟ್ಟುಕೊಂಡ ಛಾಯಾಪತಿ ಅವರು ಇಷ್ಟು ವರ್ಷ ಪ್ರಕಾಶನ ಕ್ಷೇತ್ರದಲ್ಲಿ ಉಳಿದುಕೊಂಡಿರುವುದು ಅವರ ಅಪರಿಮಿತ ಸಾಹಸ ಪ್ರವೃತ್ತಿಗೆ ನಿದರ್ಶನ. ಅವರ ಪ್ರಕಾಶ ಸಂಸ್ಥೆ ಸಮಾಜದಿಂದ ಎಲ್ಲ ರೀತಿಯ ಗೌರವ ಮನ್ನಣೆಗಳಿಗೂ ಅರ್ಹವಾಗಿದೆ.

# ಕನ್ನಡದ ಲಾಂಗ್‌ಫೆಲೊ

ಟಿ.ಎಸ್. ಛಾಯಾಪತಿಯವರು ವ್ಯಕ್ತಿಶಃ ನನಗೆ ಪರಿಚಯವಾದದ್ದು ತೀರಾ ಇತ್ತೀಚೆಗೆ. ಕೇವಲ ಒಂದು ವರ್ಷದಿಂದ. ಆದರೆ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ'ಯ ಪ್ರಕಟಣೆಗಳಿಂದ ಅವರು ನನಗೆ ಹಲವು ದಶಕಗಳಿಂದಲೂ ಗೊತ್ತು. ನನ್ನ ಕಾವ್ಯ ಗುರುಗಳಲ್ಲಿ ಒಬ್ಬರಾದ ನಿಸಾರ್ ಅಹಮದ್ ಅವರು ಮುವ್ವತ್ತು ವರ್ಷಗಳಷ್ಟು ಹಿಂದೆಯೇ ಛಾಯಾಪತಿಯವರ ಹೆಸರನ್ನು ಅನೇಕ ಬಾರಿ ನನ್ನ ಮುಂದೆ ಹೇಳಿದ್ದುಂಟು. ಹಾ.ಮಾ. ನಾಯಕರು ತಮ್ಮ 'ಪ್ರಣಯ ಪದಾವಳಿ'ಯನ್ನು ನನಗೆ ಕಳಿಸಿಕೊಟ್ಟಾಗ ಆ ಪುಸ್ತಕದ ಪ್ರಕಟಣೆಯ ಅಪರೂಪದ ಚೆಲುವಿಗೆ ನಾನು ಮಾರು ಹೋಗಿದ್ದೆ. ಗೆಳೆಯ ಎಚ್.ಎಸ್. ವೆಂಕಟೇಶಮೂರ್ತಿಯ 'ತೂಗುಮಂಚ' ಮತ್ತು ಇತ್ತೀಚಿನ ಅವನ 'ಸಮಗ್ರ ಮಕ್ಕಳ ಸಾಹಿತ್ಯ' ಕೃತಿಗಳನ್ನೂ ಸಹ ಛಾಯಾಪತಿಯವರು ಅತ್ಯಂತ ಆಕರ್ಷಕವಾಗಿ ಹೊರತಂದಿದ್ದಾರೆ. ಸಾವಿರ ಕನ್ನಡ ಪುಸ್ತಕಗಳನ್ನು ಪ್ರಕಟಿಸಿದ ಸರದಾರನೆಂದು ಅವರು ಈಗಾಗಲೇ ಕನ್ನಡ ಸಾರಸ್ವತಲೋಕದಲ್ಲಿ ಖ್ಯಾತನಾಮರಾಗಿದ್ದಾರೆ.

ಹಿಂದಿನ ವರ್ಷ (2013) ಶ್ರೀಮತಿ ರಂಜನಿ ಪ್ರಭು ಅವರ ಕವನ ಸಂಕಲನ 'ಬಾನ ಜಗಲಿ'ಯು 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ'ಯಿಂದ ಪ್ರಕಟವಾಯಿತು. ಆ ಪುಸ್ತಕದ ಬಿಡುಗಡೆಯ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ನಾನು ಭಾಗವಹಿಸಿದ್ದೆ. ಅತ್ಯಂತ ಅಚ್ಚುಕಟ್ಟಾಗಿ, ಚೆಲುವಾಗಿ ಆ ಸಂಕಲನವನ್ನು ಹೊರತಂದಿದ್ದ ಛಾಯಾಪತಿಯವರನ್ನು ನಾನು ವೇದಿಕೆಯಲ್ಲಿ ಹೃತ್ಪೂರ್ವಕವಾಗಿ ಅಭಿನಂದಿಸಿದೆ. ನಮ್ಮ ಮೊಖಾ ಭೇಟಿಯಾದದ್ದು ಬಹುಶಃ ಅಂದೇ ಮೊದಲು. ಬಹು ಬೇಗ ನಾವು ಆತ್ಮೀಯ ಮಿತ್ರರಾಗಿಬಿಟ್ಟೆವು. ಇದಕ್ಕೆ ಕಾರಣ, ಛಾಯಾಪತಿಯವರ ಸ್ನೇಹಶೀಲ ಗುಣ. ಹೊರನೋಟಕ್ಕೆ ಅವರು ಕೊಂಚ ಬಿಗುಮಾನದ ಮಿತಭಾಷಿಯಾಗಿ ಕಂಡರೂ ಒಮ್ಮೆ ತಮ್ಮ ಸ್ನೇಹವಲಯದ ಒಳಕ್ಕೆ ಪ್ರವೇಶ ಪಡೆದವರೊಂದಿಗೆ ಅತ್ಯಂತ ಪ್ರೀತಿ ಮತ್ತು ಸಲಿಗೆಯಿಂದ ನಡೆದುಕೊಳ್ಳುತ್ತಾರೆ.

---

**ಬಿ.ಆರ್. ಲಕ್ಷ್ಮಣರಾವ್**

---

ಕೆಲವು ತಿಂಗಳ ಹಿಂದೆ ಛಾಯಾಪತಿಯವರು ಬೆಂಗಳೂರಿಗೆ ಬಂದಿದ್ದಾಗ ಪದ್ಮನಾಭನಗರದ ನನ್ನ ಮನೆಗೆ ತಮ್ಮ ಪತ್ನಿ, ಪುತ್ರಿ ಮತ್ತು ಮೊಮ್ಮಗನೊಂದಿಗೆ ಭೇಟಿ ನೀಡಿದ್ದರು. ಹೀಗಾಗಿ ನಮ್ಮ ನಡುವಿನ ಆತ್ಮೀಯತೆ ಕುಟುಂಬದ ವಲಯಕ್ಕೂ ವಿಸ್ತರಿಸಿತು. ಅವರ ಪತ್ನಿ ಮಸಾಲೆದೋಸೆ ಮಾಡುವುದರಲ್ಲಿ ನಿಷ್ಣಾತರಂತೆ. ಅದನ್ನು ಸವಿಯಲು ಮೈಸೂರಿನ ತಮ್ಮ ಮನೆಗೆ ನನ್ನ ಹೆಂಡತಿ ಗಿರಿಜಳನ್ನು ಮತ್ತು ನನ್ನನ್ನು ಆಹ್ವಾನಿಸಿದ್ದಾರೆ. ಹೋಗಲು ನಾವೂ ಅವಕಾಶಕ್ಕಾಗಿ ತುದಿಗಾಲಲ್ಲಿ ಕಾಯುತ್ತಿದ್ದೇವೆ.

ನನಗೆ ಇಷ್ಟೊಂದು ಆಪ್ತರಾದ ಮೇಲೆ ಪ್ರಕಾಶಕರಾದ ಛಾಯಾಪತಿಯವರು ಸುಮ್ಮನಿದ್ದಾರೆಯೆ? ತಮ್ಮ ಪ್ರಕಾಶನದಲ್ಲಿ ನನ್ನದೊಂದು ಪುಸ್ತಕ ಪ್ರಕಟವಾಗಲೇ ಬೇಕೆಂದು ಪ್ರೀತಿಯಿಂದ ಒತ್ತಾಯಿಸಿದರು. ಪ್ರತಿಷ್ಠಿತ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ'ಯ ಲೇಖಕರ ಬಳಗದಲ್ಲಿ ಸೇರುವ ಅವಕಾಶವನ್ನು ಯಾರು ತಾನೇ ಕಳೆದುಕೊಂಡಾರು? ನನ್ನ ಈ ವರೆಗಿನ ಎಲ್ಲ ಕಥೆಗಳನ್ನೂ ಒಟ್ಟುಗೂಡಿಸಿ ಒಂದು ಸಂಕಲನ ಹೊರತರಬಹುದೆಂದು ಸೂಚಿಸಿದೆ. ತಕ್ಷಣ ಅವರು ಕಾರ್ಯೋನ್ಮುಖರಾದರು. ಹೀಗಾಗಿ ಸದ್ಯದಲ್ಲೇ ನನ್ನ ಸಮಗ್ರ ಕಥಾ ಸಂಕಲನ 'ಪ್ರೀತಿಯ ಬೆಳಕು' ಛಾಯಾಪತಿ ಯವರ ಪ್ರಕಾಶನದಲ್ಲಿ ಪ್ರಕಟವಾಗಲಿದೆ. ಇದು ನನಗೆ ಅತ್ಯಂತ ಸಂತೋಷದ, ಹೆಮ್ಮೆಯ ಸಂಗತಿ.

ಗೆಳೆಯ, ಕವಿ ವೆಂಕಟೇಶಮೂರ್ತಿ ಛಾಯಾಪತಿಯವರನ್ನು ಪ್ರೀತಿಯಿಂದ 'ಕನ್ನಡದ ಲಾಂಗ್‌ಫೆಲೊ' ಎಂದು ಕರೆಯುತ್ತಾರೆ. ಸಾರ್ಥಕವಾದ ಹೆಸರು. ಏಕೆಂದರೆ ಛಾಯಾಪತಿಯವರು ಆರಡಿಗೂ ಮೀರಿದ ಎತ್ತರದ ವ್ಯಕ್ತಿ. ಕೇವಲ ಕೀರ್ತಿಯನ್ನಷ್ಟೇ ಬಾಳಲ್ಲಿ ಬಯಸಿದ್ದರಿಂದ ನೆಟ್ಟಗೆ, ಎತ್ತರಕ್ಕೆ ಬೆಳೆದಿದ್ದಾರೆ. ಧನದಾಹಿಯಲ್ಲವಾದ್ದರಿಂದ ಅಗಲಕ್ಕೆ ಬೆಳೆದಿಲ್ಲ.

ಎಪ್ಪತ್ತರ ಮಾಗು ವಯಸ್ಸಿಗೆ ಬಂದರೂ ಬಾಗದ, ಆತ್ಮೀಯ ಮಿತ್ರರಾದ ಛಾಯಾಪತಿಯವರು ತಮ್ಮ ಪ್ರಕಾಶನ ಹಾಗೂ ಸೃಜನಶೀಲ ಕೃತಿಗಳಿಂದ ಕನ್ನಡ ಸಾರಸ್ವತಲೋಕದಲ್ಲಿ ಇನ್ನೂ ಎತ್ತರೆತ್ತರಕ್ಕೇರಲಿ; ಕನ್ನಡದ 'ಕಲ್ಪವೃಕ್ಷ'ವಾಗಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

# ಸಹಾಯಕ ಪ್ರವೃತ್ತಿಯ ಗೆಳೆಯ

ಸ್ನೇಹದಲ್ಲಿ ಅನೇಕ ಬಗೆಗಳಿರುತ್ತವೆ. ಸ್ನೇಹಕ್ಕಾಗಿ ಇರುವ ಸ್ನೇಹವೇ ಅತ್ಯುತ್ತಮವಾದುದು ಎಂದು ನನ್ನ ಅನುಭವ. ಇದರಲ್ಲಿ ಸ್ವಾರ್ಥ ಏನೂ ಇರುವುದಿಲ್ಲ. ಕೊಡುವುದು ಪಡೆಯುವುದು ಬಿಡುವುದು ಉಸಿರಾಟದಂತೆ. ಪರಸ್ಪರ ಪ್ರೀತಿ ಗೌರವಗಳೇ ಸ್ನೇಹಕ್ಕೆ ಸಾಟಿಯಾಗುವ ಮೌಲ್ಯ. ಅಂಥ ಸ್ನೇಹವನ್ನು ಟಿ.ಎಸ್. ಛಾಯಾಪತಿ ಅವರಲ್ಲಿ ನಾನು ಕಂಡಿದ್ದೇನೆ. ನಮ್ಮಿಬ್ಬರ ಸ್ನೇಹ ಕಳೆದ ಸುಮಾರು ನಲವತ್ತೈದು ವರ್ಷಗಳಿಂದ ಹಾಗೆಯೇ ಉಳಿದು ಬೆಳೆಯುತ್ತಿದೆ.

1969ನೇ ಇಸವಿ, ನನಗೆ ಟಿ.ಎಸ್. ಛಾಯಾಪತಿಯವರು ಪರಿಚಯವಾದ ವರ್ಷ. ನನ್ನ ಮಿತ್ರ ಮುಕುಂದ ನಮ್ಮ ಕಾಲೇಜಿನ ಗ್ರಂಥಪಾಲಕರಾಗಿದ್ದರು. ಅವರ ಮುಖಾಂತರ ಛಾಯಾಪತಿ ಅವರ ಸಂಪರ್ಕ ನನಗೆ ಲಭಿಸಿತು. ನಮ್ಮ ಎಂ.ಡಿ.ಟಿ.ಡಿ.ಬಿ - ಮೈಸೂರು ಜಿಲ್ಲಾ ತಾಲ್ಲೂಕು ಅಭಿವೃದ್ಧಿ ಮಂಡಲಿಗಳ - ಕಾಲೇಜು ಈಗ ಇಲ್ಲ. ಕರ್ನಾಟಕ ಸರ್ಕಾರ ಅದನ್ನು ತನ್ನ ಸುಪರ್ದಿಗೆ ತೆಗೆದುಕೊಂಡು ಆಮೇಲೆ ಮುಚ್ಚಿ ಬಿಟ್ಟಿತು. ಈಗ ಅಲ್ಲಿ ಮೈಸೂರು ಜಿಲ್ಲಾ ಪಂಚಾಯಿತಿ ಕಾರ್ಯಾಲಯ ನಡೆಯುತ್ತಿದೆ.

ಛಾಯಾಪತಿ ಅವರು ಸುಸಂಸ್ಕೃತ ಮನೆತನಕ್ಕೆ ಸೇರಿದವರು. ಅವರ ತಂದೆ ಹೆಸರಾಂತ ದೊಡ್ಡ ವಿದ್ವಾಂಸರು ಮತ್ತು ಲೇಖಕರು - ಪ್ರೊ. ತ.ಸು. ಶಾಮರಾಯರು. ಇವರು ನನ್ನನ್ನು ತುಂಬ ಪ್ರೀತಿಯಿಂದ ಕಾಣುತ್ತಿದ್ದ ಹಿರಿಯ ಜೀವ. ತಮ್ಮ ಅಡಿಗೆ ಮನೆಯಲ್ಲಿ ತಮ್ಮ ಜೊತೆ ನನ್ನನ್ನು ಕೂರಿಸಿಕೊಂಡು ಊಟ ಮಾಡುತ್ತಿದ್ದುದನ್ನು ನಾನು ಎಂದೂ ಮರೆಯಲಾರೆ. ಅಂಥ ವಾತ್ಸಲ್ಯ ಮೂರ್ತಿ ತ.ಸು. ಶಾಮರಾಯರು.

ದೀರ್ಘ ಕಾಲದಿಂದಲೂ ಛಾಯಾಪತಿ ಅವರ ಸೋದರ ಪ್ರೀತಿಯನ್ನು ನಾನು ಅನುಭವಿಸುತ್ತ ಬಂದಿದ್ದೇನೆ. ಆಗ (1969ರಲ್ಲಿ) ಅವರ ಮನೆಯ ಬೀದಿಯ ಕೆಳಗಿನ ಬೀದಿಯಲ್ಲಿ ಮೈಸೂರಿನ ಕೃಷ್ಣಮೂರ್ತಿಪುರದಲ್ಲಿ ನಾವು ಇದ್ದೆವು. ಹಾಗಾಗಿ ಸಾಮಾನ್ಯವಾಗಿ ಪ್ರತಿದಿನ ಸೇರುತ್ತಿದ್ದೆವು. ಸಂಜೆ ಜೊತೆಗೂಡಿ ತಿಂಡಿ ತಿನ್ನುವುದು

---

**ಕೆ.ಎಸ್. ಭಗವಾನ್**

---

ರೂಢಿಯಾಗಿತ್ತು. ಸಾಧಾರಣವಾಗಿ ಛಾಯಾಪತಿಯವರೇ ನಮ್ಮನ್ನು ಹಿಂದಿಕ್ಕಿ ಬಿಲ್ಲನ್ನು ಕೊಡುತ್ತಿದ್ದರು.

ನಮ್ಮಿಬ್ಬರ ಸಮಾನ ಸ್ನೇಹಿತ ಎಚ್.ಸಿ. ಮುಕುಂದ ಅವರಿಗೆ ಒಮ್ಮೆ ಆರೋಗ್ಯ ಕೆಟ್ಟಿತು. ಪಾಶ್ಚಾತ್ಯ ವೈದ್ಯ ಪದ್ಧತಿಯ ವೈದ್ಯರುಗಳ ಸಲಹೆ ಪಡೆದು ಸಾಕಾಯಿತು. ಯಾರೋ ಬಲ್ಲವರು ಹಿತೈಷಿಗಳು ಆಯುರ್ವೇದ ಔಷಧಿ ಪ್ರಯತ್ನಿಸಿ ಎಂದರು. ಜೊತೆಗೆ ಮಾಟಗಾರನನ್ನೂ ಸೂಚಿಸಿದರು. ಇವುಗಳಲ್ಲಿ ನನಗೆ ನಂಬಿಕೆಗಿಂತ ಅಪನಂಬಿಕೆಯೆ ಹೆಚ್ಚು. ಆದರೆ ಗೆಳೆಯನಿಗೆ ಗುಣವಾದರೆ ಸಾಕು ಎಂಬ ಮನೋಭಾವ ನಮ್ಮದಾಗಿತ್ತು. ಬಿಂಡಿಗನವಲೆಗೆ ಹೋಗಲು ತೀರ್ಮಾನಿಸಿದೆವು. ಈ ಭೇಟಿಯಿಂದ ಪ್ರಯೋಜನ ಏನೂ ಆಗಲಿಲ್ಲ. ಅದಕ್ಕೆ ಛಾಯಾಪತಿ ಅವರು ಈ ಬಗ್ಗೆ ತೆಗೆದುಕೊಂಡ ಆಸಕ್ತಿ, ಪಟ್ಟಶ್ರಮ ನಾನು ಮರೆತಿಲ್ಲ. ಸ್ನೇಹಿತರ ಮೇಲೆ ಛಾಯಾಪತಿಗೆ ನಿರ್ವ್ಯಾಜ ಪ್ರೇಮ.

ಸಾಹಿತ್ಯದ ವಿದ್ಯಾರ್ಥಿ ಮತ್ತು ಬೋಧಕನಾದ ನಾನು ಆಗಾಗ್ಗೆ ನನಗೆ ಮೆಚ್ಚಿಕೆಯಾದ ಕೃತಿಗಳ ಬಗ್ಗೆ ಛಾಯಾಪತಿಯರೊಡನೆ ಚರ್ಚಿಸುವುದು ನನ್ನ ಹವ್ಯಾಸವಾಗಿತ್ತು. ಒಮ್ಮೆ ಷೇಕ್‌ಸ್ಪಿಯರ್‌ನ 'ಹ್ಯಾಮ್ಲಿಟ್' ನಾಟಕ ಕೃತಿಯನ್ನು ಕುರಿತು ಮಾತನಾಡಿದಾಗ, 'ಇದನ್ನು ಬರೆದುಕೊಡು. ನಾನು ಪ್ರಕಟಿಸುತ್ತೇನೆ' ಎಂದು ಛಾಯಾಪತಿ ಒತ್ತಾಯಿಸಿದರು. ಬರವಣಿಗೆ ಮಾಡಬೇಕೆಂದುಕೊಂಡಿದ್ದರೂ ನಾನು ಇನ್ನೂ ಶುರು ಮಾಡಿರಲಿಲ್ಲ. ಛಾಯಾಪತಿಯವರ ಒತ್ತಾಸೆಯಿಂದ ಬರೆದೆ. ಅದರ ಮೂರು ಸಾವಿರ ಪ್ರತಿಗಳು ಮೂರ್‍ನಾಲ್ಕು ತಿಂಗಳಲ್ಲಿ ಬಹುಬೇಗ ಖರ್ಚಾದುವು. ಇದರಿಂದ ಉತ್ತೇಜಿತರಾದ ಅವರು ನನ್ನ 'ಜೂಲಿಯಸ್ ಸೀಸರ್' ನಾಟಕದ ಅನುವಾದವನ್ನು 'ನಾನೇ ಪ್ರಕಟಿಸುತ್ತೇನೆ' ಎಂದು (1975ರಲ್ಲಿ) ಕೈಗೆತ್ತಿಕೊಂಡರು. ಅದು ಅತ್ಯುತ್ತಮ ಅನುವಾದ ಎಂದು ಮನ್ನಣೆ ಪಡೆಯಿತು. The Text of the play is dramatically rendered ಎಂದು ಮೇರುಸಾಹಿತಿ ಪ್ರೊ. ವಿ.ಕೃ. ಗೋಕಾಕರು ಅದನ್ನು ಪ್ರಶಂಸಿಸಿದರು. ಪ್ರಕಟವಾದ ವರ್ಷವೇ "ಅದನ್ನು ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ವಿದ್ಯಾರ್ಥಿಗಳಿಗೆ ಪಠ್ಯವನ್ನಾಗಿ ಮಾಡಿದ್ದಾರೆ. ಅದರ ಪ್ರತಿಗಳು ಬೇಕೆಂದು ಪುಸ್ತಕ ಮಾರಾಟಗಾರರಿಂದ ಪತ್ರ ಬಂದಿದೆ" ಎಂದು ಛಾಯಾಪತಿಯವರು ತಿಳಿಸಿದಾಗ ನನಗೆ 'ನಂಬಲೋ ಬಿಡಲೋ' ಎಂಬ ಶಂಕೆ ಶುರುವಾಯಿತು. ಇದುವರೆಗೆ ನನ್ನ 'ಜೂಲಿಯಸ್ ಸೀಸರ್' ಅನುವಾದ ಹದಿನಾಲ್ಕು ಮುದ್ರಣ ಕಂಡಿದೆ.

ಮುಂದಿನ ವರ್ಷ ಬೆಂಗಳೂರು ವಿಶ್ವವಿದ್ಯಾನಿಲಯ ಎರಡನೆಯ ವರ್ಷದ ಬಿ.ಎ., ಬಿ.ಎಸ್‌ಸಿ, ತರಗತಿಗಳಿಗೆ "ನಿನ್ನ 'ಜೂಲಿಯಸ್ ಸೀಸರ್' ಪಠ್ಯವಾಗಿದೆ" ಎಂದು ಛಾಯಾಪತಿ ತಿಳಿಸಿದರು. "ಪ್ರೊ. ಜಿ.ಎಸ್. ಶಿವರುದ್ರಪ್ಪನವರು ಪಠ್ಯ ಮಾಡಿದ್ದಾರೆ.

ಇದು ನಿನ್ನ ಅನುವಾದದ ಗುಣಾತ್ಮಕತೆಗೆ ಸಿಕ್ಕಿರುವ ಗೌರವ. ನಾನು ಡಾ. ಜಿ.ಎಸ್. ಎಸ್. ಅವರಿಗೆ ಹೇಳಿರಲಿಲ್ಲ. ಅವರಿಗೆ ಹೇಳೋದು ಬಹಳ ಕಷ್ಟ. ಅವರು ಹಾಗೆಲ್ಲ ಪ್ರಭಾವಿಸುವುದನ್ನು ಇಷ್ಟ ಪಡುವುದಿಲ್ಲ. ನಿನಗೆ ಅಭಿನಂದನೆ" ಎಂದರು ಛಾಯಾಪತಿ. ಪಠ್ಯಪುಸ್ತಕ ಆವೃತ್ತಿಯನ್ನು ಛಾಯಾಪತಿಯವರೇ ಹೊರತರುತ್ತಾರೆ ಎಂದುಕೊಂಡು ನಾನು ಸುಮ್ಮನಾದೆ. ಸ್ವಲ್ಪ ದಿನಗಳಾದ ಮೇಲೆ ಅವರು, "ನನಗೇನೋ ತೊಂದರೆ ಯಾಗಿದೆ. 'ಜೂಲಿಯಸ್ ಸೀಸರ್' ನೀನೇ ಪ್ರಕಟಿಸು. ಇಲ್ಲದಿದ್ದರೆ ಬೇರೆ ಯಾರಿಗಾದರೂ ಹೇಳುತ್ತೇನೆ" ಎಂದರು. ಹೀಗೆ ಅಚಾನಕವಾಗಿ ನಾನು ಪ್ರಕಾಶಕನಾಗಿ ಈ ಕೃತಿಯ ಇಂದಿನ ಹದಿಮೂರು ಮುದ್ರಣಗಳನ್ನು ತಂದಿರುವೆನು.

ನಾನು ಪ್ರಕಾಶಕನಾದುದಕ್ಕೆ ಒಂದು ಕತೆಯೇ ಇದೆ. ಕರ್ನಾಟಕ ರಾಜ್ಯ ಸಾರ್ವಜನಿಕ ಗ್ರಂಥಾಲಯ ಇಲಾಖೆಯ ನಿರ್ದೇಶಕರಾಗಿದ್ದ ಡಾ. ಎಸ್.ಡಿ. ಬಗರಿ ಅವರಿಗೆ ಒಂದು ಗೌರವ ಗ್ರಂಥ ಅರ್ಪಣೆಯಾಗುವುದಿತ್ತು. ಅದರ ಎಲ್ಲ ಲೇಖನಗಳನ್ನು ನೋಡಿ, ಪ್ರೂಫು ತಿದ್ದಿಕೊಡುವಂತೆ ಛಾಯಾಪತಿ ನನಗೆ ತಿಳಿಸಿದರು. ಅದರಂತೆ ನಾನು ನನ್ನ ಕೈಲಾದ ಎಲ್ಲ ಕೆಲಸ ಮಾಡಿದೆ. ಆ ಗ್ರಂಥಕ್ಕೆ ಬೆನ್ನುಡಿಯನ್ನು ಬರೆದೆ. ನನ್ನ ಹೆಸರು ಹಾಕಿರಲಿಲ್ಲ. ಅದನ್ನು ಅಚ್ಚುಕಟ್ಟಾಗಿ ಮುದ್ರಿಸಿ ಅರ್ಪಿಸುವ ಕೆಲಸವನ್ನು ಛಾಯಾಪತಿ ನೋಡಿಕೊಂಡರು. ಆ ಅಭಿನಂದನ ಗ್ರಂಥ - A Bouquet of Flowers - ಅನ್ನು ನೋಡಿ ಮಾನ್ಯ ಬಗರಿ ಅವರು ಬಹಳ ಸಂತೋಷಪಟ್ಟರಂತೆ. "ಏನ್ರೀ, ಇಷ್ಟು ಚೆನ್ನಾಗಿ ಬಂದಿದೆ. ಇಷ್ಟೆಲ್ಲ ಕೆಲಸ ಯಾರು ಮಾಡಿದ್ದು?" ಎಂದು ಬಗರಿ ಅವರು ಕೇಳಿದರಂತೆ. ಅದಕ್ಕೆ ಛಾಯಾಪತಿ "ನನ್ನ ಗೆಳೆಯ ಸರ್, ಇಂಗ್ಲಿಷ್ ಪ್ರಾಧ್ಯಾಪಕ, ಒಳ್ಳೆಯ ಲೇಖಕ" ಎಂದು ಹೇಳಿದಾಗ "ಅವರನ್ನು ನೋಡಿಬೇಕ್ರಿ. ಅವರನ್ನು ಕರೆದುಕೊಂಡು ಬನ್ನಿ. ಇಲ್ಲವಾದರೆ ನಾನು ಮೈಸೂರಿಗೆ ಬಂದಾಗ ಭೇಟಿ ಮಾಡಿಸಿ", ಎಂದು ಬಗರಿಯವರು ಹೇಳಿದರೆಂದು ಛಾಯಾಪತಿಯವರು ನನಗೆ ತಿಳಿಸಿದರು.

ಬಗರಿ ಅವರು ಎರಡು ಮೂರು ಸಾರಿ ಮೈಸೂರಿಗೆ ಬಂದಾಗ ನಾನು ಅವರನ್ನು ಕಾಣಲಾಗಲಿಲ್ಲ. ಕಾರಣ, ನಮ್ಮ ತಂದೆಯವರು ಜಮೀನಿನ ಏನೋ ತಕರಾರು ಹೇಳಿದ್ದರಿಂದ ಆ ಬಗ್ಗೆ ನಿಗಾವಹಿಸಲು ಊರಿಗೆ ಹೋಗಿ ಬಿಟ್ಟಿದ್ದೆ. ಆ ಮೇಲೆ ಛಾಯಾಪತಿ ಭೇಟಿಯಾಗಿ, "ಏನಪ್ಪ ನೀನು. ಬಗರಿ ಅವರು ಬಂದಾಗಲೆಲ್ಲ ನೀನು ಸಿಗೋದೇ ಇಲ್ಲ. ನಿನ್ನನ್ನು ನೋಡಬೇಕು ಅಂತ ಅವರು ಎಷ್ಟು ಇಷ್ಟಪಟ್ಟಿದ್ದಾರೆ, ಗೊತ್ತ? ಬೆಂಗಳೂರಿಗೆ ಹೋದಾಗ ಅವರನ್ನು ತಪ್ಪದೆ ನೋಡು", ಎಂದು ನನಗೆ ತಾಕೀತು ಮಾಡಿದರು.

ಬಗರಿಯವರು ಬಂದಾಗಲೆಲ್ಲ ನಾನು ಮೈಸೂರಿನಲ್ಲಿ ಇರಲಾಗಲಿಲ್ಲವಲ್ಲ ಎಂದು ಪೇಚಾಡಿಕೊಂಡೆ. ಈ ಸಾರಿ ಬೆಂಗಳೂರಿಗೆ ಹೋದಾಗ ಅವರನ್ನು ನೋಡಲೇಬೇಕು.

ಇಲ್ಲ ಅವರನ್ನು ಭೇಟಿ ಮಾಡುವುದಕ್ಕಾಗೇ ಹೋಗಬೇಕು ಎಂದು ನಿರ್ಧರಿಸಿದೆನು. ನೋಡದಿದ್ದರೆ ಛಾಯಿ ಬೇಸರಪಟ್ಟುಕೊಳ್ಳುತ್ತಾರೆ ಎಂದು ಚಡಪಡಿಸಿದೆ.

ಆಗ ನಾನು ಮೈಸೂರು ವಿಶ್ವವಿದ್ಯಾನಿಲಯದ ಸಂಜೆ ಕಾಲೇಜಿನಲ್ಲಿ ಕೆಲಸ ಮಾಡುತ್ತಿದ್ದರಿಂದ ಮುಂಜಾನೆ ಹೋಗಿ ಸಂಜೆ ವಾಪಸ್ಸು ಬಂದು ಬಿಡೋಣ ಎಂದು ಹೊರಟೆ. ಕಬ್ಬನ್‌ಪಾರ್ಕ್‌ನಲ್ಲಿರುವ ರಾಜ್ಯ ಗ್ರಂಥಾಲಯ ಕಛೇರಿಯಲ್ಲಿ ನಾನು ತಲುಪಿದಾಗ ಬೆಳಿಗ್ಗೆ ಹನ್ನೊಂದು ಗಂಟೆ. ಬಗರಿ ಅವರು ಸಭೆ -ಮೀಟಿಂಗ್‌ನಲ್ಲಿ ಇದ್ದಾರೆಂದು ಗೊತ್ತಾಯಿತು. ನಾನು ಸಂಜೆ ಕಾಲೇಜಿನ ಹೊತ್ತಿಗೆ ಹಿಂದಿರುಗಬೇಕಾಗಿದ್ದರಿಂದ, "ಹೆಚ್ಚು ಕಾಯಲು ಸಮಯ ಇಲ್ಲ, ನೋಡೋಣ. ಚೀಟಿ ಕಳುಹಿಸುತ್ತೇನೆ" ಎಂದು ಸಂಕೋಚದಿಂದ ಸೇವಕನ ಹಸ್ತ ನನ್ನ ಹೆಸರು ಬರೆದು ಚೀಟಿ ಕಳುಹಿಸಿದೆ. ಕೂಡಲೇ ಆತ ಬಂದು, "ಸರ್, ನಿಮ್ಮನ್ನು ಸಾಹೇಬರು ಕರೆಯುತ್ತಿದ್ದಾರೆ. ಒಳಗೆ ಹೋಗಿ" ಎಂದರು. ನಾನು ನಿರ್ದೇಶಕರಿಗೆ ಕೈ ಮುಗಿದು ಇನ್ನೂ ಕುರ್ಚಿಯಲ್ಲಿ ಕುಳಿತಿಲ್ಲ. ಆಗಲೇ ಬಗರಿ ಅವರು "ಏನ್ ತಗೊಳ್ತೀರಿ? ತಿಂಡಿ ತಗೊಳ್ಳಿ" ಎಂದರು. "ಇಲ್ಲ ಸರ್, ತಿಂಡಿ ಆಗಿದೆ" ಎಂದೆ. "ಇಲ್ಲ, ಇಲ್ಲ, ನೀವು ಏನಾದ್ರೂ ತಗೊಳ್ಳಲೇಬೇಕು. ಮೊದಲ ಸಲ ಬಂದಿದ್ದೀರಿ," ಎಂದವರು, ನನ್ನ ಉತ್ತರಕ್ಕೆ ಕಾಯದೆ ತಿಂಡಿ ತರಿಸಿಯೇ ಬಿಟ್ಟರು. ಆಮೇಲೆ ಕಾಫಿ ಸೇವನ ಆಯಿತು.

ತದನಂತರ ಸಾವಕಾಶವಾಗಿ ನನ್ನ ಬಗ್ಗೆ ಬಗರಿ ಅವರು ವಿಚಾರಿಸಿಕೊಂಡರು. ನಾನು ಬರೆದಿರುವ ಯಾವುದಾದರೂ ಪುಸ್ತಕ ಇದೆಯೇ? ಅದನ್ನು ಗ್ರಂಥಾಲಯಗಳಿಗೆ ಕೊಂಡುಕೊಳ್ಳಲು ಏರ್ಪಾಡು ಮಾಡುತ್ತೇನೆ, ಎಂದರು. ನಾನು "ಈಗಿಲ್ಲ, ಒಂದು ಕೃತಿಯನ್ನು ತರಬೇಕೆಂದಿದ್ದೇನೆ, ಸಿದ್ಧವಿದೆ. ಬೇರೊಬ್ಬ ಪ್ರಕಾಶಕರಿಂದ ತೊಂದರೆ ಆಯ್ತು. ಆದ್ದರಿಂದ ಸದ್ಯಕ್ಕೆ ಸುಮ್ಮನಿದ್ದೇನೆ" ಎಂದೆ. ಬಗರಿ ಅವರು, "ನೀವು ಪ್ರಕಟಿಸಿರಿ, ನೀವೇ ಅದಕ್ಕೆ ಪ್ರಕಾಶಕರಾಗಿ, ಲೇಖಕ-ಪ್ರಕಾಶಕ ಯೋಜನೆ ಅಂತ ಮಾಡಿದ್ದೀನಿ, ಲೇಖಕರಿಗೆ ಸಹಾಯ ಮಾಡಲಿಕ್ಕೆ ಅಂತಾನೆ ಈ ಯೋಜನೆ ಇದೆ. ಅವರ ವತಿಯಲ್ಲಿ ನಿಮ್ಮ ಪುಸ್ತಕ ಕೊಂಡುಕೊಳ್ಳಲು ಸಾಧ್ಯವಾಗುತ್ತದೆ. ಹತ್ತು ರೂಪಾಯಿ ಬೆಲೆ ಇಟ್ಟರೆ ಆ ಪುಸ್ತಕ ಸಮಿತಿ ಮುಂದೆ ಹೋಗಬೇಕಾಗುತ್ತ. ಒಂಬತ್ತು ರೂಪಾಯಿ ಬೆಲೆ ಇಟ್ಟರೆ ನಿರ್ದೇಶಕನಾಗಿ ನಾನೇ ನೇರವಾಗಿ ಆಯ್ಕೆ ಮಾಡಬಹುದು" ಎಂದರು.

ಅದರಂತೆ ನಾನು 1978ರಲ್ಲಿ ನನ್ನ ಮೊದಲ ವಿಮರ್ಶಾ ಸಂಕಲನ 'ಅಂತರ್ಯ' ಹೊರತಂದೆ. ಯೋಜನೆಯ ಪ್ರಕಾರ ಅದರ ಮುನ್ನೂರು ಪ್ರತಿಗಳನ್ನು ಬಗರಿ ಅವರು ಕೊಂಡುಕೊಂಡರು. ಈ ಕೃತಿಯ ಪ್ರಕಟಣೆಗೆ ನಾನು ಖರ್ಚು ಮಾಡಿದ್ದ ಹಣ ಬಂತು. ಉಳಿದ ಪ್ರತಿಗಳನ್ನು ಓದುವ ಆಸಕ್ತರಿಗೆಲ್ಲ ಹಂಚಿದೆ. ಬಗರಿ ಅವರಿಗೆ ಕೃತಜ್ಞತೆ ಹೇಳಲು ಹೋದಾಗ ಅವರು ಸಂತೋಷ ಪಟ್ಟರು.

"ಆರ್‌ಆರ್‌ಎಲ್‌ಎಫ್ - ರಾಜಾರಾವ್ ಮೋಹನ್‌ರಾಯ್ ಲೈಬ್ರರಿ ಫೌಂಡೇಶನ್ - ಯೋಜನೆ ಇದೆ. ಅದಕ್ಕೂ ಅಪ್ಲೈ ಮಾಡಿ. ಆ ಯೋಜನೆಯಲ್ಲಿ ಐದು ನೂರು ಪ್ರತಿಗಳನ್ನು ತೆಗೆದುಕೊಳ್ಳುತ್ತೇವೆ" ಎಂದರು ಬಗರಿ ಅವರು. 'ಅಂತರ್ಯ' (1980ರಲ್ಲಿ) ಎರಡನೆಯ ಆವೃತ್ತಿ ಬಂತು. ಒಂದು ವಿಮರ್ಶಾ ಕೃತಿ ಇಷ್ಟು ಬೇಗ ಎರಡನೆಯ ಮುದ್ರಣ ಬಂದದ್ದು ಇದೊಂದೇ ಎಂದು ಎಂದು ಗೆಳೆಯರು ಖುಷಿ ಗೊಂಡರು.

ಇದೆಲ್ಲದರ ಹಿಂದೆ ಆಪ್ತಬಂಧು ಛಾಯಾಪತಿಯವರ ಸದಾಶಯ ಕೆಲಸ ಮಾಡಿದೆ. ಅವರ ಉಪಕಾರದ ಹೊರೆ ನನ್ನ ಮೇಲೆ ಅಪಾರವಾಗಿದೆ. ಛಾಯಿಯವರನ್ನು ನಾನು ಸದಾ ನೆನೆಯುತ್ತೇನೆ.

ಕನ್ನಡ ಸಾಹಿತ್ಯವನ್ನು ಬೆಳೆಸುವಂಥ ಅತ್ಯುತ್ತಮ ಕೃತಿಗಳನ್ನು ಛಾಯಾಪತಿ ಪ್ರಕಟಿಸಿದ್ದಾರೆ. ಅವರ ಸಾಧನೆಗೆ ಪುಸ್ತಕ ಪ್ರಾಧಿಕಾರದ ಪ್ರಶಸ್ತಿ ಲಭಿಸಿದೆ. ಛಾಯಾಪತಿ ಅವರ ಪುಸ್ತಕ ಪ್ರಕಟಣೆ ಸೇವೆಗೆ ರಾಷ್ಟ್ರದ ಪದ್ಮಶ್ರೀ ಪ್ರಶಸ್ತಿ ಹಾಗೂ ರಾಜ್ಯೋತ್ಸವ ಪ್ರಶಸ್ತಿ ಅವರಿಗೆ ಬರಬೇಕೆಂದು ಆಶಿಸುತ್ತೇನೆ. ಬಂದೇ ಬರುತ್ತವೆಂದು ನನ್ನ ನಂಬಿಕೆ. ಅವರಿಗೆ ತಾಯಿ ಸರಸ್ವತಿ ದೇವಿಯ ಅಪಾರ ಆಶೀರ್ವಾದ ಇದೆ.

ಛಾಯಾಪತಿಯವರು ಸ್ವತಃ ಒಳ್ಳೆಯ ಲೇಖಕರು. ಅವರ ಅನೇಕ ಕೃತಿಗಳು ಓದುಗರ ಪ್ರೀತಿಗೆ ಪಾತ್ರವಾಗಿವೆ. ಅವರ ಸೇವೆ- ಪುಸ್ತಕ ಪ್ರಕಾಶನ ಮತ್ತು ಪುಸ್ತಕ ರಚನೆ - ನಿರಂತರವಾಗಿ ಸಾಗಲಿ ಎಂದು ಹಾರೈಸುತ್ತೇನೆ.

'ಆತ್ಮಾಸಂಪುತ್ರನಾಮುಷಿ'

## ಆದರ್ಶ ಪುಸ್ತಕ ಪ್ರಕಾಶಕ ಛಾಯಾಪತಿ

ಎದೆ ತುಂಬಿ ಹಾಡಿದೆನು ಅಂದು ನಾನು
ಮನವಿಟ್ಟು ಕೇಳಿದಿರಿ ಅಲ್ಲಿ ನೀವು
ಇಂದು ನಾ ಹಾಡಿದರು ಅಂದಿನಂತೆಯೆ ಕುಳಿತು
ಕೇಳುವಿರಿ ಸಾಕೆನಗೆ ಅದುವೆ ಬಹುಮಾನ
ಹಾಡು ಹಕ್ಕಿಗೆ ಬೇಕೆ ಬಿರುದು ಸನ್ಮಾನ?
ಎಲ್ಲ ಕೇಳಲಿ ಎಂದು ನಾನು ಹಾಡವದಿಲ್ಲ
ಹಾಡುವದು ಅನಿವಾರ್ಯ ಕರ್ಮ ನನಗೆ
ಕೇಳುವವರಿಹರೆಂದು ನಾ ಬಲ್ಲೆನದರಿಂದ
ಹಾಡುವೆನು ಮೈದುಂಬಿ ಎಂದಿನಂತೆ
ಯಾರು ಕಿವಿ ಮುಚ್ಚಿದರು ನನಗಿಲ್ಲ ಚಿಂತೆ.



ಆಧುನಿಕ ಕನ್ನಡ ಸಾಹಿತ್ಯಪ್ರಪಂಚದಲ್ಲಿ ಹೆಸರಾಂತ ಕನ್ನಡ ಪ್ರಾಧ್ಯಾಪಕ, ವಿದ್ವಾಂಸ, ಸಾಹಿತ್ಯಚರಿತ್ರೆಕಾರ ತ.ಸು. ಶಾಮರಾಯರನ್ನು ಕುರಿತು ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರು ಬರೆದ ಪ್ರಸಿದ್ಧವಾದ ಕವಿತೆ ಇದಾಗಿದೆ. ಮೈಸೂರಿನಲ್ಲಿ ಪ್ರತಿಭಾವಂತ ವಿದ್ಯಾರ್ಥಿಯಾಗಿ ಕಷ್ಟದಲ್ಲಿದ್ದ ಜಿ.ಎಸ್. ಶಿವರುದ್ರಪ್ಪನವರಿಗೆ ಮನೆಗೆ ಕರೆದು ಅನ್ನಹಾಕಿ ಅವರನ್ನು ಬೆಳೆಸಿದ ಮಹಾವ್ಯಕ್ತಿ ತ.ಸು. ಶಾಮರಾಯರು. ಶಿವರುದ್ರಪ್ಪನವರ ಕವಿತಾ ಸಂಕಲನವನ್ನು ಪ್ರಕಟಿಸಿ ಅವರ ಪ್ರತಿಭೆಯ ಉತ್ಕರ್ಷಕ್ಕೆ ಕಾರಣರಾದ ತ.ಸು. ಶಾಮರಾಯರು ಮೈಸೂರಿನಲ್ಲಿ ತಳುಕಿನ ವೆಂಕಣ್ಣಯ್ಯ ಗ್ರಂಥಮಾಲೆ ಪ್ರಾರಂಭಿಸಿದರು. ಪ್ರತಿಭಾವಂತರ ಪುಸ್ತಕಗಳನ್ನು ಈ ಗ್ರಂಥಮಾಲೆಯ ಮೂಲಕ ಪ್ರಕಟಿಸಿದರು. ಅವರು ಅನೇಕ ಲೇಖಕರ ಬದುಕಿನಲ್ಲಿ ಡಾ. ಶಿವರುದ್ರಪ್ಪನವರು ಹೇಳುವಂತೆ 'ಪ್ರತಿಮಾಶಿಲ್ಪಿ' ಆಗಿದ್ದಾರೆ. ತ.ಸು. ಶಾಮರಾಯರ ವಿಶಾಲ ದೃಷ್ಟಿ, ಔದಾರ್ಯ, ಸಜ್ಜನಿಕೆ ಕನ್ನಡ

---

ಡಾ. ಜಿ.ಎಂ. ಹೆಗಡೆ

---

ಪ್ರೀತಿ ಅದ್ವಿತೀಯವಾದದ್ದು. ತ.ಸು. ಶಾಮರಾಯರು ಹಿರಿದಾದ ಜೀವನ ನಡೆಸಿದವರು. ಅವರು ವ್ಯಕ್ತಿಯಾಗಿ ಸಾಹಿತಿಯಾಗಿ ದೊಡ್ಡವರು. ಶಾಮರಾಯರ 'ಕನ್ನಡ ಸಾಹಿತ್ಯ ಚರಿತ್ರೆ' ಶಬ್ದಮಣಿದರ್ಪಣ, ಗ್ರಂಥಸಂಪಾದನೆಯ ಕೃತಿಗಳನ್ನು ಈಗಲೂ ಕನ್ನಡ ವಿದ್ಯಾರ್ಥಿಗಳು ಓದುತ್ತಾರೆ. ಶಾಮರಾಯರು ನಮ್ಮ ನಡುವೆ ಇಲ್ಲ. ಆದರೆ ಅವರು ಬಿಟ್ಟು ಹೋದ ಸಾಹಿತ್ಯ ರಾಶಿ ಮುಖ್ಯವಾಗಿ ತ.ವೆಂ. ಸ್ಮಾರಕ ಗ್ರಂಥಮಾಲೆ ನಮ್ಮ ಮುಂದೆ ಇದೆ.

ತ.ಸು. ಶಾಮರಾಯರ ನೆನಪನ್ನು ಚಿರಸ್ಥಾಯಿಗೊಳಿಸುವ ಉದ್ದೇಶದಿಂದ ಅವರು ಆರಂಭಿಸಿದ ತ.ವೆಂ. ಸ್ಮಾರಕ ಗ್ರಂಥಮಾಲೆಯನ್ನು ಮುನ್ನಡೆಸಿದವರು ಅವರ ಸತ್ಪುತ್ರ ಛಾಯಾಪತಿ ಅವರು. ಸಿಂಹದ ಉದರದಲ್ಲಿ ಸಿಂಹವೇ ಹುಟ್ಟುತ್ತದೆ ಎಂಬಂತೆ ತ.ಸು. ಶಾಮರಾಯರ ಮಗ ಛಾಯಾಪತಿ ಕನ್ನಡದ ಅಪರೂಪದ ಪುಸ್ತಕ ಪ್ರಕಾಶಕರಾಗಿದ್ದಾರೆ. ವಾಣಿಜ್ಯ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದ ಛಾಯಾಪತಿ ಅವರು ಮನಸ್ಸು ಮಾಡಿದ್ದರೆ ಪ್ರಾಧ್ಯಾಪಕರಾಗಿ, ಲೆಕ್ಕಶಾಸ್ತ್ರ ಪರಿಶೋಧಕರಾಗಿ, ಬ್ಯಾಂಕ್ ಅಧಿಕಾರಿಯಾಗಿ ಹೋಗಬಹುದಿತ್ತು. ಅದು ಕನ್ನಡಕ್ಕೆ ಆಗುವ ನಷ್ಟ. ತಂದೆ ತ.ಸು. ಶಾಮರಾಯರ ಮೇಲಿನ ಪಿತೃಭಕ್ತಿಯಿಂದ ಅವರು ತ.ವೆಂ. ಸ್ಮಾರಕ ಗ್ರಂಥಮಾಲೆಯ ಮೂಲಕ ಪುಸ್ತಕ ಪ್ರಕಟಣೆಯ ಕಾರ್ಯವನ್ನು ಕೈಕೊಂಡು ಕಳೆದ ಅರ್ಧಶತಮಾನದಲ್ಲಿ ಸಾವಿರ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಪುಸ್ತಕ ಪ್ರಕಾಶನವನ್ನು ಅತ್ಯಂತ ಪ್ರೀತಿ ಶ್ರದ್ಧೆಗಳಿಂದ ಮಾಡಿದ ಛಾಯಾಪತಿ ಕನ್ನಡದ ಕವಿಲೇಖಕರಿಗೆ ಪ್ರಿಯರಾಗಿದ್ದಾರೆ.

ಛಾಯಾಪತಿ ಅವರು ಕನ್ನಡ ಪುಸ್ತಕ ಪ್ರಕಟಣೆಯಲ್ಲಿ ಬಾಳನ್ನು ಸವೆಸಿದ್ದಾರೆ. ಪುಸ್ತಕ ಪ್ರಕಾಶನ ಈಗ ಉದ್ಯಮವಾಗಿ ಬೆಳೆದಿದೆ. ಆದರ್ಶಗಳು ಕಣ್ಮರೆಯಾಗಿವೆ. ಯಾವುದೇ ಒಂದು ಪ್ರಕಾಶನ ಸಂಸ್ಥೆ ಉದ್ಯಮ ಸಂಸ್ಥೆಯಾದಾಗ ಹಣದ ಹಿಂದೆ ಹೋಗುವದು ಸಾಮಾನ್ಯ, ಅಲ್ಲಿ ಪ್ರೀತಿ, ಸ್ನೇಹ ಕಣ್ಮರೆಯಾಗುತ್ತದೆ. ಉದ್ಯಮರಂಗದಲ್ಲಿ ನಡೆಯುವ ಅವ್ಯವಹಾರಗಳು ಪುಸ್ತಕೋದ್ಯಮದಲ್ಲೂ ನಡೆಯುತ್ತವೆ. ಅನೇಕ ಹೆಸರುಗಳನ್ನು ಇಟ್ಟುಕೊಂಡ ಒಂದೇ ಪುಸ್ತಕ ಸಂಸ್ಥೆ ಸರಕಾರ ನೀಡುವ ಗ್ರಂಥ ಖರೀದಿಯ ಎಲ್ಲ ಅವ್ಯವಹಾರಗಳನ್ನು ಮಾಡುತ್ತದೆ. ಆದರೆ ಛಾಯಾಪತಿ ಪುಸ್ತಕ ಪ್ರಕಾಶನವನ್ನು ಒಂದು ಆದರ್ಶವಾಗಿ ಸ್ವೀಕರಿಸಿದ್ದಾರೆ. ಅವರಲ್ಲಿ ಲೇಖಕರಿಗೆ ಗೌರವ, ಸಹಾಯ ಮಾಡುವ ಉದ್ದೇಶವೆ ಪ್ರಧಾನವಾದದ್ದು. ಹೀಗೆ ಮಾಡುವಾಗ ಛಾಯಾಪತಿ ಅವರಿಗೆ ಪುಸ್ತಕಗಳ ಬಗೆಗೆ ಪ್ರೀತಿಯಿದೆ. ಲೇಖಕರ ಬಗೆಗೆ ಆದರಭಾವವಿದೆ. ನಯ ವಿನಯಗಳು ಅವರ ವ್ಯಕ್ತಿತ್ವದ ವಿಶಿಷ್ಟ ಗುಣಗಳಾಗಿವೆ. ಅವರೆಂದೂ ಸಿಟ್ಟಿಗೇಳಲಿಲ್ಲ. ಜಗಳಾಡಲಿಲ್ಲ. ಎಲ್ಲವನ್ನೂ ನಯವಾಗಿ, ಪ್ರೀತಿ, ಶ್ರದ್ಧೆಯಿಂದ ಮಾಡುತ್ತ ಬಂದಿದ್ದಾರೆ.

ಛಾಯಾಪತಿ ಅವರಿಗೆ ಉತ್ತಮವಾದ ಸಾಹಿತ್ಯಾಭಿರುಚಿಯಿದೆ. ಇದು ಅವರು ಪ್ರಕಟಿಸಿದ ಪುಸ್ತಕಗಳನ್ನು ನೋಡಿದರೆ ತಿಳಿಯುತ್ತದೆ. ಕಾವ್ಯ, ನಾಟಕ, ವಿಮರ್ಶೆ, ಸಂಶೋಧನೆ, ಕಾವ್ಯಮೀಮಾಂಸೆ, ಛಂದಸ್ಸು, ಸಾಹಿತ್ಯಚರಿತ್ರೆ, ಗ್ರಂಥಸಂಪಾದನೆ, ಅಭಿನಂದನಾ ಗ್ರಂಥ, ವಿಚಾರ ಸಾಹಿತ್ಯ, ಶಿಶುಸಾಹಿತ್ಯ ಹೀಗೆ ವೈವಿಧ್ಯಮಯವಾದ ಸಾಹಿತ್ಯವನ್ನು ಛಾಯಾಪತಿ ಪ್ರಕಟಿಸಿದ್ದಾರೆ. ತ.ವೆಂ. ಸ್ಮಾರಕ ಗ್ರಂಥಮಾಲೆ ಸಾವಿರ ಪುಸ್ತಕಗಳನ್ನು ಹೇಗೆ ಪ್ರಕಾಶನಗೊಳಿಸಿತು? ಎಂಬುದು ಎಲ್ಲರಿಗೂ ಆಶ್ಚರ್ಯದ ವಿಷಯವೇ ಆಗಿದೆ.

ಛಾಯಾಪತಿ ಅವರು ಹಾಮಾ ನಾಯಕ ಅವರು ಹೇಳುವಂತೆ ಪುಸ್ತಕ ಸಂಸ್ಕೃತಿಯ ಪ್ರತಿಪಾದಕರು. ಜನ ಮೆಚ್ಚುವ ಪುಸ್ತಕವನ್ನು ಅಂದವಾಗಿ ಕಡಿಮೆಬೆಲೆಯಲ್ಲಿ ಅವರು ಮುದ್ರಣ ಗೊಳಿಸಿದ್ದಾರೆ. ಧಾರವಾಡದ ಹಿರಿಯ ಕವಿ ಚೆನ್ನವೀರಕಣವಿ ಅವರ ಸಮಗ್ರ ಕಾವ್ಯ 'ಹೊಂಬೆಳಕು' ಬೃಹತ್ ಕೃತಿಯನ್ನು ಛಾಯಾಪತಿ ಅವರು ಹದಿನೇಳು ಬಿಡಿ ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ. ಇದು ಜನಸಾಮಾನ್ಯರಿಗೆ ಓದಲು ತುಂಬ ಸುಲಭ. ಬೆಲೆಯೇರಿಕೆಯ ಈ ದಿನಗಳಲ್ಲಿ ಚಿಕ್ಕ ಚಿಕ್ಕ ಪುಸ್ತಕಗಳು ಹೆಚ್ಚು ಮಾರಾಟವಾಗುತ್ತವೆ. ಕೊಳ್ಳುವವರ ದೃಷ್ಟಿಯಿಂದಲೂ, ಬೇಕಾದ ಕವಿತಾ ಸಂಕಲನವನ್ನು ಆಯ್ಕೆ ಮಾಡಿ ಕೊಂಡು ಆಸ್ವಾದಿಸಲು ಸಾಧ್ಯವಾಗುತ್ತದೆ.

ಛಾಯಾಪತಿ ಪ್ರಕಟಿಸುತ್ತಿರುವ ಪುಸ್ತಕಗಳು ಆಕಾರ ಮತ್ತು ಅಂದದ ದೃಷ್ಟಿಯಿಂದ ವಿಭಿನ್ನ ಸ್ವರೂಪದ್ದಾಗಿವೆ. ಒಂದೊಂದು ಪುಸ್ತಕವೂ ಸುಂದರವಾದ ಹಾಳೆ, ಅಚ್ಚುಕಟ್ಟಾದ ಅಕ್ಷರ ಜೋಡಣೆ, ಅಂದವಾದ ಕಲಾವಿನ್ಯಾಸದಿಂದ ಮನ ಸೆಳೆಯುತ್ತದೆ. ಛಾಯಾಪತಿ ಅವರು ಕನ್ನಡ ಪ್ರಚಾರಕರೂ ಆಗಿದ್ದಾರೆ. ಪ್ರತಿವರ್ಷ ಕಾಲೇಜು ಆರಂಭವಾಗುವ ವೇಳೆಗೆ ಶಾಲೆ ಕಾಲೇಜುಗಳಿಗೆ ಭೇಟಿ ನೀಡಿ ಪುಸ್ತಕ ಮಾರಾಟ ಮಾಡಿಕೊಂಡು ಬರುತ್ತಾರೆ. ಅವರಿಗೆ ಆದರ್ಶ ಮತ್ತು ವ್ಯಾವಹಾರಿಕತೆಯೆರಡೂ ಸಮಪ್ರಮಾಣದಲ್ಲಿರಬೇಕು ಛಾಯಾಪತಿ ವಿದ್ಯಾರ್ಥಿಗಳ ದೃಷ್ಟಿಯಿಂದ ಪ್ರಕಟಿಸಿದ ಪುಸ್ತಕಗಳು ಗಮನ ಸೆಳೆಯುತ್ತವೆ. ಪಠ್ಯ ವಿಷಯಗಳ ಜೊತೆಗೆ ಅವರು ಸಾಹಿತ್ಯಾಭಿರುಚಿಯ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಲೇಖಕರ ಬಗೆಗೆ ಪ್ರೀತ್ಯಾದರವನ್ನು ಬೆಳೆಸುವದು ಅವರ ಪ್ರಕಾಶನದ ಮುಖ್ಯ ಧೋರಣೆಯಾಗಿದೆ.

ಛಾಯಾಪತಿ ಪ್ರಕಟಿಸಿದ ಸಾವಿರ ಪುಟಗಳ ಬೃಹತ್ ಗ್ರಂಥಗಳು ಕನ್ನಡ ವಿದ್ವತ್ ಲೋಕವನ್ನೇ ಗೌರವಿಸಿದಂತಾಗಿದೆ. ತ.ವೆಂ. ಸ್ಮಾರಕ ಗ್ರಂಥಮಾಲೆಯ 'ಸ್ವಸ್ತಿ' ಒಂದು ಪ್ರಮಾಣ ಭೂತವಾದ ಗ್ರಂಥವಾಗಿದೆ. ಕನ್ನಡದ ಮಹತ್ವದ ಕೃತಿಗಳ ಸಮೀಕ್ಷೆ 'ಸ್ವಸ್ತಿ' ಗ್ರಂಥದ ವಿಶಿಷ್ಟತೆಯಾಗಿದೆ. 'ಸ್ವಸ್ತಿ' ವಿದ್ಯಾರ್ಥಿಗಳಿಗೆ ತುಂಬ ಉಪಯುಕ್ತವಾದ ಆಕರ ಗ್ರಂಥ. ಕನ್ನಡದ ಮಹತ್ವದ ಸಾಹಿತ್ಯ ಕೃತಿಗಳ ವಿಮರ್ಶೆ ಇಲ್ಲಿ ಬಂದಿದೆ.

ಕನ್ನಡದ ಖ್ಯಾತ ಅಂಕಣಗಾರ ಹಾ ಮಾ ನಾಯಕರ 'ಪ್ರಣಯ ಪದಾವಳಿ' ಅಂದವಾದ ಸಂಪುಟವನ್ನು ಛಾಯಾಪತಿ ಪ್ರಕಟಿಸಿದ್ದಾರೆ. ಎಚ್ಚೆಸ್ಕೆಯವರ ವ್ಯಕ್ತಿಚಿತ್ರ ಸಂಪುಟ 'ಬೆಳಕು ಚೆಲ್ಲಿದ ಬದುಕು', 'ಮಾನ್ಯರು ಸಾಮಾನ್ಯರು', 'ಗಗನ ಚುಕ್ಕಿ ಭರಚುಕ್ಕಿ' ಪುಸ್ತಕಗಳನ್ನು ಛಾಯಾಪತಿ ತಂದಿದ್ದಾರೆ. ಡಿ.ಎಲ್.ಎನ್., ಕುವೆಂಪು, ತರಾಸು, ಚದುರಂಗ, ಗೊರೂರು, ಪುತಿನ, ಅನಂತಮೂರ್ತಿ, ಕೆ.ಎಸ್.ನಿಸಾರ್ ಅಹಮ್ಮದ್, ದೇಜಗೌ, ವೆಂಕಟಾಚಲಶಾಸ್ತ್ರಿ, ಮೊದಲಾದ ಸಾಹಿತ್ಯ ದಿಗ್ಗಜರ ಕೃತಿಗಳನ್ನು ಪ್ರಕಟಿಸಿದ ಹೆಗ್ಗಳಿಕೆ - ಛಾಯಾಪತಿ ಅವರದಾಗಿದೆ- ಹೊಸ ತಲೆಮಾರಿನ ಲೇಖಕರ ಕೃತಿ ಪ್ರಕಟಣೆಯಲ್ಲೂ ಛಾಯಾಪತಿ ಮುಂದಿದ್ದಾರೆ - ಕಥೆ ಕಾದಂಬರಿಗಳನ್ನು ಪ್ರಕಟಿಸುವ ಪ್ರಕಾಶಕರು ಎಲ್ಲೆಲ್ಲೂ ಕಾಣಸುತ್ತಾರೆ. ಆದರೆ ಗಂಭೀರಸಾಹಿತ್ಯದ ಓದು ಹಾಗೂ ಪ್ರಕಟಣೆ ಕಡಿಮೆಯಾಗುತ್ತಿರುವ ಸಂದರ್ಭದಲ್ಲಿ ಅದರ ಸಂವರ್ಧನೆಗೆ ಛಾಯಾಪತಿ ಶ್ರಮಿಸಿದ್ದಾರೆ ಎನ್ನಿಸುತ್ತದೆ.

ಕನ್ನಡ ಪುಸ್ತಕಗಳನ್ನು ಮನೆ ಮನೆಗೆ ಕೊಂಡೊಯ್ದು ಅವುಗಳನ್ನು ಮಾರಾಟ ಮಾಡಿದ ಛಾಯಾಪತಿ ಅವರು ಪುಸ್ತಕದ ಓದಿನ ರುಚಿ ಅಭಿರುಚಿ ಬೆಳೆಯುವಂತೆ ಮಾಡಿದ್ದಾರೆ. ಪುಸ್ತಕ ಪ್ರಕಾಶನ ಎಷ್ಟು ಮಹತ್ವದ್ದೋ ಅಷ್ಟೇ ಮಹತ್ವದ್ದು ಅವುಗಳ ಮಾರಾಟ. ಇದು ನಗರ ಪ್ರದೇಶಕ್ಕೆ ಮಾತ್ರ ಸೀಮಿತವಾಗದೆ ಬೇರೆ ಬೇರೆ ಗ್ರಾಮೀಣ ಪ್ರದೇಶಕ್ಕೂ ಕನ್ನಡ ಸಾಹಿತ್ಯ ತಲುಪುವಂತೆ ಮಾಡಿದ್ದಾರೆ. ಛಾಯಾಪತಿ ಅವರು ಒಂದು ವಾಹನ ಮಾಡಿಕೊಂಡು ಅದರಲ್ಲಿ ಪುಸ್ತಕ ತುಂಬಿಕೊಂಡು ಮೈಸೂರಿನಿಂದ ಧಾರವಾಡ ದವರೆಗೆ ಬರುತ್ತಾರೆ. ದಾರಿಯಲ್ಲಿ ಸಿಗುವ ಎಲ್ಲ ಮಾರಾಟಕೇಂದ್ರಗಳಿಗೂ ಶಾಲಾ ಕಾಲೇಜು ಗ್ರಂಥಾಲಯಗಳಿಗೂ, ಖಾಸಗಿ ಪುಸ್ತಕ ಭಂಡಾರಗಳಿಗೂ ಭೇಟಿ ನೀಡಿ ಪುಸ್ತಕ ತಲುಪಿಸುವ ಕೆಲಸವನ್ನು ತುಂಬ ಶ್ರದ್ಧೆಯಿಂದ ಮಾಡುತ್ತ ಬಂದಿದ್ದಾರೆ.

ಕನ್ನಡ ಸರಸ್ವತಿ ಮನೆ ಮನೆಯ ಬಾಗಿಲು ಪ್ರವೇಶ ಮಾಡಿಸಲು ಅವರ ಶ್ರದ್ಧೆಯೇ ಕಾರಣವಾಗಿದೆ. ಛಾಯಾಪತಿ ಅವರು ಧಾರವಾಡಕ್ಕೆ ಬಂದಾಗಲೆಲ್ಲ ನನ್ನನ್ನು ಭೇಟಿ ಮಾಡಿದ್ದಾರೆ. ಹೊಸ ಪುಸ್ತಕಗಳ ಒಂದು ಕಟ್ಟನ್ನು ನನಗೆ ಉಚಿತವಾಗಿ ಕೊಟ್ಟಿದ್ದಾರೆ. ನಮ್ಮ ಮನೆಗೆ ಬಂದು ಪುಸ್ತಕಗಳ ಬಗೆಗೆ ಮಾತಾಡಿದ್ದಾರೆ. ತ.ಸು. ಶಾಮರಾಯರ 'ಕನ್ನಡ ಸಾಹಿತ್ಯ ಚರಿತ್ರೆ' ಮತ್ತು ಇತರ ಪುಸ್ತಕಗಳನ್ನು ಕರ್ನಾಟಕ ವಿಶ್ವವಿದ್ಯಾಲಯದ ಪದವಿ ವಿದ್ಯಾರ್ಥಿಗಳಿಗೆ ಪಠ್ಯವಾಗಿಸಲು ಅಭ್ಯಾಸ ಮಂಡಳಿಯ ಸದಸ್ಯನಾದ ನಾನು ಸಹಾಯ ಮಾಡಿದೆನೆಂಬುದು ಛಾಯಾಪತಿಯವರ ಅಭಿಮಾನ ಪ್ರೀತಿಗೆ ಕಾರಣವಾಗಿದೆ. ಛಾಯಾಪತಿ ಅವರು ವ್ಯಕ್ತಿಯಾಗಿ ಸಜ್ಜನರು. ಅವರ ಸರಳ ನಡೆ, ಸ್ನೇಹ, ಸೌಜನ್ಯಗಳು ನನಗೆ ತುಂಬ ಪ್ರಿಯವಾಗಿವೆ. ಮೃದು ಮಾತಿನ ಛಾಯಾಪತಿ ಅವರು ಯಾರಿಗೂ

ಕೇಡನ್ನು ಬಯಸದ ವಿಶಾಲ ಮನಸ್ಸಿನವರು. ಈ ಮೊದಲು ಹೇಳಿದಂತೆ ತ.ಸು. ಶಾಮರಾಯರ ಎಲ್ಲ ಸದ್ಗುಣಗಳೂ ಛಾಯಾಪತಿಯವರಲ್ಲಿವೆ.

ಛಾಯಾಪತಿ ಅವರು ಎಂದೂ ತಮಗಾಗಿ ಏನನ್ನಾದರೂ ಮಾಡಿ ಎಂದು ಯಾರನ್ನೂ ಕೇಳಿಲ್ಲ. ಅವರ ಪುಸ್ತಕ ಪ್ರಕಾಶನ ಕಾರ್ಯಕ್ಕೆ ಕರ್ನಾಟಕ ರಾಜ್ಯ ಪುಸ್ತಕ ಪ್ರಾಧಿಕಾರ 'ಶ್ರೇಷ್ಠ ಪುಸ್ತಕ ಪ್ರಕಾಶಕ' ಬಿರುದು ನೀಡಿ ಸನ್ಮಾನಿಸಿದೆ. ಪುಸ್ತಕ ಪ್ರಕಾಶನಕ್ಕಾಗಿ ಛಾಯಾಪತಿ ಹಲವು ಪ್ರಶಸ್ತಿ, ಸನ್ಮಾನ ಪಡೆದಿದ್ದಾರೆ. ಇಪ್ಪತ್ತು ಪುಸ್ತಕಗಳ ಲೇಖಕರೂ ಆದ ಛಾಯಾಪತಿ ಅವರಿಗೆ ಕನ್ನಡ ಪುಸ್ತಕಗಳ ಭವಿಷ್ಯದ ಚಿಂತೆ ಯಾವಾಗಲೂ ಕಾಡುತ್ತಿರುತ್ತದೆ. ಜಾಗತೀಕರಣದಿಂದಾಗಿ ಕನ್ನಡ ಪುಸ್ತಕಗಳ ಭವಿಷ್ಯದ ಬಗೆಗೆ ನೋವು ವಿಷಾದ ತುಂಬಿಕೊಂಡಿದೆ. ಆದರೆ ಯುವ ಮನಸ್ಸುಗಳಲ್ಲಿ ಕನ್ನಡ ಸಾಹಿತ್ಯ ಪ್ರೀತಿ ಇದೆ. ಭೈರಪ್ಪ, ಅನಂತಮೂರ್ತಿ ಮತ್ತು ಅವರ ಅಭಿಮಾನಿಗಳು ವಿಶಿಷ್ಟ ಓದುಗ ವರ್ಗವನ್ನೇ ನಿರ್ಮಾಣ ಮಾಡಿದ್ದು ಕನ್ನಡದ ಸೃಜನಶೀಲತೆ ಬತ್ತಲಾರದ ಗಂಗೆಯಂತೆ ಹರಿಯುತ್ತಲಿದೆ. ಛಾಯಾಪತಿ ಹೇಳುವಂತೆ ಪುಸ್ತಕಗಳ ಓದುಗಾರಿಕೆ ಕಡಿಮೆ ಆಗಿಲ್ಲ. ಆದರೆ ಅವರಿಗೆ ನಾವು ಸರಿಯಾದ ರೀತಿಯಲ್ಲಿ ಪುಸ್ತಕಗಳನ್ನು ತಲುಪಿಸಬೇಕಾಗಿದೆ. ಓದುವ ದಾರಿಯನ್ನು ತೋರಿಸಿಕೊಡಬೇಕಾಗಿದೆ. ಛಾಯಾಪತಿ ಅವರು ಕನ್ನಡ ಪುಸ್ತಕಗಳು ಸರಿಯಾದ ರೀತಿಯಲ್ಲಿ ಸಹೃದಯರಿಗೆ ವಿತರಣೆಯಾಗುತ್ತಿಲ್ಲ ಎಂದು ಹೇಳುತ್ತಾರೆ. ವಾಚಕರು ಪುಸ್ತಕಕೊಳ್ಳಲು ಸಿದ್ಧರಿದ್ದಾರೆ. ಅವರನ್ನು ತಲುಪುವಂತೆ ಮಾಡಲು ಪ್ರಯತ್ನಿಸಬೇಕಾಗಿದೆ.

ಮೈಸೂರಿನಲ್ಲಿ ಪ್ರಕಟವಾದ ಪುಸ್ತಕಗಳು ಧಾರವಾಡದಲ್ಲಿ ಸಿಗುತ್ತಿಲ್ಲ. ಧಾರವಾಡದಲ್ಲಿ ಪ್ರಕಟವಾದ ಪುಸ್ತಕಗಳು ಮೈಸೂರಲ್ಲಿ ಸಿಗುತ್ತಿಲ್ಲ. ಕನ್ನಡದಲ್ಲಿ ಪ್ರಕಟವಾಗುವ ಪುಸ್ತಕಗಳ ಬಗೆಗೆ ಒಂದು ಕಾಲದಲ್ಲಿ 'ಗ್ರಂಥಲೋಕ', 'ಪುಸ್ತಕ ಮಾಹಿತಿ' ಯಂಥ ಪತ್ರಿಕೆಗಳು ತಿಳಿಸುತ್ತಿದ್ದವು. ಈಗ ಅಂಥಹ ಪತ್ರಿಕೆಗಳು ಇಲ್ಲ. 'ಸಾಹಿತ್ಯ ವಾರ್ಷಿಕ'ದಂತಹ ವರ್ಷದ ಪುಸ್ತಕ ಸಮೀಕ್ಷೆ ಮಾಡುವ ಯೋಜನೆಗಳು ನಿಂತಿವೆ. ಹೀಗಾಗಿ ಉತ್ತಮ ಪುಸ್ತಕಗಳು ಬಂದರೂ ಅವು ಯಾರಿಗೆ ತಲುಪಬೇಕಾಗುವದೋ ಅವರಿಗೆ ತಲುಪುತ್ತಿಲ್ಲ. ಇದು ಲೇಖಕ ಓದುಗರ ಸಮಸ್ಯೆಯೂ ಹೌದು.

ಛಾಯಾಪತಿ ಅವರು ಪ್ರಕಾಶನೋದ್ಯಮದ ಸಮಸ್ಯೆಗಳ ಬಗೆಗೂ ಚರ್ಚಿಸಿದ್ದಾರೆ. ಏರುತ್ತಿರುವ ಕಾಗದದ ಬೆಲೆ, ಮುದ್ರಣ, ಸಾಮಗ್ರಿಗಳ ಕೊರತೆ, ಕೆಲಸಗಾರರ ಸಮಸ್ಯೆ, ಮುದ್ರಣಾಲಯ ನಡೆಸುವವರೆಗೂ ಅನೇಕ ತೊಂದರೆಗಳಿವೆ. ಹೀಗಾಗಿ ಪುಸ್ತಕಗಳ ಬೆಲೆ ಏರುತ್ತಿದೆ. ಪುಸ್ತಕ ಪ್ರಕಾಶನದಲ್ಲಿ ಪೈಪೋಟಿಯಿದೆ. ಕರ್ನಾಟಕದಲ್ಲಿ ಪುಸ್ತಕ ಪ್ರಕಾಶಕರ ಸಂಘ ಇದ್ದರೂ ಏನನ್ನೂ ಸಾಧಿಸಲಾಗುತ್ತಿಲ್ಲ. ಸರಕಾರ ಪುಸ್ತಕ ಪ್ರಕಾಶನಕ್ಕೆ ನಿರೀಕ್ಷಿತ ಸಹಾಯ ಮಾಡುತ್ತಿಲ್ಲ. ಎಂದು ಛಾಯಾಪತಿ ಹೇಳುತ್ತಾರೆ. ಛಾಯಪತಿ ಅವರು

ಗ್ರಂಥೋದ್ಯಮದ ಬೆಳವಣಿಗೆಗೆ ಅನೇಕ ಸಲಹೆಗಳನ್ನು ನೀಡಿದ್ದಾರೆ. ಅವರ ಚಿಂತನೆಗಳು ಕಾರ್ಯರೂಪಕ್ಕೆ ಬರಬೇಕಾಗಿವೆ.

ಛಾಯಾಪತಿ ಅವರು ಲೇಖಕರನ್ನು ಪ್ರೀತಿ ವಿಶ್ವಾಸದಿಂದ ಕಾಣುತ್ತಾ ಬಂದಿದ್ದಾರೆ. ಅವರು ಪ್ರಕಾಶಗೊಳಿಸಿದ ಪುಸ್ತಕಗಳ ಲೇಖಕರಿಗೆ ಗೌರವಪ್ರತಿ, ಸಂಭಾವನೆಗಳನ್ನು ತಪ್ಪದೇ ಕಳಿಸುತ್ತಿದ್ದಾರೆ. ನನ್ನ ಅನುಭವದಲ್ಲಿ ಹೇಳುವುದಾದರೆ ನನ್ನಿಂದ ಅನೇಕ ಜನ ಲೇಖನ ಬರೆಯಿಸಿಕೊಳ್ಳುತ್ತಾರೆ. ಬೆನ್ನುಡಿ ಮುನ್ನುಡಿಯನ್ನು ಬರೆಸಿಕೊಂಡು ಆನಂತರ ನಮ್ಮನ್ನು ಮರೆಯುತ್ತಾರೆ. ಒಂದು ಗೌರವ ಪ್ರತಿಯನ್ನು ಕಳಿಸದ ಅನೇಕ ನಿದರ್ಶನಗಳಿವೆ. ಛಾಯಾಪತಿ 'ಹೊನ್ನಾರು' ಗೌರವಗ್ರಂಥ ಪ್ರಕಟಿಸಿದರು. ಅದಕ್ಕೆ ನಾನು ಲೇಖನ ಬರೆದಿದ್ದೆ. ಬೃಹತ್ ಗ್ರಂಥವನ್ನು ತಮ್ಮದೇ ಅಂಚೆ ವೆಚ್ಚದಲ್ಲಿ ಛಾಯಾಪತಿ ನನಗೆ ಪುಸ್ತಕ ಕಳಿಸಿಕೊಟ್ಟಿದ್ದಾರೆ. ಅವರ ಪ್ರೀತಿ, ಸೌಜನ್ಯ, ವಿಶ್ವಾಸಗಳು ಅನನ್ಯವಾದದ್ದು.

ಛಾಯಾಪತಿ ಅವರಿಗೆ ಎಪ್ಪತ್ತು ತುಂಬುತ್ತಿದೆ. ಅವರು 'ಸಾವಿರ ಪುಸ್ತಕಗಳ ಸರದಾರ'ರು. ಶ್ರೀಗಂಧದಂತೆ ತಮ್ಮ ಜೀವನವನ್ನು ಪುಸ್ತಕ ಪ್ರಕಾಶನಕ್ಕಾಗಿ ಸವೆಸಿದ್ದಾರೆ. 'ಆತ್ಮಾನಂ ಪುತ್ರನಾಮಾಸಿ' ಎಂದು ಹೇಳುತ್ತಾರೆ. ತಸು ಶಾಮರಾಯರ ಆತ್ಮಕ್ಕೆ ಸಂತೋಷವಾಗುವಂತೆ ಪುಸ್ತಕ ಪ್ರಕಾಶನ, ಪರೋಪಕಾರ, ಲೇಖಕರಿಗೆ ಉತ್ತೇಜನ ನೀಡಿದ ಛಾಯಾಪತಿ 'ಎಪ್ಪತ್ತೊ ಮುಪ್ಪತ್ತು ಮುಂದೆ ನುಡಿ' ಎಂಬ ಕವಿ ಕಣವಿ ವಾಣಿಯಂತೆ ನೂರ್ಕಾಲ ಬಾಳಲೆಂದು ಹಾರೈಸಿ ಅವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಬರಲಿರುವ ವರ್ಷಗಳಲ್ಲಿ ತ.ವೆಂ. ಸ್ಮಾರಕ ಗ್ರಂಥಮಾಲೆ ಹೊಸ ಹೊಸ ಲೇಖಕರ ಪುಸ್ತಕಗಳನ್ನು ಪ್ರಕಟಿಸುತ್ತ ಪ್ರಗತಿಯ ಶಿಖರಗಳನ್ನು ಮುಟ್ಟುವಂತಾಗಲೆಂದು ಆಶಿಸುತ್ತೇನೆ. 'ಕನ್ನಡ ಪುಸ್ತಕಗಳಿಗೆ ಉತ್ತಮವಾದ ಭವಿಷ್ಯವಿದೆ' ಎಂಬುದನ್ನು ಛಾಯಾಪತಿ ಅವರಂಥ ಆದರ್ಶ ಪ್ರಕಾಶಕರು ತೋರಿಸಿಕೊಟ್ಟಿದ್ದಾರೆ.

## ದೊಡ್ಡ ಪರಂಪರೆಯ ಸಮರ್ಥ ವಾರಸುದಾರರು ಶ್ರೀ ಛಾಯಾಪತಿ

ನನ್ನ ಮತ್ತು ಶ್ರೀಮಾನ್ ಟಿ.ಎಸ್. ಛಾಯಾಪತಿ ಅವರ ಸಂಬಂಧ ಇತ್ತೀಚಿನದಾದರೂ ನಾವು ಬಹಳ ಕಾಲದ ಸ್ನೇಹಿತರು ಎಂಬಂತೆ ಅವರು ನನ್ನನ್ನು ನಡೆಸಿಕೊಳ್ಳುತ್ತಿರುವುದು ಅವರ ದೊಡ್ಡತನಕ್ಕೆ ಸಾಕ್ಷಿ. ಛಾಯಾಪತಿಯವರು ಪುಣ್ಯವಂತ ಎಂದು ನಾನು ಮೇಲಿಂದ ಮೇಲೆ ಹೇಳುತ್ತಿರುತ್ತೇನೆ. ಇದಕ್ಕೆ ಮುಖ್ಯ ಕಾರಣ: ಅವರು ಹುಟ್ಟಿರುವ ಮನೆತನ. ಒಂದು ಕಾಲದವರೆಗೆ ಜೀವಿಗಳು ಎಲ್ಲಿ ಹುಟ್ಟಿದರೇನಂತೆ ಎಂಬ ಸ್ವಲ್ಪ ಉಡಾಫೆಯ ಭಾವ ನನ್ನಲ್ಲಿತ್ತು. ವಯಸ್ಸು ಮಾಗುತ್ತಿರುವುದರಿಂದ ನನಗೆ ಈಗೀಗ ಅನ್ನಿಸುತ್ತಿದೆ ಹುಟ್ಟು ಬಹಳ ಮುಖ್ಯ. ವ್ಯಕ್ತಿ ಏನನ್ನಾದರೂ ಸಾಧಿಸಬೇಕಾದರೆ ಆತ ಸಂಸ್ಕಾರಯುತ ವಾತಾವರಣದಲ್ಲಿ ಜನಿಸಬೇಕು. ಇಲ್ಲದಿದ್ದರೆ ಮುಂದೆ ಸಾಗುವುದು ಕಷ್ಟವಾಗುತ್ತದೆ.

ಒಬ್ಬ ವ್ಯಕ್ತಿ ನಿಜವಾಗಿ ವಿದ್ಯಾವಂತ ಎಂದು ಕರೆಯಿಸಿಕೊಳ್ಳಬೇಕಾದರೆ ಕನಿಷ್ಠ ಆತನ ಐದು ತಲೆಮಾರಿನಿಂದಾದರೂ ವಿದ್ಯೆ ಹರಿದು ಬಂದಿರಬೇಕು ಎಂದು ಪಾಶ್ಚಾತ್ಯ ಶಿಕ್ಷಣ ತಜ್ಞನೊಬ್ಬ ಅಭಿಪ್ರಾಯ ಪಡುತ್ತಾನೆ. ಆ ವಿಷಯವಾಗಿ ನೋಡಿದರೂ ಛಾಯಾಪತಿ ಪುಣ್ಯವಂತರು. ಅವರ ಅಜ್ಜನ ಅಜ್ಜನವರೇ ಶೇಕ್‌ದಾರರಾಗಿದ್ದವರು. ಹಾಗೆಂದ ಮೇಲೆ ಅವರಲ್ಲಿ ವಿದ್ಯೆ ಎಷ್ಟು ದೃಢವಾದ ರೀತಿಯಲ್ಲಿ ದತ್ತಕವಾಗಿ ಬಂದಿದೆಯೆಂಬುದನ್ನು ನಾವು ಗಮನಿಸಬಹುದು. ಈ ಸದೃಢವಾದ ಅಸ್ತಿಭಾರದ ಮೇಲೆ ಅವರು ತಮ್ಮ ಬದುಕಿನ ಸೊಗಸಾದ ಸೌಧವನ್ನು ಕಟ್ಟಿಕೊಳ್ಳುವ ಅವಕಾಶವನ್ನು ಪಡೆದಿದ್ದಾರೆ.

ಎಪ್ಪತ್ತು ವಸಂತಗಳ ಸಂಭ್ರಮವನ್ನಾಚರಿಸುತ್ತಿರುವ ಈ ಸಂದರ್ಭದಲ್ಲಿ ಸುಸಂಸ್ಕೃತ ಮನೆತನದಲ್ಲಿ ಹುಟ್ಟಿದ ಛಾಯಾಪತಿಯವರು ತಮ್ಮ ಬದುಕನ್ನು ಸುಸಂಸ್ಕೃತ ಸೌಧವಾಗಿ ನಿರ್ಮಿಸಿಕೊಂಡರೆ? ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಸುದೈವದಿಂದ ಉತ್ತರ 'ಹೌದು' ಎನ್ನುವುದೇ ಆಗಿದೆ. ತಂದೆಯವರು ಅಸ್ತಿತ್ವಕ್ಕೆ ತಂದ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ'ಯನ್ನು ಅವರು ತಂದೆಯವರಿಂದ ಬಳುವಳಿಯಾಗಿ ಪಡೆದರು. ತಾವು

ಡಾ. ಸಿ. ನಾಗಣ್ಣ

ಕಲಿತ ವಾಣಿಜ್ಯ ಶಾಸ್ತ್ರ ಅವರಿಗೆ ಅನುಕೂಲಕರವಾಗಿ ಒದಗಿ ಬಂದಿದೆ. ತ.ಸು. ಶಾಮರಾಯರು ಒಬ್ಬ ಸಾಹಿತಿ. ಉತ್ಕೃಷ್ಟ ಗ್ರಂಥಗಳನ್ನು ಕನ್ನಡ ಸಾರಸ್ವತಲೋಕಕ್ಕೆ ನೀಡಬೇಕೆಂಬ ಸಾಂಸ್ಕೃತಿಕ ಒತ್ತಡ ಅವರನ್ನು ಪ್ರೇರೇಪಿಸಿತು. ಅವರು ಅಂತೆಯೇ ಉತ್ಕೃಷ್ಟವಾದ ಗ್ರಂಥಗಳನ್ನು ಪ್ರಕಟಿಸಿದರು. ಆದರೆ ಒಬ್ಬ ಪ್ರಕಾಶಕನಿಗೆ ಪುಸ್ತಕ ಪ್ರೀತಿ ಎಂಬ ಒಂದೇ ಪರಿಕರ ಸಾಲದು. ಆತ ನಿಜಕ್ಕೂ ಯಶಸ್ವೀ ಪ್ರಕಾಶಕನಾಗಬೇಕಾದರೆ ಪುಸ್ತಕ ಪ್ರೀತಿಯ ಜೊತೆಗೆ ಪದಾರ್ಥಗಳ ಲೆಕ್ಕಾಚಾರ ಆತನಿಗೆ ಗೊತ್ತಿರಬೇಕು, ಮಾರುಕಟ್ಟೆಯ ವರ್ತನೆ ತಿಳಿದಿರಬೇಕು, ಗ್ರಾಹಕರ ಅಥವಾ ಓದುಗರ ನಾಡಿಮಿಡಿತ ಅರಿವಿಗೆ ಬಂದಿರಬೇಕು - ಎಲ್ಲಕ್ಕಿಂತ ಮಿಗಿಲಾಗಿ ಧೈರ್ಯ ಯಥೇಚ್ಛವಾಗಿರಬೇಕು. ಧೈರ್ಯ ಏಕಿರಬೇಕು? ಅಂದರೆ ಆತ ಹಾಕುತ್ತಿರುವುದು ಲಕ್ಷಾಂತರ ರೂಪಾಯಿಗಳ ಬಂಡವಾಳ. ಹಾಕಿದ ಬಂಡವಾಳವನ್ನು ತೆಗೆಯದೇ ಹೋದರೆ, ತಕ್ಷಣವೇ ತೆಗೆಯದೇ ಹೋದರೆ, ಆತನದೆಲ್ಲ 'dead investment' ಆಗುತ್ತದೆ. Dead investment ಪ್ರಮಾಣ ಹೆಚ್ಚಿದಂತೆಲ್ಲ ಆತನ ಋಣಭಾರ ಹೆಚ್ಚುತ್ತದೆ ಮತ್ತು ಆತ ಅತಿಶೀಘ್ರವಾಗಿ ತನ್ನ ಕಸುಬನ್ನು ಬಿಡಬೇಕಾಗುತ್ತದೆ.

ಇವೆಲ್ಲವನ್ನೂ ಗಮನಿಸುವಾಗ ಶ್ರೀಮಾನ್ ಛಾಯಾಪತಿಯವರು ಪುಸ್ತಕ ನಿರ್ಮಾಣದ ಎಲ್ಲ ಹಂತಗಳಲ್ಲೂ ನೇರ್ಪಾಗಿ ಕೆಲಸಗಳನ್ನು ಪೂರೈಸಿ, ಕೊಡಬೇಕಾದ ವರಿಗೆ ಕೊಟ್ಟು, ಹಾಕಿದ ಬಂಡವಾಳಕ್ಕೆ ತೊಂದರೆಯಿಲ್ಲದಂತೆ ವ್ಯವಹಾರವನ್ನು ಮಾಡಿಕೊಂಡು ಬಂದಿದ್ದಾರೆ. ಮುಖ್ಯವಾಗಿ, ಲೇಖಕರ ವಿಶ್ವಾಸವನ್ನು ಕಾಪಾಡಿಕೊಂಡು ಬಂದಿದ್ದಾರೆ. ಏಕೆಂದರೆ ಪುಸ್ತಕೋದ್ಯಮದ ಕೇಂದ್ರದಲ್ಲಿರುವವನು ಲೇಖಕ ಎಂಬ ಸತ್ಯ ಛಾಯಾಪತಿಯವರಿಗೆ ಗೊತ್ತಿದೆ. ಲೇಖಕ ಶೂನ್ಯದಿಂದ ತನ್ನ ಪುಸ್ತಕದ ಹಾಳೆಗಳನ್ನು ತೆಗೆಯುವುದಿಲ್ಲ. ಅವನ ಬರಹವೆಂಬುದು ಅವನ ಅಂತರಂಗದ ಚೈತನ್ಯದ ಒಂದು ಪ್ರಕಟರೂಪ. ಆ ಚೈತನ್ಯ ಉತ್ಕೃಷ್ಟವಾಗಿರುವಷ್ಟು ಕಾಲವೂ ಆತನ ಬರಹ ಶ್ರೇಷ್ಠ ದರ್ಜೆಯದಾಗಿರುತ್ತದೆ. ಲೇಖಕರ ಅಂತರಂಗದ ಚೈತನ್ಯದ ದ್ರವ್ಯವನ್ನು ಛಾಯಾಪತಿ ಯವರು ಒಬ್ಬ ನುರಿತ ವೈದ್ಯ ನಾಡಿ ಬಡಿತವನ್ನು ಪತ್ತೆ ಮಾಡುವಷ್ಟೇ ವೇಗವಾಗಿ ಕಂಡು ಹಿಡಿಯಬಲ್ಲರು. ಹಾಗಾಗಿ ಲೇಖಕರ ಸಂಭಾವನೆಯನ್ನು ಚುಕ್ತ ಮಾಡುವಲ್ಲಿ ಅವರು ಮೀನಮೇಷ ಎಣಿಸುವುದಿಲ್ಲ. ಡಿಟಿಪಿ ಆಪರೇಟರ್‌ನಿಂದ ಹಿಡಿದು ರಕ್ಷಾಕವಚ ವಿನ್ಯಾಸಕರವರೆಗೆ ಅವರಿಗಿಷ್ಟು, ಇವರಿಗಿಷ್ಟು ಅಂತ ಹೇಳಿ ಅವರವರ ಕೆಲಸಕ್ಕೆ ನಿಗದಿಯಾಗಿರುವಷ್ಟು ದ್ರವ್ಯವನ್ನವರು ವಿತರಣೆ ಮಾಡಿ ಒಂದು ಗ್ರಂಥ ಅಚ್ಚಿನ ಮನೆಯಿಂದ ಹೊರಗೆ ಬರುವಾಗ ಅವರ ಋಣ ತನ್ನ ಮೇಲೆ ಇಲ್ಲ ಎನ್ನುವಂತೆ ಚುಕ್ತ ಮಾಡಿರುತ್ತಾರೆ. ಹಾಗಾಗಿ, ಛಾಯಾಪತಿಯವರು 'debt trap'ಗೆ ಸಿಕ್ಕಿ ಹಾಕಿಕೊಂಡಿಲ್ಲ. He is sitting pretty. ಇದು ಬಹಳ ಮುಖ್ಯ. ಒಬ್ಬ ಸುಪ್ರಸಿದ್ಧ ಪ್ರಕಾಶಕರಾಗಿ

ಕನ್ನಡ ನಾಡಿನಲ್ಲೆಲ್ಲ ಮನೆ ಮಾತಾಗಿರುವಾಗ ಅದಕ್ಕೆ ಚ್ಯುತಿ ಬರುವ ಕೆಲಸವನ್ನು ಅವರು ಹಿಂದೆ ಮಾಡಿಲ್ಲ, ಮುಂದೆ ಮಾಡುವುದೂ ಇಲ್ಲ. 'If reputation is gone, everything is gone'.

ವಿದ್ಯಾವಂತ ಮನೆತನವಾದ್ದರಿಂದ ವಿದ್ಯೆ ತಾನಾಗಿಯೇ ಇವರಿಗೆ ವಂಶವಾಹಿನಿಯಲ್ಲಿ ಹರಿದು ಬಂದಿದೆ. ಒಬ್ಬ ಸೂಕ್ಷ್ಮಮತಿಯ ಲೇಖಕನಾಗಿರುವುದರಿಂದ ಅವರಿಂದ ಛಾಯಾಪತಿ ಜ್ಞಾನವನ್ನು ರೂಢಿಸಿಕೊಂಡಿದ್ದಾರೆ; ಇದೆಲ್ಲದರ ಜೊತೆಗೆ He is a great observer of human behaviour. ಹಾಗಾಗಿ ಒಬ್ಬ ಮನೋವಿಜ್ಞಾನಿಯ ತರಹ ಮನುಷ್ಯರ ವರ್ತನೆಯನ್ನು ಅಜಮಾಯಿಶಿ ಮಾಡಿ ಅವರನ್ನು ಅರ್ಥಮಾಡಿಕೊಳ್ಳುವ ಕಲೆಗಾರರಾಗಿದ್ದಾರೆ ಛಾಯಾಪತಿ. ಅವರೊಬ್ಬ businessman ಕೂಡ ಆಗಿರುವುದರಿಂದ ಮನುಷ್ಯ ವರ್ತನೆಯ ಬೇರೆ ಬೇರೆ ಆಯಾಮಗಳನ್ನು ಅರಿಯುವ ಅನಿವಾರ್ಯತೆಯೂ ಅವರಿಗೆ ಇದೆ.

ಆದರೆ ಛಾಯಾಪತಿಯವರು ಒಬ್ಬ ವ್ಯಕ್ತಿಯನ್ನು ಹಲವು ಆಯಾಮಗಳಲ್ಲಿ ಅಂದಾಜು ಮಾಡಬಲ್ಲವರಾಗಿದ್ದರೂ ಸಹ ಆ ವ್ಯಕ್ತಿಯ ಒಳ್ಳೆಯ ಗುಣಗಳನ್ನು ಮಾತ್ರ ತೆಗೆದುಕೊಳ್ಳುತ್ತಾರೆ; ಆತನ ನಕಾರಾತ್ಮಕ ಗುಣಗಳ ಬಗ್ಗೆ ಹೆಚ್ಚು ಮಾತನಾಡುವುದಿಲ್ಲ. ಯಾವಾಗ ಯಾರು ಬೇಕಾಗುತ್ತಾರೋ, ಆದ್ದರಿಂದ ಅವರ ಬಗ್ಗೆ ನಾವು ನೆಗೆಟಿವ್ ಆಗಿ ಮಾತನಾಡಬಾರದು ಎಂಬ ಹುಷಾರಿನ ಲೆಕ್ಕಾಚಾರವಲ್ಲ ಇದು; ನೆಗೆಟಿವ್ ಆಗಿ ಆಲೋಚನೆ ಮಾಡೋದೇ Counter-productive ಎಂಬ ನಿಜವನ್ನು ಅರಿತವರು ಛಾಯಾಪತಿ. ಹಲವು ಬಾರಿ ಅವರು ಅನೇಕರ ಬಗ್ಗೆ ನನ್ನ ಜೊತೆ ಮಾತನಾಡುತ್ತಾರೆ. ನಮ್ಮಿಬ್ಬರ ವೇವ್‌ಲೆಂಗ್ತ್ ಹೆಚ್ಚು ಕಡಿಮೆ ಒಂದೇ ಇರುವುದರಿಂದ ನಮ್ಮ ಸಂಭಾಷಣೆ ಮುಗಿಯುವ ಹೊತ್ತಿಗೆ ಅಕಸ್ಮಾತ್ ವ್ಯಕ್ತಿಗಳ ಬಗ್ಗೆ ನಾವು ಆಡಿರಬಹುದಾದ ನಕಾರಾತ್ಮಕ ಸಂಗತಿಗಳು ನಮ್ಮ ನೆನಪಿನಿಂದ ಜಾರಿ ಹೋಗಿರುತ್ತವೆ. ವ್ಯಕ್ತಿಗಳ ಗುಣಗಳು ಮಾತ್ರ ಕಾಣುತ್ತವೆಯೇ ಹೊರತು ದೌರ್ಬಲ್ಯಗಳು ಗೌಣವಾಗುತ್ತವೆ. ಇದು ಇರಬೇಕಾದದ್ದು ಹೀಗೆಯೇ. ಈ ಸಮಾಜದಲ್ಲಿ ಒಳ್ಳೆಯ ಜನರ ಸಂಖ್ಯೆ ಹೆಚ್ಚಿದಷ್ಟೂ ಸಮಾಜದ ಸ್ವಾಸ್ಥ್ಯ ಹೆಚ್ಚುತ್ತದೆ. ಸಮಾಜದ ಸ್ವಾಸ್ಥ್ಯ ಹೆಚ್ಚಿದರೆ ನಾವು ಸಲೀಸಾಗಿ ತಿರುಗಾಡಬಹುದು. ಸಮಾಜದ ಸ್ವಾಸ್ಥ್ಯ ಕೆಟ್ಟರೆ ನಾವೂ ಕಷ್ಟಕ್ಕೀಡಾಗುತ್ತೇವೆ.

ಹಾಗಾಗಿ, ಛಾಯಾಪತಿಯವರು ಜನರನ್ನು ವಿರೋಧದ ಭಾವನೆಯಿಂದ ನೋಡುವುದಿಲ್ಲ. ಅವರು ಪ್ರಕಟಣಾ ಕ್ಷೇತ್ರದಲ್ಲಿ ಉತ್ಕೃಷ್ಟವಾದ ಗ್ರಂಥಗಳನ್ನು ತಂದಿದ್ದಾರೆ; ತನ್ಮೂಲಕ ಸಾರಸ್ವತ ಲೋಕಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದ್ದಾರೆ. ಇದುವರೆಗೆ ಅವರು ಪ್ರಕಟಿಸಿರುವ ಗ್ರಂಥಗಳ ಸಂಖ್ಯೆ ಸಾವಿರವನ್ನು ದಾಟಿದೆ. 'ಸಾವಿರ ಪುಸ್ತಕಗಳ ಸರದಾರ' ಎಂಬ ಪ್ರಶಂಸೆಗೂ ಅವರು ಪಾತ್ರರಾಗಿದ್ದಾರೆ. ಇದೆಲ್ಲ ನಮಗೆ ಅಭಿಮಾನ

ವುಂಟು ಮಾಡುವ ಸಂಗತಿ. ಸುಮ್ಮನೆ ಹೀಗೆ ಕೆಲಸ ಮಾಡುತ್ತ ಹೋಗಬೇಕೆ? ಅಥವಾ ಮಾಡಿದ ಕೆಲಸಕ್ಕೆ ಮನ್ನಣೆ ನೀಡಬೇಕಾದದ್ದು ಸಮಾಜದ ಕರ್ತವ್ಯವಲ್ಲವೆ? ಎಂದು ನಮ್ಮೊಳಗೆ ಪ್ರಶ್ನೆಯೊಂದು ಏಳುವುದುಂಟು. ಅದಕ್ಕೆ ಉತ್ತರವೆಂದರೆ ಸರ್ಕಾರ ಅದನ್ನು ಗಮನಿಸಬೇಕು. ಸರ್ಕಾರದ ಗಮನಕ್ಕೆ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ 'ಯ ಕೆಲಸವನ್ನು ತರುತ್ತೇವೆ ಎಂದು ಹೇಳಿದ ಗಣ್ಯರು ಪುರಸ್ಕಾರದ ಪಟ್ಟಿ ಘೋಷಣೆ ಯಾಗಿ ಅದರಲ್ಲಿ ಛಾಯಾಪತಿಯವರ ಹೆಸರು ಇಲ್ಲದೆ 'ನಮ್ಮ ಪ್ರಯತ್ನ ಫಲ ಕೊಡಲಿಲ್ಲ ' ಎಂದು ಕೈ ಚೆಲ್ಲಿದಾಗ ಛಾಯಾಪತಿಯವರು ಒಂದೆರಡು ದಿನ ಆ ವಿಷಯದ ಬಗೆಗೇ brood ಮಾಡುತ್ತಿರುತ್ತಾರೆ; ನಮ್ಮಂಥ ಸ್ನೇಹಿತರ ಜೊತೆ ಮಾತನಾಡಿ ಹಗುರ ಮಾಡಿಕೊಳ್ಳುತ್ತಾರೆ. ಆದರೆ he never allows bitterness to overwhelm him. ಆ ಸಮಾಧಾನ ಎಲ್ಲಿಂದ ಬಂತು? ಅವರ ವಂಶದಿಂದ; ಅವರ ಹಿರೀಕರಿಂದ; ಎಲ್ಲಕ್ಕಿಂತ ಮಿಗಿಲಾಗಿ ಅವರ ಪೂಜ್ಯ ತಂದೆಯವರಾದ ಪ್ರೊ. ತ.ಸು. ಶಾಮರಾಯರಿಂದ. Sri Chayapathi has immortalised his father and his uncle in two of his little but elegant books "ಅಣ್ಣನ ನೆನಪು " and "ತಂಪು ನೆಳಲು ". These gems scintillate with authentic observation and honest assessment.

ತ.ಸು.ಶಾ. ಅವರಿಗೆ ಈ ಲೋಕದ ರೀತಿ ರಿವಾಜು ಗೊತ್ತಿತ್ತು. ಅದಕ್ಕೆಯೇ ಅವರು ಮಂತ್ರಿಯಾದ ತಮ್ಮ ಶಿಷ್ಯರೊಬ್ಬರು ಗುರುಕಾಣಿಕೆ ಅರ್ಪಿಸಲು ಮುಂದೆ ಬಂದು 'ನಾನೀಗ ಮಂತ್ರಿಯಾಗಿದ್ದೀನಿ; ತಮಗೆ ನಾನು ಯಾವ ರೀತಿ ಒದಗಿ ಬರಲಿ?' ಎಂದು ಕೇಳಿದಾಗ 'ನಾಲ್ಕು ಜನ ಮೆಚ್ಚುವ ಹಾಗೆ ಆಡಳಿತ ನಡೆಸು' ಎಂದರು. ತಮ್ಮ ಶಿಷ್ಯರ ಪೈಕಿ ನೂರು ಜನ ಮಂತ್ರಿಗಳಾಗಿ ಅವರು ಒಬ್ಬೊಬ್ಬರೂ ಪ್ರತ್ಯೇಕವಾಗಿ ಬಂದು 'ಗುರುಗಳೇ ನಾನು ತಮಗೇನು ಗುರುಕಾಣಿಕೆ ಅರ್ಪಿಸಲಿ?' ಎಂದು ಕೇಳಿದ್ದರೆ ಅವರು ಇದೇ ಉತ್ತರ ಕೊಡುತ್ತಿದ್ದರು; ಇದರಲ್ಲಿ ಯಾವ ಅನುಮಾನವೂ ಇಲ್ಲ. ಇಂಥ ಉದಾತ್ತ ವ್ಯಕ್ತಿಯ ಉದರ ಸಂಜಾತರಾಗಿ ಛಾಯಾಪತಿಯವರು ಮನ್ನಣೆ ಹತ್ತಿರವೇ ಸುಳಿದು ದೂರ ಜಾರಿದಾಗ ಘಾಸಿಯಾಗದೆ ಸಮಚಿತ್ತವನ್ನು ಹೊಂದಿ ತಮ್ಮ ಕೈಂಕರ್ಯವನ್ನು ಮುಂದುವರಿಸಲು ಸಾಧ್ಯವಾಗಿರುವುದು ಈ 'spiritual backup' ನಿಂದ.

I can't imagine anyone in Sri Chayapathi's shoes. ಯಾಕಂದ್ರೆ ಒಬ್ಬ ಛಾಯಾಪತಿಯಾಗಬೇಕಾದ್ರೆ ಹಲವು ದ್ರವ್ಯಗಳ ಸಂಗಮವಾಗಬೇಕು. ಕೇವಲ ವ್ಯವಹಾರ ಕುಶಲಿಯಾದರೆ ಛಾಯಾಪತಿ ಆಗುವುದಕ್ಕಾಗಲ್ಲ; ಕೇವಲ ಆಧ್ಯಾತ್ಮಿಯಾದರೆ ಆಗಲ್ಲ; ಕೇವಲ ಚತುರಮತಿಯಾದರೆ ಆಗಲ್ಲ. ಇವೆಲ್ಲವುಗಳನ್ನು ಒಂದು ಪ್ರಮಾಣ ದಲ್ಲಿ ಬೆರೆಸಿ ಒಳಗೊಂಡಾಗ ಮಾತ್ರ ಛಾಯಾಪತಿಯವರಾಗಬಹುದು.

ಮೊನ್ನೆ ಪ್ರಸಾರಾಂಗದ ನಿರ್ದೇಶಕರ ಕೊಠಡಿಯಲ್ಲಿ ಮಾತನಾಡ್ತಾ ನನ್ನ ತಲೆಯ ಮೇಲೆ ಗೋಡೆಯಲ್ಲಿ ತೂಗು ಹಾಕಿರುವ ತಮ್ಮ ತಂದೆಯವರಾದ ತ.ಸು. ಶಾಮರಾಯರ ಭಾವಚಿತ್ರವನ್ನು ನೋಡಿ ಛಾಯಾಪತಿಯವರು ಭಾವುಕರಾದರು. ಸಾಮಾನ್ಯವಾಗಿ ಅವರು ತಮ್ಮ ಭಾವುಕತೆಯನ್ನು ತೋರಿಸಿಕೊಳ್ಳುವುದಿಲ್ಲ. ಈತ ಬರೇ ವ್ಯವಹಾರ ಕುಶಲಿಯಿರಬೇಕು ಎನ್ನುವ ಅನುಮಾನ ಬರುವ ರೀತಿಯಲ್ಲೇ ನಡೆದುಕೊಳ್ಳುತ್ತಾರೆ. ಆದರೆ ತಮ್ಮ ವಂಶದಲ್ಲಿ ಎಂಥೆಂಥ ಮಹಾನುಭಾವರು ಆಗಿ ಹೋಗಿದ್ದಾರೆ ಎಂಬ ಸ್ಪಷ್ಟ ಅರಿವು ಅವರನ್ನು ಭಾವುಕರನ್ನಾಗಿಸುತ್ತದೆ. ಅದರಲ್ಲೂ ತಮ್ಮ ತಂದೆಯ ವಿಷಯವಾಗಿ, ದೊಡ್ಡಪ್ಪನವರಾದ ಪ್ರೊ. ಟಿ.ಎಸ್. ವೆಂಕಣ್ಣಯ್ಯನವರ ವಿಷಯದಲ್ಲಿ ಅವರಿಗೆ ಮಾತಿಗೆ ಮೀರಿದ ಗೌರವವಿದೆ.

ಆದರೆ ಪತ್ರಿಕೋದ್ಯಮದಂತೆಯೇ ಪ್ರಕಟಣ ಪ್ರಪಂಚವೂ ಸಹ 'dog - eat - dog - world.' ಇಲ್ಲಿ sentiment ಮೇಲುಗೈ ಸಾಧಿಸಲು ಬಿಡಬಾರದು; ಹಾಗೆ ಬಿಟ್ಟವನು ಕೆಟ್ಟ. ಇದೂ ಕೂಡ ಛಾಯಾಪತಿಯವರಿಗೆ ಗೊತ್ತಿದೆ. ಒಳಗಿನ ಆರ್ದ್ರತೆಯನ್ನು ಕಾಪಾಡಿಕೊಂಡು, ವ್ಯವಹಾರದ ಲೋಕಕ್ಕೆ ಅಗತ್ಯವಾದಷ್ಟು ಚತುರತೆಯನ್ನೂ ಉಳಿಸಿಕೊಂಡು ಸಾಗುವ ಛಾಯಾಪತಿಯವರು ತಮ್ಮದೇ ಆದ ರೀತಿಯಲ್ಲಿ ಸಾಧಕರಾಗಿದ್ದಾರೆ.

ಸಂಜೆ ವಾಯುವಿಹಾರವನ್ನು ಮಾತ್ರ ಅವರು ತಪ್ಪಿಸುವುದಿಲ್ಲ. ಡಯಾಬೀಟಿಸ್ ನಿಂದಾಗಿ ವಾಯುವಿಹಾರ ಅನಿವಾರ್ಯ ಅಂತ ಅವರು ಹೇಳ್ತಾರೆ; ಆದರೆ ಅವರಿಗೆ ವ್ಯಾಯಾಮ ಇಷ್ಟ. ಅದು ತಂದುಕೊಡುವ ಹರ್ಷ ಹಾಗೂ ಲವಲವಿಕೆಯ ಸವಿಯನ್ನು ಅವರು ಸವಿಯುವಂಥವರು. ಹಾಗಾಗಿ ಅವರು ನಡೆಯುವುದನ್ನು ನಾನು ಅವರ ಕಣ್ತಪ್ಪಿಸಿ ಹಲವು ಬಾರಿ ನೋಡಿದ್ದೀನಿ. ನೆಲದ ಮೇಲೆ ತೇಲಿಹೋದಂತೆ ಅವರ ನಡಿಗೆ. ಹಾದಿಯಲ್ಲಿ ಕಲ್ಲು, ಗಿಡಗಂಟೆ, ಗುಂಡಿ, ಕೊರಕಲು - ಇದೆಲ್ಲ ಇರುತ್ತೆ; ಜೊತೆಗೆ ಮೈಮೇಲೆ ಬಂದು ಎರಗುವ ಪಡ್ಡೆ ಹುಡುಗರ ವಾಹನ ಸವಾರಿ ಬೇರೆ. ಇದೆಲ್ಲವನ್ನೂ ಒಂದು ರೀತಿಯಲ್ಲಿ ಸಂಭಾಳಿಸಿಕೊಂಡು ಅಂಟಿಯೂ ಅಂಟದಂತೆ ಛಾಯಾಪತಿ ನಡೆಯುತ್ತಾರೆ.

ಇವರ ನಡಿಗೆಯ ರೀತಿಯೇ ಇವರ ಜೀವನ ಕ್ರಮವನ್ನೂ, ಬದುಕಿನ ಸಂದೇಶವನ್ನೂ ಸೂಚಿಸುತ್ತದೆ. ಅಂದರೆ ರಸ್ತೆಯ ಮೇಲೆ ಅಕ್ರಮ, ಅಶಿಸ್ತು, ಅರಾಜಕತೆ, ಗೋಜಲು ಇದೆಲ್ಲ ಇದ್ದದ್ದೆ – ಇದಕ್ಕೆ ಬೇಸತ್ತು, ಘಾಸಿಯಾಗಿ, ಜಿಗುಪ್ಸೆಯಿಂದ ನಾವು ನಡೆಯುವುದನ್ನೇ ಬಿಟ್ಟು ಬಿಡಬಾರದು. ಈ ಎಲ್ಲ ಅರಾಜಕತೆಯ ನಡುವೆಯೇ ಶರೀರಕ್ಕೆ ಅಗತ್ಯವಾದ ನಿತ್ಯದ ವ್ಯಾಯಾಮವನ್ನು ಒದಗಿಸಬೇಕು. ಈ ವ್ಯಾಯಾಮ ಕೇವಲ ಶರೀರಕ್ಕಲ್ಲ ಎಂಬ ನಿಜವನ್ನು ಸಹ ಅರಿತವರಾಗಿದ್ದರೆ ನಮ್ಮ ಛಾಯಾಪತಿಯವರು. ಈ ಶರೀರದ ವ್ಯಾಯಾಮದಲ್ಲಿ ಆತ್ಮವೂ ಬಲ ಗೊಳ್ಳುತ್ತದೆ. ತಮ್ಮ

ಬಲವಾದ ಆತ್ಮದ ಒಳಗೆ ಒಂದು ದೃಢವಾದ ನಿರ್ದೇಶನದಂತೆ, ಅದರ ಆಣತಿಯಂತೆ ಅವರು ತಮ್ಮ ಕರ್ತವ್ಯವನ್ನು ನಿರ್ವಹಿಸುತ್ತಿದ್ದಾರೆ. ತಮ್ಮೆಲ್ಲ ಚಟುವಟಿಕೆಗಳನ್ನು ಪರಲೋಕದಿಂದ ತಮ್ಮ ಪಿತೃಗಳು ಗಮನಿಸುತ್ತಿರುವರೆಂಬ ಅರಿವೂ ಅವರಿಗಿದೆ. ಆದ್ದರಿಂದಲೇ ಛಾಯಾಪತಿಯವರು ಅವರೆಲ್ಲ ಮೆಚ್ಚುವಂತೆ ಕೆಲಸ ಮಾಡುತ್ತಿದ್ದಾರೆ. ಪುಸ್ತಕೋದ್ಯಮವೂ ಸರಸ್ವತಿಯ ಆರಾಧನೆಯೇ. ಈ ಆರಾಧನೆಯಲ್ಲಿ ಹಲವು ಲೇಖಕರ ಗೆಳೆತನ ಅವರಿಗೆ ಪ್ರಾಪ್ತಿಯಾಗಿದೆ. 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥ ಮಾಲೆ'ಯಲ್ಲಿ ನನ್ನದೊಂದು ಪುಸ್ತಕ ಪ್ರಕಟವಾಗಬೇಕು ಎಂಬ ಮಾತನ್ನು ಮತ್ತೆ ಮತ್ತೆ ಆಡುತ್ತಾರೆ ಛಾಯಾಪತಿಯವರು. ನನ್ನ ಬರಹಕ್ಕೆ ಇವರು ಇಷ್ಟೊಂದು ಪ್ರಾಶಸ್ತ್ಯ ಕೊಟ್ಟಿರುವು ರಿಂದಲೇ ಇವರು ಮೆಚ್ಚುವಂಥ ಗ್ರಂಥವನ್ನು ನನ್ನಿಂದ ಬರೆಯಲು ಸಾಧ್ಯವೇ ಎಂದು ನಾನು ಅಳುಕುವಂತಾಗುತ್ತದೆ. ಎಂಥೆಂಥ ಲೇಖಕರ ಮಹತ್ವದ ಕೃತಿಗಳನ್ನು ಇವರು ಇದುವರೆಗೆ ಪ್ರಕಟಿಸಿದ್ದಾರೆ! ಆದಾಗ್ಯೂ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ' ಯಲ್ಲಿ ಸೇರುವ ಬಯಕೆ ನನಗೂ ಇದೆ. It is a temptation to join a wonderful pantheon of writers. ಇದು ಆದಷ್ಟು ಬೇಗ ನನಗೆ ಕೈಗೂಡಲೆಂದು ವೀಣಾಪಾಣಿ ಶಾರದಾಂಬೆಯನ್ನು ಪ್ರಾರ್ಥಿಸುವೆ.

ಶ್ರೀ ಛಾಯಾಪತಿಯವರ ಅಕ್ಷರ ಸೇವೆಗೆ ಒತ್ತಾಸೆಯಾಗಿ ನಿಂತಿರುವವರು ಅವರ ಧರ್ಮಪತ್ನಿ ಶ್ರೀಮತಿ ಪುಷ್ಪಾ ಅವರು. ಛಾಯಾಪತಿ ಅವರದು ಒಂದು ರೀತಿ ದೊಡ್ಡಮನೆತನವಾದರೆ ಪುಷ್ಪಾ ಅವರ ಮನೆತನವೂ ಅಷ್ಟೇ ಮೇಲ್ಮಟ್ಟದ್ದು. ಅವರು ಶೃಂಗೇರಿ ಮನೆತನದವರು ಎಂದ ಮೇಲೆ ವಿವರಿಸಿ ಹೇಳುವ ಅಗತ್ಯವಿಲ್ಲ. ನಿಸರ್ಗ ನಿಯಮದಂತೆ ದೊಡ್ಡದನ್ನು ದೊಡ್ಡದು ಕೂಡಿಕೊಂಡಿದೆ. ಇದರ ಫಲ: ಸುಂದರ ಸಂಸಾರ! ಸಾಕು ಇನ್ನು, ಕೆಲಸ ಕಡಿಮೆ ಮಾಡಿಕೊಳ್ಳುತ್ತಾ, ನಿಧಾನವಾಗಿ ವಿಶ್ರಾಂತ ಬದುಕಿಗೆ ಕಾಲಿಡುತ್ತೇನೆ ಎಂದು ಛಾಯಾಪತಿಯವರು ಆಗಾಗ ಹೇಳುತ್ತಿರುತ್ತಾರೆ. ಇಷ್ಟು ಕಾಲ ಅವರಿಗೆ ನವಚೈತನ್ಯ ನೀಡಿ ಪೋಷಿಸಿಕೊಂಡು ಬಂದಿರುವ ಸಹೋದರಿ ಪುಷ್ಪಾ ಅವರ ಪ್ರೋತ್ಸಾಹದಿಂದ ಛಾಯಾಪತಿಯವರು ತಮ್ಮ ಪ್ರಕಟಣ ಕಾರ್ಯವನ್ನು ಮುಂದುವರಿಸಲಿ. His achievement is breath-taking! He can rest on his laurels! ಇದರಲ್ಲಿ ಯಾವುದೇ ಸಂದೇಹವಿಲ್ಲ. ಇನ್ನು ಮೇಲೆ ಛಾಯಾಪತಿಯವರು ಪ್ರಕಟಿಸುವ ಗ್ರಂಥಗಳು ಮತ್ತು ಅವರೇ ಬರೆಯುವ ಪುಸ್ತಕಗಳು ನಮಗೆ ಬೋನಸ್!

ಒಂದು ಕುಶಲ ಕರ್ಮಿಗಳ ಸುಸಂಸ್ಕೃತ ಮನೆತದಲ್ಲಿ ನಾನು ಹುಟ್ಟಿ ಬಂದಿರುವೆನಾದರೂ ನಾನು ಹುಟ್ಟಿದ ಒಂದೇ ವರ್ಷಕ್ಕೆ ನನ್ನ ತಂದೆ ಕಾಲವಾದರು; ತಾಯಿ ನಿರಕ್ಷರ ಕುಕ್ಷಿ. ತಲೆತಲಾಂತರದಿಂದ ವಿದ್ಯೆ ಹರಿದು ಬಂದಿರುವ ಛಾಯಾಪತಿ ಯವರು ನನ್ನನ್ನು ಒಬ್ಬ ಸಮಾನಸ್ಕಂಧನಂತೆ ಕಾಣುತ್ತಿರುವ ಅವ್ಯಾಜ ಮೈತ್ರಿಯ

ರಹಸ್ಯವನ್ನು ನಾನು ಭೇದಿಸಲಾರೆ. ಈ ಜನ್ಮದಲ್ಲಿ ಇಂಥವರ ಸ್ನೇಹವನ್ನು ದಕ್ಕಿಸಿರುವ ನಿಸರ್ಗದ ನಿಗೂಢ ಆಶೀರ್ವಾದಕ್ಕೆ ಮಣಿದು ಮೂಕನಾಗುವೆ.

ಎಪ್ಪತ್ತು ವಸಂತಗಳನ್ನು ಸಾರ್ಥಕವಾಗಿ ಪೂರೈಯಿಸುತ್ತಿರುವ ಛಾಯಾಪತಿಯವರು ನೂರ್ಕಾಲ ಬಾಳಲಿ ಎಂದಷ್ಟೇ ದೇವರನ್ನು ಪ್ರಾರ್ಥಿಸುವೆ.

# ತಲೆಮಾರುಗಳ ಪರಂಪರೆ ಮುನ್ನಡೆಸುತ್ತಿರುವ ತಳುಕಿನ ಬೆಳಕು

ಕರ್ನಾಟಕದ ಮಾತ್ರವಲ್ಲ ಭಾರತದ ಇತಿಹಾಸದಲ್ಲೇ ಗಮನಾರ್ಹ ಸ್ಥಳ ಚಿತ್ರದುರ್ಗ. ಅತ್ಯಂತ ಪ್ರಾಚೀನ ಇತಿಹಾಸ, ನಾಗರಿಕತೆ, ಸಂಸ್ಕೃತಿಯ ಕೇಂದ್ರವೂ ಅದಾಗಿದೆ. ಈ ಜಿಲ್ಲೆಯಲ್ಲಿ ಬರುವ 'ತಳುಕು' ಎಂಬ ಊರು ಆಧುನಿಕ ಕನ್ನಡ ಸಾಹಿತ್ಯ ವನ್ನು ಕಟ್ಟಿ ಬೆಳೆಸಿರುವ ಪ್ರಾತಃಸ್ಮರಣೀಯರನ್ನು ನೀಡುವ ಮೂಲಕ ಮಹತ್ವವನ್ನು ಪಡೆದಿದೆ. ಯುಗದ ಕವಿ ಜಗದ ಕವಿ ಎಂದು ವರಕವಿ ನಾದಲೋಕದ ಸಾಮ್ರಾಟ ಒಲವಿನ ಚಿರಂತನ ಚೇತನ ದ.ರಾ.ಬೇಂದ್ರೆಯವರಿಂದ ಪ್ರಶಂಸೆಗೊಳಗಾದ ರಸ ಋಷಿ, ರಾಷ್ಟ್ರಕವಿ, ವಿಶ್ವಚೇತನ ಕುವೆಂಪು ಅವರು ತಮ್ಮ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ಅರ್ಪಣೆಯಲ್ಲಿ

"ಇದೊ ಮುಗಿಸಿ ತಂದಿಹೆನ್ ಈ ಬೃಹದ್‌ಗಾನಮಂ
ನಿಮ್ಮ ಸಿರಿಯಡಿಗೊಪ್ಪಿಸಲ್ಕೆ, ಓ ಪ್ರಿಯಗುರುವೆ.
ಕರುಣಿಸಿಂ ನಿಮ್ಮ ಹರಕೆಯ ಬಲದ ಶಿಷ್ಯನಂ.
ಕಾವ್ಯಮಂ ಕೇಳ್ವೊಂದು ಕೃಪೆಗೆ ಕೃತಕೃತ್ಯನಂ
ಧನ್ಯನಂ ಮಾಡಿ. ನೀಮುದಯರವಿಗೈತಂದು
ಕೇಳಲೆಳೆಸಿದಿರಂದು. ಕಿರುಗವನಗಳನೋದಿ
ಮೆಚ್ಚಿಸಿದೆನನಿತರೊಳೆ ಬೈಗಾಯ್ತು. "ಮತ್ತೊಮ್ಮೆ
ಬರುವೆ. ದಿನವೆಲ್ಲಮಂ ಕೇಳ್ವೆನೋದುವೆಯಂತೆ;
ರಾಮಾಯಾಣಂ ಅದು ವಿರಾಮಾಯಣಂ ಕಣಾ!"
ಎಂದು ಮನೆಗೈದಿದಿರಿ. ಮನೆಗೈದಿದಿರಿ ದಿಟಂ;
ದಿಟದ ಮನೆಗೈದಿದಿರಿ!
ಮುಗಿಸಿ ತಂದಿಹೆನಾ ಮಹಾಗಾನಮಂ. ಪಿಂತೆ
ವಾಲ್ಮೀಕಿಯುಲಿದ ಕಥೆಯಾದೊಡಂ, ಕನ್ನಡದಿ
ಬೇರೆ ಕಥೆಯೆಂಬಂತೆ, ಬೇರೆ ಮೈಯಾಂತಂತೆ

ಡಾ. ಬಿ.ವಿ. ವಸಂತಕುಮಾರ್

ಮರುವುಟ್ಟುವಡೆದಂತೆ ಮೂಡಿದೀ ಕಾವ್ಯಮಂ
ವಿಶ್ವವಾಣಿಗೆ ಮುಡಿಯ ಮಣಿ ಮಾಡಿಹೆನ್. ನಿಮ್ಮ
ಕೃಪೆಯಿಂದ'

ಎಂದು ಯಾರನ್ನು ಕುರಿತು ಬರೆದಿದ್ದಾರೆಯೋ ಅಂಥ ಶ್ರೀ ವೆಂಕಣ್ಣಯ್ಯನವರು ಇದೇ ತಳುಕಿನವರು. ಅವರ ಸ್ಮರಣೆಯಲ್ಲಿ ಪ್ರಾರಂಭವಾದ ಪ್ರಕಾಶನ ಸಂಸ್ಥೆಯೇ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ' ಅದರ ಮಾಲೀಕರು ಶ್ರೀಯುತ ಟಿ.ಎಸ್. ಛಾಯಾಪತಿಯವರು. ಅವರು ಕೇವಲ ಪ್ರಕಾಶನ ಸಂಸ್ಥೆಯ ಮಾಲೀಕರು ಮಾತ್ರವಲ್ಲ. ಅವರು ನಿಜವಾದ ಅರ್ಥದಲ್ಲಿ ಪುಸ್ತಕ ಸಂಸ್ಕೃತಿಯ ವಿನಮ್ರ ಸೇವಕರು. ಇದನ್ನು ನಾವು ಅವರ ನಡೆ - ನುಡಿ - ಜೀವನ - ವ್ಯಾಪಾರ ಎಲ್ಲದರಲ್ಲಿಯೂ ಕಾಣಬಹುದು. ಛಾಯಾಪತಿಯವರು ಮಾಲೀಕರು, ಸೇವಕರು ಮಾತ್ರವಲ್ಲ ಅವರ ಪೂರ್ವಜರ ವಾರಸುದಾರರು ಸಾಹಿತ್ಯ, ಸಂಸ್ಕೃತಿ, ಅತಿಥಿ ಸತ್ಕಾರಗಳಿಂದ ವಿಶಿಷ್ಟ ವ್ಯಕ್ತಿತ್ವವನ್ನು ಮೈಗೂಡಿಸಿಕೊಂಡಿರುವಂಥ ಪ್ರೀತಿಯ ಛಾಯಾಪತಿ, ಪುಷ್ಪಾ ಛಾಯಾಪತಿ ದಂಪತಿಗಳು, ಅವರ ಮನೆ, ಒಂದು ನಿರ್ವ್ಯಾಜ ಪ್ರೀತಿಯ ತಂಪು ನೆರಳು, ಎಲೆವನೆ. ಅದಕ್ಕೆ ಕಾರಣ ತಳುಕು ಹಾಗೂ ಅವರ ತಂದೆ ತ.ಸು. ಶಾಮರಾಯರು ತಾಯಿ ಸುಬ್ಬಮ್ಮ ಅವರ ಜೀವನಾದರ್ಶಗಳು. ಹಾಗಾಗಿ ನನಗೆ ಛಾಯಾಪತಿಯವರ ಒಡನಾಟವು ಅವರು ತಳುಕಿನ ಬೆಳಕು ಆಗಿ ತಮ್ಮ ತಲೆಮಾರುಗಳ ಪರಂಪರೆಯನ್ನು ನಿರಂತರವಾಗಿ ಮುನ್ನಡೆಸುತ್ತ ಬರುತ್ತಿದ್ದಾರೆ ಎಂದೆನಿಸುತ್ತದೆ.

ಶ್ರೀಯುತ ಛಾಯಾಪತಿಯವರ ತಂದೆಯವರೂ ನನ್ನ ಪೂಜ್ಯರೂ ಆದ ತ.ಸು. ಶಾಮರಾಯರನ್ನು ನಾನು ಕಂಡದ್ದು 1988ರಲ್ಲಿ. ನನ್ನ ಅತ್ಯಂತ ಆತ್ಮೀಯನೂ ಜೀವನ ಗೆಳೆಯನೂ, ಶಾಮರಾಯರ ಕುಟುಂಬದೊಂದಿಗೆ ಅತ್ಯಂತ ನಿಕಟ ಬಾಂಧವ್ಯ ಹೊಂದಿದವನೂ ಆಗಿದ್ದಂಥ, ಇಂದು ನಮ್ಮಿಂದ ಅಗಲಿ ಮರೆಯಲಾಗದ ಚೇತನವಾಗಿ ಉಳಿದಿರುವ ಗೆಳೆಯ ಶ್ರೀ ಗಿರಿ ನನ್ನನ್ನು ಶಾಮರಾಯರ ಬಳಿ ಕರೆದೊಯ್ದಿದ್ದನು. ನಾನಾಗ ಕನ್ನಡ ಎಂ.ಎ. ಪದವಿಗೆ ಸೇರಿದ್ದೆ. ಹಾಸ್ಟಲ್ ಸಿಕ್ಕಿರಲಿಲ್ಲ. ಊಟ ವಸತಿಗಾಗಿ ಪರದಾಡುತ್ತಿದ್ದೆ. ಅಂಥ ಸಂದರ್ಭದಲ್ಲಿ ತ.ಸು. ಶಾಮರಾಯರ ಬಳಿ ಸಹಾಯ ಕೇಳಲು ಗಿರಿ ನನ್ನನ್ನು ಕರೆದುಕೊಂಡು ಹೋಗಿದ್ದ. ಅತ್ಯಂತ ಪ್ರೀತಿ ವಾತ್ಸಲ್ಯದಿಂದ ಕಂಡ ಶಾಮರಾಯರು ನನಗೆ ಹೇಳಿದರು, "ನೀನು ಪ್ರತಿದಿನ ನಮ್ಮ ಮನೆಗೆ ಬಂದು ಬೆಳಿಗ್ಗೆ ರಾತ್ರಿ ಊಟ ಮಾಡಿ ಕೊಂಡು ಹೋಗು. ಇಲ್ಲಿಯೇ ಇರು ಎನ್ನುತ್ತಿದ್ದೆ. ಆದರೆ ಮನೆ ಚಿಕ್ಕದು. ನಿನಗೆ ಎಲ್ಲಾದರೂ ಉಳಿದುಕೊಳ್ಳುವ ವ್ಯವಸ್ಥೆ ಮಾಡೋಣ" ಎಂದಾಗ ನನ್ನ ಕಣ್ಣುಗಳಲ್ಲಿ ನೀರು, ಎದೆಯಲ್ಲಿ ಕೃತಜ್ಞತೆಯ ಕಡಲು ತುಂಬಿತ್ತು. ಅನಾಥನಿಗೆ ಭಗವಂತನ ಭರವಸೆ ಸಿಕ್ಕಂತಾಗಿತ್ತು. ಅದಾದ ಅನಂತರ ಜೆ.ಎಸ್.ಎಸ್. ಪ್ರಧಾನ

ಹಾಸ್ಟಲ್ ನನಗೆ ಅವರೆಲ್ಲರ ಆಶೀರ್ವಾದದಿಂದ ದೊರೆಯಿತು. ಪ್ರಥಮ ರ್‍ಯಾಂಕ್‌ನೊಂದಿಗೆ ಎಂ.ಎ. ಪದವಿಯನ್ನು ಪಡೆದೆನು. ೧೯೮೮ರಿಂದ ಎಂದೂ ನಾನು ಶಾಮರಾಯರ ಮನೆಗೆ ಹೋಗಿ ಉಪವಾಸದಿಂದ ವಾಪಾಸಾಗಿಲ್ಲ. ವೃದ್ಧಾಪ್ಯದ ಎಲ್ಲ ತಾಪತ್ರಯಗಳ ನಡುವೆಯೂ ತ.ಸು. ಶಾಮರಾಯರು ಹಾಗೂ ತಾಯಿ ಸುಬ್ಬಮ್ಮ ಅವರು ನೀಡಿದ ಪ್ರೀತಿ ಬಡಿಸಿದ ಊಟ ನನ್ನ ಜೀವನದ ಬಟ್ಟೆ ಹಾಗೂ ಹೊಟ್ಟೆಗಳೆರಡನ್ನೂ ತಂಪಾಗಿರಿಸಿತ್ತು. 1991-92ರಲ್ಲಿ ನಾನು ಮಹಾರಾಜ ಕಾಲೇಜಿನಲ್ಲಿ ಅತಿಥಿ ಉಪನ್ಯಾಸಕನಾಗಿ ಕೆಲಸ ಮಾಡುವ ದಿನಗಳಲ್ಲೊಮ್ಮೆ ಶಾಮರಾಯರ ಮನೆಗೆ ಹೋಗಿದ್ದೆ. ಅವರು ಪರಿಷ್ಕೃತಗೊಳಿಸಿದ ನಟರಾಜನ ವಿಗ್ರಹದ ಮುಖಪುಟವಿರುವ ಕನ್ನಡ ಸಾಹಿತ್ಯ ಚರಿತ್ರೆ ಪುಸ್ತಕವನ್ನು ನಡುಗುವ ಕೈಯಲ್ಲೇ ಸಹಿ ಮಾಡಿ ನನಗೆ ನೀಡಿದರು. ಬಳಿಕ 'ಇದರಲ್ಲೇನಾದರೂ ತಪ್ಪುಗಳಿದ್ದರೆ ಬಂದು ತಿಳಿಸು ಸರಿಪಡಿಸುತ್ತೇನೆ" ಎಂದಾಗ ನನ್ನ ಎದೆ ಝಲ್ಲೆಂದು ಸ್ತಬ್ಧಗೊಂಡಂತಾಗಿತ್ತು. 24 ವರ್ಷದ ಎಳಸು ಅಪ್ರಬುದ್ಧ ಹುಡುಗ ನಾನು. ಅವರು 84 ವರ್ಷ ವಯಸ್ಸಿನ ಅತ್ಯಂತ ಮಾಗಿದ ಜೀವ ಮಹಾನ್ ಚೇತನ. ಜಿ.ಎಸ್. ಶಿವರುದ್ರಪ್ಪನವರಂಥ ರಾಷ್ಟ್ರಕವಿಯ ಪ್ರೀತಿಯ ಗುರು. ಅವರ ವಿನಯ, ನಿರಹಂಕಾರ, ಸಂತ ಗುಣ, ಹೃದಯವಂತಿಕೆ, ಸರಳತೆ, ತಾಯ್ತನ, ವಿದ್ವತ್ತು ಎಲ್ಲವೂ ಇಂದಿಗೂ ನನ್ನ ಬದುಕಿನ ಗುರಿಗಳಾಗಿ ಮಾದರಿಗಳಾಗಿ ಕಣ್ಣ ಮುಂದಿವೆ. ಆ ಎಲ್ಲ ನೆನಪುಗಳೂ ಎಳೆ ಎಳೆಯಾಗಿ ತೆರೆದುಕೊಳ್ಳುತ್ತವೆ ಶ್ರೀಯುತ ಛಾಯಾಪತಿಯವರ ಎದುರಿದ್ದಾಗ, ಅವರ ಮನೆಯಲ್ಲಿ ಪ್ರೀತಿಯ ಮಮತೆಯ ಅಮ್ಮ ಪುಷ್ಪಾಛಾಯಾಪತಿಯರು ನೀಡಿದ ಬಿಸಿಬಿಸಿಯಾದ ಹದವಾದ ಕಾಫಿ ಹೀರುವಾಗ, ಅವರು ಪ್ರಕಟಿಸಿದ ಹೊಸ ಹೊಸ ಪುಸ್ತಕಗಳನ್ನು ಪ್ರೀತಿಯಿಂದ ನೀಡುತ್ತಿರುವಾಗ! ಹಾಗಾಗಿ ನನಗೆ ಛಾಯಾಪತಿ ಅವರು ಪ್ರಕಾಶಕರಾಗಿ, ಲೇಖಕರಾಗಿ ಕಾಣಿಸುವುದಿಲ್ಲ. ಬದಲಿಗೆ ಅವರು ತಮ್ಮ ತಲೆಮಾರುಗಳ ಪರಂಪರೆಯನ್ನು ಮುನ್ನಡೆಸುತ್ತಿರುವ ತಳುಕಿನ ಬೆಳಕಾಗಿ ಕಾಣಿಸುತ್ತಾರೆ.

ಛಾಯಾಪತಿಯವರು ಎಂ.ಕಾಂ. ಪದವೀಧರರಾಗಿಯೂ ಸಾಹಿತ್ಯ, ಸಂಸ್ಕೃತಿ, ಮನುಷ್ಯ ಪ್ರೀತಿಗಳ ಬೆನ್ನೇರಿ ಬಂದಿರುವುದು ಕನ್ನಡದ ಸೌಭಾಗ್ಯವೆಂದೇ ಭಾವಿಸಬೇಕಾಗುತ್ತದೆ. ಪುಸ್ತಕ ಪ್ರಕಟಣೆ ಹಾಗೂ ಮಾರಾಟವೆಂಬುದು ಲಾಭದಾಯಕ ಕ್ಷೇತ್ರವಲ್ಲ. ಅದೊಂದು ಸವಾಲಿನ ಕ್ಷೇತ್ರ ಎಂಬಂಥ ವಾತಾವರಣ ಇದ್ದಂಥ ಕಾಲಘಟ್ಟದಲ್ಲೇ ಅವರು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಮೂಲಕ ಅಮೂಲ್ಯವಾದ ಗ್ರಂಥಗಳನ್ನು ಮುದ್ರಿಸಿ ಸಹೃದಯರಿಗೆ ತಲುಪಿಸುವ ಕಾರ್ಯವನ್ನು ಕೈಗೆತ್ತಿಕೊಂಡಿದ್ದಾರೆ. 1968ರಲ್ಲೇ ತಂದೆಯವರಿಂದ ಈ ಸಂಸ್ಥೆಯನ್ನು ಸ್ವೀಕರಿಸಿದ ಇವರು ಕಳೆದ 46ವರ್ಷಗಳಲ್ಲಿ ಒಂದು ಸಾವಿರಕ್ಕೂ ಹೆಚ್ಚು ಪ್ರಕಟಣೆಗಳನ್ನು ಕನ್ನಡ ಜ್ಞಾನಲೋಕಕ್ಕೆ

ನೀಡಿದ್ದಾರೆಂದರೆ ಅವರ ಶಕ್ತಿ, ಪರಿಶ್ರಮ, ಕಾಳಜಿ, ಮಾರಾಟ, ಲಾಭನಷ್ಟಗಳ ಸಂಘರ್ಷ ಎಷ್ಟೆಂಬುದು ನಮಗೆ ಮನದಟ್ಟಾಗುತ್ತದೆ. ಪ್ರತಿವರ್ಷ ಸರಾಸರಿ 25 ಕೃತಿಗಳನ್ನು ಪ್ರಕಟಿಸುತ್ತಾ ಬಂದಿದ್ದಾರೆ. ಅಷ್ಟೇ ಅಲ್ಲದೆ ಸ್ವತಃ ಲೇಖಕರಾಗಿ 23 ಕೃತಿಗಳನ್ನು ರಚಿಸಿದ್ದಾರೆ. ಅಷ್ಟೇ ಅಲ್ಲದೆ ಅವರೊಡನೆ ಮಾತನಾಡುತ್ತಾ ಕುಳಿತರೆ ಕನ್ನಡದ ಹೆಸರಾಂತ ಸಾಹಿತಿಗಳಾದ ದೇಜಗೌ, ಹಾಮಾನಾ ಆದಿಯಾಗಿ ನಿಸ್ಸಾರ್ ಅಹಮದ್, ಹೆಚ್.ಎಸ್.ವಿ. ಹೀಗೆ ಸಾಹಿತಿಗಳ ಒಡನಾಟದ ಸಾವಿರಾರು ಸ್ವಾರಸ್ಯಕರವಾದ ಪ್ರಸಂಗಗಳ ನೆನಪಿನ ನಿಘಂಟೇ ಅವರಲ್ಲಿದೆ. ಅವೆಲ್ಲವನ್ನು ದಾಖಲಿಸಿದರೆ ಈಗ ರಚಿಸಿರುವುದಕ್ಕಿಂತಲೂ ಹೆಚ್ಚು ಕೃತಿಗಳಾಗುವಷ್ಟು ಸಾಮಗ್ರಿ ಅವರ ಜೀವನಾನುಭವದಲ್ಲಿದೆ. ಹಾಗಾಗಿಯೇ 1999ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರ ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ನೀಡಿ ಗೌರವಿಸಿದೆ. ಎಲ್ಲದಕ್ಕಿಂತಲೂ ದೊಡ್ಡ ಪ್ರಶಸ್ತಿ ಎಂದರೆ ಇವರು ಪ್ರಕಟಿಸುತ್ತಾ ಬಂದ ಕೃತಿಗಳನ್ನು ಓದುಗರು ಕೊಂಡು ಓದುತ್ತಾ ಬಂದಿದ್ದಾರಲ್ಲ ಅದು ಶಾಶ್ವತವಾದ ಅನುಪಮವಾದ ಸಾಂಸ್ಕೃತಿಕ ಪ್ರಶಸ್ತಿ! ಐಚ್ಛಿಕ ಕನ್ನಡದ ವಿದ್ಯಾರ್ಥಿ ತ.ಸು. ಶಾಮರಾಯರ ಕೃತಿಗಳನ್ನು ಓದದೇ ಇರಲು ಸಾಧ್ಯವೇ ಇಲ್ಲ ಎಂಬಂತಾಗಿರುವುದಕ್ಕೆ ತ.ಸು. ಶಾಮರಾಯರ ಶ್ರೇಷ್ಠವಾದ ಹೃದಯ ಸ್ಪರ್ಶಿಯಾದ ಬರವಣಿಗೆ ಎಷ್ಟು ಕಾರಣವೋ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಹಾಗೂ ಛಾಯಾಪತಿ ದಂಪತಿಗಳ ಪ್ರಕಟಣಾ ಕಾರ್ಯದ ತಪಸ್ಸು ಅಷ್ಟೇ ಕಾರಣ. ಹಣತೆಯಿಂದ ಹಣತೆ ಬೆಳಗುವ ಪರಿ ಎಂದರೆ ಇದೇ ಇರಬೇಕು.

# ತಲೆಮಾರುಗಳ ನಡುವಿನ ಯಾತ್ರಿಕ

ತಳುಕಿನ ಮನೆತನದವರು ಎಂಬ ಹೆಮ್ಮೆ ಮತ್ತು ಜನರ ನಿರೀಕ್ಷೆಗಳ ನಡುವೆ ಶ್ರೀ ಛಾಯಾಪತಿಯವರು ತಮ್ಮ ಎಪ್ಪತ್ತನೇ ವಸಂತಕ್ಕೆ ಕಾಲಿರಿಸುತ್ತಿದ್ದಾರೆ. ಇದೇನು ಸುಲಭದ ಹಾದಿಯಲ್ಲ. ಕಾರಣ ಕನ್ನಡದ ಜನತೆ ಅವರೊಡನೆ ಮಾತನಾಡುವಾಗ ಟಿ.ಎಸ್. ವೆಂಕಣ್ಣಯ್ಯ, ತ.ಸು. ಶಾಮರಾಯ, ಸುಬ್ಬಣ್ಣ, ತರಾಸು ಮುಂತಾದವರನ್ನು ಅವರಲ್ಲಿ ಪರೋಕ್ಷವಾಗಿ ಕಾಣುತ್ತಿರುತ್ತಾರೆ. ಕುವೆಂಪು ಅವರಿಗೆ ಮಾರ್ಗ ತೋರಿದ, ನೂರಾರು ವಿದ್ಯಾರ್ಥಿಗಳಿಗೆ ಅನ್ನದಾತರಾದ ವೆಂಕಣ್ಣಯ್ಯನವರ ಪ್ರಸ್ತಾಪವಿಲ್ಲದೆ ಅವರೊಡನೆ ಮಾತು ಮುಂದುವರಿಯಲಾರದು. ಜಿ.ಎಸ್. ಶಿವರುದ್ರಪ್ಪ ಅವರಿಗೆ ಮಾರ್ಗತೋರಿದ ಮತ್ತು ಕನ್ನಡದ ಒಂದು ತಲೆಮಾರನ್ನೇ ಬೆಳೆಸಿದ ತ.ಸು. ಶಾಮರಾಯರಿಗೆ ಕೃತಜ್ಞತೆ ಸಲ್ಲಿಸದೆ ಮಾತು ದಾರಿಗಾಣದು. 'ಮೂರು ತಲೆಮಾರು'ಕೃತಿ ಓದಿದವರು ಅಲ್ಲಿಯ ಘಟನೆಗಳನ್ನು ನೆನಪಿಸುತ್ತ ಕುಟುಂಬದ ಕುರಿತ ಕುತೂಹಲ ಮತ್ತು ಪ್ರಶ್ನೆಗಳಿಲ್ಲದೆ ಮಾತು ಮುಂದುವರಿಸಲಾರರು. ಇದರೊಡನೆ ಅದೇ ಮನೆತನಕ್ಕೆ ಸೇರಿದ ತರಾಸು ಅವರ ವ್ಯಕ್ತಿತ್ವ ಮತ್ತು ಬರವಣಿಗೆಗಳ ಕುರಿತ ಅನಿಸಿಕೆಗಳನ್ನು ಬಂದವರು ಹಂಚಿಕೊಳ್ಳುವ ಉತ್ಸಾಹಕ್ಕೆ ತಲೆಯಾಡಿಸಲೇಬೇಕು. ಇನ್ನು ಇದೇ ಕುಟುಂಬದ ವಲಯದೊಳಗೆ ಬರುವ ಬೆಳಗೆರೆ ಜಾನಕಮ್ಮ, ಬೆಳಗೆರೆ ಕೃಷ್ಣಶಾಸ್ತ್ರಿಗಳು ಮಾತಿನಲ್ಲಿ ಪ್ರವೇಶ ಕಾಣುತ್ತಾರೆ. ಕೃಷ್ಣಶಾಸ್ತ್ರಿಗಳೇ ಬಂದಾಗ ಮುಕುಂದೂರು ಸ್ವಾಮಿಗಳ ಮಹತ್ತು ಪ್ರಸ್ತಾಪವಾಗುತ್ತದೆ. ಹೀಗೆ ಬಂದವರು ಅವರ ಹಿರಿಯರ ಬಗ್ಗೆಯೇ ಮಾತನಾಡುತ್ತಿದ್ದಲ್ಲಿ ಛಾಯಾಪತಿಯವರ ಕಷ್ಟ ಸುಖ ವಿಚಾರಿಸುವವರು ಎಷ್ಟುಮಂದಿ? ಇವರ ಬಗ್ಗೆ ಮಾತನಾಡಬೇಕೆನ್ನಿಸುವಷ್ಟರಲ್ಲಿ ವೇಳೆಯೇ ಮುಗಿದುಹೋಗಿರುತ್ತದೆಯೇನೋ. ಹೀಗೆ ಛಾಯಾಪತಿಯವರು ತಳುಕಿನ ಮನತೆನದ ಉತ್ಸವಮೂರ್ತಿಯಂತೆ ನನಗೆ ಕಾಣುತ್ತಾರೆ. ಆದರೆ ಅವರು ಬರೀ ಉತ್ಸವಮೂರ್ತಿಯಲ್ಲ. ಉತ್ಸಾಹದ ಮೂರ್ತಿ. ಅವರು ಉತ್ಸಾಹ ತೋರದಿದ್ದಲ್ಲಿ ಹಿಂದಿನ ಎಲ್ಲ ಹಿರಿಯರು ಇಷ್ಟುಮಟ್ಟಿಗೆ ಮುಂದಿನ ತಲೆಮಾರುಗಳನ್ನು ಕಾಣುತ್ತಿದ್ದರೋ ಇಲ್ಲವೋ. ಹೀಗಾಗಿ ಛಾಯಾಪತಿಯವರು ತಮ್ಮ ಎಪ್ಪತ್ತು ವರ್ಷಗಳ

---

ಜಿ.ಕೆ. ರವೀಂದ್ರಕುಮಾರ್

---

ನಡೆಯಲ್ಲಿ ನನಗೆ ಕಾಣುವುದು ತಲೆಮಾರುಗಳ ನಡುವಿನ ಯಾತ್ರಿಕರಂತೆ. ಇದರಿಂದಾಗಿಯೇ ಇದು ಸುಲಭದ ಹಾದಿಯಲ್ಲ. ಅವರು ಸ್ವಲ್ಪ ಮೈಮರೆತರೂ ಅದು ತಳುಕಿನ ವ್ಯಾಖ್ಯಾನವಾಗಿ ಬಿಡುತ್ತದೆ.

ನಮಗೆ ಗೊತ್ತಿರುವುದು ಥಳುಕು ಮಾತ್ರ. ಆದರೆ ಅದಕ್ಕೆ ಜೀವನದಲ್ಲಿ ಸ್ಥಾನವಿರಬಾರದು ಎಂದು ತೋರಿಸುವ ಸಲುವಾಗಿಯೇ 'ತಳುಕು' ಎಂಬ ಗ್ರಾಮ ಮತ್ತು ಇಂತಹ ಮಹನೀಯರನ್ನು ದೇವರು ಸಾಂಕೇತಿಕವಾಗಿ ರೂಪಿಸಿದನೇನೋ. ಛಾಯಾಪತಿಯವರು ಯಾರೊಂದಿಗೆ ಮಾತನಾಡುವಾಗಲೂ ಕುಟುಂಬದವರು ಆಡಿ, ನಡೆದು ತೋರಿಸಿದ ಮೌಲ್ಯಗಳನ್ನು ಸಂತೋಷ ಮತ್ತು ಕೃತಜ್ಞತೆಯಿಂದ ನೆನೆಯುತ್ತಾರೆ. ಅವರ ಪ್ರಕಾಶನ ವೃತ್ತಿಯೂ ಇಂತಹ ಮೌಲ್ಯಗಳ ಮುಂದುವರಿದ ಭಾಗವೆಂದೇ ಅವರು ನಂಬಿದ್ದಾರೆ. ತ.ಸು. ಶಾಮರಾಯರನ್ನು ಕುರಿತು ಅವರು ರಚಿಸಿರುವ 'ತಂಪುನೆಳಲು' ಮತ್ತು 'ಅಣ್ಣನ ಸ್ಮರಣೆ' ಹೊತ್ತಗೆಗಳು ಈ ಕೃತಜ್ಞತೆಯ ಫಲವೇ. ಕಳೆದ ಹನ್ನೊಂದು ವರ್ಷಗಳಿಂದ ಮೈಸೂರಿನಲ್ಲಿ ನಾನು ನೆಲೆಸಿದ್ದರೂ ಅವರೊಡನೆ ಆತ್ಮೀಯ ಸಂಪರ್ಕ ನನಗೆ ಒದಗಿ ಬಂದುದು ಇತ್ತೀಚೆಗಷ್ಟೇ ಎಂಬುದೊಂದು ಸೋಜಿಗ. ಮೈಸೂರಿಗೆ ಬಂದ ಹೊಸತರಲ್ಲೊಮ್ಮೆ ಹಿರಿಯ ಕವಿಯೊಬ್ಬರ ಯಾವುದೋ ವಿವರ ತಲುಪಿಸಲೊಮ್ಮೆ ಅವರ ಮನೆಗೆ ಹೋಗಿದ್ದ ನೆನಪು. ತರುವಾಯ ಅವರ ಬಗ್ಗೆ ನನಗೆ, ನನ್ನ ಕುರಿತು ಅವರಿಗೆ ತಿಳಿದಿದ್ದರೂ ನಮಗಿಬ್ಬರಿಗೂ ಸಾಮಾನ್ಯ ಸ್ನೇಹಿತರು ಇದ್ದರೂ ಕೂಡಿ ಮಾತನಾಡುವ ಸಂದರ್ಭವೇ ಒದಗಿ ಬಂದಿರಲಿಲ್ಲ. ಇತ್ತೀಚೆಗೆ ಕೆ.ಆರ್. ನಗರ ತಾಲ್ಲೂಕು ಸಾಲಿಗ್ರಾಮದ ಪ್ರಥಮ ದರ್ಜೆ ಕಾಲೇಜಿನಲ್ಲಿ ಏರ್ಪಡಿಸಿದ್ದ ಸಾಹಿತ್ಯ ಕಾರ್ಯಕ್ರಮವೊಂದರಲ್ಲಿ ನಾವು ಭೇಟಿಯಾಗುವ ಸಂದರ್ಭ ಒದಗಿ ಬಂದಿತು. ಅಂದು ನಾನು ಜಿ.ಎಸ್. ಶಿವರುದ್ರಪ್ಪನವರ ಕಾವ್ಯದ ಬಗ್ಗೆ ಮಾತನಾಡಬೇಕಿತ್ತು. ಛಾಯಾಪತಿಯವರು ಇನ್ನೊಬ್ಬ ಅತಿಥಿ. ಛಾಯಾಪತಿಯವರದು ಸರಳ ಆತ್ಮೀಯ ವ್ಯಕ್ತಿತ್ವ. ಅತ್ಯಂತ ಗೌರವಯುತವಾದ ನಡವಳಿಕೆ. ಸುಸಂಸ್ಕೃತ ಮಾತುಗಳು. ಅಂದು ಅವರನ್ನು ಕಂಡ ಹಿರಿಯರೊಬ್ಬರು ಅವರ ಕಾಲಿಗೆ ತಮ್ಮ ಸ್ಥಾನಮಾನ ಮರೆತು ಎರಗಿದರು. ಇದು ಅವರಿಗೂ ಸಂಕೋಚದ ವಿಚಾರವೇ. ತಳುಕಿನ ವೆಂಕಣ್ಣಯ್ಯ ಮನೆತನದ ಕುಡಿಯವರು ಎಂಬುದು ಆ ಅಭಿಮಾನಕ್ಕೆ ಕಾರಣ. ಈ ನಮಸ್ಕಾರ ಮತ್ತು ಇಂಥ ನಮಸ್ಕಾರಗಳನ್ನು ಸ್ವೀಕರಿಸಲು ಮತ್ತು ಮನಸ್ಸಿನಲ್ಲೇ ಇದನ್ನು ತಮ್ಮ ಹಿರಿಯರಿಗೆ ಅರ್ಪಿಸಲು ಛಾಯಾಪತಿಯವರಿಗೆ ಎಲ್ಲ ಅರ್ಹತೆಗಳಿವೆ ಎಂಬುದೇ ಅವರ ವ್ಯಕ್ತಿತ್ವದ ಮುಖ್ಯ ಅಂಶ. ಅನೇಕ ಶ್ರೇಷ್ಠ ಕುಟುಂಬಗಳ ಮಕ್ಕಳಿಗೆ ಇಂತಹ ಅರ್ಹತೆಯಿರುವುದಿಲ್ಲ. ಇದನ್ನು ಪ್ರಶ್ನಿಸಲೂ ಆಗುವುದಿಲ್ಲ. ಮಕ್ಕಳಲ್ಲಿ ದೊಡ್ಡವರನ್ನು ಕಾಣುವಾಗ ಆ ದೊಡ್ಡತನದ ಅಂಶಗಳು ಅಲ್ಲಿರುವುದೂ ಒಂದು ಪುಣ್ಯ ವಿಶೇಷವೇ.

ಛಾಯಾಪತಿಯವರು ಪುಸ್ತಕೋದ್ಯಮವನ್ನೇ ವೃತ್ತಿಯಾಗಿಸಿಕೊಂಡು ತ.ವೆಂ. ಅವರ ಹೆಸರನ್ನು ಇನ್ನೊಂದು ರೀತಿಯಲ್ಲಿ ಪ್ರಸ್ತುತವಾಗಿಸಿದ್ದಾರೆ. ಶಾಮರಾಯರ ಆಸಕ್ತಿ ಹವ್ಯಾಸ ಸಾಹಿತ್ಯ ಪ್ರೀತಿ ಮತ್ತು ಸಜ್ಜನಿಕೆಗಳನ್ನು ಅರ್ಥ ಪೂರ್ಣವಾಗಿ ಮುಂದುವರಿಸಿದ್ದಾರೆ. ಇಲ್ಲಿ ವ್ಯವಹಾರದ ಗೆರೆ ತೆಳುವಾಗಿದೆಯೆಂಬುದೂ ಅಷ್ಟೇ ಮುಖ್ಯ.

ಕಾರ್ಯಕ್ರಮ ಮುಗಿಸಿ ಹಿಂತಿರುಗುವಾಗ ಛಾಯಾಪತಿಯವರು ಬಿಡದೆ ಅವರ ಕಾರಿನಲ್ಲೇ ನನ್ನನ್ನು ಕುಳ್ಳಿರಿಸಿಕೊಂಡು ಬಂದರು. ಎಷ್ಟೋಕಾಲ ಮಾತನಾಡದೇ ಉಳಿಸಿಕೊಂಡು ಬಂದಿದ್ದ ವಿಚಾರಗಳನ್ನು ಒಮ್ಮೆಯೇ ಹಂಚಿಕೊಳ್ಳುವ ಹಾಗೆ ಮಾತನಾಡಿದರು. ಕುವೆಂಪು, ಹಾಮಾನಾ, ಜಿಎಸ್‌ಎಸ್ ಹೀಗೆ ಅನೇಕರು ಅವರ ಮಾತುಗಳಲ್ಲಿ ಅನಾವರಣಗೊಂಡರು. ಉದಾತ್ತಚರಿತರ ಮೌಲ್ಯ ತುಂಬಿದ ಬದುಕನ್ನು ಕುರಿತು ಉತ್ಸಾಹದಿಂದ ಮಾತನಾಡುವಾಗಲೇ ಕುಸಿಯುತ್ತಿರುವ ಮೌಲ್ಯಗಳ ಕುರಿತ ವಿಷಾದ ಅವರ ಮಾತುಗಳಲ್ಲಿತ್ತು. ಛಾಯಾಪತಿಯವರು ಪುಸ್ತಕ ಪ್ರಕಟಣೆಯಲ್ಲಿ ತೋರುವ ಕಳಕಳಿ ಹಾಗೂ ಅಭಿರುಚಿಗಳ ಹಿಂದೆ ಅವರೊಳಗಿನ ಲೇಖಕನ ಪಾತ್ರವೂ ಇದೆ ಎಂದು ನನ್ನ ಭಾವನೆ. ಪ್ರಕಾಶನದ ತೊಂದರೆಗಳೇನೇ ಇದ್ದರೂ ಸದಾ ಅದನ್ನು ಹೇಳಿಕೊಂಡು ಎಲ್ಲರ ಬಳಿ ಹಳಹಳಿಸುವ ಸ್ವಭಾವ ಅವರದಲ್ಲ. ಪ್ರಕಾಶನ ವೃತ್ತಿಯೂ ಬರವಣಿಗೆಯ ಕಾಯಕದಷ್ಟೇ ಪವಿತ್ರವಾದುದು ಎಂದು ಅವರು ನಂಬಿದ್ದಾರೆ. ಇಲ್ಲವಾದಲ್ಲಿ ಸಾವಿರಾರು ಪುಸ್ತಕಗಳನ್ನು ಐದಾರು ದಶಕಗಳಿಂದ ಹೊರತಂದಿರುವುದು ಹುಡುಗಾಟವಲ್ಲ. ತಳುಕಿನ ಮನೆತನದ ವೈಶಿಷ್ಟ್ಯವೇ ಅಗತ್ಯವಿರುವ ಎಲ್ಲರಿಗೂ ನೆರಳು ಕೊಡುವುದು. ತನಗಾಗಿ ನೆರಳು ಇಟ್ಟುಕೊಳ್ಳದ ಮರದ ಹಾಗೆ. ಈ ನೆರಳ ಪರಂಪರೆ ಇಂದೂ ಮುಂದುವರಿದಿದೆ ಎಂಬುದೇ ಸಂತೋಷ. ಆದರೆ ವರ್ತಮಾನದ ಬಿಸಿಲು ದೊಡ್ಡದು.

ಛಾಯಾಪತಿ ಮತ್ತು ಛಾಯಾಪತ್ನಿಯವರ ಆತಿಥ್ಯವೂ ಇಲ್ಲಿ ಉಲ್ಲೇಖನೀಯ. ಬಾಯ್ತುಂಬ ಮಾತು, ಸಜ್ಜನಿಕೆಯ ಆತಿಥ್ಯ. ತಮ್ಮೊಂದಿಗೆ ತಮ್ಮ ಪರಂಪರೆಯನ್ನೂ ಅತ್ಯಂತ ಗೌರವಪೂರ್ವವಾಗಿ ಕೊಂಡೊಯ್ಯುತ್ತಿರುವ ಸ್ನೇಹ ಜೀವಿ ಛಾಯಾಪತಿಯವರಿಗೆ ಸಕಲ ಶುಭಗಳನ್ನೂ ಕೋರುವೆ.

## ಕನ್ನಡ ಸಾರಸ್ವತ ಲೋಕದ ಪ್ರಕಾಶಕ ಸೂರ್ಯ - ಛಾಯಾಪತಿ

ಎರಡು ಸಾವಿರದ ಇಸವಿಯ ಸಮಯವದು. ಭಗದ್ಗೀತೆಯ ಸಂದೇಶವನ್ನು ಜನಸಾಮಾನ್ಯರಿಗೂ ತಲುಪಿಸಬೇಕೆಂಬ ಸದಾಶಯದಿಂದ ನಾನು ಕವಿತಾರೂಪವಾಗಿ ತಿಳಿಗನ್ನಡದಲ್ಲಿ ರಚಿಸಿದ 'ಗೀತಾಮೃತವಾಹಿನಿ' ಪುಸ್ತಕದ ಪ್ರತಿಗಳೆಲ್ಲ ಮಾರಾಟವಾಗಿ ಐದಾರು ವರ್ಷಗಳೇ ಕಳೆದಿದ್ದವು. ಸಹೃದಯ ಓದುಗರಿಂದ ಈ ಪುಸ್ತಕದ ಪ್ರತಿಗಳಿಗೆ ಬೇಡಿಕೆ ಇದ್ದರೂ ನಾನು ನನ್ನ ವೈದ್ಯಕೀಯ ವೃತ್ತಿಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರಿಂದ ಪುನರ್ಮುದ್ರಣ ಸಾಧ್ಯವಾಗಿರಲಿಲ್ಲ. ಆತ್ಮೀಯರಿಂದ ಈ ಕುರಿತು ಒತ್ತಡ ಜಾಸ್ತಿಯಾದ್ದರಿಂದ ಎರಡನೇ ಮುದ್ರಣ ಮಾಡಲು ನಿಶ್ಚಯಿಸಿ, ಉತ್ತಮ ಪ್ರಕಾಶಕರಿಗಾಗಿ ಅರಸುತ್ತಿದ್ದೆ. ಈ ಸಂದರ್ಭದಲ್ಲಿ ಸ್ಟಾರ್ ಆಫ್ ಮೈಸೂರು ಮತ್ತು ಮೈಸೂರುಮಿತ್ರ ಪತ್ರಿಕೆಗಳ ಸಂಪಾದಕರಾದ ಸನ್ಮಿತ್ರ ಕೆ.ಬಿ. ಗಣಪತಿಯವರು ಪ್ರಕಾಶಕರಾದ ಶ್ರೀ ಛಾಯಾಪತಿಯವರನ್ನು ಸೂಚಿಸಿದರು. ಶ್ರೀಯುತ ಛಾಯಾಪತಿಯವರ ಕುರಿತು ವಿಚಾರಿಸಿದಾಗ ಎಲ್ಲರೂ ಸದಭಿಪ್ರಾಯವನ್ನೇ ವ್ಯಕ್ತಪಡಿಸಿದರು. ಕುತೂಹಲದಿಂದ ಸಂಪರ್ಕಿಸಿದೆ. ಕೋಲುಮುಖ, ವೈಚಾರಿಕತೆಯನ್ನು ಸೂಚಿಸುವ ಅಗಲವಾದ ಹಣೆ ಸಹೃದಯತೆಯನ್ನು ಸೂಚಿಸುವ ಮಿನುಗುವ ಕಣ್ಣುಗಳು, ಕುಶಾಗ್ರಬುದ್ಧಿಯನ್ನು ಸೂಚಿಸುವ ನೀಳವಾದ ಚೂಪಾದ ಮೂಗು, ಅಗಲವಾದ ಕಿವಿಗಳು, ಆತ್ಮೀಯತೆಯನ್ನು ಸೂಚಿಸುವ ನಸುನಗುವ ತುಟಿಗಳು ದೃಢತೆಯನ್ನು ವ್ಯಕ್ತಪಡಿಸುವ ಎತ್ತರವಾದ ನಿಲುವು - ಇವು.

ನಾನು ಮೊದಲ ಬಾರಿಗೆ ಛಾಯಾಪತಿಯುವರನ್ನು ಕಂಡ ಬಗೆ. ನಾನು ಅಪರಿಚಿತನಾದರೂ ಆತ್ಮೀಯ ಸ್ವಾಗತ ಕೋರಿದ ಛಾಯಾಪತಿಯವರಲ್ಲಿ ಮಾತಿಗೆ ಮುಂದಾದೆ. ಮೃದು - ಮಧುರವಾದ ಸಂದೇಹಕ್ಕೆ ಎಡೆಮಾಡದ ಸ್ಪಷ್ಟೋಕ್ತಿ, ಸುಸಂಸ್ಕೃತ ವರ್ತನೆ, ವ್ಯವಹಾರವನ್ನು ಬೆರೆಸದ ಆತ್ಮೀಯ ಮಾತು ನನ್ನನ್ನು ಸೆರೆ ಹಿಡಿಯಿತು. ವಿಶ್ವಾಸ ಮೂಡಿತು. ನನ್ನ ಗೀತಾಮೃತವಾಹಿನಿಯ ಪ್ರಥಮ ಮುದ್ರಣದಲ್ಲಾದ ದೋಷಗಳನ್ನು ತಿಳಿಸಿ, ಪುಸ್ತಕ ಯಾವ ರೀತಿಯಲ್ಲಿ ಹೊರಬರಬೇಕೆಂಬ ನನ್ನ

**ಡಾ. ಬೆಳ್ಳಿಪ್ಪಾಡಿ ಸತೀಶ್‌ರೈ**

ಕಲ್ಪನೆಯನ್ನು ಶ್ರೀಯುತರಿಗೆ ವಿವರಿಸಿದೆ. ಕಾಲಮಿತಿಯನ್ನು ಸೂಚಿಸಿದೆ. ಮುಗುಳ್ನಕ್ಕು - 'ಚಿಂತಿಸಬೇಡಿ, ನಿಮ್ಮ ಕಲ್ಪನೆ - ಆಲೋಚನೆಗನುಗುಣವಾಗಿ ಮುದ್ರಿಸಿ ಪ್ರಕಾಶಿಸುವ ಹೊಣೆ ನನ್ನದು'- ಎಂದಿಷ್ಟೆ ಹೇಳಿ ಸುಮ್ಮನಾದರು. ನಿಶ್ಚಿಂತೆಯಿಂದ ಹೊರಬಂದು ಪುಸ್ತಕದ ಲೋಕಾರ್ಪಣೆಯ ಸಿದ್ಧತೆಯಲ್ಲಿ ತೊಡಗಿದೆ.

ತಳುಕಿನ ವೆಂಕಣ್ಣಯ್ಯನವರ ಕುರಿತು ಅಷ್ಟಾಗಿ ಅರಿಯದಿದ್ದರೂ, ಅವರೊಬ್ಬ ಕನ್ನಡದ ಅಗ್ರಮಾನ್ಯ ಸಾಹಿತಿಗಳು ಎಂಬುದನ್ನು ತಿಳಿದಿದ್ದೆ. ಛಾಯಾಪತಿಯವರ ಗ್ರಂಥಮಾಲೆಯ ಹೆಸರಿಗೂ ಈ ಮಹನೀಯರಿಗೂ ಇರುವ ಸಂಬಂಧವನ್ನು ಅರಿತಾಗ ಛಾಯಾಪತಿಯವರ ಮೇಲಿದ್ದ ಗೌರವ ಹಾಗೂ ವಿಶ್ವಾಸ ಇಮ್ಮಡಿಯಾದವು. ತಳುಕಿನ ವೆಂಕಣ್ಣಯ್ಯನವರ ತಮ್ಮ ತ.ಸು. ಶಾಮರಾಯರು. ಅವರ ಅಣ್ಣ ರಾಮಸ್ವಾಮಿಯವರ ಮಗ ತ.ರಾ.ಸು.ರವರು. ಶಾಮರಾಯರ ಮಗ ಛಾಯಾಪತಿಯವರು. ಕನ್ನಡ ಸರಸ್ವತಿಯ ಆರಾಧಕ ಕುಟುಂಬ. ಹೆಮ್ಮೆ ಎನಿಸಿತು. ಛಾಯಾಪತಿಯವರೂ ಲೇಖಕರು ಎಂಬುದನ್ನು ತಿಳಿದು ಸಂತಸಪಟ್ಟು ಅಭಿನಂದಿಸಿದೆ.

ಹತ್ತಾರು ಕರೆಗಳನ್ನು ಮಾಡಿ, ಸ್ವತಃ ಭೇಟಿ ನೀಡಿ ಒತ್ತಡ ಹೇರಿದ ಮೇಲೂ, ಪುಸ್ತಕ ಲೋಕಾರ್ಪಣೆಯ ಅಂತಿಮ ಕ್ಷಣದಲ್ಲಿ ಪುಸ್ತಕವನ್ನು ನೀಡುವುದು, ಅದರಲ್ಲೂ ಆ ಸಮಾರಂಭಕ್ಕೆ ಅಗತ್ಯವಾದ ಕೆಲವೇ ಪ್ರತಿಗಳನ್ನು ನೀಡುವುದು ಪ್ರಕಾಶಕರ ರೀತಿ - ರಿವಾಜು. ಆದರೆ ಛಾಯಾಪತಿಯವರು ನನ್ನ 'ಗೀತಾಮೃತವಾಹಿನಿ'ಯನ್ನು ನಿಗದಿತ ಅವಧಿಗಿಂತ ಮೊದಲೇ ಸಿದ್ಧಪಡಿಸಿದ್ದರು. ಪುಸ್ತಕವನ್ನು ಅವಲೋಕಿಸಿದೆ. ನನ್ನ ನಿರೀಕ್ಷೆಗೂ ಮೀರಿ ಸರ್ವಾಂಗಸುಂದರವಾಗಿ ಪುಸ್ತಕ ಮುದ್ರಿತವಾಗಿತ್ತು. ಕೃತಜ್ಞತೆಯನ್ನು ಸಲ್ಲಿಸಿದೆ. ಮುಂದೆ ನನ್ನ ಎಲ್ಲ ಪುಸ್ತಕಗಳೂ ಛಾಯಾಪತಿಯವರ ಪ್ರಕಾಶನದಲ್ಲಿಯೆ ಸಿದ್ಧಗೊಂಡವು. ಅಂದು ಪ್ರಾರಂಭವಾದ ನಮ್ಮ ಮೈತ್ರಿ ಇಂದಿಗೂ ಚಿರನೂತನವಾಗಿದೆ.

ನಾನು ಇಲ್ಲಿಯವರೆಗೆ ಹನ್ನೊಂದು ಕನ್ನಡ ಪುಸ್ತಕಗಳನ್ನು ತುಳು ಭಾಷೆಯ ಎಂಟು ಪುಸ್ತಕಗಳನ್ನೂ ಪ್ರಕಟಿಸಿದ್ದೇನೆ. ನನ್ನ ತುಳು ಪುಸ್ತಕಗಳ ಪ್ರಕಾಶಕರೂ ಛಾಯಾಪತಿಗಳೆ. ತುಳು ಶಬ್ದಗಳ ಪರಿಚಯವಿಲ್ಲದ ಇವರು, ಇದನ್ನು ಹೇಗೆ ನಿಭಾಯಿಸುತ್ತಾರೆಂಬ ಕುತೂಹಲವಿತ್ತು. ಆದರೆ ಪ್ರಕಾಶನ ಕ್ಷೇತ್ರದಲ್ಲಿ ಅಪಾರ ಅನುಭವ ಹಾಗೂ ವ್ಯಾಪಕ ಪರಿಚಯವಿರುವ ಶ್ರೀಯುತರು ಈ ಕೆಲಸಕ್ಕೆ ಯೋಗ್ಯ ವ್ಯಕ್ತಿಗಳನ್ನು ನಿಯೋಜಿಸಿ ಯಥಾಯೋಗ್ಯವಾಗಿ ಪ್ರಕಟಿಸಿ ನನಗೆ ಸಂತಸ ನೀಡಿದರು.

ಈ ಸಂದರ್ಭದಲ್ಲಿ ಮತ್ತೊಂದು ಘಟನೆಯನ್ನು ನೆನಪಿಸಿಕೊಳ್ಳುವುದು ಸರಿ ಎನಿಸುತ್ತದೆ. ಆರೇಳು ವರ್ಷಗಳ ಹಿಂದಿನ ಮಾತು. ಒಮ್ಮೆ ತೆಲುಗು ಜನರ ಕಣ್ಮಣಿ ಹಾಗೂ ಆಂಧ್ರ ಪ್ರದೇಶದ ಮುಖ್ಯಮಂತ್ರಿಯೂ ಆಗಿದ್ದ ಶ್ರೀ ಎನ್.ಟಿ. ರಾಮರಾವ್

ರವರ ಪತ್ನಿ ಶ್ರೀಮತಿ ಲಕ್ಷ್ಮೀಪಾರ್ವತಿ ನಮ್ಮ ಮನೆಗೆ ಆಗಮಿಸಿದ್ದರು. ಸಾಂದರ್ಭಿಕವಾಗಿ ಮಾತನಾಡುತ್ತ ತಮ್ಮ 'ಬುದ್ಧ ಚರಿತಂ' ಪುಸ್ತಕ ಕನ್ನಡದಲ್ಲಿ ಅನುವಾದಿತವಾಗಿ ಪ್ರಕಟವಾಗಬೇಕೆಂಬ ಇಚ್ಛೆಯನ್ನು ವ್ಯಕ್ತಪಡಿಸಿದರು. ಆಗ ಮೊದಲು ನೆನಪಾದವರು ಛಾಯಾಪತಿಯವರು. ನನ್ನ ಸಲಹೆಯಂತೆ ಈ ಕಾರ್ಯವನ್ನು ಛಾಯಾಪತಿಯವರಿಗೆ ವಹಿಸಲಾಯಿತು. ಈ ಕಾರ್ಯವನ್ನು ಅತ್ಯಂತ ಸಮರ್ಥವಾಗಿ ನಿರ್ವಹಿಸಿದ ಛಾಯಾಪತಿಯವರು ಶ್ರೀಮತಿ ಲಕ್ಷ್ಮೀಪಾರ್ವತಿಯವರ ಪ್ರಶಂಸೆಗೆ ಪಾತ್ರರಾದರು. 'ಬುದ್ಧಚರಿತಂ ಕನ್ನಡ ಅವತರಣಿಕೆಯ ಲೋಕಾರ್ಪಣ ಸಮಾರಂಭವು ಮೈಸೂರಿನಲ್ಲಿಯೇ ಹೃದಯ ಸ್ಪರ್ಶಿಯಾಗಿ ನಡೆಯಿತಲ್ಲದೆ, ಶ್ರೀ ಎನ್.ಟಿ. ರಾಮರಾವ್‌ರವರ ಸ್ಮರಣೆಗಾಗಿ ಪ್ರತಿವರ್ಷ ನೀಡುವ ಇಪ್ಪತ್ತು ಸಾವಿರ ರೂಪಾಯಿಗಳ ಪ್ರಶಸ್ತಿಯನ್ನು ಈ ಸಮಾರಂಭದಲ್ಲಿ ಮೈಸೂರು ಮಿತ್ರ ಸಹಸಂಪಾದಕರಾದ ಶ್ರೀ ಶಿವಣ್ಣನವರಿಗೆ ನೀಡಲಾಯಿತು. ಇದು ಸಾಧ್ಯವಾದುದು ಶ್ರೀ ಛಾಯಾಪತಿಯವರ ಪರಿಶ್ರಮದಿಂದ ಎಂಬುದನ್ನು ಹೇಳುವ ಅಗತ್ಯವಿಲ್ಲ.

ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಮೂಲಕ ಛಾಯಾಪತಿಯವರು ಕನ್ನಡ ಸಾಹಿತ್ಯದ ಸಾವಿರಕ್ಕೂ ಮಿಗಿಲಾದ ಗ್ರಂಥಗಳನ್ನು ಪ್ರಕಾಶಿಸಿ ಮೈಲಿಗಲ್ಲಾಗಿದ್ದಾರೆ. ಪುಸ್ತಕ ಪ್ರಕಾಶಕರಿಗೆ ನಮ್ಮ ನಾಡಿನಲ್ಲಿ ಬರವೇನಿಲ್ಲ. ಲಾಭವನ್ನೇ ಗುರಿಯಾಗಿಟ್ಟುಕೊಂಡು ಇದನ್ನು ದಂಧೆಯಾಗಿಸಿಕೊಂಡವರೆ ಹೆಚ್ಚು. ಕಳಪೆ ಕಾಗದ ಹಾಗೂ ಇನ್ನಿತರ ಸಾಮಗ್ರಿಗಳನ್ನು ಉಪಯೋಗಿಸಿ ಪುಸ್ತಕಗಳನ್ನು ಮುದ್ರಿಸಿ, ವಾಮಮಾರ್ಗದಲ್ಲಿ, ಸರಕಾರಿ ಪ್ರಾಯೋಜಿತ ಗ್ರಂಥಾಲಯಗಳಿಗೆ ಈ ಪುಸ್ತಕಗಳನ್ನು ಸಗಟಾಗಿ ತೂರಿಸುವ ಇಂದಿನ ದಿನಗಳಲ್ಲಿ ಪ್ರಾಮಾಣಿಕತೆ, ನಿಷ್ಠೆ, ಗುಣಮಟ್ಟದ ವಿಷಯದಲ್ಲಿ ರಾಜಿಮಾಡಿಕೊಳ್ಳದ ಛಾಯಾಪತಿಗಳು ವಿಶಿಷ್ಟರಾಗಿ, ಆದರಣೀಯ ರಾಗಿದ್ದಾರೆ. ಸ್ವತಃ ಲೇಖಕರಾಗಿದ್ದು, ಇವರ ಲೇಖನಿಯಿಂದ ಸಮಾಜೋಪಯೋಗಿ ಯಾದ ಇಪ್ಪತ್ಮೂರು ಪುಸ್ತಕಗಳು ಓದುಗರ ಕೈ ಸೇರಿವೆ. 'ವಿದ್ವಾನೇವ ವಿಜಾನಾತಿ ವಿದ್ವಜ್ಜನ ಪರಿಶ್ರಮಮ್'- ಎಂಬ ಮಾತು ಇವರಿಗೆ ಅಕ್ಷರಶಃ ಅನ್ವಯವಾಗುತ್ತದೆ. ಗ್ರಂಥದ ವಿಷಯಕ್ಕೆ ಪುಟ ನೀಡುವ ಮುಖಪುಟ, ಆಕರ್ಷಕ ಅಕ್ಷರ (Font) ಜೋಡಣೆ, ಗ್ರಂಥ ಸೌಂದರ್ಯವನ್ನು ದ್ವಿಗುಣಗೊಳಿಸುವ ರೇಖಾಚಿತ್ರ ಭಾವಚಿತ್ರಗಳ ಸಂಯೋಜನೆ, ಉತ್ತಮ ಕಾಗದದ ಉಪಯೋಗ, ಸರಿಹೊಂದುವ ಶೀರ್ಷಿಕೆ ಮುಂತಾದವುಗಳನ್ನು ಲೇಖಕರೊಂದಿಗೆ ಚರ್ಚಿಸಿ, ತಮ್ಮ ಅನುಭವದ ಪಾಕವನ್ನು ಬೆರೆಸಿ ಪುಸ್ತಕದ ಅಂದವನ್ನು ಮತ್ತು ಮೌಲ್ಯವನ್ನು ದ್ವಿಗುಗೊಳಿಸುವ ಕಲೆ ಛಾಯಾಪತಿಯವರಿಗೆ ಕರಗತವಾಗಿದೆ. ಇದೆಲ್ಲ ಸಾಧ್ಯವಾಗಿರುವುದು ಅವರೊಬ್ಬ ಲೇಖಕರಾಗಿರುವುದರಿಂದ.

ಯಶಸ್ವಿ ಪ್ರಕಾಶಕರಾಗಲು ಈ ಮುಂದಿನ ನಾಲ್ಕು ಗುಣಗಳು ಅತ್ಯವಶ್ಯವೆಂದು ನನ್ನ ನಂಬಿಕೆ. ಪ್ರಕಾಶನಕ್ಕಾಗಿ ಆಯ್ದುಕೊಳ್ಳುವ ಗ್ರಂಥ ಮೊದಲನೆಯದಾದರೆ, ಎರಡನೆಯದು ಉತ್ತಮ ಗುಣಮಟ್ಟದ ಮುದ್ರಣ ಸಾಮಗ್ರಿಯ ಉಪಯೋಗ. ದೋಷರಹಿತ ಮುದ್ರಣ ಮೂರನೆಯದಾದರೆ, ನಾಲ್ಕನೆಯದು ನಿಗದಿತ ಸಮಯದಲ್ಲಿ ಗ್ರಂಥದ ಪ್ರಕಾಶನ. ಪರಿಶ್ರಮ, ನಿಷ್ಠೆ, ಪ್ರಾಮಾಣಿಕತೆ, ಅನುಭವ ಈ ಗುಣಗಳಿಂದ ಈ ಮೇಲಿನ ಎಲ್ಲ ಗುಣಗಳನ್ನು ತಮ್ಮದಾಗಿಸಿಕೊಂಡ ಛಾಯಾಪತಿಗಳು ಪ್ರಕಾಶಕರ ಸಮೂಹಕ್ಕೆ ಮಾರ್ಗದರ್ಶಕರ ಸ್ಥಾನದಲ್ಲಿ ನಿಲ್ಲುತ್ತಾರೆ.

ನಾಕಂಡ ಛಾಯಾಪತಿಯವರ ಮತ್ತೊಂದು ವಿಶಿಷ್ಟ ಗುಣವನ್ನು ಇಲ್ಲಿ ಉಲ್ಲೇಖಿಸಲೇಬೇಕು. ಸೃಜನಶೀಲ ಹಾಗೂ ಕನ್ನಡ ಸಾಹಿತ್ಯದ ಗುಣ. ಗೌರವಗಳನ್ನು ಹೆಚ್ಚಿಸುವ ಗ್ರಂಥಗಳನ್ನು ಆಯ್ದು ಪ್ರಕಾಶಿಸುವ ಅವರ ಸ್ವಭಾವ ಅನನ್ಯ. ಇಲ್ಲಿ ಲಾಭದ ಲೆಕ್ಕಾಚಾರವಿಲ್ಲ. ಆರ್ಥಿಕ ಸಂಕಷ್ಟದಲ್ಲಿರುವ ಅದೆಷ್ಟೋ ಲೇಖಕರ ಉತ್ತಮ ಗ್ರಂಥಗಳನ್ನು ಆಯ್ದು ಪ್ರಕಾಶನಪಡಿಸಿ, ಅವರಿಗೆ ಸಲ್ಲಬೇಕಾದ ಗೌರವ(ಧನ)ವನ್ನು ಆದರ ಪೂರ್ವಕವಾಗಿ ನೀಡುವುದರೊಂದಿಗೆ, ಅವರನ್ನು ಕನ್ನಡ ನಾಡಿಗೆ ಅಲ್ಲದೆ ವಿದ್ವತ್‌ಲೋಕಕ್ಕೆ ಪರಿಚಯಿಸುವ ಸತ್ಕಾರ್ಯವನ್ನು ನಿರಂತರವಾಗಿ ಕೈಗೊಂಡಿದ್ದಾರೆ. 1968ರಷ್ಟು ಹಿಂದೆಯೇ ಎಂ.ಕಾಂ. ಪದವೀಧರರಾದ ಛಾಯಾಪತಿಯವರು, ಬಯಸಿದ್ದರೆ ಸರಕಾರದ ಯಾವುದಾದರೂ ಉನ್ನತ ಹುದ್ದೆಯನ್ನು ಅಲಂಕರಿಸಿ ಇನ್ನು ಸಂಪತ್ತು, ಆಸ್ತಿಗಳನ್ನು ಗಳಿಸಬಹುದಿತ್ತು. ಆದರೆ ಕನ್ನಡ ಸಾಹಿತ್ಯ ಲೋಕದ ದಿಗ್ಗಜರಾದ ತಮ್ಮ ದೊಡ್ಡಪ್ಪನರಾದ ತಳುಕಿನ ವೆಂಕಣ್ಣಯ್ಯನವರ ಹೆಸರನ್ನು ಚಿರಸ್ಥಾಯಿಯಾಗಿಸಲು ತಮ್ಮ ತಂದೆ ತ.ಸು. ಶಾಮರಾಯರು ಸ್ಥಾಪಿಸಿದ ಗ್ರಂಥಮಾಲೆಯನ್ನು ಮುನ್ನಡೆಸುವ ನಿರ್ಧಾರಕೈಗೊಂಡು ಕನ್ನಡ ಸಾಹಿತ್ಯಲೋಕಕ್ಕೆ ವರವಾಗಿ ಪರಿಣಮಿಸಿದ್ದಾರೆ. ಆ ಕಾರಣದಿಂದ ಕನ್ನಡಿಗರೆಲ್ಲ ಛಾಯಾಪತಿಯವರಿಗೆ ಋಣಿಗಳಾಗಲೇಬೇಕು.

'ಛಾಯಾಪತಿ' ಇದರ ಶಾಬ್ದಿಕ ಅರ್ಥ ಸೂರ್ಯ. ಸಕಲ ಚರಾಚರಲೋಕವನ್ನು ಪ್ರಕಾಶಿಸುವುದು ಈ ಸೂರ್ಯನ ಕಾಯಕ. ಅಂತೆಯೆ ಛಾಯಾಪತಿಯೆಂಬ ಈ ಸೂರ್ಯನ ಕಾಯಕ ಕನ್ನಡಸಾಹಿತ್ಯ ಲೋಕದ ಗ್ರಂಥಗಳನ್ನು ಪ್ರಕಾಶಿಸುವುದು. ಬಾನಂಗಳದಲ್ಲಿ ಪ್ರಕಾಶಿಸುವ ಸೂರ್ಯನಂತೆ. ಕನ್ನಡ ಸಾರಸ್ವತ ಲೋಕದ ಬಾನಂಗಳದಲ್ಲಿ ಪ್ರಕಾಶಿಸುವ ಸೂರ್ಯ ಈ 'ಛಾಯಾಪತಿ' ಎಂದರೆ ಅತಿಶಯೋಕ್ತಿಯಾಗದು.

ಇಂತಹ ಗುಣಗಣಗಳಿಂದ ಕೂಡಿದ ಛಾಯಾಪತಿಯವರಿಗೆ ತಡವಾಗಿಯಾದರೂ, ಅಕ್ಷರಬಾಗಿನವನ್ನು ಸಮರ್ಪಿಸುವ ಮೂಲಕ ಅಭಿನಂದಿಸಲು ಮುಂದಾಗಿರುವುದು ಸ್ತುತ್ಯರ್ಹ. ಆತ್ಮೀಯರಾದ ಛಾಯಾಪತಿಯವರು ಆರೋಗ್ಯ ಭಾಗ್ಯದಿಂದ ನೂರ್ಕಾಲಬಾಳಿ ಕನ್ನಡ ಸಾರಸ್ವತ ಲೋಕವನ್ನು ಬೆಳಗುವ ಸೂರ್ಯನಾಗಿರಲೆಂಬುದೆ ನನ್ನ ಮನದಾಳದ ಹಾರೈಕೆ.

## ಟಿ.ಎಸ್. ಛಾಯಾಪತಿ - ನಾನು ಕಂಡಂತೆ

ನಾನು ಛಾಯಾಪತಿಯವರನ್ನು ಕಂಡದ್ದು ಕನ್ನಡದ ಹಿರಿಯ ವಿದ್ವಾಂಸರಾದ ಪ್ರೊ. ತ.ಸು. ಶಾಮರಾಯರ ಮನೆಯಲ್ಲಿ. ನಾನು ಮೈಸೂರು ವಿಶ್ವವಿದ್ಯಾನಿಲಯದ ಸಂಜೆ ಕಾಲೇಜಿನಲ್ಲಿ 1969 ರಿಂದ 1973ರವರೆಗೆ ಕನ್ನಡ ವಿಭಾಗದ ಮುಖ್ಯಸ್ಥನಾಗಿ ಕೆಲಸ ಮಾಡುತ್ತಿದ್ದೆ. ಆಗ ಪ್ರೊ. ತ.ಸು. ಶಾಮರಾಯರು ಮತ್ತು ಪ್ರೊ. ಕೆ. ವೆಂಕಟರಾಮಪ್ಪನವರು ಯು.ಜಿ.ಸಿ. ಪ್ರಾಧ್ಯಾಪಕರಾಗಿ ಕೆಲವು ಗಂಟೆಗಳ ಪಾಠವನ್ನು ವಿದ್ಯಾರ್ಥಿಗಳಿಗೆ ತೆಗೆದುಕೊಳ್ಳುತ್ತಿದ್ದರು. ಅಂತಹ ಹಿರಿಯ ವಿದ್ವಾಂಸರೊಡನೆ ಕೆಲಸ ಮಾಡುವ ಸದವಕಾಶ ನನಗೆ ದೊರಕಿದ್ದು ನನ್ನ ಅದೃಷ್ಟವೆಂದೇ ಹೇಳಬೇಕು. ಅವರಿಬ್ಬರೂ ನನಗೆ ತೋರಿಸಿದ ಪ್ರೀತಿ ಮತ್ತು ನೀಡಿದ ಮಾರ್ಗದರ್ಶನವನ್ನು ನಾನು ಮರೆಯುವಂತಿಲ್ಲ.

ನಾನು ಆಗಾಗ ಶಾಮರಾಯರ ಮನೆಗೆ ಹೋಗುತ್ತಿದ್ದೆ. ಅವರ ಮನೆ ಕೃಷ್ಣಮೂರ್ತಿಪುರದಲ್ಲಿತ್ತು. ಎರಡಂತಸ್ತಿನ ಅವರ ಮನೆಯಲ್ಲಿ ಶಾಮರಾಯರ ಅಧ್ಯಯನ ಕೊಠಡಿ ಮೇಲಿದ್ದು, ಮೆಟ್ಟಲು ಹತ್ತಿ ಹೋಗಬೇಕಾಗಿತ್ತು. ಹೀಗೆ ಒಮ್ಮೆ ಅವರ ಮನೆಗೆ ಹೋದ ಸಂದರ್ಭದಲ್ಲಿ ಶ್ರೀ ಛಾಯಾಪತಿ ಹಾಗೂ ಅವರ ಅಣ್ಣ ಟಿ.ಎಸ್. ವೆಂಕಣ್ಣಯ್ಯನವರ ಪರಿಚಯುವಾಯಿತು. ವೆಂಕಣ್ಣಯ್ಯನವರು ಶೃಂಗೇರಿಯ ಜೆ.ಸಿ.ಬಿ.ಎಂ. ಕಾಲೇಜಿನಲ್ಲಿ ಸಂಸ್ಕೃತ ವಿಭಾಗದಲ್ಲಿ ಪ್ರಾಧ್ಯಾಪಕರೂ ಮತ್ತು ಮುಖ್ಯಸ್ಥರು ಆಗಿ, ಅನಂತರ ಪ್ರಿನ್ಸಿಪಾಲರಾಗಿ ಒಳ್ಳೆಯ ಹೆಸರು ಪಡೆದು ನಿವೃತ್ತರಾದರು. ನಾನು ಶೃಂಗೇರಿಗೆ ಹೋದಾಗಲೆಲ್ಲಾ ಅವರ ಮನೆಗೆ ಹೋಗುತ್ತಿದ್ದೆ. ಅವರು ನಿಧನರಾದದ್ದು ದುಃಖದ ಸಂಗತಿ.

ಪ್ರೊ. ತ.ಸು. ಶಾಮರಾಯರು ತಮ್ಮ ಅನೇಕ ಶಿಷ್ಯರಿಗೆ ವಿಶೇಷವಾದ ಪ್ರೀತಿಯಿಂದ ನೆರವು ನೀಡಿ ಅವರು ಅಭಿವೃದ್ಧಿಗೆ ಬರಲು ಕಾರಣರಾದರು. ಆದರೆ ತಮ್ಮ ಸ್ವಂತ ಮಕ್ಕಳ ಬಗ್ಗೆ ಅವರ ಧೋರಣೆ ಭಿನ್ನವಾಗಿತ್ತು. "ಮಕ್ಕಳಿಗೆ ಮಮತೆ ತೋರಿದಲ್ಲಿ ಎಂಥ ಪ್ರಮಾದವಾದೀತೋ ಎಂಬ ವಿಚಿತ್ರ ಪ್ರವೃತ್ತಿ ಅವರದು. ಅವರವರು ತಮ್ಮ

---

ಡಾ. ತೀ. ನಂ. ಶಂಕರನಾರಾಯಣ

---

ತಮ್ಮ ಕಾಲಮೇಲೆ ನಿಲ್ಲಲ್ಲೆಂಬ ನಿಲುವಿನಿಂದಾಗಿ ಮಕ್ಕಳಿಗೆ ಬಹಳಷ್ಟು ಇರಿಸು ಮುರಿಸು ಆಗಿದ್ದರೆ ಆಶ್ಚರ್ಯವಿಲ್ಲ. ಹೀಗಾಗಿ ಛಾಯಾಪತಿಗೆ ದೊರೆಕಿದ್ದು ದೊಡ್ಡಪ್ಪನವರ ಸುನಾಮವಷ್ಟೇ" ಎಂಬ ಎಚ್ಚೆಸ್ಕೆ ಅವರ ಮಾತು ಛಾಯಾಪತಿಯವರು ತಮ್ಮ ತಂದೆಯವರಿಂದ ತಮ್ಮ ದೊಡ್ಡಪ್ಪ ತಳುಕಿನ ವೆಂಕಣ್ಣಯ್ಯ ಅವರ ಸ್ಮಾರಕ ಗ್ರಂಥಮಾಲೆಯ ಪ್ರಕಾಶನದ ಜವಾಬ್ದಾರಿಯನ್ನು ವಹಿಸಿಕೊಂಡ ಹಿನ್ನಲೆಯನ್ನು ತಿಳಿಸುತ್ತದೆ.

ಛಾಯಾಪತಿಯವರು ಎಂ.ಕಾಂ. ಪದವೀಧರರು. ಅವರು ಆ ಕ್ಷೇತ್ರದಲ್ಲಿಯೇ ಮುಂದುವರೆಯಬಹುದಾಗಿತ್ತು. ಆದರೆ ಅವರು ಧೈರ್ಯ ಮಾಡಿ ಪ್ರಕಾಶಕರಾದದ್ದು ಕನ್ನಡ ಸಾಹಿತ್ಯಕ್ಕೆ ಕ್ಷೇತ್ರಕ್ಕೆ ಬಹಳ ಅನುಕೂಲವಾಯಿತು. ಶಾಮರಾಯರು ಈ ಪ್ರಕಾಶನ ಸಂಸ್ಥೆಯನ್ನು ಆರಂಭಿಸಿ ಬಹಳ ಕಷ್ಟದಿಂದ ಹಲವಾರು ಮೌಲಿಕ ಗ್ರಂಥವನ್ನು ಪ್ರಕಟಿಸಿದ್ದರು. ಛಾಯಾಪತಿಯವರೂ ಸಹ ಪ್ರಕಾಶಕರಾಗಿ ಈ ಸಂಸ್ಥೆಯನ್ನು ಯಶಸ್ವಿಯಾಗಿ ಮುನ್ನೆಡೆಸಿದ್ದಾರೆ. ಅವರು ವ್ಯವಹಾರಸ್ಥರಾದರೂ ಕೇವಲ ವ್ಯವಹಾರಕ್ಕಾಗಿ, ಕೇವಲ ಹಣ ಸಂಪಾದನೆಗಾಗಿ ಪುಸ್ತಕಗಳನ್ನು ಪ್ರಕಟಿಸಿದವರಲ್ಲ. ಇವರು ಪ್ರಕಟಿಸಿರುವ ಗ್ರಂಥಗಳಲ್ಲಿ ಬಹುಪಾಲು ಕೃತಿಗಳು ಬಹಳ ಮೌಲಿಕವಾಗಿದೆ. ಈ ಸಂಸ್ಥೆಯ ಮೂಲಕ ಸಾವಿರಕ್ಕೂ ಹೆಚ್ಚು ಗ್ರಂಥಗಳು ಪ್ರಕಟಗೊಂಡಿದೆ. ಇವು ಕಾವ್ಯ, ನಾಟಕ, ಕಥೆ, ಪ್ರಬಂಧ, ವಿಮರ್ಶೆ, ಜೀವನ ಚರಿತ್ರೆ, ಅಂಕಣ ಸಾಹಿತ್ಯ, ಪ್ರವಾಸ ಕಥನ, ಸಂಶೋಧನೆ, ಅಭಿನಂದನಾ ಸಾಹಿತ್ಯ ಹೀಗೆ ಕನ್ನಡದ ಹಲವಾರು ಪ್ರಕಾರಗಳಿಗೆ ಸಂಬಂಧಿಸಿವೆ. ಟಿ.ಎಸ್. ವೆಂಕಣ್ಣಯ್ಯ ಡಿ.ಎಲ್. ನರಸಿಂಹಾಚಾರ್, ತ.ಸು. ಶಾಮರಾಯ, ದೇ. ಜವರೇಗೌಡ, ಎಚ್ಚೆಸ್ಕೆ, ಜಿ.ಎಸ್. ಶಿವರುದ್ರಪ್ಪ, ಹಾಮಾ ನಾಯಕ, ನಿಸಾರ್ ಅಹಮದ್, ಸಿಪಿಕೆ, ಚನ್ನವೀರ ಕಣವಿ, ಮಲ್ಲೇಪುರಂ ವೆಂಕಟೇಶ್, ಚಂಪಾ, ಎನ್.ಎಸ್. ತಾರಾನಾಥ ಮೊದಲಾದ ಹಲವಾರು ಪ್ರಸಿದ್ಧರು ಈ ಪ್ರಕಾಶನ ಸಂಸ್ಥೆಯ ಲೇಖಕರು. ಕರ್ನಾಟಕದ ಪ್ರಕಾಶನ ಸಂಸ್ಥೆಗಳಲ್ಲಿ ಈ ಸಂಸ್ಥೆಗೆ ವಿಶಿಷ್ಟವಾದ ಸ್ಥಾನವಿದೆ. ಇದನ್ನು ಬೆಳೆಸಲು ಛಾಯಾಪತಿಯವರು ವಿಶೇಷವಾಗಿ ಶ್ರಮಿಸಿದ್ದಾರೆ. ಈ ಸಂಸ್ಥೆಯ ಪ್ರಕಟಣೆಗಳು ಕರ್ನಾಟಕದ ವಿಶ್ವವಿದ್ಯಾನಿಲಯಗಳಲ್ಲಿ ಪಠ್ಯಪುಸ್ತಕಗಳಾಗಿವೆ.

ಛಾಯಾಪತಿಯವರ ಸಾಧನೆಗಳಿಗೆ ಕನ್ನಡ ಪುಸ್ತಕ ಪ್ರಾಧಿಕಾರದ ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ದೊರೆತಿದೆ. ನಂತರ ಅವರು ಈ ಪ್ರಾಧಿಕಾರದ ಸದಸ್ಯರೂ ಆಗಿದ್ದರು. ಇದಲ್ಲದೆ ಅವರಿಗೆ ಇನ್ನೂ ಹಲವು ಗೌರವಗಳೂ ಪ್ರಶಸ್ತಿಗಳೂ ಲಭ್ಯವಾಗಿವೆ. ಸ್ವತಃ ಇಪ್ಪತ್ತೆರಡು ಗ್ರಂಥಗಳನ್ನು ರಚಿಸಿರುವ ಅವರು ಕನ್ನಡದ ಒಬ್ಬ ಉತ್ತಮ ಲೇಖಕರೂ ಹೌದು. ಟಿ.ಎಸ್. ವೆಂಕಣ್ಣಯ್ಯ, ತ.ಸು. ಶಾಮರಾಯ, ತರಾಸು ಮೊದಲಾದವರ

ಬಗ್ಗೆ ಅಲ್ಲದೆ ಅಬ್ದುಲ್ ನಸೀರ್ ಸಾಬ್, ಚದುರಂಗ ಅವರುಗಳ ಬಗ್ಗೆ ವ್ಯಕ್ತಿ ಚಿತ್ರಗಳನ್ನು ಬರೆದಿದ್ದಾರೆ.

ನಾನು ಕುವೆಂಪು ವಿಶ್ವವಿದ್ಯಾನಿಲಯದ ಕನ್ನಡ ಭಾರತೀಯ ನಿರ್ದೇಶಕ ಹಾಗೂ ಸ್ನಾತಕೋತ್ತರ ಮತ್ತು ಸ್ನಾತಕ ಕನ್ನಡ ಅಧ್ಯಯನ ಮಂಡಳಿಗಳ ಅಧ್ಯಕ್ಷನಾಗಿದ್ದೆ. ಈ ಸಂದರ್ಭದಲ್ಲಿ ಈ ಮಂಡಳಿಗಳು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಕೆಲವು ಕೃತಿಗಳನ್ನು ಅವುಗಳ ಗುಣಮಟ್ಟದ ಆಧಾರದ ಮೇಲೆ ಕನ್ನಡ ಎಂ.ಎ. ತರಗತಿಗೆ ಪರಾಮರ್ಶನ ಗ್ರಂಥಗಳನ್ನಾಗಿ ಹಾಗೂ ಬಿ.ಎ. ತರಗತಿಗೆ ಪಠ್ಯಗ್ರಂಥಗಳನ್ನಾಗಿ ನಿಗದಿ ಪಡಿಸಿದ್ದವು. ಇವುಗಳಲ್ಲಿ ತ.ಸು. ಶಾಮರಾಯರ ಗ್ರಂಥಗಳೂ ಸೇರಿದ್ದವು. ಇದು ನನಗೆ ತುಂಬಾ ಸಂತೋಷವನ್ನುಂಟು ಮಾಡಿದೆ.

ಛಾಯಾಪತಿಯವರು ತ.ಸು. ಶಾಮರಾಯರ ಬಗ್ಗೆ 'ಸ್ವಸ್ತಿ' ಎಂಬ ಒಳ್ಳೆಯ ಅಭಿನಂದನ ಗ್ರಂಥವನ್ನು ಪ್ರಕಟಿಸಿ ತಮ್ಮ ತಂದೆಯವರಿಗೆ ಸೂಕ್ತ ಗೌರವ ಸಲ್ಲಿಸಿದ್ದಾರೆ. ಇದು ಒಳ್ಳೆಯ ಪರಾಮರ್ಶನ ಗ್ರಂಥ. ಎಚ್ಚೆಸ್ಕೆ ಅವರ ಅಂಕಣ ಬರಹಗಳು, ಚನ್ನವೀರಕಣವಿಯವರ ಹದಿನಾರು ಕವನ ಸಂಕಲನಗಳು, ಎಚ್.ಎಸ್. ವೆಂಕಟೇಶಮೂರ್ತಿಯವರ ಸಮಗ್ರ ಮಕ್ಕಳ ಸಾಹಿತ್ಯ, ಮಹಾಭಾರತ ಸಮೀಕ್ಷೆ ಮೊದಲಾದ ಬೃಹತ್ ಪ್ರಮಾಣದ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಇವರು ಪ್ರಕಟಿಸಿರುವ ಕೆಲವು ಗ್ರಂಥಗಳು ಅನೇಕ ಮುದ್ರಣಗಳನ್ನು ಕಂಡಿವೆ. ಅವರಿಗೆ ಎಪ್ಪತ್ತನೆಯ ವಯಸ್ಸಿನಲ್ಲಿ ಪ್ರೊ. ಮಲ್ಲೇಪುರಂ ವೆಂಕಟೇಶ ಅವರ ಪ್ರಧಾನ ಸಂಪಾದಕತ್ವದಲ್ಲಿ ಅಭಿನಂದನ ಗ್ರಂಥ ಪ್ರಕಟವಾಗಿ ಬಿಡುಗಡೆಯಾಗುತ್ತಿರುವುದು ಅವರ ಸ್ನೇಹಿತನಾದ ನನಗೆ ಬಹಳ ಸಂತೋಷದ ಸಂಗತಿ. ಛಾಯಾಪತಿಯವರ ಪ್ರಕಾಶನ ಸಂಸ್ಥೆ ಇನ್ನೂ ಹೆಚ್ಚಿನ ಮೌಲಿಕ ಗ್ರಂಥಗಳನ್ನು ಪ್ರಕಟಿಸಲೆಂದೂ, ಇದಕ್ಕೆ ಬೇಕಾಗುವ ಶಕ್ತಿ, ಸಾಮರ್ಥ್ಯ, ಆರೋಗ್ಯ, ಆಯಸ್ಸು, ಸುಖ, ಸಂತೋಷಗಳು ಅವರಿಗೆ ಲಭ್ಯವಾಗಲೆಂದು ಆಶಿಸಿ, ಹಾರ್ದಿಕ ಅಭಿನಂದನೆಗಳನ್ನು ತಿಳಿಸುತ್ತೇನೆ.

## ಪುಸ್ತಕೋಪಾಸಕ ಪ್ರಕಾಶಕ

'ಬದುಕು ಜಟಕಾ ಬಂಡಿ: ವಿಧಿ ಅದರ ಸಾಹೇಬ' - ಇದು ಮಂಕುತಿಮ್ಮನ ಕಗ್ಗದಲ್ಲಿನ ಒಂದು ಪ್ರಸಿದ್ಧ ಸಾಲು. ಹೌದು ಡಿ.ವಿ.ಜಿ.ಯವರ ಈ ಮಾತು ನೂರಕ್ಕೆ ನೂರು ನಿಜ. ಯಾವ ಕೋನದಿಂದ ನೋಡಿದರೂ 'ಬದುಕು' ಎಂಬುದು ಒಂದು 'ಜಟಕಾ' ಬಂಡಿಯೇ ದಿಟ. ಕೇವಲ ಜಟಕಾ ಬಂಡಿಯಷ್ಟೇ ಅಲ್ಲ, ಮತ್ತೂ ಮುಂದುವರೆಸುವುದಾದರೆ ಹತ್ತು ಹಲವು ಒಳಸುಳಿಗಳ, ನೂರಾರು ಏಳು ಬೀಳುಗಳ ಮಹಾ ಗುಂಡಿ ಕೂಡಾ. ಇಂತಃ ಗುಂಡಿ ಅಥವಾ ಬಂಡಿ ಏಕೋ ಏನೋ ಗೊತ್ತಿಲ್ಲ ಕೆಲವರ ಪಾಲಿಗೆ ವರವಾದರೆ, ಮತ್ತೆ ಹಲವರ ಪಾಲಿಗೆ ಶಾಪವಾಗಿ ದರ್ಶನ ನೀಡುತ್ತದೆ. ಹೀಗೆ ಬದುಕಿನ ಜಟಕಾ ಬಂಡಿಯನ್ನು ವರವಾಗಿ ಪಡೆದವರ ಸಾಲಿನಲ್ಲಿ ಸದ್ದಿಲ್ಲದೆ ಎದ್ದು ನಿಲ್ಲುತ್ತಾರೆ, ನಮ್ಮ ಪ್ರಕಾಶಕ ಮಿತ್ರರಾದ ಎಪ್ಪತ್ತರ ಹರೆಯದ ಶ್ರೀ ತ.ಶಾ. ಛಾಯಾಪತಿ ಅವರು.

'ತಳುಕು' ಎಂಬುದು ಛಾಯಾಪತಿಯವರ ಬದುಕಿನಲ್ಲಿ, ವೃತ್ತಿಯಲ್ಲಿ, ಪ್ರವೃತ್ತಿಯಲ್ಲಿ, ಕುಟುಂಬದಲ್ಲಿ, ಮನೆತನದಲ್ಲಿ ಅವರ ಪಾಲಿನ ಉಸಿರಿನಷ್ಟೇ ಸಹಜವಾಗಿ, ಸರಳವಾಗಿ 'ತಳುಕು' ಹಾಕಿಕೊಂಡಿರುವ ಪದ. ಏಳುಸುತ್ತಿನ ಕೋಟೆ ಇರುವ ಐತಿಹಾಸಿಕ ಕಾರಣದಿಂದಾಗಿ ಚಿತ್ರದುರ್ಗ ಹೇಗೆ ವಿಶ್ವ ಪ್ರಸಿದ್ಧವೋ, ಹಾಗೆಯೇ ಕನ್ನಡದ ಪ್ರಾತಃ ಸ್ಮರಣೀಯ ವಿದ್ವಾಂಸರಾದ ಟಿ.ಎಸ್. ವೆಂಕಣ್ಣಯ್ಯ ಹಾಗೂ ತ.ಸು. ಶಾಮರಾಯರಿಗೆ ಜನ್ಮಕೊಟ್ಟ ಕಾರಣಕ್ಕಾಗಿ ಆ ಜಿಲ್ಲೆಯ ಪುಟ್ಟಗ್ರಾಮವಾದ 'ತಳುಕು' ಕೂಡಾ ಅಷ್ಟೇ ಪ್ರಸಿದ್ಧ. ಇಷ್ಟೇ ಅಲ್ಲದೆ ಈ 'ತಳುಕು' ಮನೆತನ ಮತ್ತೆ ಮೂರು ಮಹಾಕಾರಣಗಳಿಂದಾಗಿ ಸಾಹಿತ್ಯವಲಯದಲ್ಲಿ ಹೆಸರಾಗಿದೆ. ಸಾಹಿತ್ಯಾಭಿಮಾನಿಗಳ ಮನದಲ್ಲಿ ಸದಾ ಹಸಿರಾಗಿದೆ. ಅವುಗಳನ್ನು 'ತ್ರಿವಿಧ ದಾಸೋಹ' ಎಂದು ಕರೆದರೆ ತಪ್ಪಾಗಲಾರದು. ಒಂದನೆಯದು ಅಕ್ಷರ ದಾಸೋಹ. ಎರಡನೆಯದು ಅನ್ನದಾಸೋಹ. ಮೂರನೆಯದು ಪುಸ್ತಕ ದಾಸೋಹ.

ಅಕ್ಷರ ದಾಸೋಹಕ್ಕೆ ಮತ್ತೊಂದು ಹೆಸರೆಂದರೆ ಟಿ.ಎಸ್. ವೆಂಕಣ್ಣಯ್ಯ ಅವರು. ಕನ್ನಡದ ಮೊದಲ ಪ್ರಾಧ್ಯಾಪಕರಾದ ಅವರ ವಿದ್ವತ್ತನ್ನು, ಅವರ ವಿದ್ವತ್ತಿನ ಎತ್ತರ

ಚಿತ್ತರಗಳನ್ನು ಅಳೆಯಲಿಕ್ಕೆ ಅವರ ಪ್ರಿಯ ಶಿಷ್ಯರಾದ 'ರಾಷ್ಟ್ರಕವಿ ಕುವೆಂಪು' ಎಂಬ ಮೇರು ಪರ್ವತವೇ ಸಾಕು. ಅವರು ತಮ್ಮ ವೃತ್ತಿ ಬದುಕಿನಲ್ಲಿ ಯಾವ ಪ್ರಮಾಣದ ಅಕ್ಷರ ದಾಸೋಹವನ್ನು ನೀಡಿದರು ಎಂಬುದನ್ನು ಅರಿಯಲಿಕ್ಕೆ ಕುವೆಂಪು ಅವರು ತಮ್ಮ ವಿಶ್ವಪ್ರಸಿದ್ಧ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯವನ್ನು

'ಇದೊ ಮುಗಿಸಿ ತಂದಿಹೆನ್ ಈ ಬೃಹದ್ ಗಾನಮಂ
ನಿಮ್ಮ ಸಿರಿಯಡಿಗೊಪ್ಪಿಸಲ್ಕೆ, ಓ ಪ್ರಿಯ ಗುರುವೆ,
ಕರುಣಿಸಿರಿ ನಿಮ್ಮ ಹರಕೆಯ ಬಲದ ಶಿಷ್ಯನಂ
..............................................................
..............................................................
'ರಾಮಾಯಣಂ ಅದು ವಿರಾಮಾಯಣಂ ಕಣಾ'!
ಎಂದು ಮನೆಗೈದಿದಿರಿ. ಮನೆಗೈದಿದಿರಿ ದಿಟಂ;
ಮುಗಿಸಿ ತಂದಿಹೆನಾ ಮಹಾಗಾನಮಂ. ಪಿಂತೆ
ವಾಲ್ಮೀಕಿಯುಲಿದ ಕಥೆಯಾದೊಡಂ, ಕನ್ನಡದಿ
ಬೇರೆ ಕಥೆಯೆಂಬಂತೆ, ಬೇರೆ ಮೈಯಾಂತಂತೆ
ಮರುವುಟ್ಟು ವಡೆದಂತೆ ಮೂಡಿದೀ ಕಾವ್ಯಮಂ
ವಿಶ್ವವಾಣಿಗೆ ಮುಡಿಯ ಮಣಿ ಮಾಡಿಹೆನ್. ನಿಮ್ಮ
ಕೃಪೆಯಿಂದ'.

ಎಂದು ಭಕ್ತಿ ಭಾವದಿಂದ ಸಮರ್ಪಿಸಿರುವುದೇ ಮಹಾಸಾಕ್ಷಿಯಾಗಿದೆ. ನಂತರದಲ್ಲಿ ಕನ್ನಡ ಸಾರಸ್ವತ ಲೋಕದ ಸಾಂಗತ್ಯಕ್ಕೆ ಬಂದಾಗ ಶಿಷ್ಯ ಪರಂಪರೆ ಹಾಗೂ ಅನ್ನದಾಸೋಹ ಎಂಬ ಪದಗಳು ಕಿವಿಗೆ ಬಿದ್ದ ಕೂಡಲೇ ಎಲ್ಲರ ಮನಃ ಪಟಲದಲ್ಲಿ ತಟ್ಟನೆ ನೆನಪಾಗುವ ಹೆಸರು ತ.ಸು ಶಾಮರಾಯರದು. ಬಳಲಿ ಬಳಿಗೆ ಬಂದ ಯಾರಿಗೂ ಅವರು ಬೆಂಬಲವಾಗಿ ನಿಲ್ಲುವುದನ್ನು ಮರೆಯಲಿಲ್ಲ. ಹಸಿದು ಬಂದ ಯಾವ ವಿದ್ಯಾರ್ಥಿಗೂ ಅನ್ನ ಹಾಕದೆ ಕಳುಹಿಸಲಿಲ್ಲ. ಅವರ ಈ ನಿತ್ಯ ನಿಷ್ಕಲ್ಮಶ ಕ್ರಿಯೆಯಲ್ಲಿ ಅವರು ಎಂದೂ ಜಾತಿ ನೋಡಲಿಲ್ಲ. ಕುಲಹುಡುಕಲಿಲ್ಲ. 'ವಿಶ್ವಮಾನವತೆ' ಎಂಬುದು ಅವರ ಹೃದಯದಲ್ಲಿನ ರಕುತವಾಗಿತ್ತು. ಶ್ವಾಸಕೋಶದಲ್ಲಿನ ಉಸಿರಾಗಿತ್ತು. ಶ್ರೀಯುತ ಶಾಮರಾಯರ ಶಿಷ್ಯವಾತ್ಸಲ್ಯದ ಹಿರಿಮೆ ಹಾಗೂ ಅನ್ನದಾಸೋಹ ಮಹಿಮೆಗಳನ್ನು ನಿಖರವಾಗಿ ಅರಿಯಲಿಕ್ಕೆ ನಮ್ಮ ಕಣ್ಣ ಮುಂದಿರುವ ಮತ್ತೊಂದು ಸಾಕ್ಷಿಯೆಂದರೆ, ಅವರ ಪ್ರಿಯ ಶಿಷ್ಯರೂ, ಕನ್ನಡದ ಮೂರನೆಯ ರಾಷ್ಟ್ರಕವಿಗಳೂ ಆದ ಡಾ. ಜಿ.ಎಸ್. ಶಿವರುದ್ರಪ್ಪ ಅವರು ರಚಿಸಿ, ಶಾಮರಾಯರ ಮುಂದೆ ಕುಳಿತು ಹಾಡಿದ

'ಎದು ತುಂಬಿ ಹಾಡಿದೆನು ಅಂದು ನಾನು
ಮನವಿಟ್ಟು ಕೇಳಿದಿರಿ ಅಲ್ಲಿ ನೀವು
ಇಂದು ನಾ ಹಾಡಿದರು ಅಂದಿನಂತೆಯೆ ಕುಳಿತು
ಕೇಳುವಿರಿ, ಸಾಕೆನಗೆ ಅದುವೆ ಬಹುಮಾನ
ಹಾಡು ಹಕ್ಕಿಗೆ ಬೇಕೆ ಬಿರುದು ಸನ್ಮಾನ?
ಎಲ್ಲ ಕೇಳಲಿ ಎಂದು ನಾನು ಹಾಡುವುದಿಲ್ಲ
ಹಾಡುವುದು ಅನಿವಾರ್ಯ ಕರ್ಮ ನನಗೆ,
ಕೇಳುವವರಿಹರೆಂದು ನಾ ಬಲ್ಲೆನದರಿಂದ
ಹಾಡುವೆನು ಮೈದುಂಬಿ ಎಂದಿನಂತೆ
ಯಾರು ಕಿವಿ ಮುಚ್ಚಿದರು ನನಗಿಲ್ಲ ಚಿಂತೆ'



ಎಂಬ ಕನ್ನಡದ ಪ್ರಸಿದ್ಧ ಭಾವಗೀತೆ.

ಅನಂತರದಲ್ಲಿ ಮೂರನೆಯದಾದ ಪುಸ್ತಕ ದಾಸೋಹಕ್ಕೆ ಬಂದರೆ, ಶ್ರೀಯುತ ಟಿ.ಎಸ್. ಛಾಯಾಪತಿಯವರು ಅತ್ಯಂತ ಶ್ರದ್ಧಾಭಕ್ತಿಯಿಂದ, ನಿರಂತರವಾಗಿ, ಮುನ್ನಡೆಸಿಕೊಂಡು ಬರುತ್ತಿರುವ ಅರವತ್ತು ನಾಲ್ಕು ವರ್ಷಗಳ ಹಿರಿತನದ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ'ಯೇ ಸಾಕ್ಷಿ.

1950ನೇ ಇಸವಿಯಲ್ಲಿ ತ.ಸು. ಶಾಮರಾಯರು ತಮ್ಮ ಪ್ರಿಯ ಅಣ್ಣನವರಾದ ಟಿ.ಎಸ್. ವೆಂಕಣ್ಣಯ್ಯನವರ ಹೆಸರನ್ನು ಕನ್ನಡ ಸಾರಸ್ವತ ಲೋಕದಲ್ಲಿ ತಮ್ಮದೇ ಆದ ವಿಧಾನದಲ್ಲಿ ದಾಖಲಿಸುವ ಸಲುವಾಗಿ, ಜೊತೆಗೆ ಕನ್ನಡ ಪುಸ್ತಕ ಲೋಕದ ಮೇಲಿನ ತಮ್ಮ ಪ್ರೀತಿಯ ಕುರುಹಾಗಿ ಸ್ಥಾಪಿಸಿದ ಸಂಸ್ಥೆಯೇ 'ತ.ವೆಂ. ಸ್ಮಾರಕ ಗ್ರಂಥಮಾಲೆ' 1999ನೇ ಸಾಲಿನ ಸರ್ಕಾರದ ಶ್ರೇಷ್ಠ ಪ್ರಕಾಶನ ಪ್ರಶಸ್ತಿಗೆ ಭಾಜನವಾದ ಗ್ರಂಥಮಾಲೆಯು ಈತನಕ ಪ್ರಕಟಿಸಿರುವ ಕೃತಿಗಳು ಸಾವಿರಾರು. ಸಾಹಿತ್ಯ ಲೋಕಕ್ಕೆ ಪರಿಚಯಿಸಿರುವ ಲೇಖಕರು ನೂರಾರು.

ಎಂ.ಕಾಂ. ಪದವೀಧರರಾದ ಛಾಯಾಪತಿಯವರಿಗೆ ತಿಂಗಳಾಯಿತೆಂದರೆ ಪೊಗದಸ್ತಾದ ಪಗಾರ ಬಂದು ಬೀಳುವ ಸರ್ಕಾರಿ ಕೆಲಸ ಸಿಗುವುದು ಅಷ್ಟೇನೂ ಕಷ್ಟವಾಗಿರಲಿಲ್ಲ. ಒಂದು ಪಕ್ಷ ಅವರು ಹಾಗೆಯೇ ಮಾಡಿದ್ದರೆ, 1960ರ ದಶಕದಲ್ಲಿ ತಂದೆಯ ಜವಾಬ್ದಾರಿಯಲ್ಲಿ ನಡೆಯುತ್ತಿದ್ದ ಪ್ರಕಾಶನ ಸಂಸ್ಥೆಯ ಸಂಪೂರ್ಣ ಹೊಣೆಗಾರಿಕೆಯನ್ನು ವಹಿಸಿಕೊಳ್ಳದೆ ಸರ್ಕಾರಿ ಕೆಲಸಕ್ಕೆ ಹೋಗಿದ್ದರೆ, ಅವರ ಎಪ್ಪತ್ತು ವರ್ಷಗಳಿಗೆ ಈಗಿನ ಈ ಮಹತ್ವ ಬರುತ್ತಿರಲಿಲ್ಲ. ನನಗೆ ಈ ಲೇಖನ ಬರೆಯುವ ಅವಕಾಶವೂ ಲಭಿಸುತ್ತಿರಲಿಲ್ಲ.

ಪುಸ್ತಕ ಪ್ರಕಾಶನವೆಂಬುದು ಮೇಲ್ನೋಟಕ್ಕೆ ಎಲ್ಲಾ ವೃತ್ತಿಗಳಂತೆಯೇ ಅದೂ ಕೂಡಾ ಒಂದು ಹೊಟ್ಟೆಪಾಡಿನ ವೃತ್ತಿ ಎನಿಸಿದರೂ, ಅದರ ಆಂತರ್ಯ ಅಷ್ಟು ಹಗುರವಲ್ಲ. ಅದರ ಗಹನತೆ ಅಂದುಕೊಂಡಷ್ಟು ಸುಲಭವಲ್ಲ. ಏಕೆಂದರೆ ಇದು ಒಬ್ಬ ವ್ಯಕ್ತಿಯ ವೃತ್ತಿಯೂ ಅಹುದು. ಪ್ರವೃತ್ತಿಯೂ ಅಹುದು. ಒಂದು ಸಂಸ್ಥೆಯ ಕೃತಿಯೂ ಅಹುದು. ಒಂದು ನಾಡಿನ ಸಂಸ್ಕೃತಿಯೂ ಅಹುದು. ಈ ಸಂದರ್ಭದಲ್ಲಿ ಭಾರತೀ ಪ್ರಕಾಶನದ ಮಾಲೀಕರಾದ ಗೆಳೆಯ ಬಿ.ಎಸ್. ಶ್ರೀನಿವಾಸ್ ಅವರು ಹೇಳಿದ ಅವರ ಅನುಭವದ ಪ್ರಸಂಗ ನೆನಪಾಗುತ್ತಿದೆ. ಅವರ ಮದುವೆ ಸಂದರ್ಭದಲ್ಲಿ ಹೆಣ್ಣು ಹುಡುಕುತ್ತಿದ್ದಾಗ ಒಬ್ಬರು ಪ್ರಶ್ನಿಸಿದರಂತೆ. ನೀವು ಏನು ವೃತ್ತಿ ಮಾಡುತ್ತಿದ್ದೀರಿ? ಅದಕ್ಕವರು ಪುಸ್ತಕ ಪ್ರಕಾಶಕನಾಗಿದ್ದೇನೆ ಎಂದರಂತೆ. ಆಗ ಅವರು ಅದೇನೋ ಸರಿಯಪ್ಪ, ಹೊಟ್ಟೆಪಾಡಿಗೆ ಏನು ಮಾಡುತ್ತಿದ್ದೀರಿ? ಎಂದು ಮರು ಪ್ರಶ್ನೆಹಾಕಿದರಂತೆ. ಆಗ ಆ ವ್ಯಕ್ತಿಯ ಪ್ರಶ್ನೆಯಲ್ಲಡಗಿದ್ದ ವ್ಯಂಗ್ಯವನ್ನು ಅರ್ಥೈಸಿಕೊಂಡ ಶ್ರೀನಿವಾಸರಿಂದ ನಿರುತ್ತರ, ಆ ವ್ಯಕ್ತಿ ಆ ರೀತಿ ಪ್ರಶ್ನಿಸಿದ್ದರಲ್ಲಿ ಆಶ್ಚರ್ಯಪಡುವಂತದ್ದೇನು ಇಲ್ಲ. ಏಕೆಂದರೆ ಆ ವ್ಯಕ್ತಿ ತಮ್ಮ ಶಾಲಾ ಕಾಲೇಜು ದಿನಗಳಲ್ಲಿ ಕೇವಲ ಪಠ್ಯ ಪುಸ್ತಕಗಳನ್ನು ಹೊರತುಪಡಿಸಿ ಬೇರೆ ಸಾಹಿತ್ಯಕ ಕೃತಿಗಳನ್ನು ಓದುವುದಿರಲಿ ಕಣ್ಣೆತ್ತಿಯೂ ನೋಡಿರುವುದಿಲ್ಲ. ನಂತರದ ದಿನಗಳಲ್ಲಿ ಹಾಗೊಂದು ಪಕ್ಷ ಅಷ್ಟಿಷ್ಟು ಓದಿದ್ದರೂ ಗ್ರಂಥಾಲಯ ಹಾಗೂ ಸ್ನೇಹಿತರುಗಳಿಂದ ಎರವಲು ಪಡೆದು ಓದಿದ್ದೇ ಹೊರತು ಸ್ವಂತಕ್ಕೆ ಕೊಂಡಿರುವುದಿಲ್ಲ. ಏಕೆಂದರೆ ಆ ವ್ಯಕ್ತಿಯ ದೃಷ್ಟಿಯಲ್ಲಿ, ಅವರ ಮನೆಯಲ್ಲಿ ಒಂದು ಫ್ರಿಡ್ಜ್ ಇಲ್ಲದಿದ್ದರೆ ಕೊರತೆಯೇ ಹೊರತು, ಒಂದೂ ಸಾಹಿತ್ಯಕ ಕೃತಿ ಇಲ್ಲದಿರುವುದು ಕೊರತೆಯೇ ಅಲ್ಲ.

ನಾಡಿನಲ್ಲಿ ಪುಸ್ತಕೋದ್ಯಮದ ಬಗ್ಗೆ ಇಂತಹ ಪರಿಸ್ಥಿತಿ ಇರುವಾಗ, ಪುಸ್ತಕಗಳ ಬಗೆಗೆ ಜನಸಾಮಾನ್ಯರಲ್ಲಿ ಈ ಬಗೆಗಿನ ಮನಸ್ಥಿತಿಯಿರುವಾಗ ಶ್ರೀಯುತ ಛಾಯಾಪತಿ ಯವರು 1960ರ ದಶಕದಲ್ಲಿಯೇ, ತಿಂಗಳಿಗೊಮ್ಮೆ ಜೇಬು ತುಂಬುವ ಸರ್ಕಾರಿ ವೃತ್ತಿಯತ್ತ ಮನಸ್ಸು ಮಾಡದೆ, ಲಾಭವಿರಲಿ ಹಾಕಿದ ಬಂಡವಾಳ ವರ್ಷಗಳು ಕಳೆದರೂ ವಾಪಸ್ಸು ಬಾರದಂತಹ ಪ್ರಕಾಶನ ವೃತ್ತಿಗೆ ತೊಡಗಲು ಧೈರ್ಯ ಮಾಡಿದರಲ್ಲ, ಅವರ ಆ ಮನಸ್ಥಿತಿಯನ್ನ, ಪುಸ್ತಕಗಳ ಬಗೆಗಿನ ಅವರ ಪ್ರೀತಿಯನ್ನ ಯಾವ ಪದಗಳಲ್ಲಿ ಹೊಗಳಬೇಕೋ ತಿಳಿಯುತ್ತಿಲ್ಲ.

ಒಬ್ಬ ಮನುಷ್ಯನ ವಯೋಮಾನದಲ್ಲಿ ಎಪ್ಪತ್ತು ವಸಂತಗಳನ್ನು ಕಾಣುವುದು ಎಂದರೆ ಅದು ಅಷ್ಟು ಸುಲಭದ ಮಾತಲ್ಲ. ಈ ಸುದೀರ್ಘ ಪಯಣದಲ್ಲಿ ಬದುಕಿನ ಬಂಡಿ ಲೆಕ್ಕರಹಿತ ಹಳ್ಳಕೊಳ್ಳಗಳನ್ನು ಹತ್ತಿ ಇಳಿದಿರುತ್ತದೆ. ನೂರಾರು ನಮೂನೆಯ ನೋವು ನಲಿವುಗಳನ್ನು ನುಂಗಿ ಸಾಗಿರುತ್ತದೆ. ಸಹಜವಾಗಿಯೇ ಎಲ್ಲಾ ಜವಾಬ್ದಾರಿ ಗಳಿಂದಲೂ ನಿವೃತ್ತಿ ಪಡೆದು ನಿರುಮ್ಮಳತೆಯತ್ತ ಸಾಗುತ್ತಿರುತ್ತದೆ. ಒಂದೇ ಮಾತಿನಲ್ಲಿ

ಹೇಳುವುದಾದರೆ ಮನಸ್ಸು ಮಾಗಿರುತ್ತದೆ. ಹೃದಯ ಪಕ್ವಗೊಂಡಿರುತ್ತದೆ. (ವೃತ್ತಿನಿರತ ಕೆಲವು ರಾಜಕಾರಣಿಗಳನ್ನು ಹೊರತು ಪಡಿಸಿ) ಈ ಎಪ್ಪತ್ತರ ಇಳಿ ಹೊತ್ತಿನಲ್ಲಿ ಅವರ ವೈಮನಸ್ಸು ಅವರಿಗೇ ಅರಿವಿಲ್ಲದ ಹಾಗೆ ಕುಟುಂಬದವರ ಪ್ರೀತಿಗಾಗಿ, ನೆರೆಹೊರೆಯವರ ಸ್ನೇಹಕ್ಕಾಗಿ, ಗೆಳೆಯ ಹಾಗೂ ಬಂಧು ಬಳಗದವರ ಹಾರೈಕೆಗಾಗಿ ಹಂಬಲಿಸುತ್ತಿರುತ್ತದೆ. ನಾನು ಮೊದಲಿಗೇ ಹೇಳಿದ ಹಾಗೆ 'ತಳುಕಿನಂತಹ' ಸುಸಂಸ್ಕೃತ, ಸಂಸ್ಕೃತಿ ಸಮೃದ್ಧ ಮನೆತದಲ್ಲಿ ಹುಟ್ಟಿದ ಮಾನ್ಯ ಛಾಯಾಪತಿಯವರ ಬದುಕಿನಲ್ಲಿ ಈ ಮೇಲಿನ ಎಲ್ಲವೂ ತುಸು ಯಥೇಚ್ಛವಾಗಿಯೇ ಲಭಿಸಿವೆ ಎಂದುಕೊಂಡಿದ್ದೇನೆ. ಅಥವಾ ಹಾಗೆಯೇ ಲಭಿಸಲಿ ಎಂದು ಹಾರೈಸುತ್ತೇನೆ. ಅದಕ್ಕಾಗಿಯೇ ನಾನು ಹೇಳಿದ್ದು ಬದುಕಿನ ಜಟಕಾ ಬಂಡಿ ಎಂಬುದು ಛಾಯಾಪತಿಯವರ ಪಾಲಿಗೆ ವರವಾಗಿ ಪರಿಣಮಿಸಿದೆ ಎಂದು.

ಕೊನೆಯದಾಗಿ ಇದೇ ಸಂದರ್ಭದಲ್ಲಿ ದಾಖಲಿಸಲೇಬೇಕಾದ ಮತ್ತೊಂದು ಹೆಸರು ಶ್ರೀಮತಿ ಪುಷ್ಪಾಛಾಯಾಪತಿಯವರು. ನಾನು ಗಮನಿಸಿದಂತೆ ಅವರು ಅಕ್ಷರ ಸಹ ಮನೆಯ ಮಹಾಲಕ್ಷ್ಮಿಯೇ... ಸಹನೆಯ ವಾರಿಧಿಯೇ.... ಅವರ ಮನೆತನದ ಗುಣಲಕ್ಷಣವಾದ ಅನ್ನದಾಸೋಹವನ್ನ ಮುಂದುವರೆಸುವುದರಿಂದ ಹಿಡಿದು ಪತಿಯ ವ್ಯವಹಾರಿಕ ಬದುಕಿನಲ್ಲೂ ಹೆಗಲಿಗೆ ಹೆಗಲು ಕೊಟ್ಟು ಸಹಕರಿಸುವ ತನಕ ಸರಿ ಜೋಡಿಯೇ... ಸಾಲದಕ್ಕೆ ಅವರು ಅಪಾರ ಪುಸ್ತಕ ಪ್ರೇಮಿ. ನಾನು ಗಮನಿಸಿದಂತೆ ಬಹುತೇಕ ಮನೆಗಳ ಹೆಂಗಸರುಗಳ ಕೈಯಲ್ಲಿ ಟಿ.ವಿ. ರಿಮೋಟ್ ಇದ್ದರೆ, ನಾನು ಅವರ ಮನೆಗೆ ಹೋದಾಗಲೆಲ್ಲಾ ಕೈಯಲ್ಲಿ ಒಂದಲ್ಲಾ ಒಂದು ಪುಸ್ತಕ ಹಿಡಿದು ಓದುತ್ತಿರುವುದನ್ನೇ ಕಂಡಿದ್ದೇನೆ. ಪುಸ್ತಕೋದ್ಯಮದ ಬಗ್ಗೆ, ಪುಸ್ತಕಗಳ ಬಗ್ಗೆ ಪ್ರೀತ್ಯಾಸಕ್ತಿಯಿಂದ ಮಾತನಾಡುವುದನ್ನೇ ಕೇಳಿದ್ದೇನೆ.

ಇದನ್ನೆಲ್ಲಾ ನೋಡಿದ ನನಗೆ ಅನಿಸುವುದೇನೆಂದರೆ 'ಒಂದು ಸದಭಿರುಚಿಯ ಜೊತೆಗೆ ಮತ್ತೊಂದು ಸದಭಿರುಚಿಯ ಅನುಸಂಧಾನ' ಅಂದರೆ ಇದೇ ಇರಬೇಕು.

## ನಾ ಕಂಡಂತೆ ನನಗೆ ಕಂಡಷ್ಟು

ಪುಸ್ತಕಗಳು ಜ್ಞಾನಾರ್ಜನೆಯ ಸಂಕೇತ, ಅರಿವಿನ ಆಗರ, ಲೋಕದ ಬೆಳಕು. ಇಂತಹ ಪುಸ್ತಕ ಪ್ರಪಂಚದ ಮೂಲಕ ಪರಿಚಯಿಸಿಕೊಂಡಿರುವ ನನ್ನ ಸಹೋದರ ಸಮಾನರಾದ ಶ್ರೀ ಟಿ.ಎಸ್. ಛಾಯಾಪತಿ ಅವರು ಈ ಕ್ಷೇತ್ರದಲ್ಲಿ ಹಿರಿಯರು. ತಮ್ಮ ದೊಡ್ಡಪ್ಪ ಕುವೆಂಪು ಅವರ ಗುರು. ಶ್ರೀ ವೆಂಕಣ್ಣಯ್ಯನವರ ತಮ್ಮ ಶ್ರೀ ತ.ಸು. ಶಾಮರಾಯರ ಮಗನಾಗಿ ಜನಿಸಿದ ಇವರು ತಂದೆಯ ದಾರಿಯಲ್ಲಿ ನಡೆದವರು. ಕನ್ನಡ ಸಾಹಿತ್ಯದಲ್ಲಿ ಮೊದಲಿನಿಂದಲೂ ಆಸಕ್ತಿ ಇರುವ ಶ್ರೀಯುತರು ಸ್ವಯಂ ಲೇಖಕರೂ ಹೌದು. ಇವರ ಕೃತಿಗಳಲ್ಲಿ ಪ್ರಮುಖವಾಗಿ ಆಡಳಿತ ಭಾಷೆ ಕನ್ನಡ, ಅಣ್ಣನ ಸ್ಮರಣೆ. ಗಾಂಧೀಜಿಯ ಕನಸು ನಜೀರರಿಂದ ನನಸು, ಸಹೃದಯಿ, ತಂಪು ನೆಳಲು, ವಿಚಾರವಾದಿಗಳು. ಹೀಗೆ ಹದಿನೈದಕ್ಕೂ ಹೆಚ್ಚು ಕೃತಿಗಳನ್ನು ರಚಿಸಿ, ಪ್ರಕಾಶಕರಷ್ಟೇ ಅಲ್ಲ, ಲೇಖಕರಾಗಿಯೂ ಗುರುತಿಸಿಕೊಂಡಿರುವುದು ಹೆಮ್ಮೆಯ ಸಂಗತಿ. ಮುಂದಾಲೋಚನೆಯುಳ್ಳವರೂ ಆದ ಶ್ರೀಯುತರು ತಮ್ಮ ಅನುಭವದ ಮೂಲಕ ಭಟ್ಟಿ ಇಳಿಸಿರುವ ಈ ಕೃತಿಗಳು ಬಹಳಷ್ಟು ಬೇಗನೆ ಖರ್ಚಾದವು. ಉದಾ - ಆಡಳಿತ ಭಾಷೆ ಕನ್ನಡ ಹಲವಾರು ಮುದ್ರಣಗಳನ್ನು ಕಂಡಿತು. ಹಾಗೆಯೇ ಗಾಂಧೀಜಿಯ ಕನಸು, ನಜೀರರಿಂದ ನನಸು ಅಚ್ಚುಮೆಚ್ಚಿನ ಕೃತಿಯಾಯಿತು. ತಮ್ಮ ತಂದೆಯವರು ಪ್ರಾರಂಭಿಸಿರುವ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಮೂಲಕ ನಾಡಿನ ಅನೇಕ ಹಿರಿಯ ಹಾಗೂ ಕಿರಿಯ ಲೇಖಕರ ಪುಸ್ತಕಗಳನ್ನು ಪ್ರಕಟಿಸಿ, ಗ್ರಂಥಮಾಲೆಯ ಉತ್ತರೋತ್ತರ ಯಶಸ್ಸಿಗೆ ಶ್ರಮಿಸಿದವರು. ಪ್ರಕಾಶನ ಕ್ಷೇತ್ರಕ್ಕೆ ಇವರ ಕೊಡುಗೆ ಅನನ್ಯವೂ ಅಮೋಘವೂ ಆಗಿದೆ. ಇವರ ಪ್ರಕಾಶನದ ವತಿಯಿಂದ ಕೆಲವು ಕೃತಿಗಳಲ್ಲಿ ಉದಾಹರಣೆಗೆ ತ.ಸು. ಶಾಮರಾಯರ ಕನ್ನಡ ಸಾಹಿತ್ಯಚರಿತ್ರೆ, ಶಬ್ದಮಣಿ ದರ್ಪಣ, ಜೈಮಿನಿ ಭಾರತ, ಎಚ್ಚೆಸ್ಕೆ ಅವರ ಅಂಕಣ ಬರಹ ಸಂಪುಟ ಪ್ರಮುಖವಾದವು. ವಿಷಯಗಳ ಆಯ್ಕೆ, ವೈವಿಧ್ಯತೆ, ಗುಣಮಟ್ಟ, ಆಕರ್ಷಕ ಮುಖ ಪುಟ ಇವು ಪ್ರಕಾಶನಕ್ಕೆ ಕೀರ್ತಿಯನ್ನು ತಂದಿವೆ. ಸಾಮಾನ್ಯವಾಗಿ ಲೇಖಕರು ಪ್ರಕಾಶಕರಾಗುವುದು ಅಥವಾ ಪ್ರಕಾಶಕರು ಲೇಖಕರಾಗುವುದು ಅತಿ ಕಡಿಮೆ.

---

**ದೊಡ್ಡೇಗೌಡ**

---

ಅವರಲ್ಲೂ ಶ್ರೀ ಟಿ.ಎಸ್. ಛಾಯಾಪತಿಯವರು ಮಾತ್ರ ಎರಡರಲ್ಲೂ ಗಟ್ಟಿತನವನ್ನು ಉಳಿಸಿಕೊಂಡು ಬಂದವರು. ಕನ್ನಡದಲ್ಲಿ ಈವರೆಗೆ 1000 ಪುಸ್ತಕಗಳನ್ನು ಪ್ರಕಟಿಸಿದ ಕೀರ್ತಿ ಈ ಮಹಾನುಭಾವರಿಗೆ ಸಲ್ಲುತ್ತದೆ. ಸಾವಿರ ಪುಸ್ತಕದ ಸರದಾರನೆಂದು ಹಿಂದೊಮ್ಮೆ ಪತ್ರಿಕೆಯಲ್ಲಿ ಬಂದದ್ದು ನೆನಪಿದೆ. ಒಟ್ಟಿನಲ್ಲಿ ಮನೆತನದ ಗೌರವವನ್ನು ಕಾಪಾಡಿಕೊಂಡು ಬರುವಲ್ಲಿ ಇವರು ಯಶಸ್ವಿಯಾಗಿದ್ದಾರೆ.

ಸದಾ ಲವಲವಿಕೆಯಿಂದ ಸಾಹಿತ್ಯದ ಸೇವೆಯನ್ನು ಒಂದಲ್ಲಾ ಒಂದು ರೀತಿಯಲ್ಲಿ ಮಾಡುತ್ತಿರುವ ಶ್ರೀಯುತರು ಉತ್ತಮ ಪುಸ್ತಕಗಳನ್ನು ಪ್ರಕಟಿಸುವುದು, ಅವುಗಳನ್ನು ಸಮರ್ಪಕವಾಗಿ ಓದುಗರಿಗೆ ತಲುಪಿಸುವುದು, ಸಹಾಯ ಕೇಳಿ ಬಂದವರಿಗೆ ತಮ್ಮ ಕೈಲಾದ ಸಹಾಯ ಮಾಡುವುದು. ಕನ್ನಡ ಸಾಹಿತ್ಯದ ಶ್ರೇಯೋಭಿವೃದ್ಧಿಗೆ ಸದಾ ದುಡಿಯುವುದೇ ಅಲ್ಲದೆ, ಅನೇಕ ಕನ್ನಡಪರ ಸಂಘ ಸಂಸ್ಥೆಗಳಲ್ಲಿ ಒಂದಲ್ಲಾ ಒಂದು ರೀತಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಅವಿರತ ಸೇವೆ ಸಲ್ಲಿಸುತ್ತಿರುವ ಶ್ರೀಯುತರು ಎಲ್ಲರೊಂದಿಗೂ ಬೆರೆಯುವ ಸೌಜನ್ಯಜೀವಿ.

ಅನ್ನ ಹಾಕಿದ ಮನೆ : ನಾನು ಓದಿದಂತೆ, ಕೇಳಿದಂತೆ, ತ.ಸು. ಶಾಮರಾಯರು ಅನೇಕ ಅತಿರಥ ಮಹಾರಥರಿಗೆ ಆಶ್ರಯ ನೀಡಿ, ಅವರ ಓದಿಗೆ ಕಾರಣರಾದವರು, ಅಂತಹವರಲ್ಲಿ ನಮ್ಮ ರಾಷ್ಟ್ರಕವಿ ಜಿ.ಎಸ್. ಎಸ್. ಒಂದು ಮಾದರಿ. ಇವರ ಶಿಷ್ಯ ವೃಂದದಲ್ಲಿ ಪ್ರಮುಖವಾಗಿ ಡಾ. ಹಾ.ಮಾ. ನಾಯಕ, ಶ್ರೀ ಜಿ. ನಾಗೇಂದ್ರಪ್ಪ, ಡಾ. ಜಿ.ಎಸ್. ಸಿದ್ಧಲಿಂಗಯ್ಯ, ಶ್ರೀ ನಾ. ಸುಬ್ರಹ್ಮಣ್ಯಂ, ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ, ಶ್ರೀ ಬಿ. ಕೃಷ್ಣಪ್ಪ, ಪ್ರೊ. ಅ.ರಾ. ಮಿತ್ರ, ಡಾ. ಸಾ. ಶಿ. ಮರುಳಯ್ಯ, ಶ್ರೀ ಮಲ್ಲಿಕಾರ್ಜುನಸ್ವಾಮಿ, ಶ್ರೀ ಬಂಗಾರಪ್ಪ, ಶ್ರೀ ಅಬ್ದುಲ್ ನಜೀರ್‌ಸಾಬ್ ಹೀಗೆ ಅನೇಕ ದಿಗ್ಗಜರು ಈ ನಾಡಿನ ಸುಪ್ರಸಿದ್ಧರಾದವರು. ಆದಾಗ್ಯೂ ಶ್ರೀ ತ.ಸು. ಶಾಮರಾಯರು ಯಾವತ್ತೂ ಯಾರನ್ನೂ ತಮ್ಮ ಸ್ವಕಾರ್ಯಕ್ಕೆ ಬಳಸಿಕೊಳ್ಳಲಿಲ್ಲ.

ಇಂತಹ ವಂಶದ ಕುಡಿಯಾದ ನಾಲ್ಕನೇ ತಲೆಮಾರಿನ ಶ್ರೀಯುತ ತ.ಶಾ. ಛಾಯಾಪತಿ ಅವರು ಅದೇ ದಾರಿಯಲ್ಲಿ ನಡೆಯುತ್ತಿರುವುದು ನನಗಂತೂ ಅನುಭವದ ಸಂಗತಿ. ನನ್ನೊಡನೆ ಅವರ ಒಡನಾಟ ಸುಮಾರು 20 ವರ್ಷಗಳಿಗಿಂತಲೂ ಹೆಚ್ಚಿದೆ. ಇಂತಹ ಗೌರವದ ಕುಟುಂಬದಿಂದ ಬಂದಿರುವ ಈ ಹಿರಿಯ ಪ್ರಕಾಶಕರನ್ನು ನಾನು ಯಾವತ್ತೂ ಪ್ರಕಾಶಕರೆಂದು ಗುರುತಿಸಿಲ್ಲ. ಮೇಲಾಗಿ ನನಗೆ ಇವರ ಬಗ್ಗೆ ಸಹೋದರ ಮನೋಭಾವವಿದೆ. ಆದ್ದರಿಂದ ನನ್ನ ಈ ಹಿರಿಯಣ್ಣನಿಗೆ ಈ ಸಂದರ್ಭದಲ್ಲಿ ನನ್ನದೊಂದು ಕೃತಜ್ಞತಾಪೂರ್ವಕ ನಮಸ್ಕಾರ.

## ಪ್ರಕಾಶಕ ಮಿತ್ರ

ಕನ್ನಡ ಸಾರಸ್ವತ ಲೋಕದ ದಿಗ್ಗಜರಲ್ಲಿ ಶ್ರೀ ತ.ಸು. ಶಾಮರಾಯರೊಬ್ಬರು. ಅವರು ಇಂದು ನಮ್ಮೊಡನಿಲ್ಲ. ಆದರೆ ಕನ್ನಡಿಗರ ಅದೃಷ್ಟ ಅವರ ಸುಪುತ್ರರಾದ ಶ್ರೀ ಟಿ.ಎಸ್. ಛಾಯಾಪತಿಯವರು ತಂದೆಯವರ ಕನ್ನಡದ ರಥಯಾತ್ರೆಯನ್ನು ಅನೇಕ ಆಯಾಮಗಳಲ್ಲಿ ಮುನ್ನೆಡೆಸುತ್ತಿದ್ದಾರೆ.

ಆಡುಮುಟ್ಟದ ಸೊಪ್ಪಿಲ್ಲ ಎಂಬ ನಾಣ್ಣುಡಿಯಂತೆ ಶ್ರೀ ಛಾಯಾಪತಿಯವರು ತಮ್ಮ ಪ್ರಕಾಶನ ಸಂಸ್ಥೆಯಿಂದ ವಿಜ್ಞಾನ, ಸಾಹಿತ್ಯ, ವಿಮರ್ಶೆ, ಮಕ್ಕಳ ಸಾಹಿತ್ಯ, ನಾಟಕ ಮುಂತಾದ ಎಲ್ಲಾ ಪ್ರಕಾರದ ಸಾಹಿತ್ಯವನ್ನು ಪ್ರಕಟಿಸಿದ್ದಾರೆ. ಅದಲ್ಲದೆ ಅವರು ಹೊಸ ಬರಹಗಾರರಿಗೆ ಆದ್ಯತೆ ನೀಡಿ ಅನೇಕ ಹೊಸ ಲೇಖಕರನ್ನು ಪರಿಚಿಯಸಿದ್ದಾರೆ. ಕನ್ನಡ ಸಾಹಿತ್ಯ ಲೋಕಕ್ಕೆ ಇದು ಸ್ವಾಗತಾರ್ಹ. ಹೀಗಾಗಿ ಲಾಭ ನಷ್ಟದ ಆಚೆ ಚಿಂತಿಸಿ ಕನ್ನಡದ ಒಳ್ಳೆಯ ಪುಸ್ತಕಗಳನ್ನು ಸಂಮೃದ್ಧ ಸಂಖ್ಯೆಯಲ್ಲಿ ಕನ್ನಡಿಗರಿಗೆ ಕೊಟ್ಟ ಖ್ಯಾತಿ ಇವರದಾಗಿದೆ.

1996ರಲ್ಲಿ ಸಂದ ಜಿಲ್ಲೆಯ ಪ್ರತಿಭಾನ್ವಿತ ಗೌರವ ಪ್ರಶಸ್ತಿಯಿಂದ ಪ್ರಾರಂಭ ಗೊಂಡ ಪುರಸ್ಕಾರಗಳು ಮುಂದೆ 'ಸಾಹಿತ್ಯ ಸೇವಾ ಧುರೀಣ' ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ಮುಂತಾದ ಬಿರುದುಗಳಲ್ಲದೆ ಪೂಜನೀಯ. ಶ್ರೀ ಶ್ರೀ ಶ್ರೀ ದೇಶಿಕೇಂದ್ರ ಸ್ವಾಮಿಗಳಿಂದಲೂ ಹಾಗೂ ಅನೇಕ ಸಂಘ ಸಂಸ್ಥೆಗಳಿಂದಲೂ ಸನ್ಮಾನಿಸಲ್ಪಟ್ಟಿದ್ದಾರೆ. ರಾಷ್ಟ್ರಕವಿ ಕುವೆಂಪುರವರೇ, ಇವರ ಕೃತಿಯಾದ 'ಗಾಂಧೀಜಿಯ ಕನಸು ನಜೀರರರಿಂದ ನನಸು'ವನ್ನು ಮುಕ್ತ ಮನದಿಂದ ಕೊಂಡಾಡಿದ್ದಾರೆ. ಆದ್ದರಿಂದ ಇವರು ಪ್ರಕಾಶಕರಷ್ಟೇ ಅಲ್ಲ ಒಳ್ಳೆಯ ಬರಹಗಾರರೂ ಹೌದು. ಇವರ ಶೈಲಿ ಸರ್ವರನ್ನು ಮುಟ್ಟುವಷ್ಟು ಲಲಿತ ಶೈಲಿಯಿಂದ ಕೂಡಿದೆ. ಇವರ ಮೇರು ಕೃತಿಗಳಾದ ಅಣ್ಣನ ಸ್ಮರಣೆ, ಆಡಳಿತ ಭಾಷೆ ಕನ್ನಡ, ಗುರಶ್ರೇಷ್ಠ, ವರದಕ್ಷಿಣೆ, ಸಾಮಾಜಿಕ ಪಿಡುಗು ಈ ಎಲ್ಲವೂ ಸಮಾಜಮುಖಿ ಧೋರಣೆಗಳನ್ನೊಳಗೊಂಡ ಕೃತಿಗಳಾಗಿವೆ. ಅದಕ್ಕಾಗಿಯೇ ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ, ಡಾ. ಹಾ.ಮಾ.ನಾಯಕ, ಪಿ.ಆರ್. ತಿಪ್ಪೇಸ್ವಾಮಿ ಮುಂತಾದ

---

**ಬಿ.ಎನ್. ಶ್ರೀನಿವಾಸ್**

---

ಅನೇಕ ಲೇಖಕರಿಂದ ಇವರ ಕನ್ನಡ ಕೃಷಿ ಬಗ್ಗೆ ಹೆಮ್ಮೆಯ ಮಾತುಗಳು ಬಂದಿವೆ.

ಇಂದು ಕನ್ನಡ ಪುಸ್ತಕೋದ್ಯಮ ವ್ಯಾಪಕವಾಗಿ ಬೆಳೆಯುತ್ತಿದೆ. ಕೋಟಿಗಟ್ಟಲೆ ವ್ಯವಹಾರದ ಸಂಗತಿಯೂ ಆಗಿ ಪರಿವರ್ತನಗೊಂಡಿದೆ ಎಂದು ಕನ್ನಡ ಸಾರಸ್ವತ ಲೋಕದಲ್ಲಿ ವ್ಯಾಪಾರೀಕರಣ ಹಾಸುಹೊಕ್ಕಾಗಿತ್ತೊ ಅಂದೇ ಕನ್ನಡ ಕೃತಿಗಳ ಮೌಲ್ಯ ಸೊರಗತೊಡಗಿತು. ಇಂದು ಕೇವಲ ಸರ್ಕಾರ ಸಗಟಾಗಿಯೇಕೊಳ್ಳುವ ಸಲುವಾಗಿಯೇ ನಾಯಿಕೊಡೆಗಳಂತೆ ಪ್ರಕಾಶಕರು ಹೊರಚಿಮ್ಮಿ ಬರುತ್ತಿರುವುದೇನೋ ನಿಜ! ಆದರೆ ಜೊಳ್ಳೇ ಹೆಚ್ಚು. ಇಂತ ಸಂಕೀರ್ಣ ಪರ್ವಕಾಲದಲ್ಲಿ ಎಪ್ಪತ್ತರ ವಯೋಮಾನದಲ್ಲಿ ಶ್ರೀ ಛಾಯಾಪತಿಯವರು ಒಳ್ಳೆಯ ಕೃತಿಗಳನ್ನು ಹೊರತರುತ್ತಿರುವುದು ಸಂತಸದ ಸಂಗತಿಯಾಗಿದೆ. ಶ್ರೀಯುತರನ್ನು ಇಂದು ಕನ್ನಡ ಸಾರಸ್ವತ ಲೋಕದ ಸಂಪನ್ಮೂಲ ವ್ಯಕ್ತಿಯನ್ನಾಗಿ ಗುರುತಿಸಿ ಅಭಿನಂದಿಸುತ್ತಿರುವುದು ಹೆಮ್ಮೆಯ ವಿಷಯವೇ ಆಗಿದೆ.

ಛಾಯಾಪತಿ ಎಂಬ ಅಕ್ಷರ ಬಾಗಿನ ಮುಂದಿನ ತಲೆಮಾರಿಗೆ ಇವರನ್ನು ಅರಿಯುವ ಸಾಕ್ಷಿ ಧ್ಯೂತಕವಾಗಲಿ.

ಈ ಹೊತ್ತು ನಾನು ನೆನೆಸಿಕೊಳ್ಳಬೇಕಾದ ಒಂದು ಸಂಗತಿ ಎಂದರೆ. 1978ನೇ ಇಸವಿ. ಸರಸ್ವತಿಪುರಂ 14ನೇ ಮೇನ್‌ನಲ್ಲಿ ಬಸ್ಸಿಗಾಗಿ ಕಾಯುತ್ತಾ ನಿಂತಿದ್ದೆ. ಹೆರಾಲ್ಡ್ ಕಾರೊಂದು ಬಂದು ನನ್ನ ಬಳಿಯೇ ನಿಂತಿತು, ಕಾರಿನಲ್ಲಿದ್ದ ವ್ಯಕ್ತಿ ಕೇಳಿದರು ನೀವು ಭಾರತೀ ಪ್ರಕಾಶನದ ನರಸಿಂಗರಾವ್ ಅವರ ಮಗನಲ್ಲವೆ? ಕೇಳಿದ ವ್ಯಕ್ತಿ ನನಗೆ ಗೊತ್ತಿಲ್ಲದಿದ್ದರೂ, ನನ್ನ ತಂದೆಯ ಹೆಸರು ಹೇಳಿದ್ದರಿಂದ ಆನಂದಿತನಾಗಿ ಹೌದೆಂದೆ. ಏನು ಮಾಡುತ್ತಿದ್ದೀರಿ? ಮತ್ತೊಂದು ಪ್ರಶ್ನೆ ಬಂದು ಪುಸ್ತಕ ಪ್ರಕಾಶನವನ್ನು ಮುಂದುವರಿಸಿಕೊಂಡು ಹೋಗಬೇಕೆಂದಿದ್ದೇನೆ ಎಂದೆ. ಈ ಮಾತಿಗೆ ಅಚ್ಚರಿ ಪಟ್ಟು ಕನ್ನಡ ಪುಸ್ತಕ ಪ್ರಕಟಿಸುವುದರಲ್ಲಿ ಎಷ್ಟು ಶ್ರಮವಿದೆ ಎಂಬುದನ್ನು ಹೇಳಿ ಎಚ್ಚರಿಸಿದರು. ಅಂತಹ ಮಿತ್ರರಿಗೆ 70 ವಸಂತಗಳು ಸಂದದು ಸಂತಸದ ಸಂಗತಿಯಾಗಿದೆ.

# ತಳುಕಿನ ಬೆಳಕಿನ ಪಯಣದ ಕುಡಿ

ಶ್ರೀ ಟಿ.ಎಸ್. ಛಾಯಾಪತಿಯವರನ್ನು ಕಣ್ಣು ತುಂಬಿಕೊಳ್ಳಲು ನನ್ನಂತವರು ಕತ್ತೆತ್ತಿ ನೋಡಬೇಕು. ಅಂತಹ ಎತ್ತರದ ನಿಲುವು. ಅವರ ನಡಿಗೆಯಲ್ಲಿನ ಪಾದರಸದಂತಹ ಚುರುಕತನದೊಡನೆ ಗಾಂಭೀರ್ಯವೂ ಸಮಸಮ ಬೆರೆತಿದೆ. ಆಡುವ ಮಾತಲ್ಲಿ ಸ್ಪಷ್ಟತೆ, ಗೌರವ, ವಿಶ್ವಾಸ, ಸೌಜನ್ಯ ಎದ್ದು ಕಾಣುತ್ತದೆ. ಅವರ ಹೃದಯದಿಂದ ಹೊಮ್ಮುವ ಧ್ವನಿಯೇ ಮಾಧುರ್ಯಪೂರ್ಣ. ಇದು ಮತ್ತೊಂದು ಹೃದಯವನ್ನು ಪರಿಣಾಮಕಾರಿಯಾಗಿ ಮುಟ್ಟಿ, ತಟ್ಟಿ, ಕಟ್ಟಿಹಾಕಬಲ್ಲದು. ಈ ಬಳುವಳಿಯ ಹಿಂದೆ ತಳುಕಿನ ಮನೆತನದ ವ್ಯಕ್ತಿಶ್ರೇಷ್ಠರ ಜೀವನ ಸರಮಾಲೆಯ ಸಾರವೇ ಇದೆ. ಅವರು ಬಾಳಿನ ಕುಲುಮೆಯಲ್ಲಿ ರಸಗಟ್ಟಿಯಾಗಿ ತಮ್ಮ ವ್ಯಕ್ತಿತ್ವವನ್ನು ಅರಳಿಸಿಕೊಂಡು, ಸಹಪಯಣಿಗರನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡು ಸಂತೈಸಿದ ಬಗೆ ಇದೆ. ಈ ಹಿನ್ನೆಲೆಯಲ್ಲೇ, ಅಲ್ಪಾವಧಿಯಲ್ಲಿ ಛಾಯಾಪತಿ ನನ್ನ ಆಪ್ತ ವಲಯದಲ್ಲಿ ಒಬ್ಬರಾಗಿಬಿಟ್ಟರು. ಅವರನ್ನು ಕುರಿತು ನನ್ನ ಪರಿಚಯ ಪ್ರಪಂಚದ ಕೆಲವು ಹಿತೈಷಿಗಳು ಮೆಚ್ಚುಗೆಯ ಮಾತನ್ನಾಡಿ, ನನ್ನ ಅಭಿಮಾನ ಇಮ್ಮಡಿಗೊಳಿಸಿದ್ದಾರೆ. ಲೇಖಕರಾಗಿಯೂ ಛಾಯಾಪತಿ ಅವರ ಬರಹದಲ್ಲಿ ಬದುಕಿಗೆ ಹತ್ತಿರವಾದ ಚಿತ್ರಣ, ಅಪೂರ್ವವಾದ ಮಾರ್ದವತೆ, ಅಂತಃಕರಣ ಗೋಚರವಾಗಿ, ಓದುಗರಿಗೆ ಗಾಢ ಅನುಭವ ಕಟ್ಟಿಕೊಡುವಲ್ಲಿ, ಸಮರ್ಥವಾಗಿದೆ.

ಕನ್ನಡ ಪುರುಷ ಸರಸ್ವತಿ ಪರಂಪರೆಯಲ್ಲಿ ಪ್ರಮುಖರೆನಿಸಿದ ಶ್ರೀ ಟಿ.ಎಸ್. ವೆಂಕಣ್ಣಯ್ಯ, ಶ್ರೀ ಟಿ.ಎಸ್. ಶಾಮರಾಯರು ಆದರಣೀಯ, ಅನುಕರಣೀಯ ಗುರುವಾಗಿ ಮೇಲ್ಪಂಕ್ತಿ ಹಾಕಿಕೊಟ್ಟ ಕಾರಣವೇ ಇರಬೇಕು ಅವರ ಬಹುಶಿಷ್ಯರು, ಪ್ರಶಿಷ್ಯರು ಆದರ್ಶ ಗುರುಗಳಾಗಿ ಪ್ರಖ್ಯಾತರಾದರು. ಈ ಮಾತಿಗೆ ಉದಾಹರಣೆಯಾಗಿ ನಿಲ್ಲುತ್ತಾರೆ, ಕುವೆಂಪು, ಜಿ.ಎಸ್.ಎಸ್, ಡಾ. ಎನ್.ಎಸ್.ಎಲ್. ಭಟ್ಟ, ಮುಂತಾದ ಅತಿರಥ ಮಹಾರಥರು ಈ ಸಂದರ್ಭದಲ್ಲಿ ವಿಶೇಷವಾಗಿ ನೆನಪಾಗುತ್ತಾರೆ. ಹಾಗೆಯೇ ಇವರು ಶಿಷ್ಯರ ಹೃದಯದಲ್ಲಿ ಹಚ್ಚಿರುವ ಕನ್ನಡದ ದೀಪ ಇಂದಿಗೂ ಪ್ರಖರವಾಗಿ ಬೆಳಗುತ್ತಿದೆ.

---

**ಸಾಯಿಲಕ್ಷ್ಮಿ**

---

ಇದು ಇನ್ನು ಅನೇಕ ಪೀಳಿಗೆಗಳನ್ನು ಮುನ್ನಡೆಸುವ ದೀವಿಗೆಯಾಗಿದೆ. ಬೆಳಕಿಂದ ಬೆಳಕು - ಇದು ಮೂರು ತಲೆಮಾರಿನ ಬೆಳಕಿನ ಪಯಣ. ಆ ಕಾಲಕ್ಕೆ ಬಡತನದ ಬೇಗೆಯಲ್ಲೇ, ರಾಮನಾಮ ಜಪದ ತಂಪಿನಲ್ಲೇ ಶೇಕ್‌ದಾರರಾಗಿ ತಮ್ಮ ಸರಳತೆ, ಸನ್ನಡತೆಯಿಂದ ಜನಪ್ರಿಯರಾದವರು ವೆಂಕಣ್ಣಯ್ಯನವರಾದರೆ ಅವರ ಧೀಮಂತ ಪುತ್ರ ಕಷ್ಟ, ಕಾರ್ಪಣ್ಯದ ಬದುಕಲ್ಲೂ 'ಛತ್ರದ ಸುಬ್ಬಣ್ಣ' ಎಂದು ಹೆಸರು ಮಾಡಿದವರು ಛಾಯಾಪತಿಯವರ ಕಲಾವಿದ ಹೃದಯದ ತಾತ ಸುಬ್ಬಣ್ಣನವರು. ಬಾಲ್ಯದಲ್ಲಿ ಭಿಕ್ಷಾನ್ನದ ಮೂಲಕ ಕೆಲಕಾಲ ಹೊಟ್ಟೆ ಹೊರೆದುಕೊಂಡು, ಹಣದ ಬಲವಿಲ್ಲದೆ ದುಡಿಯುತ್ತ, ಓದನ್ನು ಮುಂದುವರೆಸಿದವರು ಛಾಯಾಪತಿಯವರ ತಂದೆ ತ.ಸು. ಶಾಮರಾಯರು. ಇನ್ನು ಇವರ ದೊಡ್ಡಪ್ಪ ತ.ಸು. ವೆಂಕಣ್ಣಯ್ಯನವರು ಕನ್ನಡದ ಅಶ್ವಿನಿದೇವತೆಗಳಲ್ಲಿ ಒಬ್ಬರು. ಅಂತಹ ಮಹಾನ್ ವ್ಯಕ್ತಿ. ಕುವೆಂಪು ತಾವು ರಚಿಸಿದ ಮೇರುಕೃತಿ 'ಶ್ರೀ ರಾಮಾಯಣ ದರ್ಶನಂ' ಈ ಪ್ರಿಯಗುರುವಿನ ಸಿರಿಯಡಿಯಲ್ಲೇ ಅರ್ಪಣೆಗೈದಿರುವರು. ಇವರೆಲ್ಲ ಜೀವಿತಾವಧಿಯಲ್ಲೇ ದಂತಕತೆಯಾದ ಪಾವನಾತ್ಮರು. ಶಿಷ್ಯವಾತ್ಸಲ್ಯದಲ್ಲಿ ಅಪ್ರತಿಮರು. ಅಣ್ಣನ ಹೆಸರು ಚಿರಸ್ಥಾಯಿಯಾಗಿರಬೇಕೆಂಬ ಹಂಬಲದಿಂದ ಈ ಅದ್ವಿತೀಯ ತಮ್ಮ 'ತಳುಕಿನ ಸ್ಮಾರಕ ಗ್ರಂಥಮಾಲೆ' ಎಂಬ ಪ್ರಕಾಶನ ಸಂಸ್ಥೆ ಹುಟ್ಟುಹಾಕಿದರು. ಈ ಅಣ್ಣ ತಮ್ಮಂದಿರಿಗೆ ಆಧುನಿಕ ಜಗತ್ತಿನ ರಾಮಲಕ್ಷ್ಮಣರು ಎಂಬ ಹೋಲಿಕೆ ಸಹಜ, ಸುಂದರ. ಇಬ್ಬರ ರೂಪ, ಗುಣ, ಬುದ್ಧಿ ಎಲ್ಲದರಲ್ಲೂ ಸಾಮ್ಯತೆ ಇದ್ದಿದುರಿಂದಲೇ, ಶಿಲ್ಪಿ, ವೆಂಕಣ್ಣಯ್ಯನವರ ಮೂರ್ತಿ ಕಡೆಯಲು ಶಾಮರಾಯರು ಸ್ಫೂರ್ತಿಯಾದರು. ಅಣ್ಣತಮ್ಮನ ಅಕ್ಷರ ಬರವಣಿಗೆಯಲ್ಲೂ ಯಾವ ವ್ಯತ್ಯಾಸವಿಲ್ಲದೆ, ಸ್ವತಃ ಮಾಸ್ತಿಯವರೇ ದಂಗಾದ ಪ್ರಸಂಗದ ಉಲ್ಲೇಖವಿದೆ. ಪ್ರತಿಹಂತದಲ್ಲೂ ಜ್ಞಾನದ ವಿಸ್ತರಣೆ, ವಿತರಣೆ ಶ್ರೇಷ್ಠತೆಯತ್ತಲೇ ಈ ಇಬ್ಬರ ಗಮನ, ಗುರಿ. ಪರಿಸರಗಳು ಎಷ್ಟೇ ವಿರುದ್ಧವಾಗಿದ್ದರೂ, ಸ್ವ-ಸಾಮರ್ಥ್ಯದಿಂದ ಮೇಲೇರಲು ಸಾಧ್ಯ ಎನ್ನುವುದನ್ನು ನಿರೂಪಿಸಿ ತೋರಿಸಿದ್ದಾರೆ ಈ ಮಹಾನುಭಾವರು.

ಛಾಯಾಪತಿಯವರ ಮನೆತನದ ಮೂಲದ್ರವ್ಯವೆಂದರೆ, ಈ ಹಿರಿಯರು ಅನುಷ್ಠಾನದಲ್ಲಿಟ್ಟುಕೊಂಡಂತಹ ಪೂಜೆ ಪುನಸ್ಕಾರ, ರಾಮಾಯಣ ಪಾರಾಯಣ, ಅತಿಥಿ ಸತ್ಕಾರ, ಜಾತ್ಯಾತೀತ ಮನೋಭಾವ, ಅಧ್ಯಯನ, ಅಧ್ಯಾಪನ, ಅಪಾರ ಜೀವನಪ್ರೀತಿ, ಹೀಗೆ. ಇದೇ ಇಂದಿಗೂ ಛಾಯಾಪತಿಯವರ ಪಾಲಿಗೆ ಬತ್ತಲಾರದ ಹಾರೈಕೆಯ ಸಂಪತ್ತು. ತಂದೆ ತ.ಸು. ಶಾಮರಾಯರ ಗರಡಿಯಲ್ಲಿ ತಯಾರಾದವರು ಛಾಯಾಪತಿ. ಅವರಿಂದ ಹೀರಿಕೊಂಡ ಮೌಲ್ಯಗಳು ಅವರ ಅನುಸಂಧಾನ ಕ್ರಮ ಎಲ್ಲವೂ ಪ್ರಶಂಸಾರ್ಹ. ಛಾಯಾಪತಿಯವರು ಅಪರಿಮಿತ ಉತ್ಸಾಹ, ಉಲ್ಲಾಸದ ಕಾರಂಜಿ. ಅವರನ್ನು ಎಪ್ಪತ್ತು ಅಪ್ಪತ್ತಿದೆ ಎಂದರೆ ಒಪ್ಪುವ ಮಾತೇ? ಸಹಧರ್ಮಿಣಿ ಶ್ರೀಮತಿ ಪುಷ್ಪ ಛಾಯಾಪತಿ

ಯವರ ನೆರಳಾಗುವ ದಾಂಪತ್ಯದೀಕ್ಷೆತೊಟ್ಟು, ಸಪ್ತಪದಿ ತುಳಿದು, ಅವರ ಕುಲಗೌರವಕ್ಕೆ ಸುವಾಸನೆ ತುಂಬಿ, ಬದುಕಲ್ಲಿ ರಂಗು ಹೊಮ್ಮಿಸಿದವರು. ಪುತ್ರ ಪವನ್, ಪುತ್ರಿ ಪ್ರತಿಭಾ ಛಾಯಾಪತಿಯವರ ಬಾಳಲ್ಲಿ ವಿಶೇಷ ಅರ್ಥ, ತೃಪ್ತಿ, ಮನ್ನಣೆ ತಂದವರು. ಛಾಯಾಪತಿಯವರ ಜೀವನ ಹೀಗೆ ಅನುದಿನವೂ ಸಮೃದ್ಧಿ, ನೆಮ್ಮದಿ, ಸೌಖ್ಯದೊಂದಿಗೆ ಕೂಡಿರಲಿ ಎಂಬ ಪ್ರಾರ್ಥನೆಯೊಡನೆ ನಮಸ್ಕಾರ.

# 'ಬಾನಜಗಲಿ'ಯ ಬಾಂಧವ್ಯ

ವಾರದ ಹಿಂದೆಯಷ್ಟೇ ಬರಿದಾಗಿದ್ದು ಬರಿಯ ರೆಂಬೆ - ಕೊಂಬೆಗಳಿದ್ದ ಅರಳಿಮರ ಈಗ ತಾಮ್ರವರ್ಣದ ಎಲೆಗಳಿಂದ ತುಂಬಿ ಹೋಗಿದೆ. ಆ ಮರದ ನೆರಳಿನಲ್ಲಿ ಒಂದು ಪುಟ್ಟ ಗುಡಿ. ಸಣ್ಣಗೆ ಉರಿಯುತ್ತಿರುವ ಒಂದು ದೀಪ. ಅನತಿ ದೂರದಲ್ಲಿ ತೆಂಗಿನ ತೋಪು. ತಲೆ ಎತ್ತಿ ನೋಡಿದರೆ ಹುಣ್ಣಿಮೆಗೆ ನಾಲ್ಕೈದು ಹೆಜ್ಜೆ ದೂರವಿರುವ ಚಂದ್ರಮ....

ಇದು ನಾಗವಾರದ ನಮ್ಮ ಐದನೆಯ ಮಹಡಿಯ ಬಾಲ್ಕನಿಯಿಂದ ಕಾಣುವ ಚಿತ್ರ. ಅದೇ ವೇಳೆಗೆ ಅನತಿ ದೂರದ ತೆಂಗಿನ ತೋಪನ್ನು ಹಾದು, ಹಾದಿಯ ಹೊಂಗೆ - ಬೇವುಗಳ ತಂಪನ್ನು ಕದ್ದು ಸುವುರಾಗಿ ಬೀಸಿಬಂದ ವಸಂತದ ಗಾಳಿ... ಬಹುಶಃ ಮೈಸೂರಿನತ್ತಲಿಂದಲೇ ಬೀಸಿ ಬಂದಿರಬೇಕು. ನಲ್ಮೆಯ ಹಿರಿಯ ಸೋದರ ಛಾಯಾಪತಿಯವರ ಎಪ್ಪತ್ತನೆಂದ ವಸಂತದ ಸಂಭ್ರಮದ ಹಿತವಾದ ಗಾಳಿಯ ಬೀಸು! ನಮ್ಮ ಮನೆಯ ಬಾಲ್ಕನಿಯೇ ನಮ್ಮ 'ಬಾನಜಗಲಿ', ಅಂತೆಯೇ ನನ್ನ ಎರಡನೆಯ ಕವನ ಸಂಕಲನದ ಶೀರ್ಷಿಕೆಯೂ ಬಾನಜಗಲಿಯೇ. ಈ 'ಬಾನಜಗಲಿ'ಯನ್ನು ಭುವಿಯ ಅಂಗಳಕ್ಕೆ ಅತ್ಯಂತ ಪ್ರೀತಿಯಿಂದ ಬರಮಾಡಿಕೊಂಡವರು, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಆಧಾರಸ್ತಂಭ ಶ್ರೀ ಛಾಯಾಪತಿಯವರು. ಅಂತೆಯೇ ನಮ್ಮದು ಬಾನಜಗಲಿಯ ಬಾಂಧವ್ಯಎಂದದ್ದು. ಟಿ.ಎಸ್. ವೆಂಕಣ್ಣಯ್ಯ, ತ.ಸು. ಶಾಮರಾಯರು, ತ.ರಾ.ಸು... ಇವರೆಲ್ಲರೂ ಸಾಹಿತ್ಯ ಪ್ರೇಮಿಗಳಿಗೆ - ವಿದ್ಯಾರ್ಥಿಗಳಿಗೆ ಪ್ರಾತಃ ಸ್ಮರಣೀಯರಾದ ಮಹನೀಯರು. ಕನ್ನಡದ ಅಪೂರ್ವ ಆಸ್ತಿ ಈ ತಳುಕಿನ ಮನೆತನ. ಈ ಮನೆತನದಲ್ಲಿ 1944ರಲ್ಲಿ ತ.ಸು. ಶಾಮರಾಯರು ಹಾಗೂ ಶ್ರೀಮತಿ ಸುಬ್ಬುಲಕ್ಷ್ಮೀಯವರ ಮಗನಾಗಿ ಜನಿಸಿದವರು ಶ್ರೀ ಛಾಯಾಪತಿ ಅವರು. 1968ರಿಂದ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯನ್ನು ನಡೆಸಿಕೊಂಡು ಬಂದು "ಕನ್ನಡ ಪುಸ್ತಕೋದ್ಯಮದ ಮೇರು", "ಸಾವಿರದ ಸರದಾರ" ಎನ್ನಿಸಿಕೊಂಡವರು ಶ್ರೀ ಛಾಯಾಪತಿ ಅವರು. ಪ್ರತಿಷ್ಠಿತ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯು ಕಟ್ಟಿರುವ

---

ರಂಜನಿ ಪ್ರಭು

---

ಅಪೂರ್ವ ಕೃತಿಗಳ ಪುಷ್ಪಮಾಲೆಯಲ್ಲಿ ನನ್ನ 'ಬಾನಜಗಲಿ' ಎಂಬ ಪುಟ್ಟ ಕುಸುಮವೂ ಸೇರಿರುವುದು ನನಗೆ ಅತ್ಯಂತ ಸಂತಸದ, ಹೆಮ್ಮೆಯ ವಿಷಯ.

ಹಾಗೆ ನೋಡಿದರೆ ನಮ್ಮ ಹಾಗೂ ಛಾಯಾಪತಿಯವರ ಭೇಟಿಯಾಗಿ ಎರಡು - ಎರಡೂವರೆ ವರ್ಷಗಳಾಗಿರಬೇಕಷ್ಟೆ. ಅಷ್ಟು ಕಡಿಮೆ ಸಮಯದಲ್ಲಿಯೇ ಅತ್ಯಂತ ಆತ್ಮೀಯರಾಗಿ ನಮ್ಮ ಆಪ್ತ ವಲಯದವರಾಗಿ, ನಿಕಟ ಬಂಧುವಾಗಿಬಿಟ್ಟಿದ್ದಾರೆ ಛಾಯಾಪತಿಯವರು! ಅವರ ಸ್ನೇಹಪರ ವ್ಯಕ್ತಿತ್ವಕ್ಕೆ ಇದಕ್ಕಿಂತ ಏನು ಸಾಕ್ಷಿ ಬೇಕು?

ಕೆ. ಗೋಪಾಲಕೃಷ್ಣರಾಯರ ಕಥಾ -ಲೇಖನ ಸಂಕಲನದ ಬಿಡುಗಡೆಯ ಸಮಾರಂಭದಲ್ಲಿ, ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ನಮಗೆ ಛಾಯಾಪತಿಯವರ ಪ್ರಥಮ ಭೇಟಿ - ಪರಿಚಯವಾದದ್ದು. ಇಲ್ಲಿ ಒಂದು ಮಾತು ಹೇಳಿದರೆ ಅಪ್ರಸ್ತುತವಾಗಲಾರದು ಎಂದುಕೊಂಡಿದ್ದೇನೆ. ಬದುಕಿನ ಪ್ರತಿಯೊಂದು ಘಟನೆಯ ಹಿಂದೆಯೂ ಒಂದು ಅಗೋಚರ ಸೂತ್ರವಿದೆಯೆಂದು ನಂಬಿರುವವಳು ನಾನು. ('ಬಾನಜಗಲಿ'ಯ ಮೊದಲ ಮಾತಿನಲ್ಲೂ ಈ ಬಗ್ಗೆ ಪ್ರಸ್ತಾಪಿಸಿದ್ದೇನೆ.) ತ.ಸು. ಶಾಮರಾಯರ 'ಮೂರು ತಲೆಮಾರು' ಕೃತಿಯನ್ನು ಬಹಳ ದಿನಗಳ ನಂತರ ಮತ್ತೆ ಓದಿ, ಅಲ್ಲಿನ ಪಾತ್ರಗಳು, ಈ ನೆಲದ್ದಲ್ಲವೇನೋ ಎನ್ನಿಸುವಂತಹ ಉದಾತ್ತತೆ, ದೈವಿಕತೆಯನ್ನು ಸ್ಪರ್ಶಿಸುವ ಮಾನವೀಯತೆ - ಇವುಗಳ ಪ್ರಭಾವವಲಯದಲ್ಲೇ ಸುತ್ತುತ್ತಿದ್ದೆ. ಆ ಸಮಯದಲ್ಲೇ ಅಚಾನಕವಾಗಿ ತ.ಸು. ಶಾಮರಾಯರ ಸುಪುತ್ರ ಛಾಯಾಪತಿ ಅವರ ಭೇಟಿ ಆದದ್ದು! ಪರಿಷತ್ತಿನಲ್ಲಿ ಎತ್ತರದ ನಿಲುವಿನ, ಸೌಮ್ಯ - ನಗು ಮೊಗದ, ಮೆಲುದನಿಯ ಛಾಯಾಪತಿಯವರ ಭೇಟಿಯಾಗಿ ಅವರು ತ.ಸು. ಶಾಮರಯರ ಮಗ ಎಂದು ತಿಳಿದಾಗ ಏನೋ ಒಂದು ಅನಿರ್ವಚಯನೀಯವಾದ ಸಂಭ್ರಮ... ನಾನು ಅತ್ಯಂತ ಗೌರವಾದರ - ಭಕ್ತಿಯಿಂದ ನೋಡುವ ಹಿರಿಯ ಸಾಹಿತ್ಯಿಕ ಮನೆತನವೊಂದಕ್ಕೆ ಕೊಂಡಿಯೊಂದು ಬೆಸೆದ ಹಾಗೆ!

ಆಗಲೇ ನನ್ನ ಎರಡನೆಯ ಕವನ ಸಂಕಲನವನ್ನು ಹೊರತರುವ ವಿಚಾರ ತಲೆಯಲ್ಲಿ ಹೊಕ್ಕಿತ್ತು. 'ನಿಮ್ಮ ಪಾಡಿಗೆ ನೀವು ಕವಿತೆ ಬರೆಯಿರಿ; ಸಂಕಲನದ ಪ್ರಕಟಣೆ - ಪ್ರಕಾಶನದ ಜವಾಬ್ದಾರಿ ನನ್ನದು' ಎಂದು ಹಿರಿಯ ಕವಿ ಡಾ. ಎಚ್‌ಎಸ್. ವೆಂಕಟೇಶಮೂರ್ತಿ ಯವರು ಕೆಲದಿನಗಳ ಹಿಂದೆಯಷ್ಟೇ ತುಂಬು ಹೃದಯದ ಭರವಸೆ ನೀಡಿದ್ದರು.

ಛಾಯಾಪತಿಯವರೊಂದಿಗೆ ಅಂದು ಮಾತಾಡುತ್ತಾ ಪ್ರಾಸಂಗಿಕವಾಗಿ ಎರಡನೆಯ ಕವನಸಂಕಲನ ಹೊರತರುವ ವಿಚಾರವಿದೆ ಎನ್ನುತ್ತಿದ್ದಂತೆ, 'ಅಮ್ಮಾ, ನೀವು ಕವಿತೆಗಳನ್ನು ಬರೆದು ಕೊಡಿ, ನಮ್ಮ ಗ್ರಂಥಮಾಲೆಯಿಂದ ಸುಂದರವಾಗಿ ಪ್ರಕಟಿಸಿ ಕೊಡುತ್ತೇನೆ' ಎಂದರು ಛಾಯಾಪತಿ ಅವರು! ಒಬ್ಬ ಉದಯೋನ್ಮುಖ ಲೇಖಕಿಗೆ ಇದಕ್ಕಿಂತ ಸಂತಸದ ಕ್ಷಣವನ್ನು ಊಹಿಸಿಕೊಳ್ಳುವುದೂ ಅಸಾಧ್ಯ! ಮುಂದೊಮ್ಮೆ ಎಚ್.ಎಸ್.ವಿ. ಅವರ

ಮನೆಯ ಸಭಾಂಗಣದಲ್ಲಿ ಅವರ ಪುಸ್ತಕ ಬಿಡುಗಡೆಯ ಸಮಾರಂಭಕ್ಕೆಂದು ಹೋಗಿದ್ದಾಗ ಮತ್ತೆ ಛಾಯಾಪತಿಯವರ ಭೇಟಿಯಾಯಿತು. ಆ ಸಂದರ್ಭದಲ್ಲಿಯೇ ಎಚ್.ಎಸ್. ವಿ.ಯವರೂ ಸಹಾ ಛಾಯಾಪತಿಯವರಿಗೆ ನನ್ನನ್ನು ಪರಿಚಯಿಸುವ - ಅವರ ಸಂಸ್ಥೆಯ ಮೂಲಕವೇ ನನ್ನ ಎರಡನೆಯ ಸಂಕಲನ ಪ್ರಕಟಿಸುವ ವಿಚಾರ ಮಾಡಿದ್ದರೆಂಬುದು ಅರಿವಾದದ್ದು!

ಇದಾದ ಮೇಲೆ ಛಾಯಾಪತಿಯವರು 'ಅಮ್ಮಾ, ಬೇಗ ಬೇಗ ಕವಿತೆಗಳನ್ನು ಬರೆದುಕೊಡಿ, ಆದಷ್ಟು ಬೇಗ ಪುಸ್ತಕ ಹೊರತರೋಣ' ಎಂದು ಪದೇ ಪದೇ ನೆನಪಿಸತೊಡಗಿದರು. ಕಂತು ಕಂತಿನಲ್ಲಿ ಕವಿತೆಗಳನ್ನು ಕಳಿಸುತ್ತಲೇ ಅವುಗಳ ಡಿ.ಟಿ.ಪಿ. ಸಿದ್ಧಪಡಿಸಿ ಪ್ರೂಫ್ ತಿದ್ದಲು ಕಳಿಸಿಕೊಡುತ್ತಿದ್ದರು! 'ನಮ್ಮ ಪುಸ್ತಕಗಳಲ್ಲಿ ಒಂದೂ ತಪ್ಪಿರಬಾರದು; ಒಂದಲ್ಲ ನಾಲ್ಕು ಸಲ ಬೇಕಾದರೆ ಪ್ರೂಫ್ ತಿದ್ದಲು ಕಳಿಸುತ್ತೇನೆ' ಎನ್ನುತ್ತಿದ್ದರು.

ನಿಜ ಹೇಳಬೇಕೆಂದರೆ ಆ ದಿನಗಳು ನಮ್ಮ ಪಾಲಿಗೆ ಅಷ್ಟೇನೂ ಸುಖದಾಯಕವಾಗಿರ ಲಿಲ್ಲ. ಕಾರಣಾಂತರಗಳಿಂದ ಮನೆಯನ್ನು ಮಾರಿ ಬೇರೆ ಮನೆಗೆ ಹೋಗಬೇಕಾಗಿ ಬಂದು, ಮಾನಸಿಕವಾಗಿ ಸಾಕಷ್ಟು ವಿಚಲಿತಗಳಾಗಿದ್ದೆ ನಾನು. ದುಗುಡ -ವಿಷಾದ - ತಲ್ಲಣಗಳು ಗೂಡುಕಟ್ಟಿಕೊಂಡಿದ್ದ ಆ ದಿನಗಳಲ್ಲಿ ಹಿರಿಯ ಸೋದರನಂತೆ ಸಂತೈಸಿದವರು ಛಾಯಾಪತಿಯವರು. 'ಬಾನಜಗಲಿ'ಯಲ್ಲಿ ತೊಡಗಿಸಿಕೊಳ್ಳುವ ಮೂಲಕ ನನ್ನ ನೋವು -ವಿಷಾದಗಲನ್ನು ದೂರ ಮಾಡಿದವರು ಛಾಯಾಪತಿಯವರು. ತಾವೇ ಖುದ್ದಾಗಿ ಶ್ರೀ ಸುಧಾಕರ ದರ್ಬೆಯವರನ್ನು ಭೇಟಿಯಾಗಿ ಬಾನಜಗಲಿಗೆ ಸುಂದರವಾದ ಮುಖಚಿತ್ರ ವನ್ನು ಬರೆಸಿದವರು ಛಾಯಾಪತಿಯವರು! ಸಂಸ್ಕೃತ ವಿಶ್ವವಿದ್ಯಾನಿಲಯದ ಕುಲಪತಿಗಳಾದ ಮಲ್ಲೇಪುರಂ ಜಿ. ವೆಂಕಟೇಶ ಅವರನ್ನು ಸಹ ಅವರೇ ಪರಿಚಯಿಸಿದ್ದು.

ಒಮ್ಮೆ ಛಾಯಾಪತಿಯವರಿಗೆ ತೀವ್ರ ಅನಾರೋಗ್ಯವಾಗಿ ಆಪರೇಷನ್ ಆಗಿ ರಾಜಶೇಖರ್ ಆಸ್ಪತ್ರೆಯಲ್ಲಿದ್ದಾರೆ ಎಂಬ ವರ್ತಮಾನ ಬಂತು. ಒಡನೆಯೇ ಹೋಗಿ ನೋಡಿಕೊಂಡು ಬರೋಣವೆಂದು ನಾನು- ಪ್ರಭು ಮೈಸೂರಿಗೆ ಹೋದೆವು. ಆ ವೇಳೆಗೆ ಶಸ್ತ್ರಚಿಕಿತ್ಸೆ ಯಶಸ್ವಿಯಾಗಿ ಆಗಿ ಚೇತರಿಸಿಕೊಳ್ಳುತ್ತಿದ್ದರು ಛಾಯಾಪತಿಯವರು. ನಾವು ಹೋಗಿ ಒಂದೆರಡು ಕ್ಷೇಮ ಸಮಾಚಾರದ ಮಾತುಗಳನ್ನಾಡುತ್ತಿದ್ದಂತೆ ಬದಿಯಿಂದ ಪುಸ್ತಕವೊಂದನ್ನು ತೆಗೆದು ನನ್ನ ಕೈಗಿಟ್ಟು, ಮೆಲುದನಿಯಲ್ಲಿ 'ಒಪ್ಪಿಸಿಕೊಳ್ಳಿ' ಎಂದರು. ನೋಡಿದರೆ 'ಸರ್ವಾಂಗ ಸುಂದರವಾಗಿ ಮೂಡಿ ಬಂದಿದ್ದ ನನ್ನ ಕವನಸಂಕಲನ 'ಬಾನಜಗಲಿ' ! ಮೆಲುದನಿಯಲ್ಲಿ ನಿಧಾನವಾಗಿ "ನನ್ನ ಕೈಲಾದಷ್ಟೂ ಚೆನ್ನಾಗಿ ಪುಸ್ತಕ ಮೂಡಿಬರಲು ಶ್ರಮಿಸಿದ್ದೇನೆ. ಇದು ನಿಮ್ಮ ನೋವು- ಸಂಕಟಗಳನ್ನು ಒಂದಿಷ್ಟಾದರೂ ದೂರ ಮಾಡಿದರೆ ನನ್ನ ಶ್ರಮ ಸಾರ್ಥಕ. ಪುಸ್ತಕ ನೋಡಿ ನಿಮ್ಮ ಕಣ್ಣಿನಲ್ಲಿ ಸಂತೋಷ

ಉಕ್ಕುವುದನ್ನು ನೋಡಲು ಸುಮಾರು ದಿನದಿಂದ ಕಾಯುತ್ತಿದ್ದೇನೆ. ಇಷ್ಟವಾಯಿತೇ?" ಎಂದರು. ಮಾತು ಹೊರಡಲಿಲ್ಲ. ಕಣ್ಣು ಮಂಜಾದುವು....

ಸೌಮ್ಯ ಸ್ವಭಾವ ಛಾಯಾಪತಿಯವರದು, ಅವರ ಮಗಳು ಪ್ರತಿಭಾ ಹೇಳುವಂತೆ 'ಮಾದರಿ ವ್ಯಕ್ತಿತ್ವ'. ಅನ್ಯೋನ್ಯ ದಾಂಪತ್ಯ; ಮಕ್ಕಳ ಮೇಲೆ ಎಂದೂ ಏನನ್ನೂ ಹೇರದ ಸ್ವಭಾವ; ಎಲ್ಲೂ ಒಂದಿಷ್ಟೂ ಕೊರೆ ಎನಿಸದ ರೀತಿಯಲ್ಲಿ ಅತಿಥಿ ಸತ್ಕಾರ; ಮನೆಯಲ್ಲಿ ಸದಾ ಪ್ರೀತಿ ವಾತ್ಸಲ್ಯದ, ಸಂಭ್ರಮದ ವಾತಾವರಣ; ಮನೆತನದ ಹೆಸರು - ಮೌಲ್ಯಗಳನ್ನು ಉಳಿಸಿಕೊಂಡು ಬೆಳೆಸಿಕೊಂಡು ಬರುವ ಬದ್ಧತೆ... ಛಾಯಾಪತಿ ಯವರದು ನಿಜಕ್ಕೂ ಅಪರೂಪದ ವ್ಯಕ್ತಿತ್ವ. ಮೆಲುದನಿಯಲ್ಲಿ ಅವರು ಹಿರಿಯ ಸಾಹಿತಿಗಳೊಂದಿಗಿನ ತಮ್ಮ ಸ್ವಾರಸ್ಯಕರ ಅನುಭವಗಳನ್ನು ಹಂಚಿಕೊಳ್ಳುವುದೇ ಒಂದು ಸೊಗಸು. ಒಂದು ರೀತಿಯ ಕಥನದ ಧಾಟಿಯಲ್ಲಿ, ಕೆಲವೊಮ್ಮೆ ಭೂತಕಾಲವನ್ನು ವರ್ತಮಾನೀಕರಿಸುತ್ತಾ ಅವರು ನಿರೂಪಿಸುವುದು ಮತ್ತೂ ಸೊಗಸು. ಇಂಥ ವಾತ್ಸಲ್ಯಮಯಿ ಹಿರಿಯ ಸೋದರನಿಗೆ ಎಪ್ಪತ್ತನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ನಮ್ಮ ಕುಟುಂಬದ ಎಲ್ಲರ ಪರವಾಗಿ ಅಭಿನಂದನೆಗಳು - ಶುಭ ಹಾರೈಕೆಗಳು.



## ಪುಸ್ತಕ ಭಾಸ್ಕರ

ನಾನು ಕೆಲಸಕ್ಕೆ ಸೇರಿ ಮೂರ್ನಾಲ್ಕು ವರ್ಷಗಳಷ್ಟೇ ಆಗಿತ್ತು. ಲೇಖಕರು, ಪ್ರಕಾಶಕರು, ಮುದ್ರಕರು, ಗ್ರಂಥಾಲಯ, ಪುಸ್ತಕಗಳ ನಡುವೆ ತುಂಬಿಹೋಗಿದ್ದ ದಿನಗಳು ಅವು. ನನ್ನ ಏಳೆಂಟು ಲೇಖನಗಳ ಒಂದು ಪುಸ್ತಕ ತರುವ ಆಸೆ ನನ್ನಲ್ಲೂ ಪ್ರಬಲಿಸಿತ್ತು. ಒಂದು ನಡುಹಗಲು. ಗ್ರಂಥ ಪರಾಮರ್ಶನೆಗೆ ವಿಶ್ವವಿದ್ಯಾನಿಲಯ ಗ್ರಂಥಾಲಯದ ಮೊದಲ ಮಹಡಿ ಮೆಟ್ಟಲು ಹತ್ತುತ್ತಿದ್ದೆ. ಗ್ರಂಥಪಾಲಕರಾದ ಪಿ.ಕೆ. ಪಾಟೀಲರನ್ನು ಭೇಟಿಯಾಗಿಯೋ ಏನೋ ಎದುರಿಗೆ ಟಿ.ಎಸ್. ಛಾಯಾಪತಿ ಬರುತ್ತಿದ್ದರು. ಅವರು ತ.ಸು. ಶಾಮರಾಯರ ಮಗ; ತ.ವೆಂ. ಸ್ಮಾರಕ ಗ್ರಂಥಮಾಲೆಯ ಒಡೆಯರು; ಮೈಸೂರು ಪ್ರಿಂಟಿಂಗ್ ಪ್ರೆಸ್‌ನಲ್ಲಿ, ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಅನೇಕ ಬಾರಿ ಅವರನ್ನು ಭೇಟಿಯಾಗಿದ್ದೆ. ನೇರವಾಗಿ ಅವರನ್ನು "ನನ್ನದೊಂದು ಪುಸ್ತಕ ಪ್ರಕಟಿಸುತ್ತೀರಾ?' ಎಂದು ಕೇಳಿದೆ. ಯಾವುದೇ ನೆಪ, ಸಬೂಬು, ವಾಯಿದೆ ಒಡ್ಡದೆ' ಆಗಲಿ, ಹಾಕೋಣ. ಕೃಷ್ಣಮೂರ್ತಿ ಪ್ರೆಸ್‌ಗೆ ಮ್ಯಾಟರ್ ಕೊಡಿ" ಎಂದರು. ಎಂಥ ಲೇಖನಗಳು, ಪುಸ್ತಕದ ಶೀರ್ಷಿಕೆ, ಸ್ವರೂಪ ಏನನ್ನೂ ಕೇಳದೆ ಅವರು ಒಪ್ಪಿದ್ದು ನನ್ನಲ್ಲಿ ಆಶ್ಚರ್ಯ, ಸಂತೋಷಗಳೆರಡನ್ನೂ ಉಂಟುಮಾಡಿತು. ನಾನು ವಿವರಿಸಲು ಯತ್ನಿಸಿದೆ. ಕೂಡಲೇ "ನನಗೆ ನಿಮ್ಮ ಬಗ್ಗೆ ಗೊತ್ತಿದೆ. ಮ್ಯಾಟರ್‌ನ ಕಂಪೋಸ್ ಮಾಡಿಸಿ, ಎರಡು ಫಾರಂ ರೆಡಿ ಮಾಡಿ. ಆದಿನಾರಾಯಣಶೆಟ್ಟರಿಗೆ ಹೇಳಿ ಕಾಗದ ಹಾಕಿಸುತ್ತೇನೆ" ಎಂದರು. ಮುಂದೆ ಅದಕ್ಕೆ ಬೇಕಾದ ಎಲ್ಲ ವ್ಯವಸ್ಥೆ ಮಾಡಿದರು; ಒಂದೆರಡು ತಿಂಗಳ ಅವಧಿಯಲ್ಲಿ ನನ್ನ ಮೊದಲ ಪುಸ್ತಕ ಶೋಧನಲೋಕ ಹೊರತಂದರು. ಅದು ನನ್ನನ್ನು ಸಂಶೋಧಕನನ್ನಾಗಿ ನಿಲ್ಲಿಸಿತು. ಕನ್ನಡ ಕಟ್ಟಿದ, ಕನ್ನಡದ ಮೊದಲ ಪ್ರಾಧ್ಯಾಪಕರಾದ ತಳುಕಿನ ವೆಂಕಣ್ಣಯ್ಯನವರ ನೆನಪಿನ ಗ್ರಂಥಮಾಲೆಯಲ್ಲಿ ನನ್ನ ಮೊದಲ ಪುಸ್ತಕ ಪ್ರಕಟವಾದದ್ದು ನನ್ನಲ್ಲಿ ಧನ್ಯತೆ ಉಂಟು ಮಾಡಿತು. ಇದಕ್ಕೆ ಕಾರಣರಾದವರು ಟಿ.ಎಸ್. ಛಾಯಾಪತಿ. ಈ ಸಂದರ್ಭವನ್ನು, ಅವರನ್ನು ನಾನು ಯಾವಾಗಲೂ ನೆನೆಯುತ್ತೇನೆ.

* * *

---

ಎನ್.ಎಸ್. ತಾರಾನಾಥ

---

ಛಾಯಪತಿಗಳು ಉದ್ಯೋಗ ದೊರೆಯದೆ ಪ್ರಕಾಶನರಂಗಕ್ಕೆ ಹೊರಳಿದವರೇನಲ್ಲ. ಅವರು ಎಂ.ಕಾಂ., ಪದವೀಧರರು. ಆ ಕಾಲದಲ್ಲಿ ಅರ್ಜಿ ಹಾಕಿದ್ದರೆ ಅವರಿಗೆ ಬ್ಯಾಂಕು, ಸರ್ಕಾರಿ ಕಛೇರಿ, ವಾಣಿಜ್ಯ ಕಾಲೇಜುಗಳಲ್ಲಿ ಕೆಲಸ ದೊರೆಯುತ್ತಿತ್ತು. ಅವನ್ನು ಒಲ್ಲದೆ ಪ್ರಕಾಶನಕ್ಕೆ ಅವರು ಒಲಿದರು. ಕನ್ನಡದ ಪ್ರಸಿದ್ಧ ಪ್ರಕಾಶಕರಾದ ಡಿ.ವಿ.ಕೆ. ಮೂರ್ತಿಯವರ ನಿಕಟ ಸಂಪರ್ಕ ಅವರಿಗಿತ್ತು. ಪುಸ್ತಕಗಳು, ಪಾರ್ಸೆಲ್, ಪೋಸ್ಟಲ್ ಆರ್ಡರ್, ರಶೀತಿ, ಪ್ರೂಫು ಇವುಗಳ ನಡುವೆ ಇರುತ್ತಿದ್ದ ಡಿ.ವಿ.ಕೆ. ಮೂರ್ತಿ ಅವರಿಗೆ ಆದರ್ಶವಾದರು, ಮಾರ್ಗದೀಪಕರಾದರು. ತಂದೆಯವರಿಂದ 1968ರಲ್ಲಿ ಛಾಯಾಪತಿ ಗ್ರಂಥಮಾಲೆಯ ಹೊಣೆ ಸ್ವೀಕರಿಸಿದರು. ಅದನ್ನು ದೃಢಗೊಳಿಸುವ, ವಿಸ್ತರಿಸುವ, ವೈವಿಧ್ಯಮಯವಾಗಿಸುವ ಕನಸಿಗರಾದರು. ದೇಜಗೌ, ಜಿ ಎಸ್ ಎಸ್, ಚೆನ್ನವೀರಕಣವಿ, ಹಾ.ಮಾ. ನಾಯಕ., ಎಲ್.ಎಸ್. ಶೇಷಗಿರಿರಾವ್, ಎಚ್ಚೆಸ್ಕೆ, ಸಿ.ಪಿ.ಕೆ., ನಿಸಾರ್ ಅಹಮದ್, ಟಿ.ವಿ. ವೆಂಕಟಾಚಲಶಾಸ್ತ್ರೀ, ಜೀ.ಶಂ. ಪರಮಶಿವಯ್ಯ, ಎಚ್.ಜೆ. ಲಕ್ಕಪ್ಪಗೌಡ, ಎಚ್.ಎಸ್. ವೆಂಕಟೇಶಮೂರ್ತಿ – ಹೀಗೆ ನೂರಾರು ಲೇಖಕರ ಸಾವಿರಾರು ಪುಸ್ತಕ ಪ್ರಕಟಿಸಿದರು. ಕಾವ್ಯ, ಕತೆ, ಕಾದಂಬರಿ, ನಾಟಕ, ವಿಮರ್ಶೆ, ಪ್ರಬಂಧ, ಪಠ್ಯಪುಸ್ತಕ, ಮಕ್ಕಳ ಪುಸ್ತಕ, ಅಭಿನಂದನ ಗ್ರಂಥ, ಥೀಸಿಸ್, ಆತ್ಮವೃತ್ತಾಂತ, ಪ್ರಾಚೀನ ಕಾವ್ಯ ಸಂಗ್ರಹ - ಹೀಗೆ ಬಗೆ ಬಗೆಯ ಹೊತ್ತಗೆಗಳನ್ನು ಹೊರತಂದರು. ಸಾಂಪ್ರದಾಯಿಕವಾಗಿದ್ದ ತಮ್ಮ ಗ್ರಂಥಮಾಲೆಗೆ ಬಣ್ಣ, ಸೊಬಗು ತುಂಬಿದರು. ಏನಾದರೂ ಹೊಸತನ್ನು ಮಾಡುವ ತವಕ ಅವರಿಗೆ. ಹಾ ಮಾ ನಾಯಕರ ಪ್ರಣಯ ಪದಾವಳಿಗೆ ಕಲಾವಿದ ಚಂದ್ರನಾಥ್ ಅವರಿಂದ ರೇಖಾಚಿತ್ರ ಬರೆಸಿ ಮ್ಯಾಪ್‌ಲಿಥೊ ಹಾಳೆಯ ಮೇಲೆ ಮುದ್ರಿಸಿ ಅನೇಕ ಸಾವಿರ ರೂಪಾಯಿ ತೊಡಗಿಸಿ ಇತಿಹಾಸ ಸೃಷ್ಟಿಸಿದರು. ಕವಿ ಕಣವಿಯವರು ಇದನ್ನು "ಕೈ ತೊಳೆದುಕೊಂಡು ಮುಟ್ಟಬೇಕಾದಂಥ ಪುಸ್ತಕ" ಎಂದು ಬಣ್ಣಿಸಿದರು. ಬಳಿಕ ನಿಸಾರರ ಆಯ್ದ ಕವಿತೆಗಳನ್ನು, ಈಚೆಗೆ ಎಚ್.ಎಸ್.ವಿ ಅವರ ಕವಿತಾ ಸಂಗ್ರಹ ಹಾಗೂ ಮಕ್ಕಳ ಸಾಹಿತ್ಯ ಪುಸ್ತಕಗಳನ್ನು ಹೀಗೇ ಪ್ರಕಟಿಸಿದ್ದಾರೆ. ಜಿಎಸ್‌ಎಸ್ ಅವರ ಸೌಂದರ್ಯ ಸಮೀಕ್ಷೆಗೆ ಶೃಂಗೇರಿಗೆ ಹೋಗಿ, ತತ್ವಶಾಸ್ತ್ರ ಪ್ರಾಧ್ಯಾಪಕರಾದ ಕೆ.ಬಿ. ರಾಮಕೃಷ್ಣರಾಯರಿಂದ ಮುಖಪುಟ ಬರೆಸಿದರು; ಅದಕ್ಕೆ ಅಸಾಧಾರಣ ಸೌಂದರ್ಯ ನೀಡಿದರು. ಸೌಂದರ್ಯ ಸಮೀಕ್ಷೆ, ಸ್ನೇಹ ಕಾರ್ತಿಕ, ಎಚ್ಚೆಸ್ಕೆ ಅಂಕಣ ಬರಹಗಳು. ಹೊನ್ನಾರು, ಜಾನಪದ ಸಂಭಾವನೆಯಂಥ ಬೃಹತ್ ಕೃತಿಗಳನ್ನೂ ಅವರು ಹೊರ ತಂದಿದ್ದಾರೆ. ಈ ಬಗೆಯ ಸ್ವಸ್ತಿ ಅಭಿನಂದನ ಗ್ರಂಥ ತಂದಾಗ ಹಾ ಮಾ ನಾಯಕರು "ಇದನ್ನ ಪ್ರಕಟಿಸಲು ಯಮಧೈರ್ಯಬೇಕು" ಎಂದು ಪ್ರಶಂಸಿಸಿದರು. ತೀರ ಈಚೆಗೆ ಕಣವಿಯವರ ಹದಿನಾರು ಕವನ ಸಂಕಲನಗಳನ್ನು ಅತ್ಯಂತ ಆಕರ್ಷಕವಾಗಿ, ಕಣ್ತುಂಬುವಂತೆ ಏಕಕಾಲಕ್ಕೇ ಅವರು ಲೋಕಾರ್ಪಣೆ ಮಾಡಿದ್ದು ಒಂದು ಸಾಧನೆ.

"ಪುಸ್ತಕೋದ್ಯಮ ನನ್ನ ತಪಸ್ಸು" ಎನ್ನುವ ಛಾಯಾಪತಿ ಸದಾ ಅದರ ಚಿಂತನ, ಮನನ, ಧ್ಯಾನಗಳಲ್ಲಿರುತ್ತಾರೆ. ಆದ್ದರಿಂದಲೇ ಅವರಿಗೆ ಪುಸ್ತಕ ಕಾಗದದ ಕಟ್ಟಲ್ಲ; ಬಂಗಾರದ ಪುಟ. ಹಾಗಾಗಿಯೇ ಅವರು ಸಾವಿರಾರು ಪುಸ್ತಕ ಪ್ರಕಟಿಸಿದ್ದಾರೆ, ಸಾವಿರ ಪುಸ್ತಕಗಳ ಸರದಾರರಾಗಿದ್ದಾರೆ. ಅವರು ಸಾವಿರ ಕಣ್ಣು, ಸಾವಿರ ನಾಲಗೆ, ಸಾವಿರ ಪಾದಗಳ ವಿರಾಟ್ ಪುರುಷರಲ್ಲ, ಸಾವಿರ ಪುಸ್ತಕರಶ್ಮಿಗಳ ತೇಜಃಪುಂಜದ ಪುಸ್ತಕ ಭಾಸ್ಕರ.

* * *

ನಾನು ನಿಕಟವಾಗಿ ಬಲ್ಲೆ ಎಂದು ಹೇಳಬಲ್ಲ ವ್ಯಕ್ತಿಗಳಲ್ಲಿ ಛಾಯಾಪತಿ ಒಬ್ಬರು. ನನ್ನ ಅವರ ಪರಿಚಯ. ಸ್ನೇಹ ನಲವತ್ತು ವರ್ಷದ್ದು. ತಮ್ಮ ಬದುಕಿನ ಸುಖದ ಕ್ಷಣಗಳನ್ನು, ದುರ್ಭರ ಸನ್ನಿವೇಶಗಳನ್ನು ಅವರು ನನ್ನೊಂದಿಗೆ ಹಂಚಿಕೊಂಡಿದ್ದಾರೆ. ಅವರೊಬ್ಬ ಸ್ವನಿರ್ಮಿತ ಮನುಷ್ಯ. ಎಂಥ ಸನ್ನಿವೇಶಗಳನ್ನೂ ಅವರು ಎದುರಿಸಬಲ್ಲರು. ಪ್ರಕಾಶನದ ಹೊಣೆ ಹೊತ್ತುಕೊಂಡ ಮಗನಿಗೆ ಶಾಮರಾಯರು "ಪ್ರತಿತಿಂಗಳೂ ನೂರು ರೂಪಾಯಿ ಕೊಡಬೇಕು" ಎಂದು ತಿಳಿಸಿದ್ದರು. ಮಗನ ಸಾಮರ್ಥ್ಯ, ಕಾರ್ಯದಕ್ಷತೆಗಳನ್ನು ಪರೀಕ್ಷಿಸುವುದು ಅವರ ಉದ್ದೇಶವಾಗಿತ್ತು, ಅಷ್ಟೇ! ಛಾಯಾಪತಿ ಅದನ್ನು ಸವಾಲಾಗಿ ಸ್ವೀಕರಿಸಿದರು; ತಂದೆಯ ಅಪೇಕ್ಷೆ ಪೂರೈಸಿದರು. ತಂದೆಯವರು ಮನೆಮಾರಿ ಗುಬ್ಬಿಗೆ ಹೋದರು; ಮನೆ ಕೊಂಡ ಹೊಸ ಮಾಲೀಕರ ಅನುದಾರ, ಅಮಾನವೀಯ ವರ್ತನೆಗಳಿಂದ ಛಾಯಾಪತಿ ಪೇಚಿಗೆ ಸಿಲುಕಿದರು. ಹೋಟಲಲ್ಲಿ ತಿಂಗಳುಗಟ್ಟಲೆ ಉಳಿಯಬೇಕಾದ ಪರಿಸ್ಥಿತಿ ಏರ್ಪಟ್ಟಿತು. ಅವರು ಮನಸ್ಸಿನ ಸಮತೋಲನ ಕೆಡಿಸಿಕೊಳ್ಳಲಿಲ್ಲ; ನಂಜು ಮಾತಾಡಿ, ರಂಪುಗೋಳಿಸಿ ಇದನ್ನು ಬೀದಿ ಮಾತಾಗಿಸಲಿಲ್ಲ. ಇಂಥ ದುರ್ಭರ ಆರ್ಥಿಕ ಪರಿಸ್ಥಿತಿಯಲ್ಲೂ ತಮ್ಮ ಕರ್ತವ್ಯ, ಕಾರ್ಯಭಾರಗಳನ್ನು ಮರೆಗೆ ಸರಿಸಲಿಲ್ಲ. ಶಾಮರಾಯರ ಬಗೆಗಿನ ಸ್ಮೃತಿ ಅಭಿನಂದನ ಗ್ರಂಥವನ್ನು ಆಕರ್ಷಕವಾಗಿ ವಿನ್ಯಾಸಗೊಳಿಸಿ, ಅಚ್ಚುಕಟ್ಟಾದ ಸಮಾರಂಭದಲ್ಲಿ ಲೋಕಾರ್ಪಣಗೊಳಿಸಿ ಪಿತೃಋಣ ತೀರಿಸಿದರು! ಶಾಮರಾಯರು ತೀರಿಕೊಂಡಾಗ ಹತ್ತೇ ದಿನಗಳಲ್ಲಿ ಅವರನ್ನು ಕುರಿತ ನೆನಪಿನ ಪುಸ್ತಿಕೆ ಪೂಜ್ಯನೆನಪುವನ್ನು ತಂದೆಯವರ ವೈಕುಂಠ ಸಮಾರಾಧನೆಯಂದು ಬಿಡುಗಡೆ ಮಾಡಿದರು! ವಚನ ಭಾಗವತವನ್ನು "ಕೃಷ್ಣಾರ್ಪಣಮಸ್ತು ಎಂದು ಹೇಳಿ ಶ್ರೀರಾಮಕೃಷ್ಣಾಶ್ರಮಕ್ಕೆ ಕೊಟ್ಟಿದ್ದೇನೆ. ಅದರ ಹಕ್ಕು ಸ್ಥಾಪಿಸಿ ಮುದ್ರಿಸಲು ಹೋಗಬೇಡ" ಎಂದು ಹೇಳಿದ ತಂದೆಯ ಮಾತನ್ನು ಇಂದೂ ಪಾಲಿಸುತ್ತಿದ್ದಾರೆ. ಬದುಕು, ಬರೆಹ, ಅಸ್ಮಿತೆ, ತಂದೆಯ ಬಗ್ಗೆ ಛಾಯಾಪತಿಯವರಿಗೆ ಅಪಾರ ಪ್ರೀತಿ, ಗೌರವ, ಕೃತಜ್ಞತೆ - ಹಾಗಾಗಿ 'ಅಣ್ಣನ ಸ್ಮರಣೆ' ಎಂಬ ಕೃತಿಯನ್ನೇ ರಚಿಸಿದ್ದಾರೆ. ಛಾಯಾಪತಿ ಅವರ ಪಿತೃಪ್ರೇಮ ಇವುಗಳಿಂದ ವೇದ್ಯ.

ಶಾಮರಾಯರ ಶಿಷ್ಯರ ಬಳಗ ದೊಡ್ಡದು; ಛಾಯಾಪತಿಗಳ ಸ್ನೇಹಿತ - ಹಿತೈಷಿ - ಸಾಹಿತಿಗಳ ವಲಯ ಹಿರಿದು. ಹಿರಿ-ಕಿರಿಯರಿಂದ ಅವರ ಈ ವರ್ತುಲ ತುಂಬಿದೆ. ಸಾಹಿತಿ ಮಿತ್ರರನ್ನು ಉಪಾಹಾರಕ್ಕೆ, ಊಟಕ್ಕೆ, ವಾಸ್ತವ್ಯಕ್ಕೆ, ಸಮಾರಂಭಕ್ಕೆ ಕರೆಯಲು ಅವರಿಗೆ ತುಂಬ ಉತ್ಸಾಹ, ಸಂಭ್ರಮ. ಅವರೊಂದಿಗೆ ನಾನು ತಿಂಡಿ-ಊಟ ಮಾಡಿದ ದಿನಗಳು ಎಷ್ಟೋ. ಮಾತಾಡಿದ ಗಂಟೆಗಳು ಎಷ್ಟೋ; ಪ್ರಯಾಣಿಸಿದ ಸಂದರ್ಭಗಳು ಎಷ್ಟೋ. ಒಂದು ಪುಸ್ತಕವನ್ನು ಪ್ರಕಟಣೆಗೆ ತೆಗೆದುಕೊಂಡು, ಅದು ಬಿಡುಗಡೆಗೊಳ್ಳು ವವರೆಗೂ ಅವರು ಸಡಗರಿಸುತ್ತಾರೆ. ಹಸ್ತಪ್ರತಿ ಡಿಟಿಪಿಗೆ ಕೊಟ್ಟಿದ್ದು, ಪ್ರೂಫು ತಿದ್ದಿದ್ದು, ಪ್ಲೇಟ್ ಮಾಡಿಸಿದ್ದು, ಕವರ್ ಸಿದ್ಧಗೊಳಿಸಿದ್ದು, ಮುದ್ರಣವಾದದ್ದು - ಹೀಗೆ ಎಲ್ಲ ಹಂತಗಳಲ್ಲಿ ಸಂಬಂಧಿಸಿದ ಲೇಖಕರಿಗೆ ಮತ್ತೆ ಮತ್ತೆ ಫೋನು ಮಾಡಿ ತಿಳಿಸುತ್ತಾರೆ; ಪ್ರಕಟಣೆಯ ಪ್ರಗತಿ ಸೂಚಿಸುತ್ತಾರೆ. ಎಷ್ಟೋ ಬಾರಿ ಮುಗ್ಧ ಮಗುವಿನ ಮನಸ್ಸಿನಿಂದ ನಿಮಿಷಗಳ ಅಂತರದಲ್ಲೇ ಫೋನಾಯಿಸುತ್ತಾರೆ. ಅವರ ವಲಯದ ಲೇಖಕರಿಗೆಲ್ಲ ಇದು ಸಾಮಾನ್ಯ ಅನುಭವ. ತಮ್ಮ ಸಾಹಿತಿ - ಮಿತ್ರರ ಪದಾಧಿಕಾರ- ಅಭ್ಯುದಯ ಗಳಿಗೂ ಅವರು ನೆರವಾಗಿರುವುದುಂಟು. ಸಾಹಿತಿ ಮಿತ್ರರ ಪುಸ್ತಕದ ಲೋಕಾರ್ಪಣೆ, ಸನ್ಮಾನ, ಅಭಿನಂದನೆಗಳಷ್ಟೇ ಅಲ್ಲದೆ ಅಕಾಡೆಮಿಗಳ ಸದಸ್ಯತ್ವ ಕುಲಪತಿ ಹುದ್ದೆಯ ಆಕಾಂಕ್ಷಿಗಳಿಗೆ ಸಂಬಂಧಿಸಿದ ಪ್ರಭಾವಿ ವ್ಯಕ್ತಿಗಳ ಬಳಿ ಕರೆದೊಯ್ದು ಶಿಫಾರಸ್ಸು ಮಾಡಿಸಿರುವುದೂ ಉಂಟು. ಇಂಥ ಸಂದರ್ಭಗಳಲ್ಲೆಲ್ಲ ಅವರ ಉತ್ಸಾಹ, ಓಡಾಟಗಳಿಗೆ ಮೇರೆಯಿಲ್ಲ. ಅವರದು ಜಿಡ್ಡಿನಂತೆ ಅಂಟುವ, ಹರಡುವ, ಆರೋಗ್ಯ ವರ್ಧಕವಾಗುವ ಮಿತ್ರಪ್ರೇಮ.

ಅರವತ್ತು ವರ್ಷಗಳ ಹಿಂದೆ ಆರಂಭಗೊಂಡ ತ.ವೆಂ. ಸ್ಮಾರಕ ಗ್ರಂಥಮಾಲೆ ಈಗ ವಜ್ರದೀಪ್ತಿಯನ್ನು ಚೆಲ್ಲುತ್ತಿದೆ; ಆ ಕಾಂತಿಯಲ್ಲಿ ಮಿಂದು ಅದರ ಒಡೆಯ ಛಾಯಾಪತಿ ಅವರು ಶತಾಯುಷಿ ವಜ್ರದೇಹಿಯಾಗಲಿ.

# ಛಾಯಾಪತಿ ಅಲ್ಲ ಛಾಯಾವೃತಿ

'ತ.ವೆಂ. ಸ್ಮಾರಕ ಗ್ರಂಥಮಾಲೆ' ಕನ್ನಡ ಸಾರಸ್ವತ ಲೋಕಕ್ಕೆ ಸಂದ ಒಂದು ದೊಡ್ಡ ನಕ್ಷತ್ರ. ಕನ್ನಡದ ಉದ್ದಾಮ ಸಾಹಿತಿಗಳ, ಸಂಶೋಧಕರ ಉದಯೋನ್ಮುಖಿ ಸಾಹಿತಿಗಳ ಬೃಹತ್ತನ್ನು ಅವರ ಕೃತಿಗಳನ್ನು ಪ್ರಕಟಿಸುವುದರ ಮೂಲಕ ಸಾರಸ್ವತ ಲೋಕವನ್ನು, ಅದರ ವೈಭವ ಸಂಪತ್ತನ್ನು ಕನ್ನಡ ನಾಡಿಗೆ ನೀಡಿದ ವಿಶಿಷ್ಟ ಸಂಸ್ಥೆ ತ.ವೆಂ. ಸ್ಮಾರಕ ಗ್ರಂಥಮಾಲೆ.

ಹಿರಿಯರಾದ ಟಿ.ಎಸ್. ವೆಂಕಣ್ಣಯ್ಯ, ತ.ಸು. ಶಾಮರಾಯರು, ರಂ.ಶ್ರೀ ಮುಗಳಿ, ಹಾ.ಮಾ. ನಾಯಕ, ಜಿ.ಎಸ್. ಶಿವರುದ್ರಪ್ಪ, ಚೆನ್ನವೀರ ಕಣವಿ, ದೇಜಗೌ, ಸಿ.ಪಿ.ಕೆ, ವೆಂಕಟಾಚಲಶಾಸ್ತ್ರಿ, ನಿಸಾರ್ ಅಹಮದ್, ಚಿಕ್ಕಪ್ಪಗೌಡ, ವಿಜಯಸಾಸನೂರ್, ಕೆ.ಎಸ್. ಭಗವಾನ್ ಮುಂತಾದ ಮುನ್ನೂರಕ್ಕೂ ಹೆಚ್ಚು ಸಾಹಿತಿಗಳ ಕೃತಿಗಳು ಈ ಸಂಸ್ಥೆಯಿಂದ ಪ್ರಕಟಗೊಂಡಿವೆ. ಸಾಹಿತ್ಯಾಭಿಮಾನಿಗಳಿಗೆ, ಸಾಹಿತ್ಯದ ಹಸಿವು ಇರುವವರಿಗೆ, ಓದುಗರಿಗೆ ಈ ಗ್ರಂಥಮಾಲೆ ಒಂದು 'ಫೈವ್‌ಸ್ಟಾರ್' ಹೋಟೆಲ್ ಇದ್ದಂತೆ. ಇದೊಂದು ಸಾಹಿತ್ಯ ವಿಹಾರ. ಭೋಜನ ಮಂದಿರ. ಉಪಾಹಾರ ಪಡೆಯುವ ಪ್ರಕಾಶನ ಮಂದಿರ. ಈಗ ಪ್ರಕಾಶನ ಸಂಸ್ಥೆಯ ಸೇವಾವೃತಿ, ಒಡೆಯ ಶ್ರೀ ಟಿ.ಎಸ್. ಛಾಯಾಪತಿ, ಅನೇಕ ವಿದ್ವನ್ಮಣಿಗಳ, ಸಾಹಿತಿಗಳ, ಲೇಖಕರ ಆಶಯಗಳಿಗೆ, ಬಯಕೆಗಳಿಗೆ, ಕನಸುಗಳಿಗೆ ಅನುಗುಣವಾಗಿ ವರ್ತಿಸಿ ಅವರಿಗೂ ಮುದ ನೀಡುತ್ತಲೇ ಗ್ರಂಥಮಾಲೆಯ ಹಿರಿಯರ ಆಶಯಗಳನ್ನು ಸಾಕಾರಗೊಳಿಸಿದರು ಶ್ರೀ ಟಿ.ಎಸ್. ಛಾಯಾಪತಿ. ಇವರು ನನ್ನ ಸೋದರ ಸಮಾನರು. ಆತ್ಮೀಯರು, ಸಜ್ಜನ, ತಾಳಿ, ಈ ಸಹಿಷ್ಣುತೆ, ಸಹವರ್ತನೆಯನ್ನು ಕಂಡ ನನಗೆ ಇವರನ್ನು 'ಛಾಯಾಪತಿ' ಅನ್ನುವುದಕ್ಕಿಂತ 'ಛಾಯಾವೃತಿ' ಅನ್ನುವುದು ಸೂಕ್ತ ಅನಿಸುತ್ತದೆ. ತಮ್ಮ ಗ್ರಂಥಮಾಲೆಯ ಮೂಲಕ ದಿಗ್ಗಜರ ಕೃತಿಗಳಿಗೆ ದೀಪ ಹಿಡಿವ ಇವರ ವ್ರತ ಕನ್ನಡ ಸಾಹಿತ್ಯ ಲೋಕಕ್ಕೆ ಅಗತ್ಯವಾಗಿ ಬೇಕಾಗಿರುವ ಪಥ. ಶ್ರೀಯುತ ಟಿ.ಎಸ್. ಛಾಯಾಪತಿಯವರು ಸುಮಾರು ಹದಿನೈದು ವರ್ಷಗಳಿಂದ ನನಗೆ ಪರಿಚಯ. ದಿ. ತ.ಸು. ಶಾಮರಾಯರನ್ನೂ ನೋಡಿದ್ದೆ. ನಾಲ್ಕಾರು ಸಮಾರಂಭಗಳಲ್ಲಿ ಅವರ

ರಂಗಮಿತ್ರ

ಮಾತುಗಳನ್ನೂ ಕೇಳಿದ್ದೆ. ಅವರ ಧೀಮಂತ ವ್ಯಕ್ತಿತ್ವದ ಬಗ್ಗೆ ಅರಿತಿದ್ದು ನಾನು ದೂರದಲ್ಲಿಯೇ ನಿಂತು (ಹೈಸ್ಕೂಲು ವಿದ್ಯಾರ್ಥಿಯಂತೆ) ಅವರಿಗೆ ನಮಸ್ಕರಿಸುತ್ತಿದ್ದೆ. ನಂತರ ಟಿ.ಎಸ್. ಛಾಯಾಪತಿಯವರನ್ನು ಕಂಡಾಗ ಅಷ್ಟೇ ಗೌರವದಿಂದ ಕಾಣುತ್ತಿದ್ದೆ. ಆದರೆ ಮುಖತಃ ಪರಿಚಯ ಆಗಿರಲಿಲ್ಲ. ಒಮ್ಮೆ ಕನ್ನಡ ಸಾಹಿತ್ಯ ಪರಿಷತ್ತಿನ ಸಮಾರಂಭ ಒಂದರಲ್ಲಿ ನೀ. ಗಿರಿಗೌಡರು ಇವರನ್ನು ಪರಿಚಯ ಮಾಡಿಸಿದರು. ರಂಗಮಿತ್ರ ಬನ್ನಿ ಇಲ್ಲಿ ಇವರು ಛಾಯಪತಿಯವರು, ಗೊತ್ತಲ್ವಾ - ಎಂದರು ನಾನು ನನ್ನ ಎದೆಯ ಮೇಲೆ ಕೈಯಿಟ್ಟು ನಮಸ್ಕಾರ ಸಾರ್ ಎಂದೆ. ತಕ್ಷಣವೇ ಕುಳಿತಿದ್ದ ಟಿ.ಎಸ್. ಛಾಯಾಪತಿಯವರು ಎದ್ದು ನಿಂತು ಎರಡೂ ಕೈ ಜೋಡಿಸಿ, ನಮಸ್ಕಾರ ಸಾರ್ ಎಂದರು. ನನಗೆ ಸಂಕೋಚ, ಮುಜುಗರ ನಾಚಿಕೆ ಆಯ್ತು. ನಾನು ಅವರಿಗಿಂತ ಕಿರಿಯ. ನನಗೆ ಅವರು ಅಷ್ಟೊಂದು ಗೌರವ ತೋರಿಸಿದ್ದರು. ಇದೂ ಸಾಲದೆಂಬಂತೆ ಇದೇನ್ ಗಿರಿಗೌಡರೇ, ನನಗೆ ರಂಗಮಿತ್ರ ಅವರನ್ನು ಪರಿಚಯ ಮಾಡಿಕೊಡ್ತಿದೀರ. ಇವರು ನನಗೆ ಚೆನ್ನಾಗಿ ಗೊತ್ತು. ಇವರ ನಾಟಕಗಳಿಗೆ ನಾಟಕ ಆಕಾಡೆಮಿ ಪ್ರಶಸ್ತಿ ಸಿಕ್ಕಿದೆ. ನಿಮ್ಮ ನಾಟಕ ಕಾಡುಗಿಡಗಳು ಅಲ್ವಾ ಸಾರ್ ಎಂದು ನನ್ನನ್ನೇ ಕೇಳಿದರು. ನೀ. ಗಿರಿಗೌಡರು ನಗುತ್ತಾ ಇವರು ನಾಟಕ ಬರೆಯೋದಷ್ಟೇ ಅಲ್ಲ, ಆಕ್ಟಿಂಗೂ ಮಾಡ್ತಾರೆ ಅಂದರು ಛಾಯಾಪತಿಯವರು. ನಾನು ಇವರು ಬರೆದಿರೋ ವಿಮರ್ಶೆಗಳನ್ನೂ ನೋಡಿದೀನಿ ಗೌಡರೇ ಅಂದರು. ಸಾರ್ ನಿಮ್ಮ ನಾಟಕ ಪಬ್ಲಿಶ್ ಆಯ್ತೇ? ಎಂದರು. ಇಲ್ಲಾ ಸಾರ್. ಯಾಕೆ? ಎಂದರು ನನಗೆ ಯಾರೂ ಪಬ್ಲಿಷರ್ಸ್ ಗೊತ್ತಿಲ್ಲ ಸಾರ್ ಎಂದೆ. ಯಾಕೆ? ಯಾಕ್ ಹೀಗಂತೀರಾ ಸಾರ್, ನನಗೆ ಕೊಡಿ, ನಾನು ಪಬ್ಲಿಶ್ ಮಾಡ್ತೀನಿ ಅಂದರು. ನನಗೆ ಆಶ್ಚರ್ಯ, ಆನಂದ, 'ಕಡುಬಡವ ಕಡವರಹನೆಡಗಿ' ಎಂಬಂತೆ ಆಯ್ತು. ಇಂಥ ದೊಡ್ಡ ಪ್ರಕಾಶಕರು ನನ್ನಂತಹ ಸಾಮಾನ್ಯ ಲೇಖಕನ ಬಗ್ಗೆ ಈ ಮಾತುಗಳನ್ನಾಡಿದಾಗ ನನ್ನ ಕಣ್ಣಲ್ಲಿ ನೀರು ಬಂತು. ನಂತರ ಅವರು ನುಡಿದಂತೆ ನಡೆದರು ಅವರ ಗ್ರಂಥಮಾಲೆಯಲ್ಲಿ 'ಕಾಡುಗಿಡಗಳು' ಹದ್ದುಗಳು, ಸುಳ್ಳಾಗಿ ಕಾಡಿತ್ತು ನೋಡಾ? ಉರಿಯೊಳಗಣಪರಿ ಎಂಬ ನಾಲ್ಕು ನಾಟಕಗಳು ಪ್ರಕಾಶನಗೊಂಡವು. ಎರಡು ಬಾರಿ ನಾಟಕದ ಬಿಡುಗಡೆ ಸಮಾರಂಭ ನಡೆಯಿತು. ಸಮಾರಂಭಕ್ಕೆ ಬಂದರೂ ಅವರು ಎಷ್ಟೇ ಕೇಳಿಕೊಂಡರೂ ವೇದಿಕೆಯ ಮೇಲೆ ಬರಲಿಲ್ಲ. ತಮ್ಮನಾದ ನನ್ನನ್ನು ವೇದಿಕೆ ಮೇಲೆ ಕೂರಿಸಿ ತಾವು ಪ್ರೇಕ್ಷಕರ ಜತೆ ಕೂತು ಸಮಾರಂಭವನ್ನು ವೀಕ್ಷಿಸಿದರು. ನಾನು ತುಂಬಾ ಬೇಸರದಿಂದ ಸಾರ್, ನೀವು ಹೀಗೆ ಮಾಡಿದರೆ ನನಗೆ ಅವಮಾನ ಮಾಡಿದ ಹಾಗೆ ಎಂದೆ. ಅದಕ್ಕೆ ಅವರೇನೆನ್ನ ಬೇಕು? 'ಸಾರ್, ಯಾವತ್ತು ಲೇಖಕ ದೊಡ್ಡವನು' ಇವರ ವ್ಯಕ್ತಿತ್ವ ಅರಿಯಲು ಇದಕ್ಕಿಂತ ದೊಡ್ಡ ಮಾತು ಬೇಕೆ? ಯಾವಾಗ ಸಿಕ್ಕರೂ, ಸಾರ್, ನೀವು ಬರೆಯಿರಿ, ನಾನಿದ್ದೇನೆ ಎಂದು ಉತ್ತೇಜನ ನೀಡುವ ದೊಡ್ಡ ಮನಸ್ಸು ಅವರದ್ದು.

ಲೇಖಕರು ಪ್ರಕಾಶಕರನ್ನು ಹುಡುಕಿಕೊಂಡು ಅಲೆಯಬೇಕಾದ ಈ ದಿನಗಳಲ್ಲಿ ಪ್ರಕಾಶಕರೇ ಲೇಖಕರನ್ನು ಹುಡುಕಿಕೊಂಡು ಬರುವ ಈ ಸುವರ್ಣ ವ್ಯಕ್ತಿತ್ವಕ್ಕೆ ನಮೋ.

ವಾಣಿಜ್ಯ ಶಾಸ್ತ್ರ ಓದಿ ದುಡಿದು ದುಡ್ಡಿನ ಗುಡ್ಡೆ ಹಾಕುವ ಬದಲು ಪ್ರಕಾಶನ ಶಾಸ್ತ್ರಕ್ಕೆ ಬಂದು ಗ್ರಂಥಗಳ ಗುಡ್ಡೆ ಹಾಕಿದ ತ.ವೆಂ. ಸ್ಮಾರಕ ಗ್ರಂಥಮಾಲೆಯ ಗಾಯಾಳು, ನೋಯಾಳು, ಗೆದ್ದಾಳು ಆತ್ಮೀಯ ಛಾಯಾಪತಿಯವರು ನೂರ್ಕಾಲ ಬಾಳಲಿ ಎಂದು ಹಾರೈಸುತ್ತೇನೆ.

## ಸ್ನೇಹ ಸಂಜೀವಿನಿ...

ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಹೆಸರು ಕನ್ನಡ ಓದುಗ ವೃಂದಕ್ಕೆ ಚಿರಪರಿಚಿತ. ಪ್ರತಿಷ್ಠಿತ ತ.ವೆಂ. ಸ್ಮಾರಕ ಗ್ರಂಥಮಾಲೆಯು ಇದುವರೆಗೆ ಸಾವಿರಾರು ಮೌಲಿಕ ಕೃತಿಗಳನ್ನು ಹೊರತಂದಿದ್ದು ಅಪಾರ ಜನಪ್ರಿಯತೆಯನ್ನು ಗಳಿಸಿದೆ. ಪ್ರಕಾಶಕರಾದ ಶ್ರೀ ಟಿ.ಎಸ್. ಛಾಯಾಪತಿಯವರ ದೂರದೃಷ್ಟಿ ಹಾಗೂ ಅಪಾರ ಪರಿಶ್ರಮಗಳಿಂದಾಗಿ ತ.ವೆಂ. ಪ್ರಕಾಶನ ಇಂದು ನಾಡಿನ ಅತ್ಯುತ್ತಮ ಪ್ರಕಾಶನ ಸಂಸ್ಥೆಗಳಲ್ಲಿ ಒಂದಾಗಿವೆ.

ಕ್ರಿಯಾಶೀಲ ವ್ಯಕ್ತಿತ್ವದ ಕಾಯಕ ಯೋಗಿಯಾಗಿರುವ ಛಾಯಾಪತಿಯವರು ಈಗಾಗಲೇ ತಮ್ಮ ಸಾಧನೆಗಾಗಿ ಸಾಹಿತ್ಯ ಸೇವಾ ಧುರೀಣ, ಜಿಲ್ಲೆಯ ಪ್ರತಿಭನ್ವಿತ ಪ್ರಕಾಶಕ ರತ್ನ ಹಾಗೂ ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ಮುಂತಾದ ಹಲವಾರು ರಾಜ್ಯಮಟ್ಟದ ಪ್ರತಿಷ್ಠಿತ ಪ್ರಶಸ್ತಿ ಪುರಸ್ಕಾರಗಳನ್ನು ಗಳಿಸಿದ್ದಾರೆ. ಮಹತ್ವದ ವೇದಿಕೆಗಳಲ್ಲಿ ಪಾಲ್ಗೊಂಡಿದ್ದಾರೆ. ನಾಡಿನ ಶ್ರೇಷ್ಠ ಸಾಹಿತಿಗಳನ್ನು ಕರೆಸಿ ಹಲವು ಹತ್ತು ಕೃತಿಗಳ ಲೋಕಾರ್ಪಣ ಕಾರ್ಯವನ್ನು ನಡೆಸಿದ್ದಾರೆ. ಕಾವ್ಯ, ಕತೆ, ಕಾದಂಬರಿ, ವಿಮರ್ಶೆ ಮುಂತಾದ ಸಾಹಿತ್ಯದ ಎಲ್ಲ ಪ್ರಕಾರಗಳ ಕೃತಿಗಳನ್ನು ಪ್ರಕಟಿಸಿದ್ದಾರೆ. ಕನ್ನಡದ ಮಹತ್ವದ ಲೇಖಕರ ಕೃತಿಗಳನ್ನು ಪ್ರಕಟಿಸುವುದರ ಜೊತೆಗೆ ಹಲವಾರು ಯುವ ಬರಹಗಾರರ ಪುಸ್ತಕಗಳನ್ನು ಪ್ರಕಟಿಸಿ ಪ್ರೋತ್ಸಾಹಿಸುತ್ತಾ ಬಂದಿದ್ದಾರೆ. ಸ್ವತಃ ಲೇಖಕರೂ ಆಗಿರುವ ಅವರು ಅನೇಕ ಕೃತಿಗಳನ್ನು ಪ್ರಕಟಿಸಿದ್ದಾರೆ.

ಆತ್ಮೀಯ ಸ್ನೇಹ ಭಾವವನ್ನುಳ್ಳ ಶ್ರೀ ಛಾಯಾಪತಿಯವರು ನನ್ನ ಕೃತಿಗಳ ಮೊದಲ ಪ್ರಕಾಶಕರು ಎಂದು ಹೇಳಿಕೊಳ್ಳಲು ನನಗೆ ಸಂತಸವೆನಿಸುತ್ತದೆ. ಅದುವರೆಗೆ ನಾವು ನಮ್ಮ ಪುಸ್ತಕಗಳನ್ನು ನಮ್ಮದೇ ಆದ 'ಕಾವೇರಿ ಪ್ರಕಾಶನ'ದ ವತಿಯಿಂದ ಪ್ರಕಟಿಸುತ್ತಿದ್ದೆವು. ಆ ಸಮಯದಲ್ಲಿ ನನ್ನ 'ಈ ಸ್ನೇಹ ಈ ಜೀವನ' ಎಂಬ ಕಾದಂಬರಿ 'ತರಂಗ' ವಾರಪತ್ರಿಕೆಯಲ್ಲಿ ಧಾರವಾಹಿಯಾಗಿ ಪ್ರಕಟವಾಗಿ ತುಂಬ ಜನಪ್ರಿಯವಾಗಿತ್ತು. ಛಾಯಾಪತಿ ಅವರು ಅದನ್ನು ಪ್ರಕಟಿಸಲು ಮುಂದೆ ಬಂದಾಗ ನನಗೆ ಬಹಳ

---

**ಡಾ. ಲತಾ ರಾಜಶೇಖರ್**

---

ಸಂತೋಷವಾಯಿತು. ಅನಂತರ ಈ ಕಾದಂಬರಿಯ ಮರು ಮುದ್ರಣವನ್ನೂ ಅವರೇ ಮಾಡಿದರು. ಅದೇ ರೀತಿ 'ಸುಧಾ' ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಮೂಡಿ ಬಂದು ಜನಮೆಚ್ಚುಗೆಗೆ ಪಾತ್ರವಾದ ನನ್ನ 'ಸೂರ್ಯನ ನೆರಳು' ಕಾದಂಬರಿಯನ್ನು ಸಹ ಅವರು ಪ್ರಕಟ ಮಾಡಿದರು.

ನನ್ನ ಪತಿ ಡಾ. ಹೆಚ್.ಬಿ. ರಾಜಶೇಖರ್ ಅವರು ಸನ್ಮಿತ್ರರಾದ ಛಾಯಾಪತಿ ಯವರ ಕುಟುಂಬ ವೈದ್ಯರಾಗಿದ್ದಾರೆ. ಅವರು ತ.ಸು. ಶಾಮರಾಯರು ಬದುಕಿದ್ದಾಗ, ಆಗಾಗ ಹೋಗಿ ಅವರನ್ನು ನೋಡಿಕೊಂಡು ಬರುತ್ತಿದ್ದರು. ಶಾಮರಾಯರಿಗೂ ಅವರನ್ನು ಕಂಡರೆ ಬಹಳ ಪ್ರೀತಿ. ಹಾಗೆಯೇ ಅವರು ಕೃತಿಗಳನ್ನು ತಮ್ಮ ಶ್ರೀಮತಿ ಅವರಿಂದ ಓದಿಸಿ ಕೇಳಿ ಸಂತೋಷ ಪಡುತ್ತಿದ್ದರು, ನನಗೆ ಪ್ರೋತ್ಸಾಹದ ಮಾತುಗಳನ್ನು ಆಡುತ್ತಿದ್ದರು. ಅವರ ಮನೆ ಸರಸ್ವತಿಯ ಮಂದಿರವಾಗಿತ್ತು. ಅವರ ಧರ್ಮ ಪತ್ನಿ ಶ್ರೀಮತಿ ಸುಬ್ಬಲಕ್ಷ್ಮಿ ಅಮ್ಮನವರು ಸಾಕ್ಷಾತ್ ಅನ್ನಪೂರ್ಣೆಯಂತಿದ್ದರು.

ಇಂತಹ ತಂದೆತಾಯಿಗಳನ್ನು ಪಡೆದ ಶ್ರೀ ಛಾಯಾಪತಿಯವರು ತಂದೆಯವರ ಆದರ್ಶ ಗುಣಗಳನ್ನು ಮೈಗೂಡಿಸಿಕೊಂಡಿದ್ದು ಅವರು ಹಾಕಿಕೊಟ್ಟ ದಾರಿಯಲ್ಲಿ ಸಾಗುತ್ತಿದ್ದಾರೆ. ತಮ್ಮ ಸರಳ ನಡೆ ನುಡಿ, ಸ್ನೇಹ ಶೀಲ ಸ್ವಭಾವ, ಆತ್ಮೀಯ ವ್ಯಕ್ತಿತ್ವ ಹಾಗೂ ಜಾತ್ಯಾತೀತ ಮನೋಭಾವದಿಂದಾಗಿ ಎಲ್ಲರ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿ ದ್ದಾರೆ. ಅವರದು ಉದಾತ್ತ ಪರೋಪಕಾರ ಗುಣ. ಅವರ ಮನಸ್ಸು ಸದಾ ಯಾರಿ ಗಾದರೂ ಒಳ್ಳೆಯದನ್ನು ಮಾಡಲು ತುಡಿಯುತ್ತಿರುತ್ತದೆ. ಪ್ರೀತಿ, ವಿಶ್ವಾಸ, ಸಮಾನತೆ, ಕೃತಜ್ಞತೆ ಮುಂತಾದ ಮಾನವೀಯ ಮೌಲ್ಯಗಳನ್ನು ಪೋಷಿಸುತ್ತ ಬಂದಿರುವ ಶ್ರೀ ಛಾಯಾಪತಿಯವರು ಕೇವಲ ಪುಸ್ತಕ ಪ್ರಕಾಶಕರು ಮಾತ್ರವಲ್ಲದೆ ಸಾಮಾಜಿಕ ಚಿಂತಕರೂ, ಸಂಸ್ಕೃತಿ ಪೋಷಕರೂ ಆಗಿದ್ದಾರೆ.

ಅವರ ಧರ್ಮಪತ್ನಿ ಶ್ರೀಮತಿ ಪುಷ್ಪ ಅವರು ಪತಿಗೆ ತಕ್ಕ ಸತಿ. ಅತಿಥಿ ಸತ್ಕಾರದಲ್ಲಿ ಎತ್ತಿದ ಕೈ, ಅವರ ಕೈ ರುಚಿಯನ್ನು, ಮಸಾಲೆ ದೋಸೆಯ ಸ್ವಾದವನ್ನು ನಾವುಗಳು ಸವಿದು ಸಂತೋಷಪಟ್ಟಿದ್ದೇವೆ. ಈ ಅನ್ಯೋನ್ಯ ದಂಪತಿಗಳ ಮಕ್ಕಳಾದ ಪ್ರತಿಭಾ ಹಾಗೂ ಪವನ್ ತುಂಬ ಪ್ರತಿಭಾವಂತರು, ಗುಣವಂತರು, ಛಾಯಾಪತಿಯವರ ಹಿರಿಯ ಮೊಮ್ಮಗ, ಪ್ರತಿಭಾಳ ಮೊದಲ ಮಗ, ನಮ್ಮ ಆಸ್ಪತ್ರೆಯಲ್ಲಿ ಜನಿಸಿದ ಮೊದಲ ಮಗು ಎಂಬುದು ನಮಗೆ ಸಂತಸದ ವಿಷಯ.

ನಾಡು ನುಡಿಗೆ ನಿರಂತರವಾಗಿ ಸೇವೆ ಸಲ್ಲಿಸುತ್ತ ಬಂದಿರುವ ಶ್ರೀ ಟಿ.ಎಸ್. ಛಾಯಾಪತಿ ಅವರನ್ನು ನಾಡಿನ ಅನೇಕ ಪ್ರತಿಷ್ಠಿತ ಪ್ರಶಸ್ತಿ ಗೌರವಗಳು ಅರಸಿ ಬಂದಿವೆ. ಅದೇ ರೀತಿ ಅವರಿಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯೂ ಬರಬೇಕಾಗಿದೆ. ಇನ್ನಾದರೂ ಆದಷ್ಟು ಶೀಘ್ರವಲ್ಲಿ ಅವರಿಗೆ ಅವರ ಪ್ರಕಾಶನ ಕ್ಷೇತ್ರದ ಸಾಧನೆ,

ಸೇವೆಗೆ ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ ದೊರಕಲಿ ಎಂದು ತುಂಬ ಹೃದಯದಿಂದ ಹಾರೈಸುತ್ತೇನೆ.

ಶ್ರೀ ಛಾಯಾಪತಿ ಅವರಿಗೂ ಅವರ ಕುಟುಂಬವರ್ಗಕ್ಕೂ ಭಗವಂತ ಸಕಲ ಶ್ರೇಯಸ್ಸನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇನೆ.

# ಸರಳ ವ್ಯಕ್ತಿತ್ವದ ಸದಭಿರುಚಿಯ ಪುಸ್ತಕ ಪ್ರೇಮಿ

ಛಾಯಾಪತಿ ಅವರ ನೇರ ಪರಿಚಯ ನನಗೆ ಇತ್ತೀಚಿನದಾದರೂ ಅವರ ಪ್ರಕಾಶನದ ಮೂಲಕ ನನಗೆ ಅವರು ಕೆಲ ದಶಕಗಳಿಂದ ಚಿರಪರಿಚಿತರೇ ಆಗಿದ್ದರು. ಅವರ ಕುಟುಂಬದ ಹಿರಿಯರ ವ್ಯಕ್ತಿತ್ವದಲ್ಲಿನ ದಂತಕತೆಯಂತಹ ಪ್ರಸಂಗಗಳು ಕನ್ನಡ ಸಂಸ್ಕೃತಿ ಚರಿತ್ರೆಯಲ್ಲಿ ವಿಶಿಷ್ಟವಾದಂಥವು. ಎತ್ತರದ ವ್ಯಕ್ತಿ ವೆಂಕಣ್ಣಯ್ಯನವರು, ವಾತ್ಸಲ್ಯ ಮೂರ್ತಿ ರಾಮರಾಯರ ಬಗ್ಗೆ ನಾವು ಕೇಳಿ ತಿಳಿಸಿದ್ದೇನೆ. ಇವರ ಸೋದರ ಸಂಬಂಧಿ ತ.ರಾ. ಸುಬ್ಬರಾಯರ ನಿಕಟ ಪರಿಚಯ ನನಗಿತ್ತು. ಅವರ ಅಂತಃಕರಣದ ಪ್ರೀತಿಯ ಸವಿಯನ್ನು ನಾವು ಅನುಭವಿಸಿದ್ದೇನೆ. ಇಂತಹ ಕುಟುಂಬದ ಹಿನ್ನೆಲೆಯ ಛಾಯಾಪತಿ ಯವರು ನಾವು ಕಂಡ ಸುಸಂಸ್ಕೃತ ವ್ಯಕ್ತಿಗಳಲ್ಲಿ ಒಬ್ಬರು ; ಸ್ನೇಹವನ್ನು ಮೌಲ್ಯವಾಗಿ ಸ್ವೀಕರಿಸಿರುವ ಸರಳ ಜೀವಿ.

ಇಂದು ಪುಸ್ತಕ ಪ್ರಕಟಣೆ ಒಂದು ಉದ್ಯಮವಾಗಿ ರೂಪಾಂತರಗೊಂಡಿದೆ. ವ್ಯಾವಹಾರಿಕವಾಗಿ ಇದು ಬೆಳವಣಿಗೆಯನ್ನು ಸೂಚಿಸುತ್ತದೆನ್ನುವುದು ನಿಜ. ಆದರೆ ಪ್ರಕಾಶನವನ್ನು ಸಂಸ್ಕೃತಿಯ ಒಂದು ಅಂಗವಾಗಿ, ಪುಸ್ತಕ ಸಂಸ್ಕೃತಿಯನ್ನು ಬೆಳೆಸುವ ಪ್ರಯತ್ನವಾಗಿ ಸ್ವೀಕರಿಸಿರುವ ಪ್ರಕಾಶಕರು ಕನ್ನಡದ ಸಂದರ್ಭದಲ್ಲಿ ಬೆರಳೆಣಿಕೆಯಷ್ಟು. ಅಂಥವರಲ್ಲಿ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಛಾಯಾಪತಿಯವರೂ ಒಬ್ಬರು.

ಛಾಯಾಪತಿಯವರು ಈವರೆಗೆ ಒಂದು ಸಾವಿರಕ್ಕೂ ಮಿಕ್ಕು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಅವರ ಪುಸ್ತಕ ಪ್ರಕಟಣೆಯ ಪಟ್ಟಿಯನ್ನು ಗಮನಿಸಿದರೆ ಅವರ ಅಭಿರುಚಿ, ಪುಸ್ತಕ ಸಂಸ್ಕೃತಿಯ ಬಗೆಗಿನ ಅವರ ಕಾಳಜಿ ತಿಳಿಯುತ್ತದೆ. ಕನ್ನಡದ ಮಹತ್ವದ ಲೇಖಕರು, ಸಹೃದಯ ಓದುಗರು ಇವರ ನಡುವಿನ ಸೇತುವೆಯಂತೆ ಇವರ ಪ್ರಕಟಣೆಗಳಿವೆ.

ವಾಣಿಜ್ಯ ಶಾಸ್ತ್ರದ ಸ್ನಾತಕೋತ್ತರ ಪದವೀಧರರಾದ ಛಾಯಾಪತಿ ಅವರಿಗೆ ಪುಸ್ತಕ ಪ್ರಕಟಣೆ ಕೇವಲ ವ್ಯವಹಾರವಲ್ಲ; ಅದನ್ನು ಅವರು ಕನ್ನಡ ಸಂಸ್ಕೃತಿ ಕಟ್ಟುವ ಕೆಲಸ

**ನರಹಳ್ಳಿ ಬಾಲಸುಬ್ರಹ್ಮಣ್ಯ**

ಎಂದು ನಂಬಿದ್ದಾರೆ. ಸ್ನಾತಕೋತ್ತರ ಪದವಿಯ ನಂತರ ಯಾವುದಾದರೂ ಉದ್ಯೋಗ ಹಿಡಿದು ಜೀವನ ನಿರ್ವಹಣೆ ಮಾಡುವುದು ಛಾಯಾಪತಿ ಅವರಿಗೆ ಸುಲಭದ ಹಾದಿಯಾಗಿತ್ತು. ಆದರೆ ಅವರ ಪರಿಸರ, ಅವರ ಅಭಿರುಚಿ ಅವರನ್ನು ಆ ಹಾದಿಹಿಡಿಯಲು ಬಿಡಲಿಲ್ಲ. ಪುಸ್ತಕ ಪ್ರಕಟಣೆಯಂತಹ ಕಠಿಣ ಹಾದಿಯನ್ನು ಅವರು ಆಯ್ಕೆ ಮಾಡಿಕೊಂಡರು. ವೃತ್ತಿ - ಪ್ರವೃತ್ತಿ, ಎರಡೂ ಒಂದೇ ಆಗುವುದು ಅಪರೂಪ. ಅನೇಕ ವೇಳೆ ನಮ್ಮ ವೃತ್ತಿಗೂ ಪ್ರವೃತ್ತಿಗೂ ಸಂಬಂಧವಿರುವುದಿಲ್ಲ. ಛಾಯಾಪತಿ ಈ ವಿಚಾರದಲ್ಲಿ ಎಚ್ಚರದಿಂದ ತಮ್ಮ ಬದುಕಿನ ಸ್ವರೂಪವನ್ನು ರೂಪಿಸಿಕೊಂಡಿದ್ದಾರೆ. ತಮ್ಮ ಪುಸ್ತಕ ಪ್ರೀತಿಯನ್ನೇ ವೃತ್ತಿಯನ್ನಾಗಿಯೂ ಮಾಡಿಕೊಂಡಿದ್ದಾರೆ. ದುಡಿಮೆ ಅವರಿಗೆ ಕೇವಲ ಹಣಸಂಪಾದನೆಯ ಮಾರ್ಗವಾಗದೆ ಆತ್ಮತೃಪ್ತಿಯ ಸಾಧನವೂ ಆಗಿದೆ.

ನನ್ನ ಗೆಳೆಯರ ಪುಸ್ತಕಗಳನ್ನು ಅವರು ಪ್ರಕಟಿಸುವಾಗ ಪುಸ್ತಕ ಹೇಗೆ ಪ್ರಕಟಗೊಳ್ಳಬೇಕೆಂಬ ಬಗ್ಗೆ ಅವರು ವಹಿಸುವ ಕಾಳಜಿಯನ್ನು ನಾನು ಗಮನಿಸಿದ್ದೇನೆ. ಹತ್ತಾರು ಸಲ ದೂರವಾಣಿ ಕರೆ ಮಾಡುತ್ತಾರೆ; ಸ್ವತಃ ಅವರೇ ಮೈಸೂರಿನಿಂದ ಬೆಂಗಳೂರಿಗೆ ಬಂದು ಲೇಖಕರೊಡನೆ ಚರ್ಚಿಸುತ್ತಾರೆ. ಸ್ವತಃ ಲೇಖಕರಾದ ಅವರು ಲೇಖಕರ ಅಪೇಕ್ಷೆಯನ್ನು ಅರ್ಥಮಾಡಿಕೊಂಡು, ತಮ್ಮ ಅನುಭವವನ್ನು ಅದಕ್ಕೆ ಧಾರೆಯೆರೆದು ಒಟ್ಟಾರೆ ಪುಸ್ತಕ ಚಂದ ಬರುವ ಹಾಗೆ ಆಸಕ್ತಿ ವಹಿಸುತ್ತಾರೆ. ಪುಸ್ತಕದ ಹೂರಣವಷ್ಟೇ ಅದರ ವಿನ್ಯಾಸವೂ ಮುಖ್ಯ ಎಂಬುದು ಅವರ ನಂಬಿಕೆ.

ಒಮ್ಮೆ ನಾನು ಗೆಳೆಯ ಕೊಡಸೆ ಅವರೊಂದಿಗೆ ಅವರ ಮನೆಗೆ ಹೋಗಿದ್ದೆ. ಆಸಕ್ತ ಗೆಳೆಯರನ್ನು ಆಹ್ವಾನಿಸಿ ನಮ್ಮ ಭೇಟಿ ಒಂದು ಸಾಹಿತ್ಯಗೋಷ್ಠಿಯಾಗುವಂತೆ ಅವರು ವ್ಯವಸ್ಥೆ ಮಾಡಿದ್ದರು. ಅವರ ಶ್ರೀಮತಿಯವರ ಅತಿಥಿ ಸತ್ಕಾರವೂ ನೆನಪಿಸಿಕೊಳ್ಳುವಂಥದು. ಒಮ್ಮೆ ಅವರ ಗೆಳೆತನದ ತೆಕ್ಕೆಗೆ ಬಂದರೆ ಉದ್ದಕ್ಕೂ ಪ್ರೀತಿ ವಿಶ್ವಾಸದಿಂದ ಇಡೀ ಕುಟುಂಬ ಗೆಳೆಯರನ್ನು ನಡೆಸಿಕೊಳ್ಳುತ್ತದೆ. ಸ್ನೇಹವನ್ನು ಒಂದು ಮೌಲ್ಯವಾಗಿ ಸ್ವೀಕರಿಸಿರುವ ಛಾಯಾಪತಿಯವರಿಗೆ ಎಪ್ಪತ್ತರಲ್ಲೂ ಇಪ್ಪತ್ತರ ಉತ್ಸಾಹ ಇದೆ. ಇಂಥ ಸದಭಿರುಚಿಯ ಆಪ್ತ ಗೆಳೆಯರಿಗೆ ಶುಭವಾಗಲಿ.

## ಹಿರಿಯ ಪ್ರಕಾಶಕ ಮಿತ್ರ

1995ರ ಅಸುಪಾಸು ಇರಬೇಕು. ಪ್ರಜಾಮತ ವಾರಪತ್ರಿಕೆಯಿಂದ ಕನ್ನಡಪ್ರಭ ದಿನಪತ್ರಿಕೆಯ ಪುರವಣಿ ವಿಭಾಗದಲ್ಲಿ ಕಲಾವಿದನಾಗಿ ಕೆಲಸಕ್ಕೆ ಸೇರಿ 2-3 ವರ್ಷ ಆಗಿತ್ತಷ್ಟೆ. ಪತ್ರಿಕೆಯ, ಪುಸ್ತಕಗಳ ವಿನ್ಯಾಸದಲ್ಲಿ ಹಾಗೆಯೇ ಮುದ್ರಣ ತಂತ್ರಜ್ಞಾನವನ್ನು ಬದಲಾವಣೆಯಾಗುತ್ತಿದ್ದ ಸಮಯ. ಆಗ ಮೂರು ವರ್ಣದ ಪ್ರಿಂಟಿಂಗ್ ತಂತ್ರಜ್ಞಾನದಿಂದ ನಾಲ್ಕು ವರ್ಷದ (CMYK) ಮುದ್ರಣಕ್ಕೆ ನಿಧಾನವಾಗಿ ತೆರೆದುಕೊಳ್ಳುತ್ತಿದ್ದ ವೇಳೆಯಲ್ಲಿ ಕೆಲವೇ ಕೆಲವು ಪ್ರಕಾಶಕರು ಪುಸ್ತಕಗಳ ಮುಖಪುಟವನ್ನು ಮಾತ್ರ ಆಫ್‌ಸೆಟ್‌ನಲ್ಲಿ ಮುದ್ರಿಸಿ ಪ್ರಯತ್ನಿಸುತ್ತಿದ್ದರು. ಆಗ ಸುಮಾರು ಐವತ್ತರಿಂದ ಎಪ್ಪತ್ತೈದು ಪುಸ್ತಕಗಳಿಗೆ ಮುಖಪುಟ ವಿನ್ಯಾಸ ಮಾಡಿದ್ದೆನೇನೋ. ಈ ಕ್ಷೇತ್ರಕ್ಕೆ ಇನ್ನೂ ಹೊಸಬನಾಗಿದ್ದರಿಂದ ಕೆಲವೇ ಕೆಲವು ಪ್ರಕಾಶಕರ ಪರಿಚಯ ಇತ್ತಷ್ಟೆ ಹೆಸರಾಂತ ಮುಖಪುಟ ಕಲಾವಿದರೆಲ್ಲಾ ಬ್ಯುಸಿ ಇದ್ದಿದ್ದರಿಂದಲೋ, ಕೆಲವು ಹೊಸ ಪ್ರಕಾಶಕರು ಮುಖಪುಟ ವಿನ್ಯಾಸಕ್ಕೆ ನನ್ನನ್ನು ಸಂಪರ್ಕಿಸುತ್ತಿದ್ದರು.

ಇಂಥ ಸಂದರ್ಭದಲ್ಲಿಯೇ ಒಂದು ಮಧ್ಯಾಹ್ನ ಕನ್ನಡಪ್ರಭದ ಕಲಾವಿಭಾಗಕ್ಕೆ ನನ್ನನ್ನು ಕೇಳಿಕೊಂಡು ಬಂದವರು ಎತ್ತರ ನಿಲುವಿನ, ಗಂಭೀರ ನಡಿಗೆಯ, ಮೆಲು ಮಾತಿನ, ಸರಳ-ಹಸನ್ಮುಖಿ ವ್ಯಕ್ತಿತ್ವದ, ಶ್ರೀಯುತ ಛಾಯಾಪತಿಯವರು. ಹಾಗೆ ಆದ ಪರಿಚಯಕ್ಕೆ ಈಗ ಹೆಚ್ಚೂ ಕಡಿಮೆ ಇಪ್ಪತ್ತು ವರ್ಷ. ಇಷ್ಟು ವರ್ಷಗಳಲ್ಲಿ ಕನ್ನಡ ಸಾಹಿತ್ಯಲೋಕಕ್ಕೆ ಎಷ್ಟು ಪುಸ್ತಕಗಳು ಜಮೆಗೊಂಡಿದೆಯೋ! ಲೆಕ್ಕ ಇಟ್ಟವರಾರು? ಮೈಸೂರು ದಸರಾದಲ್ಲಿ ಎಷ್ಟು ಜನ ಸಾಗರ ಹರಿದಿದೆಯೋ ಬಲ್ಲವರಾರು?

ಅರಮನೆ ನಗರಿ ಮೈಸೂರು ಎಷ್ಟು ಕಲಾತ್ಮಕವೋ ಅಷ್ಟೇ ಕಲಾತ್ಮಕ ವ್ಯಕ್ತಿ ಇವರು. ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯಿಂದ ಶ್ರೇಷ್ಠ ಕೃತಿಗಳೇ ಪ್ರಕಟಗೊಂಡಿದ್ದರೆ ಅದರ ಹಿಂದಿನ ರೂವಾರಿ ಶ್ರೀಯುತ ಛಾಯಾಪತಿಯವರು. ಅವರ ಆಯ್ಕೆಯೇ ಹಾಗೆ ಅವರಂತೆ Class, ಹಳೆಯ - ಸಮಕಾಲೀನ ಕನ್ನಡದ ಸರ್ವಶ್ರೇಷ್ಠ

**ಸುಧಾಕರ ದರ್ಬೆ**

ಲೇಖಕರ ನೂರಾರು ಕೃತಿಗಳನ್ನು ಅಚ್ಚುಕಟ್ಟಾಗಿ ಪ್ರಕಟಿಸಿ ಕನ್ನಡದ ಮನ, ಮನೆಗೂ ತಲುಪಿಸುವ ಕನ್ನಡದ ಕ್ಲಾಸ್ ಪ್ರಕಾಶಕರು. ಇವರ ಹಲವಾರು ಶ್ರೇಷ್ಠ ಪ್ರಕಟಣೆಗೆ ಮುಖಪುಟ ರಚನೆ ಮಾಡುವ ಅವಕಾಶ ಸಿಕ್ಕಿದ್ದು ನನ್ನ ಪುಣ್ಯ.

ಯಾವುದೇ ಹೊಸ ಪುಸ್ತಕ ಪ್ರಕಟಣೆಗೆ ಮುನ್ನ ಛಾಯಾಪತಿಯವರು ತೋರುವ ಕಾಳಜಿಯೇ ವಿಶಿಷ್ಟ. ಅತ್ಯುತ್ತಮ ಕೃತಿಗಳನ್ನು ಆಯ್ಕೆ ಮಾಡುವುದರಿಂದ ಹಿಡಿದು ಮುಖಪುಟ ರಚನೆ, digital ಮುದ್ರಣ, ಕೊನೆಗೆ ಆಫ್‌ಸೆಟ್ ಮುದ್ರಣದವರೆಗೆ ಅಚ್ಚುಕಟ್ಟು ಮತ್ತು cool ಆಗಿ ಕಾರ್ಯ ನಿರ್ವಹಿಸುವ ರೀತಿ ಬೆರಗು ಹುಟ್ಟಿಸುವಂಥದ್ದು. ಅವರಿಗೆ ಇಷ್ಟವಾದ ಲೇಖಕರ ಕೃತಿಯನ್ನು ಪ್ರಕಟಿಸಲು ಮನಸ್ಸು ಮಾಡಿದರೆ ಅಲ್ಲೂ ಅವರಿಗೆ ಯಶಸ್ಸು ಕಟ್ಟಿಟ್ಟದ್ದು. ಈ ಸಂದರ್ಭದಲ್ಲಿ ಶ್ರೀ ರವಿ ಬೆಳಗೆರೆಯವರ ಕೃತಿಯನ್ನು ಪ್ರಕಟಿಸುವಾಗಿನ ಒಂದು ಘಟನೆ ನೆನಪಾಗುತ್ತಿದೆ. ಬೆಳಗೆರೆಯವರು ತಮ್ಮದೇ ಭಾವನಾ ಪ್ರಕಾಶನದ ಮೂಲಕ ತಮ್ಮ ಎಲ್ಲಾ ಕೃತಿಗಳನ್ನು ಪ್ರಕಟಿಸುತ್ತಾರೆ. ಛಾಯಾಪತಿಯವರಿಗೆ ಎಂದೋ, ಯಾವುದೋ ಸಮಾರಂಭದಲ್ಲಿ ಸಿಕ್ಕಾಗ ಪುಸ್ತಕ ಪ್ರಕಟಿಸಲು ಅನುಮತಿ ಕೊಡುವ ಬಗ್ಗೆ ಮಾತು ಕೊಟ್ಟಿದ್ದರಂತೆ ಬೆಳಗೆರೆಯವರು. ಛಾಯಾಪತಿಯವರಿಗೂ ಅವರ ಪುಸ್ತಕ ಪ್ರಕಟಿಸಲೇಬೇಕು ಎಂಬ ಸಾತ್ವಿಕ ಹಠ. ಹಾಗಾಗಿ ಬೆಂಗಳೂರಿಗೆ ಬಂದಾಗಲೆಲ್ಲ ನಿರಂತರವಾಗಿ ಸಂಪರ್ಕಿಸುತ್ತಲೇ ಇದ್ದರು. ಬೆಳಗೆರೆಯವರು ತುಂಬಾ ಬ್ಯುಸಿ ಇರುತ್ತಿದ್ದರಿಂದಲೋ ಸಂಪರ್ಕಕ್ಕೆ ಸರಿಯಾಗಿ ಸಿಗುತ್ತಿರಲಿಲ್ಲ. ನನಗೂ ಛಾಯಾಪತಿಯವರಿಗೆ ಅವರು ಅನುಮತಿ ಕೊಡಲಾರರೇನೋ ಎಂದು ಅನಿಸುತ್ತಿತ್ತು. ಸ್ವಂತ ಪ್ರಕಾಶನ ಸಂಸ್ಥೆ ಬಿಟ್ಟು ಬೇರೆ ಪ್ರಕಾಶಕರಿಗೆ ಪ್ರಕಟಿಸಲು ಅನುಮತಿ ಕೊಡುವುದು ಕಷ್ಟ ಅಂಥ ನನ್ನ ಅಭಿಪ್ರಾಯವಾಗಿತ್ತು. ಹೀಗಿದ್ದ ಒಂದು ದಿನ ನನಗೆ ದೂರವಾಣಿಯಲ್ಲಿ, 'ಬೆಳಗೆರೆ ಸಿಕ್ಕರು... 'ಪಾಪಂ ಹೇಳಿದ ಕಥೆ...' ಪುಸ್ತಕ ಪ್ರಕಟಣೆಗೆ ಅನುಮತಿ ಕೊಟ್ಟಿದ್ದಾರೆ... ಮುಖಪುಟ ಸಿದ್ಧಮಾಡಿ' ಅಂದಾಗ ನನಗೆ ನಿಜಕ್ಕೂ ಆಶ್ಚರ್ಯ ಮತ್ತು ಖುಷಿ ಒಟ್ಟಿಗೇ ಆಯ್ತು. ಒಂದು ಲೇಖಕ - ಪ್ರಕಾಶಕ ಇನ್ನೊಬ್ಬ ಲೇಖಕ - ಪ್ರಕಾಶಕರಿಗೆ ಪ್ರಕಟಣೆಯ ಅನುಮತಿ ಕೊಟ್ಟದ್ದು, ಇನ್ನೊಂದು ಪ್ರಕಟಿಸಲೇಬೇಕು ಎಂಬ ಪ್ರೀತಿಯಿಂದ ಕಟ್ಟುಬಿದ್ದದ್ದು. ಎರಡೂ ನನಗೆ ವಿಶೇಷವೇ. ಆ ದೃಷ್ಟಿಯಲ್ಲಿ ಛಾಯಾಪತಿಯವರದ್ದು 'ಛಲಪತಿ' ವ್ಯಕ್ತಿತ್ವ.

'ಸುಧಾಕರ್, ನಾನು ಮಂಡ್ಯ ತಲುಪಿದ್ದೇನೆ... ನಾನು ಮದ್ದೂರು reach ಆಗಿದ್ದೇನೆ.... ಕೆಂಗೇರಿ ಬಿಟ್ಟು ನಾಯಿಂಡ ಹಳ್ಳಿ ಹತ್ರ ಬರ್‍ತಾ ಇದ್ದೇನೆ... ಇನ್ನೇನು ಇಪ್ಪತ್ತು ನಿಮಿಷದಲ್ಲಿ ನಿಮ್ಮನೇಲೇ ಇರ್‍ತೇನೆ... ಆಫೀಸಿಗೆ ಹೊರಟುಬಿಡ್ಬೇಡಿ... ಬಂದ್ಬಿಟ್ಟೆ...' ಅನ್ನುವಾಗ ನನ್ನಲ್ಲಿ ಒಂದು ಸಣ್ಣ ಚಡಪಡಿಕೆ. ಅವರು ಒಂದು ಮುಖಪುಟ ನೋಡಿ 'ಚೆನ್ನಾಗಿದೆ... wonderful...' ಅನ್ನುವವರೆಗೂ ಆತಂಕ. ಅದು ಮುದ್ರಣ

ಗೊಂಡು ಉತ್ತಮ ಪ್ರತಿಕ್ರಿಯೆ ಬಂದಾಗಲೆಲ್ಲ ನನಗೆ ಫೋನ್ ಮಾಡಿ ಖುಷಿ ಹಂಚಿಕೊಳ್ಳುವಾಗ ನನಗೆ ಅವರ ಹಿಂದಿನ ಅವರ ಶ್ರಮ ನೆನಪಾಗುತ್ತೆ. ಎಪ್ಪತ್ತರ ವಯಸ್ಸಿನಲ್ಲೂ ಅವರ ಕುಂದದ ಉತ್ಸಾಹ ನಿಜಕ್ಕೂ ಬೆರಗು ಮೂಡಿಸುತ್ತೆ. ಮೈಸೂರಲ್ಲಿ DTP ಮಾಡಿಸಿ ಬೆಂಗಳೂರಿಗೆ ಬಂದು ಮುಖಪುಟ ತಗೊಂಡು, ಅದರ digital ಕಾಪಿಯನ್ನು ಲೇಖಕರಿಗೆ ತೋರಿಸಿ, ಮುದ್ರಣಕ್ಕೆ ವ್ಯವಸ್ಥೆ ಮಾಡಿ ಪುಸ್ತಕ Print ಆಗಿ ಮಾರಾಟ ಮಡೋವರೆಗೆ ಕಡಿಮೆ ಶ್ರಮ ಸಾಕೆ?!

ಕಳೆದ ಇಪ್ಪತ್ತು ವರ್ಷಗಳಲ್ಲಿ ಮುದ್ರಣದಿಂದ ಹಿಡಿದು ವಿನ್ಯಾಸ ತಂತ್ರಾಂಶದವರೆಗೆ ಎಲ್ಲವೂ ಬದಲಾವಣೆಯಾಗಿದೆ. ವಿದೇಶಿ ಮುದ್ರಣ ತಂತ್ರಜ್ಞಾನಕ್ಕೆ ಸರಿಸಾಟಿಯಾಗಿ ನಮ್ಮ ಕನ್ನಡ ಪುಸ್ತಕಗಳೂ ಮುದ್ರಣಗೊಳ್ಳುತ್ತಿವೆ. ಹಾಗೆಯೇ ಛಾಯಾಪತಿಯವರೂ ಕೂಡಾ ತಮ್ಮ ಪುಸ್ತಕಗಳನ್ನು class ಅನ್ನುವಂತೆ ಪ್ರಕಟಿಸುತ್ತಿದ್ದಾರೆ. ಮುದ್ರಣಗೊಂಡ ಬಳಿಕ ಒಂದು ಪ್ರತಿಯನ್ನು ನನ್ನ ಕೈಲಿಟ್ಟು, 'ಹೇಗೆ ಬಂದಿದೆ?' ಎಂದು ಕೇಳುವಾಗಲೆಲ್ಲ ಅವರ ಕಣ್ಣಲ್ಲಿ ನಕ್ಷತ್ರ ಹೊಳೆಯುವುದನ್ನು ನೋಡುವುದೇ ಖುಷಿ. ಪ್ರಕಾಶಕರು ಇಷ್ಟು ಆಸ್ಥೆಯಿಂದ ಪ್ರಕಟಿಸುತ್ತಿದ್ದರೆ ಯಾವ ಲೇಖಕರು ತಾನೇ ಇವರ ಪ್ರಕಾಶನದಲ್ಲಿ ಪುಸ್ತಕ ಪ್ರಕಟಿಸಲು ಹಿಂದೇಟು ಹಾಕುತ್ತಾರೆ? ಅಂತೆಯೇ ಕನ್ನಡದ ಶ್ರೇಷ್ಠ ಸಾಹಿತಿಗಳ ಶ್ರೇಷ್ಠ ಕೃತಿಗಳೆಲ್ಲ ಇವರ ಪ್ರಕಾಶನ ಸಂಸ್ಥೆಯಲ್ಲಿ ಪ್ರಕಟಗೊಂಡಿವೆ. ನನಗೂ ಇವುಗಳಿಗೆಲ್ಲ ಮುಖಪುಟ ರಚನೆ ಮಾಡುವ ಅವಕಾಶ ಒದಗಿಸಿಕೊಡುತ್ತಲೇ ಇದ್ದಾರೆ. ನಾನೂ ಸಾಧ್ಯವಾದಷ್ಟು ಸುಂದರವಾಗಿ ವಿನ್ಯಾಸಗೊಳಿಸಲು ಪ್ರಯತ್ನಪಡುತ್ತಲೇ ಇದ್ದೇನೆ. ಪ್ರಸ್ತುತ ಕಂಪ್ಯೂಟರ್ ವಿನ್ಯಾಸದ ಜ್ಞಾನ ಹಳ್ಳಿ - ಡೆಲ್ಲಿ ಅನ್ನುವ ಭೇದವೇ ಇಲ್ಲದೆ, ಎಲ್ಲೆಡೆ ವಿನ್ಯಾಸಗಾರರೇ ತುಂಬಿರುವ ಈ ಕಾಲದಲ್ಲಿ ನಾನೇ ಮುಖ ಪುಟ ಮಾಡಬೇಕು ಅನ್ನುವ ಅವರ ಪ್ರೀತಿಗೆ ನಾನು ಚಿರಋಣಿ.

ಮುಖಪುಟದ ಚಿತ್ರ, ವಿನ್ಯಾಸ, ವರ್ಣದ ವಿಷಯದಲ್ಲಿ ಯಾವತ್ತೂ ಹಸ್ತಕ್ಷೇಪ ಮಾಡದೆ, ಕಾರಣಾಂತರಗಳಿಂದ ತಡವಾದಾಗಲೂ, ಫೋನ್ ಎತ್ತದೇ ಇದ್ದಾಗಲೂ ಒಂಚೂರು upset ಆಗದೆ, ಅದೇ ಪ್ರೀತಿ ತೋರುವ ಇವರದು ನಿಷ್ಕಳಂಕ ಮನಸ್ಸು.

ಇಂಥ ಮೇರು ವ್ಯಕ್ತಿಯ ಪ್ರಕಟಣಾ ಸಂಸ್ಥೆಗೆ ವಿನ್ಯಾಸ ಮಾಡುವ, ಬೆಂಗಳೂರಿಗೆ ಬಂದಾಗಲೆಲ್ಲ ಒಂದಷ್ಟು ಹೊತ್ತು ಹರಟುವ ಅವಕಾಶ ದೊರೆಯುತ್ತಿರುವುದೇ ನನ್ನ ಸುಯೋಗ. ಇಪ್ಪತ್ತು ವರ್ಷಗಳ ಹಿಂದೆ ನೋಡಿದ ಛಾಯಾಪತಿಯವರು ಈಗಲೂ ಹಾಗೆಯೇ ಇದ್ದಾರೆ. ಅವರು ಪ್ರಕಟಿಸುತ್ತಿರುವ ಪುಸ್ತಕಗಳ ಸಂಖ್ಯೆ ದಿನೇ ದಿನೇ ವೃದ್ಧಿಸುತ್ತಲೇ ಇದೆ. ಖ್ಯಾತ ಪ್ರಕಾಶಕರ ಪಟ್ಟಿಯಲ್ಲಿ ಇವರ ಹೆಸರೇ ಮುಂಚೂಣಿಯಲ್ಲಿದೆ. ಸಾಕಷ್ಟು ಪ್ರಶಸ್ತಿ ಪುರಸ್ಕಾರಗಳು ಅವರನ್ನು ಅರಸಿ ಬಂದಿದೆ. ಆದರೆ ನನ್ನ ದೃಷ್ಟಿಯಲ್ಲಿ ಈಗಲೂ ಇದೇ ಇಪ್ಪತ್ತು ವರ್ಷ ಹಿಂದಿನ ಅದೇ ಮುಗುಳು

ನಗುವಿನ ಛಾಯಾಪತಿಯವರಲ್ಲಿ ಒಂಚೂರೂ ವ್ಯತ್ಯಾಸ ಆಗಿಲ್ಲ. ಅದೇ ಗಂಭೀರ ನಡಿಗೆ. ಮುಖದ ಮಂದಹಾಸ. ವಿಶಾಲ ನೀಲಾಕಾಶದಂತೆ ಶುಭ್ರ. ಹೆಚ್ಚಾಗಿ ತೆಳು ನೀಲ ಶರ್ಟ್ ತೊಡುವ ಇವರು ನಿಜವಾಗಿಯೂ ನೀಲ(ಳ) ಕಾಯ. ವ್ಯವಸ್ಥೆ ಇವರನ್ನು 'tall man' ಎಂದು pun ಮಾಡುತ್ತಿದ್ದುದು ಇನ್ನೂ ನೆನಪಿದೆ! ಪ್ರಕಾಶಕರಲ್ಲಿ ಇವರಿಗೆ ಎತ್ತರದ ಸ್ಥಾನ.

ಇಂಥ 'tall man'ಗೆ ಈಗ ಎಪ್ಪತ್ತರ ಸಂಭ್ರಮ. ಈ ಶುಭ ಸಂದರ್ಭದಲ್ಲಿ ಅಕ್ಷರರೂಪಕ್ಕೆ ಚಿತ್ರರೂಪ ಕೊಡುವ ಈ ಕಿರಿಯ ಕಲಾವಿದನಿಗ ಅಕ್ಷರ ಬರೆಯಲು ಪ್ರೇರೇಪಿಸಿದ ಈ ಮೇರು ವ್ಯಕ್ತಿಯಿಂದ ಇನ್ನಷ್ಟು ಶ್ರೇಷ್ಠ ಪುಸ್ತಕಗಳು ಪ್ರಕಟಗೊಳ್ಳಲಿ. ಸ್ವತಃ ಒಳ್ಳೆಯ ಬರಹಗಾರರೂ ಆಗಿ ಸಾಹಿತ್ಯ ಕೃಷಿ ಮಾಡುತ್ತಾ ನೂರಾರು ವರ್ಷ ಇವರ ಸಾಹಿತ್ಯ ಸೇವೆ ಹೀಗೇ ಮುಂದುವರಿಯಲಿ. ಇವರ ಖ್ಯಾತಿ ನಾಡಿನೆತ್ತರಕ್ಕೆ ಮತ್ತಷ್ಟು ತಲುಪಿ ಕನ್ನಡದ ಶ್ರೇಷ್ಠ ಮಾನ- ಸನ್ಮಾನಗಳೆಲ್ಲ ಇವರಿಗೆ ದೊರಕಲಿ ಅನ್ನೋ ಹಾರೈಕೆ ಜೊತೆಗೆ ಛಾಯಾಪತಿಯವರಿಗೆ, ಅವರ ಶ್ರೀಮತಿಯವರಿಗೆ ಮತ್ತು ಅವರ ಕುಟುಂಬಕ್ಕೆ ಈ ಕಿರಿಯ ಕಲಾವಿದನ ಶುಭಾಭಿನಂದನೆಗಳು.

# ಸಹೃದಯಿ ಪ್ರಕಾಶಕ

2009ನೇ ಇಸವಿಯಲ್ಲಿ ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರ 'ಚದುರಿದ ಚಿಂತನೆಗಳು' ಹಾಗೂ 'ಚತುರಂಗ' ಈ ಎರಡೂ ಪುಸ್ತಕಗಳನ್ನು ಸ್ವಾಯತ್ತತೆ ಪಡೆದಿರುವ ನಮ್ಮ ಕಾಲೇಜಿನ ಪದವಿ ತರಗತಿಗಳಿಗೆ ಪಠ್ಯವಾಗಿ ಬಳಸಿಕೊಂಡಿದ್ದೆವು. ಲೇಖಕರ ಅನುಮತಿಯನ್ನು ಪಡೆಯಲು ಜಿ.ಎಸ್.ಎಸ್. ಅವರನ್ನು ಸಂಪರ್ಕಿಸಿದಾಗ ಅವರು 'ನನ್ನ ಒಪ್ಪಿಗೆ ಇದೆ, ಆ ಪುಸ್ತಕಗಳ ಪ್ರಕಾಶಕರು ಮೈಸೂರಿನಲ್ಲೇ ಇದ್ದಾರೆ. ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಪ್ರಕಾಶಕರಾದ ಶ್ರೀಯುತ ಟಿ.ಎಸ್. ಛಾಯಾಪತಿಯವರನ್ನು ಭೇಟಿ ಮಾಡಿ ಪುಸ್ತಕಗಳನ್ನು ಪಡೆದುಕೊಳ್ಳಿ ಎಂದು ಹೇಳಿದರು. ಮೊಟ್ಟ ಮೊದಲು ಶ್ರೀ ಛಾಯಾಪತಿಯವರ ಪರಿಚಯ ನನಗಾದ ಸಂದರ್ಭ ಇದು. ಶ್ರೀಯುತರು ಜಿ.ಎಸ್.ಎಸ್. ಅವರ ಪ್ರಿಯಗುರುಗಳಾದ ಕನ್ನಡ ಸಾಹಿತ್ಯ ಭೀಷ್ಮ ಎಂದೇ ಖ್ಯಾತಿಯಾಗಿದ್ದ ದಿವಂಗತ ತ.ಸು. ಶಾಮರಾಯರ ಸುಪುತ್ರರು.

1950ರಲ್ಲಿ ತ.ಸು. ಶಾಮರಾಯರು ತಮ್ಮ ಹಿರಿಯ ಸಹೋದರ ಶ್ರೀಯುತ ಟಿ.ಎಸ್. ವೆಂಕಣ್ಣಯ್ಯನವರ ಸ್ಮರಣಾರ್ಥ ಸ್ಥಾಪಿಸಿದ ಈ ಗ್ರಂಥಮಾಲೆಯ ಸಾರಥ್ಯವನ್ನು 1968ರಿಂದಲೂ ಅತ್ಯಂತ ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿರುವವರು ಶ್ರೀಯುತ ಟಿ.ಎಸ್. ಛಾಯಾಪತಿಯವರು.

ತಮ್ಮ ತಂದೆಯವರು ಸ್ಥಾಪಿಸಿದ ಈ ಗ್ರಂಥಮಾಲೆಯನ್ನು ನಿರ್ವಹಿಸಿಕೊಂಡು ಬರುವಲ್ಲಿ ಶ್ರೀ ಛಾಯಾಪತಿಯವರು ತಮ್ಮ ಆದರ್ಶವನ್ನು ಎತ್ತಿ ಹಿಡಿದಿದ್ದಾರೆ. ವಾಸ್ತವ ಏನೇ ಇದ್ದರೂ, ಮನುಷ್ಯನ ಎದುರಿನಲ್ಲಿ ಒಂದು ಆದರ್ಶ ಇರಬೇಕು. ಈ ಆದರ್ಶವನ್ನು ಇರಿಸಿಕೊಂಡಿತೆನ್ನುವ ಕಾರಣದಿಂದಲೇ ಮನುಕುಲ ಪ್ರಗತಿಯನ್ನು ಸಾಧಿಸಿದೆ, ಅಭ್ಯುದಯವನ್ನು ಕಂಡಿದೆ.

ಪ್ರತಿಯೊಬ್ಬ ಮನುಷ್ಯನಲ್ಲಿಯೂ ಸಮೀಪದ ದೃಷ್ಟಿ ಇರುವಂತೆ ದೂರದ ದೃಷ್ಟಿಯೂ ಇರಬೇಕು. ಸಮೀಪ ದೃಷ್ಟಿಯೇ ವಾಸ್ತವ, ದೂರ ದೃಷ್ಟಿಯೇ ಆದರ್ಶ. ಮನುಷ್ಯನ ಜೀವನ ಪೂರ್ಣವೆನಿಸಬೇಕಾದರೆ ಅವನಲ್ಲಿ ವಾಸ್ತವ ಮತ್ತು ಆದರ್ಶ

**ಪ್ರೊ. ಎಸ್.ಪಿ. ಉಮಾದೇವಿ**

ಎರಡೂ ಇರಬೇಕು. ಈ ನಿಟ್ಟಿನಲ್ಲಿ ಛಾಯಾಪತಿಯವರು ತಮ್ಮ ಯೋಜನೆಗಳನ್ನು ಮುಂದಿಟ್ಟುಕೊಂಡು ಹಲವಾರು ಹಿರಿಯ ಲೇಖಕರ ಬೆಂಬಲದೊಂದಿಗೆ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಬಂಗಾರದ ಬೆಳೆಯ ಫಸಲನ್ನು ನೀಡುವಲ್ಲಿ ಸಫಲರಾಗಿದ್ದಾರೆ. ಶ್ರೀಯುತರೇ ಹೇಳಿರುವಂತೆ 'ನನ್ನ ತಂದೆಯವರ ಆದರ್ಶಕ್ಕೆ ಚ್ಯುತಿ ಬರದಂತೆ ಸದಭಿರುಚಿಯ ಗ್ರಂಥಗಳನ್ನು ಪ್ರಕಟಿಸುತ್ತಿದ್ದೇನೆ' - ಇದು ಛಾಯಾಪತಿಯವರ ಮೇರು ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ.

ತನ್ನ ಬದುಕಿನ ಪ್ರಯೋಜನ ಪಡೆದುಕೊಳ್ಳಬೇಕೆನ್ನುವ ಮನುಷ್ಯನು ತನ್ನಲ್ಲಿ ಲವಲವಿಕೆ ಇರಿಸಿಕೊಳ್ಳಬೇಕು, ಉತ್ಸಾಹ ತಂದುಕೊಳ್ಳಬೇಕು, ಹುಮ್ಮಸ್ಸು ತುಂಬಿಕೊಳ್ಳ ಬೇಕು, ಜನರನ್ನು, ಜಗತ್ತನ್ನು ಹೊಸ ದೃಷ್ಟಿಯಿಂದ ನೋಡಬೇಕು, ಆಗ ಪರಿಸರ ಆತನಿಗೆ ಅಪರಿಮಿತ ಆನಂದವನ್ನು ನೀಡುತ್ತದೆ.

ಪ್ರತಿಯೊಬ್ಬ ಮನುಷ್ಯನಲ್ಲಿಯೂ ಅಪರಿಮಿತ ಸಾಮರ್ಥ್ಯಗಳಿರುತ್ತವೆ. ಮುಚ್ಚಿದ ಅಂತರ್ಜಲದಂತೆ ಅವು ಕಣ್ಣಿಗೆ ಗೋಚರಿಸುವುದಿಲ್ಲ. ನೆಲವನ್ನು ಸ್ವಲ್ಪ ಕೆದಕಿದರೆ ಸಾಕು, ಆ ಅಂತರ್ಜಲ ಪುಟಿದು ಹೊರಬೀಳುತ್ತದೆ. ಮನುಷ್ಯನ ಒಳಗಿನ ಶಕ್ತಿಗಳು ಕೂಡ ಈ ಅಂತರ್ಜಲದಂತೆ. ನಾವು ಅವುಗಳನ್ನು ಶೋಧಿಸಿದರೆ, ಆಯತ ಸಮಯದಲ್ಲಿ ಅವು ನಮ್ಮ ನೆರವಿಗೆ ಬಂದೇ ಬರುತ್ತವೆ. ಈ ನಿಟ್ಟಿನಲ್ಲಿ ಎಂ.ಕಾಂ. ಪದವೀಧರರಾದ ಛಾಯಾಪತಿಯವರು ಪ್ರಕಾಶಕರಾಗಿಯಷ್ಟೇ ಅಲ್ಲ, ಪ್ರತಿಭಾನ್ವಿತ ಲೇಖಕರಾಗಿಯೂ, ಹಲವಾರು ಪ್ರಶಸ್ತಿಗಳ ಸರದಾರರಾಗಿಯೂ ಇರುವ ಶ್ರೀಯುತರು ನಿಗರ್ವಿಯೂ, ವಿನಯಶೀಲರೂ ಹೌದು. ಎಲೆ ಮರೆಯ ಕಾಯಿಯಂತಿರುವ ಛಾಯಾಪತಿಯವರ ಸರಳ - ಸಜ್ಜನಿಕೆ, ವಿನಯ - ವಿವೇಕ ಗುಣಗಳು ಅವರ ವ್ಯಕ್ತಿತ್ವದ ಮತ್ತೊಂದು ಮುಖವೆನ್ನಬಹುದು.

ಇಂದಿನ ಪೈಪೋಟಿಯುತ ವ್ಯವಸ್ಥೆಯಲ್ಲಿಯೂ ಗ್ರಂಥಮಾಲೆಯ ಜವಾಬ್ದಾರಿ ಹೊತ್ತು, ಮುನ್ನಡೆಸುವ ಪಣತೊಟ್ಟು, ಯಶಸ್ವಿಯಾಗಿ, ಸಾಹಿತ್ಯ ಲೋಕದ ಆರಾಧ್ಯ ದೇವತೆಯ ಕೊರಳಿಗೆ ನವರತ್ನಗಳ ಕಂಠಿಹಾರವನ್ನು ತೊಡಿಸಿದ ಮೇರು ಪರ್ವತ ಛಾಯಾಪತಿಯವರಿಗೆ 1999ರಲ್ಲಿ ರಾಜ್ಯ ಸರ್ಕಾರ 'ಅತ್ಯುತ್ತಮ ಪ್ರಕಾಶಕ' ಎಂಬ ರಾಜ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿರುವುದು, ಕನ್ನಡಿಗರಾದ ನಾವೆಲ್ಲ ಹೆಮ್ಮೆ ಪಡುವ ವಿಚಾರವಾಗಿದೆ.

ವಿವೇಕ - ವಿವೇಚನೆಗಳಿಂದ ಬದುಕುವುದಕ್ಕೆ ಬಹು ದೊಡ್ಡ ಧೈರ್ಯ ಬೇಕಾಗುತ್ತದೆ. ಅಂದರೆ ತಿಳಿವಳಿಕೆ, ವ್ಯವಹಾರ ಜ್ಞಾನವೆಂದು ಅರ್ಥ. ವಿವೇಕ ಇದ್ದಲ್ಲಿ ಸದ್ಗುಣ ಇರುತ್ತದೆ, ಸದಭಿರುಚಿ ಇರುತ್ತದೆ, ಪ್ರತಿಭೆ ಇರುತ್ತದೆ, ಪರಿಣತಿ ಇರುತ್ತದೆ, ವಿನೋದ ಇರುತ್ತದೆ, ಸ್ನೇಹ ಇರುತ್ತದೆ. ಸದ್ಗುಣವೆಂದರೆ ಬೇರೇನೂ ಅಲ್ಲ, ಅದು ಆಚರಣೆಯಲ್ಲಿ

ರುವ ವಿವೇಕವೆಂದೇ ಹೇಳಬಹುದು. ಇವೆಲ್ಲವನ್ನು ತಮ್ಮ ಜೀವನಕ್ಕೆ ಅಳವಡಿಸಿಕೊಂಡಿರುವ ಛಾಯಾಪತಿಯವರು ತಮ್ಮ ತಂದೆಯ ಆದರ್ಶಕ್ಕೆ ಯಾವ ಕಳಂಕವೂ ಬಾರದ ರೀತಿಯಲ್ಲಿ ಈ ರೀತಿಯ ವಿವೇಕ, ವಿವೇಚನೆಗಳಿಂದ ಬಹಳ ಜತನವಾಗಿ, ಹಿರಿಯರ ಬಳುವಳಿಗೆ ಆಧುನಿಕತೆಯ ಮೆರುಗಾಗಿ, ಬಹಳಷ್ಟು ಬರಹಗಾರರನ್ನು ಹೊರಜಗತ್ತಿಗೆ ತರುವುದರ ಜೊತೆಗೆ, ಸಿದ್ಧ ಪ್ರಸಿದ್ಧ ವ್ಯಕ್ತಿಗಳ ಚಿಂತನೆಗಳ ಪ್ರಕಟಣೆಯ ಮೂಲಕ ದನಿಯಾಗಿರುವವರು ನಾಡಿನ ಪ್ರಸಿದ್ಧ ಪುಸ್ತಕ ಪ್ರಕಾಶಕರಾದ ಲೇಖಕ ಟಿ.ಎಸ್. ಛಾಯಾಪತಿಯವರು.

ಮನುಷ್ಯನಲ್ಲಿ ವಿವೇಕ ಇದ್ದರೆ ಅವನನ್ನು ದಾರಿತಪ್ಪಿಸುವುದು ಯಾರೊಬ್ಬರಿಂದಲೂ ಸಾಧ್ಯವಿಲ್ಲ. ಎರಡು ಎರಡು ಸೇರಿದರೆ ಐದು ಆಗುತ್ತದೆಯೆಂದು ಹೇಳಿದರೆ ಅವನು ಅದನ್ನು ಒಪ್ಪುವುದಿಲ್ಲ. ಎರಡು ಎರಡು ಸೇರಿದರೆ ನಾಲ್ಕೇ ಆಗುವುದೆಂದು ಬಹು ದೃಢವಾಗಿ ಹೇಳುತ್ತಾನೆ. ಈ ಮಾತು ಮೈಸೂರಿನ ಸಹೃದಯಿ ಪ್ರಕಾಶಕ ಟಿ.ಎಸ್. ಛಾಯಾಪತಿಯವರಿಗೆ ಅಕ್ಷರಶಃ ಅನ್ವಯವಾಗುತ್ತದೆ. ಇಂತಹ ದೃಢ ಮನೋಭಾವದಿಂದ ತಂದೆಯವರು ಹಾಕಿದ ಮಾರ್ಗವನ್ನು ಅನುಸರಿಸಿ, ವಿವೇಕದಿಂದ, ಅನುಭವದಿಂದ, ಕಾಯಾ - ವಾಚಾ - ಮನಸಾ ಕರ್ತವ್ಯ ನಿರ್ವಹಿಸುತ್ತಿರುವ ಛಾಯಾಪತಿಯವರು ನಿಜವಾಗಿ ಕಾಯಕಯೋಗಿ. ಈ ರೀತಿ ತಮ್ಮ ಗುರಿ ತಲುಪುವಲ್ಲಿ ಯಶಸ್ವಿಯಾಗಿ, ಆ ಮೂಲಕ ಇನ್ನಿತರರಿಗೆ ಆತ್ಮಸ್ಥೈರ್ಯದ ಪ್ರತಿರೂಪವಾಗಿ ಬಾಳುತ್ತಿದ್ದಾರೆ.

ಪ್ರಕಾಶಕರಾಗಿ ಹಲವಾರು ಏಳುಬೀಳುಗಳನ್ನು ಅನುಭವಿಸಿಯೂ ಸಮಾಜಕ್ಕೆ ವಿದ್ವತ್ ಪ್ರಪಂಚದ ವಿಚಾರಗಳನ್ನು ತಿಳಿಸುವ ಕಾಯಕದಲ್ಲಿ ಸದಾ ನಿರತರಾಗಿರುವ ಶ್ರೀಯುತರು ನಿಜಕ್ಕೂ ಸಹೃದಯ ಪ್ರಕಾಶಕರೇ ಹೌದು.

ಇಂತಹ ಪ್ರಸಿದ್ಧ ಪ್ರಕಾಶನ ಸಂಸ್ಥೆಯ ಪ್ರಕಾಶಕರಾದರೂ, ಅತ್ಯಂತ ಸರಳತೆಯಿಂದ ಎಲ್ಲರನ್ನು ಪ್ರೀತಿಸುವ, ಗೌರವದಿಂದ ಮಾತನಾಡಿಸುವ ಸಹೃದಯಿ ಛಾಯಾಪತಿಯವರನ್ನು ನಾಡಿನ ಹಲವು ಸಂಘ ಸಂಸ್ಥೆಗಳು ಸನ್ಮಾನಿಸಿವೆ.

ಎಪ್ಪತ್ತರ ಹರೆಯದಲ್ಲೂ ತಮ್ಮ ಕರ್ತವ್ಯಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ. ಕನ್ನಡದ ಪ್ರತಿಷ್ಠಿತ ಸಾಹಿತಿಗಳ ಕೃತಿಗಳನ್ನು ಪ್ರಕಟಿಸುವ ಮೂಲಕ ಕನ್ನಡ ಸಾಹಿತ್ಯ ಕ್ಷೇತ್ರದ ಶ್ರೀಮಂತಿಕೆಯನ್ನು ಇಮ್ಮಡಿಗೊಳಿಸಿದ್ದಾರೆ. ಈ ಮೂಲಕ ಸಾಹಿತ್ಯ ದೇವಿಯ ಆರಾಧನೆಗೆ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡಿರುವವರೇ ಸಹೃದಯಿ ಪ್ರಕಾಶಕರಾದ ಟಿ.ಎಸ್. ಛಾಯಾಪತಿಯವರು.

# ಪ್ರಕಾಶಕ ಶಿರೋಮಣಿ

ಮಹಾಕವಿ ಶ್ರೀ ಕುವೆಂಪುವಿಗೆ ಸನ್ಮಾರ್ಗದರ್ಶಿಯಾಗಿದ್ದ ಗುರುಸಾರ್ವಭೌಮ ಪರಮಪೂಜ್ಯ ಶ್ರೀ ತಳುಕಿನ ವೆಂಕಣ್ಣಯ್ಯನವರ ಹೃತ್ಕಮಲ ಸಂಜಾತ, ಶಿಷ್ಯ ಸಂಕುಲ ಸಂರಕ್ಷಕ ಶಿರೋಮಣಿ, ವಾತ್ಸಲ್ಯವಾರಿಧಿ, ಪರಮದಯಾಸಿಂಧು, ವಿದ್ವಲ್ಲೋಕದ ಅಕಳಂಕಚರಿತ ಅಮಲಮೂರ್ತಿ ಶ್ರೀ ತ.ಸು. ಶಾಮರಾಯರ ಸುಪುತ್ರ ಶ್ರೀ ಟಿ.ಎಸ್. ಛಾಯಾಪತಿಯವರ ಅಭಿಮಾನಿಗಳು, ಆತ್ಮೀಯರು, ಬಂಧು ಮಿತ್ರರುಗಳು ಅವರ ಗುಣೋನ್ನತಿಯನ್ನು ಗುರುತಿಸಿ ಗೌರವಿಸುತ್ತಿರುವುದು ಔಚಿತ್ಯಪೂರ್ಣವಾಗಿದೆ. ಈ ಸಂಭ್ರಮದ ಸಾಗರದಲ್ಲಿ ಎದ್ದಸಡಗರದ ಸಂತೋಷದ ನಿರಂತರ ಅಲೆಗಳ ಮೆಲುನಡೆಯು ನಾಡಿನುದ್ದಗಲ್ಲಕ್ಕೂ ಹರಡಿ ಆಹ್ಲಾದವನ್ನುಂಟುಮಾಡಿದೆ. ಕಾರಣ ನಾಡಿನ ಅಪಾರ ಸಂಖ್ಯೆಯ ಲೇಖಕರನ್ನು ಅವರ ಕೃತಿಗಳನ್ನು ಬೆಳಕಿಗೆ ತಂದ ಕೀರ್ತಿ ಅವರ ಪಾಲಿಗಿದೆ. ಮಹತ್ವದ ಸಹಸ್ರಾರು ಪುಸ್ತಕಗಳನ್ನು ಪ್ರಕಟಿಸಿರುವ ಹಿರಿಮೆ ಅವರದಾಗಿದೆ. ಹೆಸರಾಂತ ಬರಹಗಾರರನ್ನಲ್ಲದೆ ಯುವಲೇಖಕರನ್ನು ಉತ್ತೇಜಿಸಿದ ಔದಾರ್ಯವೂ ಅವರ ವ್ಯಕ್ತಿತ್ವದ ಮೆರುಗಿಗೆ ಕಾರಣವಾಗಿದೆ. ಹೀಗಾಗಿ ನಾಡಿನ ಅಸಂಖ್ಯಾತ ಬರಹಗಾರರೆಲ್ಲರೂ ಅವರಿಂದ ಒಂದಲ್ಲ ಒಂದು ರೀತಿಯಲ್ಲಿ ಉಪಕೃತರಾಗಿದ್ದಾರೆ.

ಪೂಜ್ಯ ವೆಂಕಣ್ಣಯ್ಯನವರ ಸಾತ್ವಿಕತೆ, ಶಾಮರಾಯರ ಹೃದಯವಂತಿಕೆಯ ಎರಕದಂತಿರುವ ಛಾಯಾಪತಿಯವರು ಸೌಜನ್ಯಶೀಲ ಸಹೃದಯ ಸಜ್ಜನಿಕೆಯಿಂದ ಲೇಖಕರ ಹೃದಯಸ್ನು ಗೆದ್ದು ಪ್ರಕಾಶಕಲೋಕದ ಚಕ್ರಾಧಿಪತಿಯಂತೆ ಹೆಸರಾಗಿದ್ದಾರೆ. ಈ ಸನ್ನಡತೆಯ ಕಾರಣದಿಂದ ಅವರು ಎಲ್ಲರಿಗೂ ಆತ್ಮೀಯರಾಗಿದ್ದಾರೆ. ಅಜಾತಶತ್ರುವಿನಂತಿರುವ ಛಾಯಾಪತಿಯವರು ತಮ್ಮ ಪ್ರಕಾಶನದ ಉಜ್ವಲ ಬೆಳಕಿನಿಂದ ಹಲವಾರು ಲೇಖಕರನ್ನು ಬೆಳಗುವಂತೆ ಮಾಡಿದ್ದಾರೆ.

ಹೀಗೆ ಛಾಯಾಪತಿಯವರಿಂದ ಉಪಕೃತನಾದವರಲ್ಲಿ ನಾನೂ ಒಬ್ಬ. ಅದು 1971ನೇ ಇಸವಿ. ಅಂದು ನಾನು ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸಂಶೋಧನಾ ವಿದ್ಯಾರ್ಥಿಯಾಗಿ ಕೆಲಸ ಮಾಡುತ್ತಿದ್ದೆ. ಆಗತಾನೆ ಜಾನಪದ ಕ್ಷೇತ್ರಕಾರ್ಯವನ್ನು

---

**ಡಾ. ಪಿ.ಕೆ. ರಾಜಶೇಖರ**

---

ಪ್ರಾರಂಭಿಸಿದ್ದ. ನಾನು ಜನಪದ ಧಾರ್ಮಿಕ ವೃತ್ತಿಗಾಯಕರಾದ ದೇವರಗುಡ್ಡರು ಹಾಡುತ್ತಿದ್ದ ಮೈಸೂರಿನ ಚಾಮುಂಡಿ ಮತ್ತು ನಂಜನಗೂಡಿನ ನಂಜುಂಡೇಶ್ವರನಿಗೆ ಸಂಬಂಧಿಸಿದ ಸುರಸಭರಿತ ಪ್ರಣಯಕಾವ್ಯವನ್ನು ಸಂಗ್ರಹಿಸಿದ್ದೆ. ನನ್ನ ಪ್ರಿಯಗುರುಗಳಾಗಿದ್ದ ಪ್ರೊ. ರಾಗೌ ಅವರು ಅದರ ಪ್ರಕಟಣೆಗೆ ಪ್ರೋತ್ಸಾಹಿಸಿದರು. ಆ ನನ್ನ ಮೊದಲ ಜನಪದ ಕಾವ್ಯಕ್ಕೆ ಗುರುವರ್ಯ ಪ್ರೊ. ಸಿ.ಪಿ.ಕೆ.ಯವರು 'ಬೆಟ್ಟದ ಚಾಮುಂಡಿ' ಎಂಬ ಹೆಸರಿನಲ್ಲಿ ಪ್ರಕಟಿಸಲು ಹೇಳಿದರು. ನನ್ನ ಪ್ರಿಯ ಗುರುವರ್ಯ ಶ್ರೀರಾಗೌ ಅವರು ಅದಕ್ಕೆ ಮುನ್ನುಡಿಯನ್ನು ಬರೆದುಕೊಟ್ಟರು. ಆ ಪುಸ್ತಕವನ್ನು ನನ್ನ ಮಾರ್ಗದರ್ಶಿಗಳಾಗಿದ್ದ ಪ್ರೊ. ಸಿ.ಪಿ.ಕೆ. ಅವರಿಗೆ ಅರ್ಪಣೆ ಮಾಡಿದೆ.

ಆ ಅವಧಿಯಲ್ಲಿ ಮಹಾರಾಜ ಕಾಲೇಜಿನ ಮುಂಭಾಗದಲ್ಲಿರುವ ಕಾಲೇಜ್ ರೋಡ್‌ಗೆ ಸಮೀಪದಲ್ಲೆ ಒಂದು ಮುದ್ರಣಾಲಾಯವಿತ್ತು. ಅದು ಸ್ವಾತಂತ್ರ್ಯ ಹೋರಾಟಗಾರ ಮಹಾತ್ಮ ಗಾಂಧಿಯವರ ಸಮೀಪವರ್ತಿ ಶ್ರೀ ಸೀತಾರಾಮಯ್ಯಂಗಾರ್ ಅವರದು. ಅವರು ತಮ್ಮ ಶ್ವೇತಾದ್ರಿ ಪ್ರೆಸ್‌ಗೆ ನನ್ನನ್ನೂ ಗುರುವರ್ಯ ಶ್ರೀ ರಾಗೌ ಹಾಗೂ ಗೆಳೆಯ ಶ್ರೀ ನಂ. ನಾರಾಯಣಗೌಡರನ್ನು ಪ್ರೀತಿಯಿಂದ ಸ್ವಾಗತಿಸಿದರು. ಅವರ ಸಾತ್ವಿಕ ವ್ಯಕ್ತಿತ್ವ ಸಜ್ಜನಿಕೆ ಸೌಹಾರ್ದತೆಗಳು ನಮ್ಮ ಹೃದಯವನ್ನು ಸೂರೆಗೊಂಡವು. ಅವರು ಮಹಾತ್ಮರೊಡನೆ ಸಬರಮತಿ ಆಶ್ರಮದಲ್ಲಿದ್ದು ಬಂದವರಾದ್ದರಿಂದ ಎಲ್ಲದರಲ್ಲೂ ಸ್ವದೇಶೀ ಹಾಗೂ ಸ್ವಾವಲಂಬನೆಗೆ ಪ್ರಾಧಾನ್ಯ ಕೊಡುತ್ತಿದ್ದರು. ಅವರ ನಡೆ ನುಡಿಗಳೆಲ್ಲವೂ ನಮಗೆ ಮೆಚ್ಚಾದವು. ಅವರೊಬ್ಬ ಯೋಗರ್ಷಿಯಂತೆ ಕಂಡರು. ಆ ಮಹಾನುಭಾವರ ಮುದ್ರಣಾಲಯದಲ್ಲಿ ಅಚ್ಚಾಗಲು 'ಬೆಟ್ಟದ ಚಾಮುಂಡಿ' ಹಸ್ತಪ್ರತಿಯನ್ನು ಕೊಟ್ಟೆವು. ಪುಸ್ತಕವೂ ಮುದ್ರಾಗಿ ಅಚ್ಚಾಯಿತು. ಆದರೆ ಅದಕ್ಕೆ ಪ್ರಕಾಶಕರು ಯಾರು ಎಂಬ ಪ್ರಶ್ನೆ ತಲೆ ಎತ್ತಿತು. ಆಗ ಗುರುಗಳಾದ ಪ್ರೊ. ಸಿ.ಪಿ.ಕೆ. ಯವರು 'ಬೆಟ್ಟದ ಚಾಮುಂಡಿ'ಯನ್ನು ಪ್ರಕಟಿಸಲು ಛಾಯಾಪತಿಯವರನ್ನು ಕೇಳಿಕೊಂಡರು. ಗುರುಗಳ ಮಾತನ್ನು ಛಾಯಾಪತಿಯವರು 'ಆಜ್ಞೆ' ಎನ್ನುವಂತೆ ಸ್ವೀಕರಿಸಿ ನನ್ನ ಜನಪದ ಕೃತಿ 'ಬೆಟ್ಟದ ಚಾಮುಂಡಿ'ಯನ್ನು ತಮ್ಮ ಪ್ರಕಾಶನದ ಒಡಲಿಗೆ ಹಾಕಿ ಕೊಂಡರು.

ಹೀಗೆ ನನ್ನ ಮೊದಲ ಜಾನಪದ ಕೃತಿಯನ್ನು ಪ್ರಕಟಿಸಿದ ಛಾಯಾಪತಿಯವರ ಬಗೆಗೆ ಅಭಿಮಾನ ಕೃತಜ್ಞತೆಗಳು ತುಂಬಿ ಬಂದವು. ಆ ಕೃತಿ ಜನಪ್ರಿಯವೂ ಆಯಿತು. ಅದು ನಾಟಕರೂಪ ತಳೆದ 1994ರ ಹೊತ್ತಿಗೆ ಆಕಾಶವಾಣಿಯಲ್ಲಿ ನಾಟಕವಾಗಿ ಪ್ರಸಾರವಾಯಿತು. ನನಗೆ ಹೆಸರನ್ನು ತಂದುಕೊಟ್ಟಿತು. ಅದು ಕನ್ನಡ ಎಂ.ಎ. ವಿದ್ಯಾರ್ಥಿಗಳ ಜಾನಪದ ಐಚ್ಛಿಕಕ್ಕೆ ಪಠ್ಯವಾಗಿಯೂ ಆಯ್ಕೆ ಆಯಿತು. ಇದೆಲ್ಲ ಛಾಯಾಪತಿಯವರ ಔದಾರ್ಯದಿಂದ ಸಾಧ್ಯವಾಯ್ತೆಂಬುದನ್ನು ನಾನು ಎಂದಿಗೂ ಮರೆಯುವಂತದಲ್ಲ. ನನ್ನಂಥ ಎಷ್ಟೋ ಜನ ಲೇಖಕರದೂ ಇದೇ ಆಶಯ ಹೌದು.

ಸಾಹಿತಿಗಳ ಸುರಧೇನು
ಛಾಯಾಪತಿ
ಪ್ರಕಾಶಕ ಶಿರೋಮಣಿ
ಛಾಯಾಪತಿ
ಆಯುರಾರೋಗ್ಯ ಐಶ್ವರ್ಯಾದಿಗಳಿಂದ
ನೂರ್ಕಾಲ ಬಾಳಲಿ
ಛಾಯಾಪತಿ

# ತಳುಕಿನ ಅದ್ಭುತ ಪ್ರತಿಭೆ

ಸುಪ್ರಸಿದ್ಧ ವಿದ್ವಾಂಸರೊ, ಶ್ರೇಷ್ಠ ಮಾನವೀಯ ಮೌಲ್ಯಗಳಿಂದಾಗಿ ಅಭಿಮಾನಿ ಶಿಷ್ಯ ಕೋಟಿಯನ್ನು ಸಂಪಾದಿಸಿದ್ದ ಗುರುಗಳೂ ಆಗಿದ್ದ ದಿವಂಗತ ತ.ಸು. .ಶಾಮರಾಯರನ್ನು ಭೇಟಿ ಮಾಡುವ ಅವಕಾಶ ನನಗೆ ಬಹು ಸುಲಭವಾಗಿಯೇ ಒದಗಿ ಬಂದಿದ್ದವು. ನನ್ನ ಗುರುಗಳೂ ಪಿ. ಎಚ್.ಡಿ. ಮಾರ್ಗದರ್ಶಕರೂ ಆಗಿದ್ದ ದಿವಂಗತ ಡಾ. ಡಿ.ಎ. ಗೋವಿಂದಪ್ಪನವರು 'ಮದಕರಿ ಬಳಗ'ದ ಸಭೆಗಳಿಲ್ಲಿ ತ.ಸು.ಶಾ.ರವರನ್ನು ಭೇಟಿ ಮಾಡಲು ನನ್ನ ವಾಹನವನ್ನೇರಿ ಮಾನಸ ಗಂಗೋತ್ರಿಯಿಂದ ಸರಸ್ವತಿ ಪುರಂಗೆ ಬರುತ್ತಿದ್ದುದುಂಟು. ತಸುರವರ ಸೌಜನ್ಯ, ಅವರ ಮನೆಗೇ ಅಪೂರ್ವ ಎನಿಸುವಂತಿದ್ದ ವಿಶಿಷ್ಟ ರೀತಿಯ ಅತಿಥಿ ಅಭ್ಯಾಗತರ ಸೇವೆ, ಅವರ ಸಮಯ ಪ್ರಜ್ಞೆ ಹಾಗೂ ಯಾರನ್ನಾದರೂ ಮೋಡಿಗೊಳಿಸಬಲ್ಲ ಮಾತುಗಾರಿಕೆ - ಇವೆಲ್ಲಾ ಚಿಕ್ಕವನಾಗಿ ಮತ್ತು ಇನ್ನೂ ಸಂಶೋಧನಾ ವಿದ್ಯಾರ್ಥಿಯಾಗಿದ್ದ ನನ್ನ ಮೇಲೆ ಒಂದು ರೀತಿಯ ಅಳಿಸಲಾರದ ಪ್ರಭಾವದ ಮುದ್ರೆಯನ್ನೊತ್ತಿವೆ. ಇಂತಹ ಕೆಲವು ಸಂದರ್ಭಗಳಲ್ಲೇ ಶ್ರೀಯುತ ಛಾಯಾಪತಿಯವರು ನನ್ನ ಗಮನಕ್ಕೆ ಬಂದಿದ್ದರು. ತೇಜಸ್ವೀ ನಗುಮುಖ, ಯಾರಾದರೂ ತಮ್ಮ ತಂದೆಯವರನ್ನು ನೋಡಲು ಮನೆಗೆ ಬಂದಾಗ. ಅವರನ್ನು ಸ್ವಾಗತಿಸುತ್ತಿದ್ದ ವಿಶಿಷ್ಟ ಶೈಲಿ, ಅವರ ನಗು ಮುಖದ ಕುಶಲೋಪರಿ ಇವನ್ನೆಲ್ಲಾ ದೂರದಿಂದಲೇ ನಾನು ಗಮನಿಸಿ ಮೆಚ್ಚಿಕೊಂಡಿದ್ದೆ.

ಮದಕರಿ ಬಳಗದ ಉದ್ದೇಶ ಪೂರೈಸಿತು. ನಂತರ ದಿ. ತ.ಸು. ರವರು ಗೋಕುಲಂನ ತಮ್ಮ ಹೊಸ ನಿವಾಸಕ್ಕೆ ತೆರಳಿದರು. ಆದರೆ ಸಂತೋಷವಾಗುತ್ತಿತ್ತು.

ಮೈಸೂರು ವಿ.ವಿ.ದಲ್ಲಿ ಕಾಲ ಚಕ್ರ ಉರುಳಿತು. ಸಂಶೋಧನಾ ವಿದ್ಯಾರ್ಥಿಯಾಗಿದ್ದ ನಾನು ಕ್ರಮೇಣ ಅಧ್ಯಾಪಕನಾಗಿ, ವಿದೇಶೀ ಅಧ್ಯಯನ ಮುಗಿಸಿ, ಪ್ರವಾಚಕನಾಗಿ, ಪ್ರಾಧ್ಯಾಪಕನೂ ಆಗಿ, ವಿಭಾಗ ಮುಖ್ಯಸ್ಥನಾಗಿ ವಿಶ್ರಾಂತನಾದೆ. ನಂತರ ಮೂರು ವರ್ಷಗಳು ಮತ್ತೆ ವಿದೇಶೀ ಅಧ್ಯಯನ ಯೋಗವಿತ್ತು. ಇದೆಲ್ಲಾ ಮುಗಿದ ನಂತರ ಕನ್ನಡ ಪುಸ್ತಕಗಳನ್ನು ನನ್ನ ಓದಿನ ಮತ್ತು ಸಂಶೋಧನಾ ವಿಷಯಗಳಲ್ಲದವುಗಳ

**ಡಾ. ಎಸ್.ಎನ್. ರಾಮಸ್ವಾಮಿ**

ಮೇಲೆ ಬರೆಯಲು ಪ್ರಾರಂಭಿಸಿದೆ. 2007ರಲ್ಲಿ ಸನ್ಮಾನ್ಯ ಡಿ.ವಿ.ಕೆ. ಮೂರ್ತಿಯವರು ನನ್ನ 'ಪೌರಪ್ರಜ್ಞೆ' ಪುಸ್ತಕವನ್ನು ಪ್ರಕಟಗೊಳಿಸಿದರು. ಸರಿಸುಮಾರು ಇದೇ ಕಾಲದಲ್ಲಿ ಛಾಯಾಪತಿಯವರು ನನ್ನ ಸುಕೃತವೆಂಬಂತೆ ಒಂದು ದಿನ ನನ್ನ ಮನೆಗೇ ಬಂದು ಯಾವುದಾದರೂ ನನ್ನ ಹಸ್ತ ಪ್ರತಿ ಇದ್ದರೆ ಅವರಿಗೆ ಪ್ರಕಟಣೆಗೆ ಕೊಟ್ಟರೆ ಪ್ರಕಟಿಸುತ್ತೇನೆಂದರು. ಇವರ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಮೂಲಕ. ನಾನು ಬರೆದ 'ಪರಿಸರ ಶಿಲ್ಪಿ ಪದ್ಮಶ್ರೀ ದೇಜಗೌ- 91' (2008), ಪ್ರತಿಭಾ ಪ್ರಕಾಶನದ ಮೂಲಕ ಪೌರಪ್ರಜ್ಞಾಯನ (2010) ಮುಂತಾದ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಡಾ. ದೇಜಗೌರವರ ಬಗ್ಗೆ ವಿಶೇಷ ಗೌರವ ವಿರುವ ಶ್ರೀ ಛಾಯಾಪತಿಯವರು ಈ ಪುಸ್ತಕಕ್ಕಾಗಿ ವಿಶೇಷ ರೀತಿಯ ಉತ್ತಮ ಮಟ್ಟದ ಕಾಗದವನ್ನುಪಯೋಗಿಸಿದ್ದೇ ಅಲ್ಲದೆ, ವರ್ಣ ಚಿತ್ರಗಳನ್ನು ಸುಂದರವಾಗಿ ಮುದ್ರಿಸಿ ಪ್ರಕಟಗೊಳಿಸಿದರು. ಈಗ ಇವೆರಡು ಪುಸ್ತಕಗಳೂ ಮಾರುಕಟ್ಟೆಯಲ್ಲಿ ಲಭ್ಯವಿಲ್ಲ. 2012ರಲ್ಲಿ ನನ್ನ 'ಪೌರಶಿಕ್ಷಣ (ಕೆಲವು ಮೂಲ ..................... ಎಂಬ ಪುಸ್ತಕ ಇವರ ಪ್ರತಿಭಾ ಪ್ರಕಾಶನ ಹೊಸ ಲೇಖಕರಿಗೆ ಶ್ರೀ ಛಾಯಾಪತಿಯವರು ಕೊಡುವ ಪ್ರೋತ್ಸಾಹ ಸಹಕಾರಗಳು ಅಮೋಘವಾದವು. ಅವರ ಜೊತೆ ಮಾತನ್ನಾಡುತ್ತಿರುವ ಕೆಲವೇ ನಿಮಿಷಗಳಲ್ಲಿ ಅವರು ನೀವು ಉತ್ತಮ ಲೇಖಕರಾಗಿದ್ದೀರಿ ಮತ್ತು ಮೌಲಿಕ ಕೃತಿಗಳನ್ನು ಬರೆಯಬಲ್ಲಿರಿ ಎಂಬ ವಿಶ್ವಾಸ ನಿಮ್ಮಲ್ಲಿ ಮೂಡುವಂತೆ ಮಾಡಿ ಬಿಡುತ್ತಾರೆ. ಇಂತಹ ಸುಸಂಸ್ಕೃತ ಸ್ವಭಾವ ಸಹೃದಯತೆ, ಕನ್ನಡದಲ್ಲಿ ಹೆಚ್ಚಿನ, ವೈವಿಧ್ಯಮಯ ಪುಸ್ತಕಗಳು ಬರಬೇಕು ಎನ್ನುವ ಅವರ ಅನುವಂಶೀಯ ಬಯಕೆ - ಇವುಗಳು ಕನ್ನಡದಲ್ಲಿ ಅನೇಕ ಲೇಖಕರನ್ನು ಪ್ರಕಾಶಗೊಳಿಸಿವೆ. ಇದನ್ನೆಲ್ಲಾ ಮಾಡಿದರೂ ಅವರು ಗುಣಮಟ್ಟವನ್ನು ಜೋಪಾನವಾಗಿ ಕಾಯ್ದುಕೊಂಡೇ ಬಂದಿದ್ದಾರೆ. ತಳುಕಿನ ವೆಂಕಣ್ಣಯ್ಯ ಗ್ರಂಥಮಾಲೆಯಲ್ಲಿ ಲೇಖಕನೊಬ್ಬನ ಪುಸ್ತಕ ಪ್ರಕಟವಾಗಿದೆ ಎಂದರೆ ಸಾಕು ಆ ಲೇಖಕ ನಾಡಿನ ಎಲ್ಲ ಪ್ರಕಟಣಾಲಯಗಳಲ್ಲೂ ಸಲ್ಲುತ್ತಾನೆ.

ಹೀಗೆ ಹತ್ತಾರು ವರ್ಷಗಳಿಂದ ಗುಣಮಟ್ಟವನ್ನು ಕಾಯ್ದುಕೊಂಡು ಬಂದಿರುವುದರ ಹಿಂದಿರುವ ರಹಸ್ಯ ಅನೇಕರಿಗೆ ತಿಳಿದಿಲ್ಲ. ನನಗೂ ಕೆಲವಾರು ವರ್ಷಗಳ ನಂತರವೇ ಅರ್ಥವಾಯಿತು. ಅದೇಂದರೆ ಅವರು ಸ್ವತಃ ಒಬ್ಬ ಉತ್ತಮ ಸಾಹಿತಿಗಳಾಗಿರುವುದು. ಇವರು ಇಪ್ಪತ್ತು ಮೂರು ಪುಸ್ತಕಗಳ ಲೇಖಕರು. ಅವರ ಕೆಲವು ಪುಸ್ತಕಗಳು (ಉದಾ : ಅಣ್ಣನ ಸ್ಮರಣೆ, ಆಡಳಿತಭಾಷೆ ಕನ್ನಡ) ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ, ಡಾ. ಹಾ.ಮಾ. ನಾಯಕ ಮುಂತಾದ ನಾಡಿನ ಶ್ರೇಷ್ಠ ವಿದ್ವಾಂಸರುಗಳ ಪ್ರಶಂಸೆಗೆ ಪಾತ್ರವಾಗಿವೆ. ಸಾಹಿತ್ಯ ರಚನೆಯ ಕಲೆಯಲ್ಲಿ ಶ್ರೀ ಛಾಯಾಪತಿಯವರು ಸಿದ್ಧಹಸ್ತರು. ಸಾಹಿತ್ಯ ತಪಸ್ಸಿನಲ್ಲೇ ಮಗ್ನರಾಗಿದ್ದರೆ, ತಳುಕಿನ ಈ ಶ್ರೀಗಂಧ ಕನ್ನಡ ನಾಡಿಗೆ ಮತ್ತಷ್ಟು ಕಂಪು

ಪೆಂಪುಗಳನ್ನು ಕೊಡುತ್ತಿದ್ದಿತೋ ಏನೋ. ಒಂದೊಂದು ಕೃತಿ ಪ್ರಕಟಿಸುವಾಗಲೂ ಅವರು ತೆಗೆದುಕೊಳ್ಳುವ ಶ್ರಮ ಪ್ರಶಂಸನೀಯವಾದದ್ದು. ಗುಣಮಟ್ಟದಲ್ಲಿ ಟೈಪಿಸುವುದರಿಂದ ಹಿಡಿದು ಮುಖಪುಟಗಳ ರೀತಿ ನೀತಿಗಳವರೆಗೆ, ಅದು ಅವರದ್ದೇ ಪುಸ್ತಕವೇನೋ ಎನ್ನುವ ರೀತಿ ಬಹಳ ಶ್ರಮ ವಹಿಸಿ ಪುಸ್ತಕಗಳನ್ನು ಚೊಕ್ಕವಾಗಿ ಹೊರ ತರುತ್ತಾರೆ. ಕೆಲವೊಮ್ಮೆ ಪ್ರಕಟಿತ ಪುಸ್ತಕಗಳು ನಿರೀಕ್ಷೆಯ ಮಟ್ಟದಲ್ಲೇ ಮಾರಾಟವಾಗುತ್ತವೆಂದು ನಿರೀಕ್ಷಿಸಲಾಗುವುದಿಲ್ಲ. ಇಂತಹ ಕಷ್ಟ ಸುಖಗಳೆಲ್ಲಾ ಶ್ರೀ ಛಾಯಾಪತಿಯವರಿಗೆ ಗೊತ್ತು. ಅವನ್ನು ಅವರು ಧೈರ್ಯದಿಂದ ಎದುರಿಸಿದ್ದಾರೆ. ಆದರೆ ಅವರ ಐದಾರು ದಶಕಗಳ ಸಾಹಿತ್ಯ ಸೇವೆಗೆ ಸರ್ಕಾರ ಹಾಗೂ ಸಮಾಜದ ಕೆಲವು ವರ್ಗಗಳ ಸೂಕ್ತ ಪ್ರೋತ್ಸಾಹವಿಲ್ಲದಾಗ ಮನಸ್ಸಿಗೆ ಬೇಜಾರಾಗುವುದುಂಟು.

ಏನೇ ಇದ್ದರೂ, ಶ್ರೀ ಛಾಯಾಪತಿಯವರು ಅದೃಷ್ಟವಂತರು. ಅವರ ಶ್ರೀಮತಿಯವರ ಹೃತ್ಪೂರ್ವಕ ಸಹಕಾರದಿಂದಾಗಿ ಕುಟುಂಬದ ಪಾರಂಪರಿಕ ಅತಿಥಿ ಅಭ್ಯಾಗತರ ಆದರಣೆ ಅವರ ಮನೆಯಲ್ಲಿ ನಿರಂತರವಾಗಿ ಸಾಗಿದೆ. ತ.ಶಾ. ವೆಂಕಣ್ಣಯ್ಯನವರು ಅನಾರೋಗ್ಯದಿಂದಿದ್ದಾಗ ಅವರನ್ನು ತಮ್ಮ ಸ್ನೇಹಿತರ ಆಸ್ಪತ್ರೆಗೆ ಸೇರಿಸಿ, ತಮ್ಮ ದೈಹಿಕ ಶ್ರಮ, ಆರೋಗ್ಯ ಸಮಸ್ಯೆಗಳನ್ನು ಗಮನಿಸದೆ ಛಾಯಾಪತಿ ದಂಪತಿಗಳು ಅವರು ಗುಣಮುಖರಾಗಲು ಕಾರಣರಾದದ್ದನ್ನು ನಾನು ಬಲ್ಲೆ. ಅವರ 70ನೇ ಹುಟ್ಟು ಹಬ್ಬದ ನೆನಪಿಗಾಗಿ 'ಸಹೃದಯ' ಎಂಬ ಅಭಿನಂದನಾ ಗ್ರಂಥವನ್ನು ಕೆಲವೇ ದಿನಗಳಲ್ಲಿ ಹೊರತಂದರು. ಇಂತಹ ಸಾಹಸದ ಕೆಲಸಗಳು ಶ್ರೀ ಛಾಯಾಪತಿಯವರಿಗೆ .............. ಬಹಳ ದೊಡ್ಡದು. ದಿ. ತ.ಸು. ರವರಿಂದ ಶ್ರೀ ಛಾಯಾಪತಿಯವರವರೆಗೆ ಇರುವ ಒಂದು ವಿಶೇಷ ಗುಣವೆಂದರೆ ತಾವು ಮಾಡಿದ ಸಹಾಯವನ್ನು ಯಾರೊಡನೆಯೂ ಹೇಳಿಕೊಳ್ಳದಿರುವುದು. ಬಹುಶಃ ಈ ದೊಡ್ಡಗುಣವೇ ಛಾಯಾಪತಿಯವರ ಯಶಸ್ಸಿನ ಹಿಂದಿದೆ. ಕ್ರಿಯಾ ಸಿದ್ಧಿ ಇರುವಂತಹ ಶ್ರೀ ಛಾಯಾಪತಿ ದಂಪತಿಗಳಿಂದ ನಾಡಿಗೆ ಇನ್ನೂ ಹೆಚ್ಚಿನ ಸೇವೆಯಾಗಬೇಕಿದೆ. ಸರ್ಕಾರ ಹಾಗೂ ಜನತೆಯೂ ಕೂಡ ಇವರ ಅರಿವು, ಹಿರಿಮೆಗಳನ್ನು ಗುರುತಿಸಬೇಕಾಗಿದೆ.

# ಪ್ರಕಾಶನ ಭೀಷ್ಮ

ಸರಳ ವ್ಯಕ್ತಿಗಳು ಹೇಗೆ ಇರುತ್ತಾರೆ ಎಂದು ಪ್ರಶ್ನೆ ಮಾಡಿದರೆ ಅದಕ್ಕೆ ಉತ್ತರ ರೂಪದಲ್ಲಿ ಕಾಣುವವರು ಶ್ರೀ ಛಾಯಾಪತಿ ಮೈಸೂರು. ಸಾಹಿತ್ಯಿಕ, ಸಾಂಸ್ಕೃತಿಕ, ಧಾರ್ಮಿಕ, ಪರಂಪರೆಯ, ಸುಸಂಸ್ಕೃತ, ಸಜ್ಜನಿಕೆಯ ಮನೆತನದಲ್ಲಿ ಜನಿಸಿ ಬಂದವರು. ಇದಿರಿಗೆ ಯಾರೆ ಬರಲಿ ಅವರ ಹೃದಯವನ್ನು ತಕ್ಷಣವೇ ತಮ್ಮ ಹೃದಯ ಮಾತಿನ ಮೋಡಿಯಿಂದ ಗೆದ್ದುಬಿಡುತ್ತಾರೆ.

ಇವರ ಸಂಬಂಧ ನಾನು 'ಕನ್ನಡ ಪುಸ್ತಕ ಪ್ರಾಧಿಕಾರ' ಬೆಂಗಳೂರ ಸದಸ್ಯನಾಗಿದ್ದಾಗ ಇವರೂ ಕೂಡಾ ಸದಸ್ಯರಾಗಿದ್ದವರು. ಪಂಚಪಾಂಡವರಂತೆ ರಾಗೌ, ಇಂದಿರಾ ಶಿವಣ್ಣವರ್, ಆರ್.ಜಿ. ಹಳ್ಳಿ ನಾಗರಾಜ, ಛಾಯಾಪತಿ ಹಾಗೂ ಡಾ. ಸಿದ್ದಣ್ಣ ಉತ್ನಾಳ, ಇವರಿಗೆಲ್ಲಾ ಡಾ. ಮಲ್ಲೇಪುರಂ ವೆಂಕಟೇಶ ಅವರು ಅಧ್ಯಕ್ಷರಾಗಿದ್ದರು.

ಈ ಸಂದರ್ಭದಲ್ಲಿ ನನ್ನ ಇವರ ಸ್ನೇಹ ಸೇತುವೆ ನಿರ್ಮಾಣವಾಯಿತು. ಶುಭ್ರವಾದ ಬಟ್ಟೆ, ಕೋಲು ಮುಖ, ಕೆಂಪು ಬಣ್ಣ, ಗಿಣಿಮೂಗು ಹಾಗೂ ಎತ್ತರ ವ್ಯಕ್ತಿಯೇ ಛಾಯಾಪತಿ. ಅತೀ ಸೂಕ್ಷ್ಮವಾದ ಮಾತುಗಳು. ಯಾವಾಗಲೂ ಹಸನ್ಮುಖಿಗಳು. ಸಿಟ್ಟು, ಸೊಕ್ಕು, ಅಹಂ ಅವರ ಹತ್ತಿರ ಎಂದೂ ನಾನು ಕಾಣಲಿಲ್ಲ. ನನಗೆ ಮೇಲಿಂದ ಮೇಲೆ ಒಂದು ಮಾತು ಹೇಳುತ್ತಿದ್ದರು. ಉತ್ನಾಳವರೆ ನಿಮ್ಮ ಮಾತು ವರಟಾಗಿ ಕಾಣಬಹುದು. ಅಲ್ಲದೆ ಏನೋ ಸಿಟ್ಟಿನಿಂದ ಮಾತನಾಡುತ್ತಿದ್ದಾರೆಂದು ತೋರಬಹುದು, ಆದರೆ ನಿಮ್ಮ ಹೃದಯ ಹಾಲು ಹೃದಯ ಹಾಗೂ ಕರುಳಿನಿಂದ ಕನ್ನಡ ನಿಮ್ಮಿಂದ ಹೊರಬರುತ್ತಿದೆಂದು ಹೇಳುತ್ತಿದ್ದರು. ನಮ್ಮ ಭಾಗದ ಜನರ ಮಾತು ಕಂಠದ ಕನ್ನಡ ಹೊರತಾಗಿ ಕರುಳಿನ ಕನ್ನಡವಾಗಿ ತೋರುವುದಿಲ್ಲ. ಉತ್ತರ ಕರ್ನಾಟಕದ ಜನ ವಿಶ್ವಾಸಿಕರು. ಏನಾದರೂ ಸಂಶಯ ಬಂದರೆ ನೇರವಾಗಿ ಮುಖದ ಮುಂದೆಯೇ ಮಾತನಾಡಿ; ಹೃದಯದಲ್ಲಿ ಹೊಲಸು ಹಚ್ಚಿಕೊಳ್ಳುವುದಿಲ್ಲವೆಂದು ಪದೇ ಪದೇ ಹೇಳುತ್ತಿದ್ದರು.

ಡಾ. ಸಿದ್ದಣ್ಣ ಬಿ. ಉತ್ನಾಳ್

'ಪ್ರಕಾಶನ ಪ್ರಶಸ್ತಿ' ಕೊಡುವ ಸಂದರ್ಭದಲ್ಲಿ ನಾನು ಗದುಗಿನ ತೋಂಟದಾರ್ಯ ಮಠದ ಪ್ರಕಾಶನಕ್ಕೆ ಕೊಡುವ ನಿರ್ಧಾರ ಮಾಡಿದ್ದೆ. ನಮ್ಮ ಅಧ್ಯಕ್ಷರು ಈ ಸಲ ಉತ್ನಾಳ ಅವರು ಯಾವ ಪ್ರಕಾಶನ ಸೂಚಿಸುತ್ತಾರೋ ಅವರಿಗೆ ಕೊಡುವ ನಿರ್ಧಾರ ತೆಗೆದುಕೊಂಡಿದ್ದರು. ಈ ಪೂರ್ವದಲ್ಲಿ ಉಳಿದ ಸದಸ್ಯರ ಅಭಿಪ್ರಾಯದಂತೆ ಕೊಟ್ಟಿದ್ದರು.

ಇಂಥ ಸಂದರ್ಭದಲ್ಲಿ ನನ್ನ ಹತ್ತಿರ ನೇರವಾಗಿ ಶ್ರೀ ಛಾಯಾಪತಿ ಬಂದು ಕುಳಿತು ಸನ್ಮಾನ್ಯ ಶ್ರೀ ಸಿದ್ದಣ್ಣವರೆ ನನ್ನ ವಿಚಾರ ಕುರಿತು ನಿಮ್ಮೊಂದಿಗೆ ಮಾತನಾಡಬಹುದೇ! ಎಂದು ಕೇಳಿದರು. ಯಾಕ್ರಿ ಛಾಯಾಪತಿ ನನ್ನೊಂದಿಗೆ ಯಾವಾಗಲೂ ನೀವು ಕೇಳಿ ಮಾತನಾಡಿಲ್ಲ. ಈಗ ಹೀಗೇಕೇ? ಎಂದು ಪ್ರಶ್ನೆ ಮಾಡಿದೆ. ಆಗ ಅವರು ಈ ಸಲ ಪ್ರಕಾಶನ ಪ್ರಶಸ್ತಿ ನಿಮ್ಮ ಉತ್ತರ ಕರ್ನಾಕದ ಭಾಗಕ್ಕೆ ಕೊಡಲು ನಿರ್ಧರಿಸಲಾಗಿದೆ. ಈ ಭಾಗದ ಸದಸ್ಯರು ನೀವಾಗಿದ್ದೀರಿ, ನೀವು ಹೇಳಿದಂತೆ ಆಗುತ್ತದೆ. ನನ್ನದೊಂದು ಮನವಿ. ನಿಮ್ಮಲ್ಲಿ ಹೇಳಿಕೊಳ್ಳಲು ಬಂದಿರುವೆ; ತಾವುಗಳು ಅನ್ಯಥಾ ಭಾವಿಸಲಾರದೆಂದು ಹೇಳುತ್ತಾ ಮಾತು ಪ್ರಾರಂಭಿಸಿದರು. ಉತ್ತರ ಕರ್ನಾಟಕದಲ್ಲಿ ಅತೀ ಹಳೆಯ ಪ್ರಕಾಶನ ಧಾರವಾಡದಲ್ಲಿದೆ. ಉಳಿದ ಯಾವ ಜಿಲ್ಲೆಯಲ್ಲಿಯೂ ಇಷ್ಟು ಪ್ರಾಚೀನ ಪ್ರಕಾಶನ ಇಲ್ಲ ಎಂಬ ಅಭಿಪ್ರಾಯ ನನ್ನದಾಗಿದೆ, ತಮ್ಮ ವಿಚಾರವೇನು ಎಂದು ಕೇಳಿದರು. ಅಷ್ಟೇ ಅಲ್ಲ ವಯೋವೃದ್ಧರು ಸಂಪೂರ್ಣ ಪ್ರಕಾಶನಕ್ಕಾಗಿ ಜೀವನವನ್ನೇ ಮುಡುಪಿಟ್ಟವರು ಹೀಗಾಗಿ ಆ ವ್ಯಕ್ತಿಯ ಹೆಸರು ಹೇಳಬೇಕೆಂಬ ಆಶೆ ನನ್ನದಾಗಿದೆ. ಅಧ್ಯಕ್ಷರು ನಿಮ್ಮೊಂದಿಗೆ ಚರ್ಚಿಸಲು ಸಮ್ಮತಿ ನೀಡಿದ್ದರಿಂದಲೇ ನಿಮ್ಮ ಹತ್ತಿರ ಬಂದಿರುವೆ ಎಂದು ಹೇಳಿದರು.

ನಾನು ಏನೂ ಹೇಳದೆ ಸುಮ್ಮನಾದೆ. ಆಗ ಛಾಯಾಪತಿ 'ಯಾಕ್ರೀ ಉತ್ನಾಳರವರೇ ಮಾತು ಬರದೆ ಕುಳಿತು ಬಿಟ್ಟಿದ್ದೀರಿ; ಕಾರಣವೇನು ಹೇಳ್ರಿ' ಎಂದರು. ನನ್ನ ಅಂತರಂಗದಲ್ಲಿ ತೊಳಲಾಟ; ಈಗಾಗಲೇ ನನ್ನ ಗುರು ಎಂದು ಗುರುತಿಸಿಕೊಂಡ (ಡಾ. ಎಂ.ಎಂ. ಕಲಬುರ್ಗಿ ಅವರು) ವಿದ್ವಾಂಸರಿಗೆ ಮಾತು ಕೊಟ್ಟಿ, ಹಾಗೇ ಆಗಿದೆ. ಇದು ಸತ್ವಪರೀಕ್ಷೆ ಎಂದು ವಿಚಾರಿಸಹತ್ತಿದೆ ಮತ್ತೆ ನಾನು ಕೇಳಿದೆ ಯಾವ ಪ್ರಕಾಶನ ಎಂದು............ ಸನ್ಮಾನ್ಯ ಶ್ರೀ ಘಾಣೇಕರ್ ಧಾರವಾಡದವರು ವಯಸ್ಸು ಬಹಳಾಗಿದೆ. ಮುಪ್ಪಿನ ಕಾಲದಲ್ಲಿದ್ದಾರೆ ಅಲ್ಲದೆ ನನಗೆ ಪ್ರಕಾಶನ ಕಟ್ಟುವ, ಬೆಳೆಸುವ, ಪ್ರಸಾರ ಮಾಡುವ ರೀತಿ-ನೀತಿಗಳ ತಿಳುವಳಿಕೆ ಹೇಳಿ ಕೊಟ್ಟವರೆಂಬ ಕಾರಣಕ್ಕಾಗಿ ಪ್ರಸ್ತಾಪಿಸಿದೆ. ನೀವು ಜಾತ್ಯಾತೀತ ಮನೋಭಾವದುರು. ಗುಣಕ್ಕೆ ಮಹತಿಕೊಟ್ಟು, ನಡೆದವರೆಂಬ ವಿಶ್ವಾಸದಿಂದ ಇದನ್ನು ಚರ್ಚಿಸಿದೆ, ಕೊಡುವುದು ಬಿಡುವುದು ನಿಮಗೆ ಬಿಟ್ಟ ವಿಚಾರವೆಂದು ಹೇಳಿ ಹೋದರು.

ಅಧ್ಯಕ್ಷರ ಹತ್ತಿರ ಹೋಗಿ ಇಲ್ಲಿಯ ವಿಷಯ ಸೂಕ್ಷ್ಮವಾಗಿ ತಿಳಿಸಿದಾಗ ಬಹುಶಃ ಒಬ್ಬ ಚಕ್ರವರ್ತಿ ಜಗತ್ತು ಆಳುತ್ತಿದ್ದರೆ ಅವನನ್ನು ಅವನ ಜಾತಿ ಆಳುತ್ತಿರುತ್ತಾರೆಂದು ಸತ್ಯ ರಾಮರ ಮಾತಿನಂತೆ ತಿಳಿದುಕೊಂಡ ಹಾಗೇ ಕಾಣುತ್ತಿತ್ತು. ನಾನು ಮತ್ತೆ ಶ್ರೀ ಛಾಯಾಪತಿ ಅವರನ್ನು ಕರೆದುಕೊಂಡು ಸೂಕ್ಷ್ಮವಾಗಿ ಚರ್ಚಿಸಿದೆ. ನೋಡ್ರಿ ಛಾಯಾಪತಿ ಅವರೆ ಈಗ ಇಳಿಹೊತ್ತಿನಲ್ಲಿರುವ ವ್ಯಕ್ತಿಗೆ ಕೊಡುವುದೇ ನಮ್ಮ ಕರ್ತವ್ಯವಾಗಬೇಕು. ವಿನಾಃ ಜಾತಿಯಿಂದ ವ್ಯಕ್ತಿಯನ್ನು ಅಳಿಯಬಾರದೆಂಬ ಸಿದ್ಧಾಂತ ನನ್ನದು ಎಂದು ಹೇಳಿದಾಗ ತದೇಕ ದೃಷ್ಟಿಯಿಂದ ನನ್ನನ್ನು ನೋಡಹತ್ತಿದರು. ಯಾಕೆ ಛಾಯಾಪತಿ ಸಂಶಯವೇನು ಎಂದು ಕೇಳಿದಾಗ ಕಣ್ಣಿನ್ನಿಂದ ಆನಂದ ಹನಿಗಳು ಹೊರಬಂದವು. ಇಂಥ ಮುಗ್ಧ ಸ್ವಭಾವದ ಶ್ರೀ ಛಾಯಾಪತಿ ನನಗೆ ಯಾವಾಗಲೂ ಪ್ರಿಯರು.

ಪ್ರತಿ ತಿಂಗಳ ಮೀಟಿಂಗ್‌ಗೆ ಬರುವಾಗ ಕೈಯಲ್ಲಿ ನಾಲ್ಕೈದು ಸರ್ವಶ್ರೇಷ್ಠ ಗ್ರಂಥಗಳನ್ನು ತೋರಿಸುತ್ತಾ ಇವು ನಮ್ಮೀ ಪ್ರಕಾಶನದಲ್ಲಿ ಪ್ರಕಟಗೊಂಡವು ಎಂದು ಹೇಳುವಾಗ ಸ್ವತಃ ಲೇಖಕನಿಗಿಂತಲೂ ಹೆಚ್ಚು ಆನಂದ ಸಂತೃಪ್ತಿ, ಇವರಿಗಾಗುತ್ತಿತ್ತು. ಧಾರವಾಡದ ಚೆನ್ನವೀರಕಣವೀ ಅವರ ಹತ್ತಿರ ಬಂದು ಹಸ್ತ ಪ್ರತಿ ಪಡೆದು ಮೈಸೂರಿಗೆ ಹೋಗಿ ಮುದ್ರಿಸಿಕೊಂಡು ಹೋಗಿ ಅವರಿಗೆ ಕೊಡುವ ಸಂಭಾವನೆ ಹಾಗೂ ಕೃತಿಗಳನ್ನು ಒಪ್ಪಿಸಿದ ನಂತರವೇ ಮಾರಾಟ ಪ್ರಾರಂಭಮಾಡುವುದು ಅವರ ಹುಟ್ಟು ಗುಣ.

ವೃತ್ತಿ ಹಾಗೂ ಪ್ರವೃತ್ತಿ ಸಂಪೂರ್ಣವಾಗಿ ಪ್ರಕಾಶನ ಕ್ಷೇತ್ರಕ್ಕಾಗಿ ಮೀಸಲಿಟ್ಟವರು. ಅಹೋರಾತ್ರಿ ಯಾವ ಪ್ರಕಾಶನದಲ್ಲಿ ಯಾವ ಯಾವ ಕೃತಿಗಳು ಪ್ರಕಟಗೊಂಡವೆಂಬ ವಿಚಾರದಲ್ಲಿದ್ದುಕೊಂಡು ತಮ್ಮ ಪ್ರಕಾಶನದ ಮುಂದಿನ ಹೆಜ್ಜೆಗೆ ಸನ್ನದ್ಧರಾಗುವ ಸ್ವಾಭಿಮಾನದ ಸಂಕೇತವೇ ವಿನಾಃ ಮತ್ಸರದ ಮಾತುಗಳಲ್ಲ. ಇಂಥ ಸುಸಂಸ್ಕೃತ ವ್ಯಕ್ತಿಯ ಗುಣಗಳನ್ನೆ ಆಯ್ದುಕೊಂಡು ಸತ್ಯವೇ ಸಾಹಿತ್ಯವಾಗಬೇಕೆಂಬ ಆಶೆಯಿಂದ ಈ ಮೇಲಿನ ನಾಲ್ಕು ಮಾತು ಚರ್ಚಿಸಿದ್ದೇನೆ. ಆತ್ಮವಂಚನೆಯಿಂದ ಬರೆದ ಲೇಖನ ನಿಜವಾಗಿ ಓದುಗರ ಹೃದಯಕ್ಕೆ ಆನಂದ ನೀಡದೆ ಹೊತ್ತು ಕಳೆಯುವ ಓದುಗಬಲ್ಲುದು ಎಂಬ ನಂಬಿಕೆ ನನ್ನದಾಗಿದೆ.

ಶ್ರೀ ಛಾಯಾಪತಿಗೆ ಇನ್ನೂ ಹೆಚ್ಚಿನ ಶಕ್ತಿ ಪ್ರಕಾಶನ ಕ್ಷೇತ್ರಕ್ಕೆ ನೀಡುವಂತಾಗಲಿ ಎಂದು ಹಾರೆಸುವೆ.

# ಸಾಹಿತ್ಯ ಪರಿಚರ್ಯೆಯ ಗೆಳೆಯ

ಪ್ರಕಾಶಕರಾಗಿ ಸಾವಿರ ಪುಸ್ತಕಗಳ ಸರದಾರರಾಗಿರುವ ಆತ್ಮೀಯ ಗೆಳೆಯ ಟಿ.ಎಸ್. ಛಾಯಾಪತಿ ಸರಳ ಸಜ್ಜನಿಕೆಯ ಮೃದು ಮಧುರ ಭಾಷಿಣೆ. ತಳುಕಿನ ವೆಂಕಣ್ಣಯ್ಯ, ಶಾಮರಾಯ, ತ.ರಾ.ಸು. ಈ ವಿದ್ವತ್ ಪರಂಪರೆಯ ಬಳುವಳಿ. ದಿನ ಬೆಳಗಾದರೆ ಸಾಹಿತ್ಯ ಪರಿಸರದಲ್ಲಿ ನಿಕಟವಾದ ಸಂಬಂಧ ಹೊಂದಿದ್ದರೂ ಓದಿದ್ದು ಎಂ.ಕಾಂ. ವೃತ್ತಿಯಾ ಆರಿಸಿಕೊಂಡದ್ದು ಪೂರ್ಣಾವಧಿಕಾಲದ ಪ್ರಕಾಶಕರಾಗಿ. ತಂದೆ ಶಾಮರಾಯರ ಗರಡಿಯಲ್ಲಿ ಬೆಳೆದ ಛಾಯಾಪತಿಯವರಿಗೆ ಸಂಸ್ಕೃತಿ ಸಂಪನ್ನ ಬದುಕು ಹೇಗಿರಬೇಕೆಂಬುದರ ಪರಿಚಯವಾದದ್ದು ತಂದೆಯವರಿಂದಲೇ. ಸಾಹಿತ್ಯ ಪ್ರೀತಿ ಜೀವನ ಸಂಗಾತಿಯಾದುದೂ ತಂದೆಯವರಿಂದಲೇ ಶಾಮರಾಯರು ಬದುಕಿರುವಾಗಲೇ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಜವಾಬ್ದಾರಿ ಹೊತ್ತ ಅವರಿಗೆ ತಂದೆಯವರ ಶುಚಿ ರುಚಿ ಜೀವನ ಆದರ್ಶವಾಯಿತು. ಸಾಹಿತ್ಯದ ವಿದ್ಯಾರ್ಥಿಯಲ್ಲದಿದ್ದರೂ ಪರಿಸರ ಹಾಗೂ ಒಡನಾಟ ಛಾಯಾಪತಿಯವರಿಗೆ ಸಾಹಿತ್ಯ ಉಸಿರಾಯಿತು, ಅನ್ನವಾಯಿತು, ಬೆಳಕಾಯಿತು.

ನನ್ನ ಹಾಗೂ ಛಾಯಾಪತಿಯವರ ಗೆಳೆತನ ನಿನ್ನೆ ಮೊನ್ನೆಯದಲ್ಲ, ನಾಲ್ಕು ದಶಕಗಳದ್ದು. ನಾವು ತೀರಾ ನಿಕಟವಾಗಿ ಪರಸ್ಪರ ಅರಿತುಕೊಂಡದ್ದು ಡಾ. ಜಿ.ಎಸ್. ಶಿವರುದ್ರಪ್ಪನವರಿಗೆ ಐವತ್ತು ತುಂಬಿದ ಸಂದರ್ಭದಲ್ಲಿ ಅವರಿಗೊಂದು ಅಭಿನಂದನ ಗ್ರಂಥ ಸಲ್ಲಿಸಬೇಕೆಂಬ ಸಂಕಲ್ಪ ಮನದಲ್ಲಿ ಚಿಗುರೊಡೆದಾಗ ನಾನು ನೇರವಾಗಿ ಮೈಸೂರಿಗೆ ಹೋಗಿ ಕೃಷ್ಣಮೂರ್ತಿಪುರಂನ ಅವರ ಮನೆಯಲ್ಲಿ ಭೇಟಿಯಾದೆನು. ಶಿವರುದ್ರಪ್ಪನವರ ಮೊದಲ ಕವನ ಸಂಕಲನ 'ಸಾಮಗಾನ'ವನ್ನು ಪ್ರಕಟಿಸಿ (1951) ಪ್ರೋತ್ಸಾಹಿಸಿದವರು ಅವರ ಗುರುಗಳಾಗಿದ್ದ ಪ್ರೊ. ತ.ಸು. ಶಾಮರಾಯರು, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯಲ್ಲಿ ಪ್ರಕಟಿಸಿದರು. ಪ್ರಾದುರ್ಭಾವಕ್ಕೆ ಬರುತ್ತಿದ್ದ ಕುವೆಂಪುರವರನ್ನು ತಳುಕಿನ ವೆಂಕಣ್ಣಯ್ಯನವರು ಪ್ರೋತ್ಸಾಹಿಸಿದರು. ಹಾಗೆಯೇ ಪ್ರವರ್ಧಮಾನಕ್ಕೆ ಬರುತ್ತಿದ್ದ ಜಿ.ಎಸ್. ಶಿವರುದ್ರಪ್ಪನವರನ್ನು ತ.ಸು.

ಡಾ. ಎಸ್. ವಿದ್ಯಾಶಂಕರ

ಶಾಮರಾಯರು ಬೆನ್ನು ತಟ್ಟಿ ಪ್ರೋತ್ಸಾಹಿಸಿದರು. ಕುಕ್ಕರಹಳ್ಳಿ ಕೆರೆಯ ಏರಿಯಲ್ಲಿ ಕುಳಿತು ಶಿಷ್ಯನ ಕವಿತೆಗಳನ್ನು ಮನವಿಟ್ಟು ಕೇಳಿದ ತ.ಸು. ಶಾಮರಾಯರು ಕನ್ನಡಕ್ಕೆ ಒಳ್ಳೆಯ ಭಾವಗೀತೆಯ ಕವಿಯನ್ನು ಅಂದುಕೊಟ್ಟರು. ಶಿಷ್ಯ ಶಿವರುದ್ರಪ್ಪನವರೂ ಆ ತುಂಬುಮನದ ಪ್ರೋತ್ಸಾಹವನ್ನು ಮರೆಯಲಿಲ್ಲ. ಕೃತಜ್ಞತೆಯಿಂದ ಆ ಗುರುವಿನ ಕೃಪಾಶೀರ್ವಾದವನ್ನು 'ಸಾಮಗಾನ'ದಲ್ಲಿ ಭಾವಪೂರ್ಣವಾಗಿ ನೆನೆದಿರುವರು:

*ಎದೆ ತುಂಬಿ ಹಾಡಿದೆನು ಅಂದು ನಾನು*
*ಮನವಿಟ್ಟು ಕೇಳಿದಿರಿ ಅಲ್ಲಿ ನೀವು*
*ಇಂದು ನಾ ಹಾಡಿದರು ಅಂದಿನಂತೆಯೆ ಕುಳಿತು*
*ಕೇಳುವಿರಿ ಸಾಕೆನಗೆ ಅದುವೆ ಬಹುಮಾನ*
*ಹಾಡುಹಕ್ಕಿಗೆ ಬೇಕೆ ಬಿರುದು ಸನ್ಮಾನ*

ಇಷ್ಟು ವರ್ಷಗಳಲ್ಲಿ ಈ 'ಹಾಡುಹಕ್ಕಿ'ಯ ಹಾಡು ಎಷ್ಟು ಕೊರಳುಗಳಲ್ಲಿ ಮಧುರವಾಗಿ ಕೇಳಿಸಿದೆಯೋ ಲೆಕ್ಕವಿಟ್ಟವರಿಲ್ಲ. ನಾನು ಈ ಭಾವಸಂಬಂಧದಲ್ಲಿ ಛಾಯಾಪತಿಯ ವರನ್ನು ಕಂಡೆನು. ನಾನು ಕಲೆಹಾಕಿದ್ದ ಲೇಖನಗಳನ್ನು ಅವರ ಮುಂದಿಟ್ಟು ಗೌರವ ಗ್ರಂಥದ ಪ್ರಕಾಶಕರಾಗಬೇಕು ಎಂದು ಕೇಳಿಕೊಂಡೆನು. ಡೆಮ್ಮಿ 1/8 ಆಕಾರದಲ್ಲಿ ಸು. 800 ಪುಟಗಳ ಆ ಸಂಭಾವನಾ ಗ್ರಂಥವನ್ನು ಹಿಂದುಮುಂದು ನೋಡದೆ ಪ್ರಕಟಿಸಲು ಒಪ್ಪಿಗೆ ನೀಡಿದರು. ಆ ಕಾಲದಲ್ಲಿ ಅದೊಂದು ದೊಡ್ಡ ಸಾಹಸ. ಪ್ರಾಯದ ನಮಗಿಬ್ಬರಿಗೂ ಉತ್ಸಾಹ - ಏನೋ ಒಂದು ಮಹತ್ಸಾಧನೆ ಮಾಡುತ್ತಿರುವೆವೆನ್ನುವ ಮಧುರಭಾವ ನಮ್ಮಿಬ್ಬರನ್ನು ಕಟ್ಟಿ ಹಾಕಿದ್ದಿತು. ಮುದ್ರಣ ಜವಾಬ್ದಾರಿಯನ್ನು ಆಗ ಮೈಸೂರಿನಲ್ಲಿ ಖ್ಯಾತ ಮುದ್ರಕರೆಂದು ಪ್ರಸಿದ್ಧಿ ಪಡೆದಿದ್ದ ಜಿ.ಹೆಚ್. ರಾಮರಾವ್ ಸೋದರರಿಗೆ ವಹಿಸಿಕೊಟ್ಟರು. ಮುದ್ರಣದ ಕರಡು ಕಂತುಗಳಲ್ಲಿ ನನಗೆ ಬರತೊಡಗಿದವು. ಕರಡು ತಿದ್ದಿ ನಾನು ಕಳುಹಿಸುತ್ತಿದ್ದೆನು. ನನ್ನ ಜೊತೆ ಆಗ ಸಂಪಾದಕ ರಾಗಿ ಕಾರ್ಯ ನಿರ್ವಹಿಸುತ್ತಿದ್ದವರು, ಪ್ರೊ. ಆರ್. ರಾಜಪ್ಪ ಹಾಗೂ ಪ್ರೊ. ಕ.ವೆಂ. ರಾಜಗೋಪಾಲ್‌ರವರು. ಕೊನೆಯ ಕರಡು ತಿದ್ದಲು ನಾನು ಮೈಸೂರಿನಲ್ಲಿ ಎರಡು ದಿವಸ ತಂಗಿದ್ದೆ. ಎರಡನೆಯ ದಿವಸ ಛಾಯಾಪತಿಯವರನ್ನು ಅವರ ಮನೆಯಲ್ಲಿ ಕಂಡೆ. ಛಾಯಾಪತಿಯವರು ತಮ್ಮ ತಂದೆಯವರಿಗೆ 'ಅಣ್ಣಾ, ವಿದ್ಯಾಶಂಕರ ಅವರು ಬೆಂಗಳೂರಿನಿಂದ ಬಂದಿದ್ದಾರೆ. ಶಿವರುದರಪ್ಪನವರ ಅಭಿನಂದನ ಗ್ರಂಥ ಸಿದ್ಧಪಡಿಸುತ್ತಿದ್ದಾರೆ' ಎಂದು ನನ್ನ ಪರಿಚಯ ಮಾಡಿಕೊಟ್ಟರು. 'ಬನ್ನಿ ಬನ್ನಿ' ಎಂದು ಹೆಗಲ ಮೇಲೆ ಪ್ರೀತಿಯಿಂದ ತಮ್ಮ ದೀರ್ಘಬಾಹುಗಳನ್ನು ಇಟ್ಟು ಊಟದ ಹಜಾರಕ್ಕೆ ನನ್ನನ್ನು ಕರೆದೊಯ್ದರು. ಅಲ್ಲಿ ಡಾ. ಸಿ.ಪಿ.ಕೆ. ಮೊದಲಾದ ಹಲವು ಪರಿಚಿತ ಮುಖಗಳು ಊಟಕ್ಕೆ ಕುಳಿತಿದ್ದರು. ನಾನು ಹೋಗಿ ಅವರ ಸಾಲಿನಲ್ಲಿ ಕುಳಿತೆ. ಮನೆಗೆ

ಯಾರೇ ಬರಲಿ ಅವರಿಗೆ ಊಟವಿಟ್ಟು, ಪ್ರೀತಿಯಿಂದ ಕಳುಹಿಸುವುದು ತ.ಸು. ಶಾಮರಾಯರಲ್ಲಿ ಬಹಳ ಹಿಂದಿನಿಂದ ಬಂದಿದ್ದ ಪದ್ಧತಿ. ಅಂದು ವಿಶೇಷವೇನಿರಲಿಲ್ಲ. ಅವರೂ ಸುಗ್ರಾಸ ಭೋಜನ. ನಾನು ಸಂತರಂತಿದ್ದ ಶಾಮರಾಯರ ಹೃದಯ ವೈಶಾಲ್ಯವನ್ನು 'ಅತಿಥಿ ದೇವೋ ಭವ' ಎನ್ನುವ ಸಂಸ್ಕೃತಿ ಸಂಪನ್ನತೆಯನ್ನು ಗುರುತಿಸಿದೆನು.

ಪುಸ್ತಕ ಸಿದ್ಧವಾಯಿತು. ಶಿವರುದ್ರಪ್ಪನವರ ಆತ್ಮೀಯ ಗೆಳೆಯರಾದ ಚೆನ್ನವೀರ ಕಣವಿಯವರು '**ಸ್ನೇಹ ಕಾರ್ತಿಕ**' ಎನ್ನುವ ಅರ್ಥಪೂರ್ಣವಾದ ಹೆಸರನ್ನು ಅಭಿನಂದನ ಗ್ರಂಥಕ್ಕೆ ಸೂಚಿಸಿದರು. ಈ ಸಂದರ್ಭದಲ್ಲಿ ನನಗೆ ಹಾಗೂ ಪ್ರೊ. ರಾಚಪ್ಪನವರಿಗೆ ಶಿವರುದ್ರಪ್ಪನವರ ಹೆಸರಿನಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಅವರಿಗೆ ಅತ್ಯಂತ ಪ್ರಿಯವಾದ ಕಾವ್ಯಮೀಮಾಂಸೆ ಹಾಗೂ ಸಾಹಿತ್ಯ ವಿಮರ್ಶೆಯಲ್ಲಿ ಅತ್ಯಂತ ಹೆಚ್ಚು ಅಂಕ ಗಳಿಸಿದ ವಿದ್ಯಾರ್ಥಿಗೆ '**ಗೋಲ್ಡ್ ಮೆಡಲ್**' ಕೊಡಲು ಒಂದು ಪುದುವಟ್ಟು ಸ್ಥಾಪಿಸಲು ಉಮೇದು ಬಂದಿತು. ಈ ಸಂಗತಿಯನ್ನು ಛಾಯಾಪತಿಯವರಲ್ಲಿ ನಾನು ಪ್ರಸ್ತಾಪಿಸಿದೆ. ಪುಸ್ತಕ ಪ್ರಕಟಣೆ ಹಾಗೂ ಪುದುವಟ್ಟು ಎರಡಕ್ಕೂ ಹಣ ಹೊಂದಿಸುವುದು ನನಗೆ ಕಷ್ಟವಾಗುತ್ತದೆ ಎಂದು ಛಾಯಾಪತಿ ತಮ್ಮ ಆರ್ಥಿಕ ಸಂಕಷ್ಟ ಹೇಳಿಕೊಂಡರು. ನಾನು ಆ ಸಮಸ್ಯೆಗೆ ಪರಿಹಾರರೂಪವಾಗಿ 'ಸ್ನೇಹ ಕಾರ್ತಿಕ'ದ ನೂರು ಪ್ರತಿ ನಮಗೆ ಕೊಡಿ ಅದನ್ನು ಮಾರಿ ಬಂದ ಹಣದಲ್ಲಿ ಪುದುವಟ್ಟು ಸ್ಥಾಪಿಸುವೆ ಎಂದೆನು. ಛಾಯಾಪತಿಯವರು ನನ್ನ ಪರ್ಯಾಯ ಸಲಹೆಗೆ ಕೂಡಲೇ ಒಪ್ಪಿಗೆ ಕೊಟ್ಟು ಒಂದು ನೂರು ಪ್ರತಿಯನ್ನು ಕೊಟ್ಟರು. ಇದರ ಜೊತೆಗೆ 'ಸ್ನೇಹ ಕಾರ್ತಿಕ'ಕ್ಕೆ ಲೇಖನ ಕೊಟ್ಟು ಉಪಕರಿಸಿದವರಿಗೆ ಕೊಡಲು ನಲವತ್ತು ಕ್ಯಾಲಿಕೊ ಬೈಂಡ್ ಮಾಡಿದ ಪ್ರತಿ ಕೊಟ್ಟರು. ನಾವು ಲೇಖನ ಬರೆದುಕೊಟ್ಟವರಿಗೆ ಗೌರವ ಸಂಭಾವನೆ ಕೊಡಲಾಗಲಿಲ್ಲ, ಗೌರವ ಪ್ರತಿಯನ್ನು ಮರೆಯದೆ ಕಳುಹಿಸಿದೆವು. ಇಷ್ಟೆಲ್ಲಾ ಆದುದು ಛಾಯಾಪತಿಯವರ ಔದಾರ್ಯದಿಂದ, ನಾನು ಮತ್ತು ಪ್ರೊ. ರಾಚಪ್ಪ ಬೆಂಗಳೂರು ಹಾಗೂ ಸುತ್ತಮುತ್ತಲಿನ ನಗರಗಳ ಕಾಲೇಜು ಅಧ್ಯಾಪಕರಿಗೆ 'ಸ್ನೇಹ ಕಾರ್ತಿಕ' ಮಾರಿ ಬಂದ ಹಣವನ್ನು ಬ್ಯಾಂಕಿನಲ್ಲಿ ಖಾತೆ ತೆರೆದು ಇಟ್ಟೆವು. ಆ ಮೂಲಧನಕ್ಕೆ ಬಡ್ಡಿ ಸೇರಿ ಹತ್ತು ಸಾವಿರ ರೂಪಾಯಿ ಆದಾಗ, ಆ ಹಣ ತೆಗೆದು 'ಜಿ.ಎಸ್. ಶಿವರುದ್ರಪ್ಪನವರ ಅಭಿನಂದನ ಸಮಿತಿ' ಹೆಸರಿನಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಪುದುವಟ್ಟು ಸ್ಥಾಪಿಸಿದೆವು. ಈ ವಿಷಯ ಛಾಯಾಪತಿ ಮರೆತೇಬಿಟ್ಟಿದ್ದರು. 'ರಾಷ್ಟ್ರಕವಿ' ಜಿ.ಎಸ್. ಶಿವರುದ್ರಪ್ಪನವರು ನಿಧನರಾದಾಗ ಛಾಯಾಪತಿಯವರ ಜೊತೆ ಅವರು ಮಾಡಿದ ಉಪಕಾರವನ್ನು ನೆನಪಿಸಿಕೊಂಡಾಗ 'ನನಗಿದ್ಯಾವುದೂ ಗೊತ್ತೇ ಇರಲಿಲ್ಲ' ಎಂದರು.

ಛಾಯಾಪತಿಯವರು ಕನ್ನಡ ಪುಸ್ತಕೋದ್ಯಮದ ಜೊತೆ ಜೊತೆಗೇ ಬೆಳೆದಿರುವರು. ಅವರಿಗೆ ಪುಸ್ತಕೋದ್ಯಮದ ಎಲ್ಲ ಸಮಸ್ಯೆಗಳೂ ತಿಳಿದಿವೆ. ನನಗೆ ಎಚ್.ಎಂ. ಶಂಕರನಾರಾಯಣರಾವ್, ಡಿ.ವಿ.ಕೆ. ಮೂರ್ತಿ, ಸುರುಚಿ ಪ್ರಕಾಶನ ಸದಭಿರುಚಿಯ ಪುಸ್ತಕಗಳನ್ನು ಪ್ರಕಟಿಸುತ್ತಿದ್ದುದನ್ನು ನನ್ನ ವಿದ್ಯಾರ್ಥಿ ದೆಸೆಯಿಂದಲೂ ಬಲ್ಲೆ. ಛಾಯಾಪತಿಯವರು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯನ್ನು ನಡೆಸಲು ಹೊರಟಾಗ ಆ ಪ್ರಕಟಣ ಸಂಸ್ಥೆಯ ಸ್ವರೂಪವೇ ಬದಲಾಯಿತು. ಅವರಿಗೆ ಪುಸ್ತಕ ಪ್ರಕಟಣೆ ಹಣ ಗಳಿಸುವ ದಂಧೆಯಾಗಿ ಸ್ವೀಕರಿಸಲಿಲ್ಲ, ಸರಸ್ವತಿಯ ಆರಾಧನೆ ಎಂದು ಭಾವಿಸಿದರು. ಪುಸ್ತಕ ಸಂಸ್ಕೃತಿಯನ್ನು ರೂಢಿಸಿಕೊಂಡ ಅವರು ಒಂದು ಪುಸ್ತಕವನ್ನು ಕಲಾತ್ಮಕವಾಗಿ ಹೇಗೆ ತರಬೇಕೆನ್ನುವ ಪರಿಕಲ್ಪನೆ ಅವರಲ್ಲಿ ಗಾಢವಾಗಿ ಕ್ರಿಯಾತ್ಮಕವಾಗಿ ಮೇಳನಗೊಂಡಿದೆ. ಪುಸ್ತಕಕ್ಕೆ ಬಳಸುವ ಅತ್ಯುತ್ತಮ ಕಾಗದ, ತಪ್ಪಿಲ್ಲದ ಮುದ್ರಣ, ರಕ್ಷಾಚಿತ್ರ ವಿನ್ಯಾಸ, ಪುಸ್ತಕದ ರಟ್ಟುಕಟ್ಟುವಿಕೆ, ಪುಸ್ತಕಕ್ಕಿಡುವ ಬೆಲೆ - ಹೀಗೆ ಎಲ್ಲವೂ ಪೂರ್ವನಿಯೋಜಿತ. ಪುಸ್ತಕ ಮಾರುಕಟ್ಟೆಯಲ್ಲಿ ಹೋಗುತ್ತದೆಯೋ ಇಲ್ಲವೋ ಎಂಬುದರ ಲೆಕ್ಕಾಚಾರ ಹಾಕಿದವರೇ ಅಲ್ಲ. ಗುಣಾತ್ಮಕ ಮೌಲ್ಯದಲ್ಲಿ ವಿಶ್ವಾಸವಿರುವ ಛಾಯಾಪತಿಯವರು ಲಾಭ - ನಷ್ಟದ ಚಿಂತೆ ಮಾಡಿದವರೇ ಅಲ್ಲ. ಒಂದು ಒಳ್ಳೆಯ ಕೃತಿ ಎಷ್ಟೇ ಕಷ್ಟವಾದರೂ ಹೊರಬರಬೇಕೆನ್ನುವ ಸಾತ್ವಿಕ ಹಠ ಅವರದಾದ್ದರಿಂದ ಹಣ ಹೂಡಿಕೆಯ ವಿಷಯದಲ್ಲಿ ಅವರು ಎಂದೂ ಎರಡನೆ ಯೋಚನೆ ಮಾಡಿದವರೇ ಅಲ್ಲ. ಹೀಗಾಗಿ ಕನ್ನಡದ ಪ್ರತಿಷ್ಠಿತ ಲೇಖಕರೆಲ್ಲರೂ ಅವರ ಪ್ರಕಟಣ ಬಳಗದ ಸದಸ್ಯರೇ ಆಗಿರುವರು. ಪುಸ್ತಕದ ಗುಣಮಟ್ಟದ ಬಗೆಗೆ ಕಾಳಜಿ ತೋರುವಷ್ಟೇ ಲೇಖಕರಿಗೆ ಗೌರವ ಸಂಭಾವನೆ ನೀಡುವಲ್ಲಿ ಅವರು ಧಾರಾಳಿಗಳು. ಯಾರೆ ಹಸ್ತಪ್ರತಿ ತಮ್ಮ ಬಳಿ ತಂದರೂ ಅದು ಪ್ರಕಟಣೆಗೆ ಅರ್ಹವೆನ್ನಿಸಿದಲ್ಲಿ, ಲೇಖಕರ ಮೊದಲ ಕೃತಿಯಾಗಿದ್ದರೂ ಮೀನಮೇಷ ಎಣಿಸದೆ, ಇಂದು - ನಾಳೆ ಎನ್ನದೆ ಪ್ರಕಟಿಸುವ ಸಾಹಸ ಛಾಯಾಪತಿಯವರದು. ಹೀಗಾಗಿ ಅವರು ಲೇಖಕ / ವಿದ್ವಾಂಸ ಬಳಗದಲ್ಲಿ ಆತ್ಮೀಯರು. ತ.ಸು. ಶಾಮರಾಯರ ಅಭಿನಂದನ ಗ್ರಂಥ 'ಸ್ವಸ್ತಿ' ಅವರ ಪ್ರಕಟಣ ಇತಿಹಾಸದಲ್ಲಿ ಮಹತ್ವದ ಪ್ರಕಟಣೆ. ಹಾ.ಮಾ. ನಾಯಕರು ಹೇಳುವಂತೆ 'ಸಾವಿರ ಪುಟಗಳ ಅದರಲ್ಲೂ ಈ ಬಗೆಯ ಪುಸ್ತಕ ಪ್ರಕಟಿಸಲು ಯಮಧೈರ್ಯವೇ ಬೇಕು.' ತ.ಸು. ಶಾಮರಾಯರ 'ಶಿವಶರಣ ಕಥಾರತ್ನಕೋಶ' ಬೃಹತ್ ಸಂಪುಟ ಮೂರು ಆವೃತ್ತಿ ಕಂಡಿವೆ. ಹಾ.ಮಾ. ನಾಯಕರ ಅನುವಾದಿತ ಕೃತಿ 'ಪ್ರಣಯ ಪದಾವಳಿ' ಚದುರಂಗರು ಹೇಳುವಂತೆ 'ಈ ಪ್ರಮಾಣದ ಚೆಲುವು ಹೊತ್ತ ಕೃತಿ ಕನ್ನಡ ಪುಸ್ತಕ ಪ್ರಕಾಶನದ ಇತಿಹಾಸದಲ್ಲಿ ಒಂದು ಮೈಲಿಗಲ್ಲು.' 1999ರಲ್ಲಿ ಛಾಯಾಪತಿಯವರಿಗೆ ಕನ್ನಡ ಪುಸ್ತಕ ಪ್ರಾಧಿಕಾರದಿಂದ 'ಅತ್ಯುತ್ತಮ ಪ್ರಕಾಶನ' ಪ್ರಶಸ್ತಿ ಅವರ ಸಂಸ್ಥೆಗೆ ಲಭ್ಯವಾದುದು ಅವರ ಸದಭಿರುಚಿಯ

ಪ್ರತೀಕವಾಗಿದೆ. ಜನಪ್ರಿಯಕವಿ ಚೆನ್ನವೀರ ಕಣವಿಯವರ ಹದಿನಾರು ಕವಿತಾ ಸಂಕಲನಗಳನ್ನು ಬಿಡಿಬಿಡಿಯಾಗಿ ಮತ್ತೆ ಮುದ್ರಿಸಿ ಈಗ ಹೊರತರುತ್ತಿರುದ್ದಾರೆ. ಇದೂ ಅವರ ಪ್ರಕಟಣ ಸಾಹಸಕ್ಕೆ ಒಂದು ಒಳ್ಳೆಯ ಉದಾಹರಣೆ. ಡಾ. ಎಚ್.ಎಸ್.ವಿ. ಅವರ ಸಮಗ್ರ ನಾಟಕಗಳು ' ಡಾ. ದೇಜ.ಗೌ. ಅವರ 'ಡೈರಿ ಮತ್ತು ಭಾಷಣಗಳು' ಪ್ರಕಟಿಸುವ ಯೋಜನೆ ಅವರ ತಲೆಯಲ್ಲಿದೆ.

ಛಾಯಾಪತಿಯವರು ಕೇವಲ ಪ್ರಕಾಶಕರಷ್ಟೇ ಆಗಿಲ್ಲ, ಒಳ್ಳೆಯ ಬರಹಗಾರರೂ ಆಗಿರುವರು. ಸುಮಾರು ಇಪ್ಪತ್ತೆರಡು ಕೃತಿಗಳನ್ನು ಬರೆದಿರುವ ಅವರು ಸಮಕಾಲೀನ ಲೇಖಕರ ನಡುವೆ ತಮ್ಮನ್ನು ಗುರುತಿಸಿಕೊಂಡಿರುವರು. ಎಪ್ಪತ್ತರ ಹೊಸ್ತಿಲಲ್ಲಿರುವ ನನ್ನ ಬಹುಕಾಲದ ಗೆಳೆಯರಿಗೆ 'ಛಾಯಾಭಿನಂದನ' ಎನ್ನುವ ಅಕ್ಷರಬಾಗಿನ ಹೊರತರುವ ಭರದ ಸಿದ್ಧತೆ ಸಾಗಿದೆ. ನೂರು ಸಮೃದ್ಧ ವಸಂತಗಳನ್ನು ಅವರು ಕಾಣಲಿ, ಅಕ್ಷರಲೋಕದ ಅವರ ವಿಶಿಷ್ಟ ಕನಸುಗಳು ಸಾಕಾರಗೊಳ್ಳಲಿ ಎಂದು ಹೃತ್ಪೂರ್ವಕವಾಗಿ ಹಾರೈಸುವೆನು.

# ನಾನು ಸಾಗಿ ಬಂದ ದಾರಿ

1968. ಇದು ನಾನು ಪ್ರಕಾಶನ ಆರಂಭಿಸಿದ ವರ್ಷ. ಆಗ ನನ್ನ ವಯಸ್ಸು 24. 1968. ಈ ಸಂಖ್ಯೆಗಳನ್ನು ಕೂಡಿದರೆ. 24 ಬರುತ್ತದೆ. ನನಗೆ ಇದು ಒಂದು ರೀತಿ ಮ್ಯಾಜಿಕ್ ನಂಬರಾಗಿ ಕಾಣಿಸುತ್ತದೆ. ಏಕೆಂದರೆ ನಾನು ತೆಗೆದುಕೊಂಡ ಈ ವೃತ್ತಿ ಬಹುಶಃ ಯಾರಿಗೆ ಆದರೂ ವೃತ್ತಿಯಾಗಿ ತೆಗೆದುಕೊಳ್ಳಲು ಎದೆಗುಂಡಿಗೆ ಗಟ್ಟಿಯಾಗಿರಬೇಕು. ಈ ಕಾಯಕ ಒಂದು ರೀತಿ ಕುದುರೆ ಜುಜು ಇದ್ದ ಹಾಗೆ. ಆದರೂ ನನಗೆ ಈ ವೃತ್ತಿಯನ್ನು ಒಂದು ರೀತಿ ಛಲ ಹಿಡಿದು ಸಾಧಿಸಬೇಕು ಎಂಬ ಉದ್ದೇಶ ಪ್ರಬಲವಾಗಿತ್ತು. ಯಾವುದೇ ವ್ಯಕ್ತಿಗೆ ನಿರಂತರ ಸಾಧನೆಯಿಂದ ಸಿದ್ಧಿ ಲಭಿಸುತ್ತದೆ. ಬಹುಶಃ ಕಾಲ ಸರಿದಂತೆ ನಾನು ಈ ಹಾದಿಯಲ್ಲಿ ನಡೆದು ಬಂದಿದ್ದೇನೆ. ಹಿಂತಿರುಗಿ ನೋಡಿದಾಗ ಹಾಗೂ ಇಂದು ನಾನು ಸಾಧಿಸಿರುವ ಪ್ರಗತಿಯನ್ನು ಎತ್ತರವನ್ನು ಹೋಲಿಸಿಕೊಂಡಾಗ ಒಂದು ರೀತಿ ಸಮಾಧಾನವಾಗಿದೆ, ಆರ್ಥಿಕವಾಗಿ, ಸಾಮಾಜಿಕವಾಗಿ ಹಾಗೂ ಮಾನಸಿಕ ವಾಗಿ. ಈ 24ರ ಸಂಖ್ಯೆಯನ್ನು ಏಕೆ ಅದೃಷ್ಟ ಸಂಖ್ಯೆ ಎಂದು ಭಾವಿಸಿದೆ ಎಂದರೆ, ಆ ಹೊತ್ತು ನಾನು ಪ್ರಕಾಶನವನ್ನು ಆರಂಭಿಸಿದಾಗ ನಮ್ಮ ತಂದೆಯವರ ಶಿಷ್ಯರಾದ ಜಿ. ಬ್ರಹ್ಮಪ್ಪನವರು ಬಹುದೊಡ್ಡ ಜ್ಯೋತಿಷ್ಯಕಾರರು. ಅವರು ನನ್ನ ಜಾತಕವನ್ನು ನೋಡಿ ನನ್ನ ವೃತ್ತಿಯ ಭವಿಷ್ಯ ಬಹಳ ಭವ್ಯವಾಗಿದೆ ಎಂದು ತಿಳಿಸಿದನ್ನು ನಾನು ಈ ಹೊತ್ತು ನೆನೆಯುತ್ತಿದ್ದೇನೆ.

ಪುಸ್ತಕೋದ್ಯಮದ ಸಂಸ್ಕೃತಿಯ ಬಗ್ಗೆ ದಿವಂಗತ ಎಚ್.ಎಂ. ಶಂಕರನಾರಾಯಣ ರಾಯರು ಸದಾ ಒಂದು ಮಾತು ಹೇಳುತ್ತಿದ್ದರು. ಪುಸ್ತಕೋದ್ಯಮಕ್ಕೆ ಅಸ್ತಿಭಾರ ಲೇಖಕ, ನಂತರ ಅಚ್ಚು ಮಾಡುವ ಕಾಗದ, ತದ ನಂತರ ಮುದ್ರಕ. ನಾನು ಇದಕ್ಕೆ ಪೂರಕವಾಗಿ ಮತ್ತೊಬ್ಬ ಪ್ರಮುಖ ವ್ಯಕ್ತಿಯನ್ನು ಇವರೊಂದಿಗೆ ಸೇರಿಸುತ್ತೇನೆ. ಮುಖಪುಟ ವಿನ್ಯಾಸ ಮಾಡುವ ಕಲಾವಿದ.

ನಾನು 1971ನೆಯ ಇಸವಿಯನ್ನು ನನ್ನ ಜೀವಮಾನದಲ್ಲಿ ಮರೆಯುವುದಿಲ್ಲ. ಅದು ನಾನು ದಾಂಪತ್ಯ ಜೀವನ ಪ್ರಾರಂಭಿಸಿದ ವರ್ಷ. ನನ್ನ ಶ್ರೀಮತಿ ಪುಷ್ಪ ನನ್ನ ಬಾಳಸಂಗಾತಿಯಾಗಿ, ನಮ್ಮ ಮನೆಯ ಬೆಳಕಾಗಿ, ನಮ್ಮ ತುಂಬು ಕುಟುಂಬಕ್ಕೆ ನಗು

ನಗುತ್ತಾ ಪ್ರವೇಶಿಸಿದಳು. ಅವಳು ನಮ್ಮ ತಂದೆ, ತಾಯಿಯವರಿಗೆ ಮತ್ತೊಬ್ಬ ಮಗಳಾಗಿ ಬಂದವಳೇ ಹೊರತು ಸೊಸೆಯಾಗಿ ಅಲ್ಲ. ನನ್ನ ತಮ್ಮನಿಗೆ ಗೌರವದ ಅತ್ತಿಗೆಯಾದರೆ ನನ್ನ ಅಣ್ಣನಿಗೆ ಸ್ವಂತ ತಂಗಿಯಂತಿದ್ದಳು. ಇವೆಲ್ಲದರೊಂದಿಗೆ ನನಗೆ 'For Every succeesful man there is a woman behind' ಅನ್ನುವಂತೆ ನನಗೆ ಛಾಯಾಸತಿ ಯಾದಳು. ನಮ್ಮ ಮಂಠದ ದಾಸೋಹದ ಪರಂಪರೆ ಮುಂದುವರಿದಿರು ವುದಕ್ಕೆ ಆಕೆಯೇ ಕಾರಣ. 'ಗೃಹಿಣಿ ಗೃಹಮುಚ್ಯತೆ' ಅನ್ನುವ ಪದಕ್ಕೆ ಅರ್ಥ ಬರುವುದೇ ಪುಷ್ಪ ಅಂಥವರ ವ್ಯಕ್ತಿತ್ವದಿಂದ. ಮಹಾ ದೈವ ಭಕ್ತಳಾದ ಆಕೆ ನಮ್ಮ ತಂದೆಯವರು ಸದಾ ಆಡುತ್ತಿದ್ದ ಮಾತುಗಳು 'ಧರ್ಮೋ ರಕ್ಷತಿ ರಕ್ಷಿತಃ' ಅನ್ನುವ ಮಾತಿಗೆ ಸಾಕ್ಷಿಯಾಗಿದ್ದಾಳೆ. ನನ್ನ ಎಲ್ಲಾ ಸಫಲತೆಯ ಕಾರ್ಯಗಳ ಹಿಂದೆ ಅವಳಿದ್ದಾಳೆ.

ನಾನು ಪ್ರಕಾಶನ ವೃತ್ತಿಗೆ ಕಾಲಿರಿಸಿದಾಗ ನನಗೆ ಯಾವ ಮೂಲಧನವೂ ಇರಲಿಲ್ಲ. ತಂದೆಯವರು ನೀಡಿದ ಕೆಲವು ಪ್ರಕಟಣೆಗಳೇ ಮೂಲಧನವಾಯಿತು. ಇದರೊಂದಿಗೆ ನಮ್ಮ ತಂದೆಯವರ ಕೆಲವು ವಿದ್ಯಾರ್ಥಿಗಳು ನನಗೆ ನನ್ನ ಪ್ರಾರಂಭದ ವೃತ್ತಿ ಜೀವನದಲ್ಲಿ ಸಹಾಯ ಮಾಡಿದರು. ಅವರಲ್ಲಿ ಪ್ರಮುಖವಾಗಿ ಜಿ.ಎಸ್. ಶಿವರುದ್ರಪ್ಪನವರನ್ನು ಮರೆಯುವಂತಿಲ್ಲ. ಅವರ ಆರಂಭದ ಕೆಲವು ಕವಿತೆಗಳಾದ ಚೆಲುವು ಒಲವು, ಸಾಮಗಾನ ಮತ್ತು ಅವರ ಡಾಕ್ಟರೇಟ್ ಪ್ರಬಂಧ 'ಸೌಂದರ್ಯ ಸಮೀಕ್ಷೆ'ಯನ್ನು ನಮ್ಮ ತಂದೆಯವರು ಪ್ರಕಟಿಸಿದ್ದರು.

ನಾನು ವೃತ್ತಿ ಪ್ರಕಾಶಕನಾದ ಮೇಲೆ ಆಗಾಗ ಜಿ.ಎಸ್.ಎಸ್. ಅವರನ್ನು ಕಾಣುತ್ತಿದ್ದೆ. ಅವರಿಗೆ ನಾನು ಪ್ರಕಟಿಸುತ್ತಿದ್ದ ಹೊಸ ಹೊಸ ಪುಸ್ತಕಗಳನ್ನು ನೀಡುತ್ತಿದೆ. ಅವರು ಅವುಗಳ ಮುದ್ರಣದ ಗುಣಮಟ್ಟವನ್ನು ಮೆಚ್ಚುತ್ತಿದ್ದರು. ಒಮ್ಮೆ ಅವರು ಲೋಕಾಭಿರಾಮವಾಗಿ ಅವರ ಮಹತ್ವದ ಕೃತಿ 'ಸೌಂದರ್ಯ ಸಮೀಕ್ಷೆ'ಯನ್ನು ಕುರಿತು ನನ್ನಲ್ಲಿ ಸಂಕಟ ತೋಡಿಕೊಂಡರು. ಯಾವ ರೀತಿ ಸೌಂದರ್ಯ ಸಮೀಕ್ಷೆ ಕೆಟ್ಟದಾಗಿ ಅಚ್ಚಾಯಿತು, ಮುದ್ರಣ ದೋಷಗಳಿಗೆ ಎಣೆಯೇ ಇರಲಿಲ್ಲ ಎಂದು ನಾನಾ ವಿಧವಾಗಿ ಸಂಕಟಪಟ್ಟರು. ನಾನು ಅವರ ನೋವನ್ನು ಅರ್ಥ ಮಾಡಿಕೊಂಡೆ. ಅವರಿಗೆ 'ಸೌಂದರ್ಯಸಮೀಕ್ಷೆ'ಯನ್ನು ಮುಂದೆ ಸುಂದರವಾಗಿ ಪ್ರಕಟಿಸುತ್ತೇನೆ ಎಂದು ಭರವಸೆ ನೀಡಿದೆ. ಅವರು ನನಗೆ ಒಂದು ಕಪ್ ಕಾಫಿ ಕೊಟ್ಟು, ನೀನು Business man ಹೀಗೆ ಹೇಳುತ್ತೀಯ ಎಂದು ಹಗುರವಾಗಿ ತೇಲಿಸಿದರು. ಆದರೆ ನಾನು ನನ್ನ ಮಾತಿನಂತೆ ಈ ಪ್ರಸಂಗವಾದ ಆರು ತಿಂಗಳಲ್ಲೇ ಜಿ.ಎಸ್.ಎಸ್. ಅವರ 'ಸೌಂದರ್ಯಸಮೀಕ್ಷೆ' ಯನ್ನು ಮೈಸೂರಿನ ಪ್ರತಿಷ್ಠಿತ ಮುದ್ರಣಾಲಯ 'ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್ಸಿನಲ್ಲಿ' ಅಚ್ಚು ಮಾಡಿಸಿದೆ. ಶೃಂಗೇರಿ ಕಾಲೇಜಿನ ಪ್ರಾಂಶುಪಾಲರಾಗಿದ್ದ ಕೆ.ಬಿ. ರಾಮಕೃಷ್ಣ ರಾಯರು ತತ್ವಶಾಸ್ತ್ರದ ಪ್ರಾಧ್ಯಾಪಕರಾಗಿದ್ದರು, ಜೊತೆಗೆ ಬಹುದೊಡ್ಡ ಬಹುಮುಖ

ವ್ಯಕ್ತಿತ್ವವುಳ್ಳ ವಿಶೇಷ ಜಂಟಲ್‌ಮನ್, ಶ್ರೇಷ್ಠ ಕಲಾರಾಧಕರಾಗಿದ್ದರು, ಕಲಾವಿದರಾಗಿದ್ದರು. ಅವರೊಂದಿಗೆ 'ಸೌಂದರ್ಯಸಮೀಕ್ಷೆ'ಯ ಮುಖಪುಟದ ಬಗ್ಗೆ ಚರ್ಚಿಸಿದೆ. ಅವರು ಅದರ ಬಗ್ಗೆ ಆಳವಾಗಿ ಆಲೋಚಿಸಿ ತಮ್ಮದೇ ಆದ ವಿಶ್ಲೇಷಣೆಯನ್ನು ನನಗೆ ವಿವರಿಸಿದರು.

'Is it possible to measure beauty by any physical or mathematical means? The anwser is No. Beauty is something one can enjoy. ಸೌಂದರ್ಯಕ್ಕೆ ಪ್ರತೀಕ ಗುಲಾಬಿ ಹೂ. ಅದರ ಮೇಲೆ ಒಂದು ಡಿವೈಡರ್ಸ್ ಇಟ್ಟು, ಅದರ ಎದುರಿಗೆ ಒಂದು ಪ್ರಶ್ನಾರ್ಥಕ ಚಿನ್ಹೆಯನ್ನು ಹಾಕಿದರು. ಈ ವಿವರಣೆ, ಜಿ.ಎಸ್.ಎಸ್. ಅವರಿಗೆ ಎಷ್ಟು ಇಷ್ಟವಾಯಿತೆಂದರೆ ಸೌಂದರ್ಯ ಸಮೀಕ್ಷೆ ಅನೇಕ ಬಾರಿ ಮುದ್ರಣವಾದರೂ ಮೂಲ ಮುಖಪುಟ ಬದಲಾವಣೆಯಾಗಲಿಲ್ಲ. ಆದರೆ ಕಾರ್ಯಕಾರಣ ಪ್ರಕಾಶಕರು ಮಾತ್ರ ಬದಲಾದರು.

'ಸೌಂದರ್ಯ ಸಮೀಕ್ಷೆ' ಎರಡನೆಯ ಮುದ್ರಣ ಬಹಳ ಸುಂದರವಾಗಿ ಪ್ರಕಟವಾಯಿತು. ಶಕ್ತಿ ಪ್ರೆಸ್ಸಿನ ಶ್ರೀನಿವಾಸಮೂರ್ತಿಗಳು ಹಣದ ವಿಷಯದಲ್ಲಿ ಎಷ್ಟು ಕಟ್ಟುನಿಟ್ಟೋ, ಪುಸ್ತಕದ ಉತ್ಪಾದನೆಯ ಅಚ್ಚುಕಟ್ಟಿನಲ್ಲಿ ಅದಕ್ಕೂ ಜಾಸ್ತಿ ಮುತುವರ್ಜಿ ವಹಿಸುತ್ತಿದ್ದರು. ಎರಡನೆಯ ಮುದ್ರಣದ ಕರಡನ್ನು ನಾನು ಬಹಳ ಎಚ್ಚರಿಕೆಯಿಂದ ತಿದ್ದಿದೆ. ಅದಕ್ಕೆ ನನ್ನ ತಮ್ಮನ ಸ್ನೇಹಿತ ವಾಸು ಬಹಳ ಸಹಕರಿಸಿದ. ಈ ರೀತಿ ಸಿದ್ಧವಾದ 'ಸೌಂದರ್ಯ ಸಮೀಕ್ಷೆ'ಯ ಸಾಧಾರಣ ಪ್ರತಿಗಳನ್ನು ಜಿ.ಎಸ್.ಎಸ್. ಅವರಿಗೆ ಕಳುಹಿಸಿ ನನ್ನ ಪತ್ರದಲ್ಲಿ ಅವರಿಗೆ ಇಂದು ನಿಮಗೆ ಸೌಂದರ್ಯ ಸಮೀಕ್ಷೆಯ ಸಾಧಾರಣ ಪ್ರತಿಗಳನ್ನು ಕಳುಹಿಸುತ್ತಿದ್ದೇನೆ ಎಂದು ಬರೆದೆ. ಪುಸ್ತಕಗಳು ತಲುಪಿದ ಒಡನೆಯೆ ಜಿ.ಎಸ್.ಎಸ್. ಅವರು ನನಗೆ ಈ ರೀತಿ ಪತ್ರ ಬರೆದರು. ಪ್ರಿಯ ಛಾಯಾಪತಿ. ಇವು ನಿಮ್ಮ ಮಾರಾಟಕ್ಕೆ ಸಾಧಾರಣ ಇರಬಹುದು ಆದರೆ ನನಗೆ ಮಾತ್ರ ಅಸಾಧಾರಣ ಎಂದು ಬರೆದು ತಿಳಿಸಿದರು. ನನ್ನ ವ್ಯವಹಾರದ ನೀತಿಯನ್ನು ಶ್ಲಾಘಿಸಿದರು.

ನನ್ನ ಮತ್ತು ಜಿ.ಎಸ್.ಎಸ್. ಅವರ ಬಾಂಧವ್ಯ ಇದರಿಂದ ಗಟ್ಟಿಯಾಯಿತು. ನನ್ನ ನಡೆ, ನುಡಿಗಳನ್ನು ಅವರು ಇಷ್ಟಪಟ್ಟರು. ಒಮ್ಮೆ ಎಚ್.ಎಸ್. ವೆಂಕಟೇಶ ಮೂರ್ತಿಯವರ ಮನೆಯಲ್ಲಿ ನಡೆದ ಪುಸ್ತಕ ಬಿಡುಗಡೆಯ ಸಮಾರಂಭದಲ್ಲಿ ನಾನು ಅವರ ಪಕ್ಕದಲ್ಲೇ ಕುಳಿತಿದ್ದೆ. ಅವರೊಂದಿಗೆ ನಾಳೆ ನಿಮ್ಮ ಮನೆಗೆ ಬರುತ್ತನೆ, ರಾಯಲ್ಟಿ ಕೊಡಬೇಕು ಎಂದು ತಿಳಿಸಿದೆ. ಒಡನೆಯೆ ಅವರು ನಿಮ್ಮ ರಾಯಲ್ಟಿ ಇರಲಿ, ನೀವು ಬನ್ನಿ ಎಂದಾಗ ನಮ್ಮ ಅವರ ಬಾಂದವ್ಯ ಲೌಕಿಕ ವ್ಯವಹಾರವನ್ನು ಮೀರಿತ್ತು.

ಯಾವ ಪ್ರಕಾಶಕರಿಂದ ಜಿ.ಎಸ್.ಎಸ್ ಅವರಿಗೆ ಬೇಸರವಾಗಿತ್ತೋ. ಆ ಪ್ರಕಾಶಕರ ಮಗನಾದ ನಾನು ಒಂದು ಹಂತದಲ್ಲಿ ಅವರ ಎಲ್ಲಾ ಪುಸ್ತಕಗಳಿಗೆ ಪ್ರಕಾಶಕನಾಗಿದ್ದೆ.

ಅವರ ಆಯ್ದ ಕವಿತೆಗಳನ್ನು ಮೈಸೂರಿನ ಸುಪ್ರಸಿದ್ಧ ವೆಸ್ಲಿ ಪ್ರೆಸ್ಸಿನಲ್ಲಿ ಅಚ್ಚು ಮಾಡಿಸಿದ್ದೆ.

ಒಮ್ಮೆ ಪ್ರೊ. ಚಿದಾನಂದಮೂರ್ತಿಗಳು ಹಾಗೂ ಅವರೊಂದಿಗೆ ಪ್ರೊ. ವಿದ್ಯಾ ಶಂಕರ ಮತ್ತು ಪ್ರೊ. ರಾಜಪ್ಪ ಅವರುಗಳನ್ನು ಮಾನಸಗಂಗೋತ್ರಿಯಲ್ಲಿ ಅನಿರೀಕ್ಷಿತ ವಾಗಿ ಭೇಟಿಯಾದೆ. ಆ ಹೊತ್ತು ಅವರು ಜಿ.ಎಸ್. ಶಿವರುದ್ರಪ್ಪನವರ ಅಭಿನಂದನ ಗ್ರಂಥದ ಪ್ರಕಟಣೆಯ ಬಗ್ಗೆ ಯೋಚಿಸುತ್ತಿದ್ದರು. ನನ್ನನ್ನು ನೋಡುತ್ತಿದ್ದಂತೆಯೇ ಅವರ ಪ್ರಕಟಣೆಯ ಬಗ್ಗೆ ನನ್ನ ಮುಂದೆ ಪ್ರಸ್ತಾಪ ಮಾಡಿದರು. ಒಡನೆಯೆ ನಾನು ನನ್ನ ಸಮ್ಮತಿಯನ್ನು ಸೂಚಿಸಿದೆ. ಜಿಎಸ್‌ಎಸ್ ಅವರ ಅಭಿನಂದನ ಗ್ರಂಥ 'ಸ್ನೇಹಕಾರ್ತೀಕ' ವನ್ನು ನಿಗದಿತ ಸಮಯಕ್ಕೆ ಸಿದ್ಧಪಡಿಸಿ ಅದರ ಬಿಡುಗಡೆಗೆ ಅನುವು ಮಾಡಿಕೊಟ್ಟೆ. ಜಿ.ಎಸ್.ಎಸ್. ಅಭಿನಂದನ ಸಮಿತಿಯವರು 'ಸ್ನೇಹಕಾರ್ತೀಕದ ನೂರು ಪ್ರತಿಗಳನ್ನು ಕೇಳಿದರು. ಸಂತೋಷದಿಂದ ಕೊಟ್ಟೆ. ಅವರು ಅವನ್ನು ಮಾರಿ ಬಂದ ಹಣವನ್ನು ಜಿ.ಎಸ್.ಎಸ್. ಅವರ ಹೆಸರಿನಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯ ದಲ್ಲಿ ಸ್ಕಾಲರ್ ಷಿಪ್ ಇರಿಸಿದರು. ಈ ಸಂಗತಿ ನನಗೆ ಮರೆತುಹೋಗಿತ್ತು. ಆದರೆ ಜಿ.ಎಸ್.ಎಸ್. ದಿವಂಗತರಾದಾಗ ಅವರ ಅಂತ್ಯಕ್ರಿಯೆಗೆ ಹೋಗಿದ್ದೆ. ಅಲ್ಲಿ ಅಕಸ್ಮಾತ್ ವಿದ್ಯಾಶಂಕರ್ ಸಿಕ್ಕಿದ್ದರು. ಆಗ ಅವರು ನನ್ನ ಕೈ ಹಿಡಿದು ಕೃತಜ್ಞತೆಯಿಂದ ಕಣ್ಣೀರು ಮಿಡಿದು ಈ ಸಂಗತಿಯನ್ನು ತಿಳಿಸಿದಾಗ ನನಗೂ ಒಂದು ರೀತಿ ಸಮುದ್ರಕ್ಕೆ ಒಂದು ತೊಟ್ಟು ನೀರು ಹಾಕಿದ ಸಮಾಧಾನವಾಯಿತು.

ಒಮ್ಮೆ ನಾನು ಒಬ್ಬ ಲೇಖಕರಿಗೆ ನನ್ನ ಕೈಲಾದ ಸಹಾಯ ಮಾಡಿದ್ದೆ. ಕೃತಜ್ಞತೆಯ ಬದಲು ಅವರು ನನಗೆ ಮಾನಸಿಕವಾಗಿ ಹಾಗೂ ಲೌಕಿಕವಾಗಿ ತೊಂದರೆಕೊಟ್ಟರು. ವಿಷಯ ತಿಳಿದ ಜಿ.ಎಸ್.ಎಸ್. ಮಧ್ಯ ಪ್ರವೇಶಿಸಿ ಅವರಿಗೆ ತಿಳುವಳಿಕೆ ನೀಡಿದರು. ಆ ಲೇಖಕರಿಂದ ನನಗೆ ಬರುತ್ತಿದ್ದ ವಿನಾಕಾರಣದ ತೊಂದರೆಯನ್ನು ತಪ್ಪಿಸಿದರು.

ನನ್ನ ಆರಂಭದ ದಿನಗಳಲ್ಲಿ ಜಿ.ಎಸ್.ಎಸ್. ಅವರು ನೀಡಿದ ಸಹಕಾರವನ್ನು ನಾನು ಮರೆಯಲು ಸಾಧ್ಯವಿಲ್ಲ. ಅಪಾರವಾದ ಗೌರವವನ್ನು ನಮ್ಮ ತಂದೆಯವರಲ್ಲಿ ಅವರು ಇರಿಸಿಕೊಂಡಿದ್ದರು. ನನ್ನ ತಂದೆಯವರ ಪ್ರತಿಬಿಂಬವನ್ನು ಅವರು ನನ್ನಲ್ಲಿ ಕಂಡಿದ್ದರು. ನನಗೆ ರಾಜ್ಯೋತ್ಸವ ಪ್ರಶಸ್ತಿ ಬರಬೇಕೆಂದು ಆಶಿಸಿದವರಲ್ಲಿ ಅವರು ಪ್ರಮುಖರು. ಆದರೆ ಅವರು ನನ್ನ ಕೃತಿಗಳನ್ನು ಓದಿ ಮೆಚ್ಚಿದಾಗ ನನಗೆ ಅದಕ್ಕಿಂತ ಹೆಚ್ಚಿನ ಸಂತೋಷವಾಯಿತು.

ನಾನು ಪ್ರಕಾಶಕನಾಗಿ ಪ್ರಕಟಣ ಕಾರ್ಯ ಆರಂಭಿಸಿದಾಗ ನನಗೆ ಮಾನಸಿಕವಾಗಿ ಆಸರೆಯಾಗಿ ನಿಂತವರು ಶ್ರೀ ಸಿ.ಪಿ. ಕೃಷ್ಣಕುಮಾರ್ ಅವರು. (ಸಿ.ಪಿ.ಕೆ.) ಆ ಕಾಲದಲ್ಲಿ ನಮ್ಮ ತಂದೆಯವರಿಗೆ ಲೌಕಿಕವಾಗಿ ಅಷ್ಟು ಒಳ್ಳೆಯ ಸಂಬಂಧ ಮೈಸೂರು ವಿಶ್ವವಿದ್ಯಾ ನಿಲಯದ ಕನ್ನಡ ಇಲಾಖೆಯೊಂದಿಗೆ ಇರಲಿಲ್ಲ. ಹಾಗಾಗಿ ನಮ್ಮ ಬಳಿ ವಿಶ್ವವಿದ್ಯಾ

ನಿಲಯದ ಅನೇಕ ಲೇಖಕರು ಬರುತ್ತಿರಲಿಲ್ಲ. ಆದರೆ ಸಿ.ಪಿ.ಕೆ. ಹಾಗಿರಲಿಲ್ಲ. He was a gentleman of the highest order. ಅವರು ನಾನು ಉತ್ಸಾಹದಿಂದ ಮಾಡುತ್ತಿದ್ದ ಕನ್ನಡದ ಕೆಲಸವನ್ನು ದೇ. ಜವರೇಗೌಡ ಮತ್ತು ಹಾ.ಮಾ. ನಾಯಕರಿಗೆ ತಿಳಿಸುತ್ತಿದ್ದರು. ಅವರು ಇದನ್ನು ತಿಳಿದು ಸಂತೋಷಪಡುತ್ತಿದ್ದರು. ನನಗೆ ತಿಳಿದಂತೆ ಒಮ್ಮೆ ದೇ. ಜವರೇಗೌಡರು ಹಾ.ಮಾ. ನಾಯಕರ ಬಳಿ, ನೋಡಿ ನಾಯಕರೆ, ಆ ಹುಡುಗ ಕನ್ನಡದಲ್ಲಿ ಬಹಳ ಒಳ್ಳೆಯ ಕೆಲಸ ಮಾಡುತ್ತಿದ್ದಾನೆ. ಆತನಿಗೆ ಪ್ರೋತ್ಸಾಹನೀಡಿ ಎಂದರಂತೆ. ಗುಣಪಕ್ಷಪಾತಿಗಳಾದ ಹಾ.ಮಾ. ನಾಯಕರಿಗೆ ಜವರೇಗೌಡರ ಮಾತು ಸರಿ ಎನ್ನಿಸಿತು. ಮುಂದೆ ತಮ್ಮ ಜೀವಿತದ ಕೊನೆಯವರೆಗೂ ಅವರು ನನಗೆ ಆಧಾರವಾಗಿದ್ದರು. ನಾಯಕರು ಮೃತರಾದಾಗ ಜಿ.ಎಸ್.ಎಸ್. ನನ್ನನ್ನು ಕುರಿತು ಛಾಯಾಪತಿ, ನಿನ್ನ ಬಲಗೈ ಮುರಿಯಿತ್ತಲ್ಲವೇ ಎಂದಾಗ ನನಗರಿವಿಲ್ಲದೆ ನನ್ನ ಕಣ್ಣಂಚಿನಲ್ಲಿ ನೀರಾಡಿತು.

ಸುಮಾರು 1973ರ ದಶಕವಿರಬಹುದು. ಒಂದು ದಿವಸ ಬೆಳಿಗ್ಗೆ ಒಂಭತ್ತು ಗಂಟೆಗೆ ಒಂದು ದೂರವಾಣಿ ಕರೆಬಂತು. ಅತ್ತ ಕಡೆಯಿಂದ ಹಾ.ಮಾ. ನಾಯಕರ ಧ್ವನಿ ಕೇಳಿಸಿತು. ಅವರು ನನ್ನನ್ನು ಕುರಿತು ಒಡನೆಯೆ ಅವರ ಮನೆಗೆ ಬರುವಂತೆ ತಿಳಿಸಿದರು. ನಾಯಕರ ಬಗ್ಗೆ ಆ ವೇಳೆಗೆ ನನಗೆ ಬಹಳ ಗೌರವ ಮೂಡಿತ್ತು. ಅವರ ಮನೆಗೆ ತಕ್ಷಣ ಹೋದೆ. ಅವರು ನನ್ನನ್ನು ಎದುರಿಗೆ ಕೂರಿಸಿಕೊಂಡು ಒಂದು ಸಭೆಯ ನಡಾವಳಿಯ ಪತ್ರವನ್ನು ತೋರಿಸಿದರು. ಅದರಂತೆ ನನಗೆ ಶಿಕ್ಷಣ ಇಲಾಖೆಯ ಸಗಟು ಖರೀದಿಯ ಯೋಜನೆ ಯಡಿಯಲ್ಲಿ ಇಪ್ಪತ್ತುಸಾವಿರ ರೂಪಾಯಿಗಳ ಬೇಡಿಕೆ ಲಭಿಸಿತ್ತು. ನಾನು ಸಂತೋಷ ಪಟ್ಟೆ, ನಾಯಕರು ನನ್ನ ಬೆನ್ನು ತಟ್ಟುತ್ತಾ ಹೋಗಿ, ಕನ್ನಡದಲ್ಲಿ ಒಳ್ಳೆಯ ಕೆಲಸ ಮಾಡುತ್ತಿದ್ದೀರಿ, ಮುಂದುವರಿಸಿ ಎಂದರು. ಇದು ಇಷ್ಟಕ್ಕೇ ನಿಲ್ಲಲಿಲ್ಲ. ಸಂದರ್ಭ ಬಂದಾಗಲೆಲ್ಲ ಅವರು ತಮ್ಮ ಸಹಾಯ ಹಸ್ತವನ್ನು ಚಾಚುತ್ತಲೇ ಬಂದರು.

1998ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರದಿಂದ 'ಅತ್ಯುತ್ತಮ ಪ್ರಕಾಶನ ಪ್ರಶಸ್ತಿ' ಪಡೆದೆ. ಅದು ಪ್ರಸಾರವಾಗುತ್ತಿದ್ದಂತೆ ದೇ. ಜವರೇಗೌಡರು ಬಹಳ ವಿಶ್ವಾಸದಿಂದ ನನ್ನನ್ನು ಅಭಿನಂದಿಸಿದರು. ಚೆನ್ನವೀರಕಣವಿಯವರು ನನ್ನನ್ನು ದೂರವಾಣಿಯಲ್ಲಿ ಸಂಪರ್ಕಿಸಿ 'ಛಾಯಾಪತಿ' You command this award ಎಂದು ಅಭಿನಂದಿಸಿದಾಗ ನಾನು ಮೂಕವಿಸ್ಮಿತನಾದೆ. ಈ ಪ್ರೀತಿಗೆ ಬೆಲೆ ಕಟ್ಟುವುದು ಹೇಗೆ?

ಮುಂದೆ ಒಂದು ದಿನ ನಾನು ಮತ್ತು ಲಕ್ಕಪ್ಪಗೌಡರು ಯಾವುದೋ ಕೆಲಸದ ನಿಮಿತ್ತ ನಾಯಕರ ಮನೆಗೆ ಹೋಗಿದ್ದೆವು. ಆಗ ನಾಯಕರು ಲಕ್ಕಪ್ಪಗೌಡರನ್ನು ಕುರಿತು ಏನು ಸ್ವಾಮಿ, ಈ ಬಾರಿ ಛಾಯಾಪತಿಯವರಿಗೆ ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ಬಂದಿದೆಯಲ್ಲ ಎಂದರು. ಅದಕ್ಕೆ ಲಕ್ಕಪ್ಪಗೌಡರು ಇಲ್ಲ ಸಾರ್, ನಾವು ಕಳೆದ ಮೂರು

ವರ್ಷಗಳ ಸಾಧನೆಯನ್ನು ನೀತಿಸಂಹಿತೆಯ ಮೂಲಕ ಗಮನಿಸುತ್ತೇವೆ. ಅದರಂತೆ ಇವರು ಕಳೆದ ಮೂರು ವರ್ಷಗಳಲ್ಲಿ ಒಳ್ಳೆಯ ಕನ್ನಡದ ಪುಸ್ತಕಗಳನ್ನು ಪ್ರಕಟಿಸಿದ್ದಾರೆ ಎಂದು ತಿಳಿಸಿದರು. ಒಡನೆಯೆ ನಾಯಕರು ಅದಕ್ಕೇರಿ ನಾನು ಅವರ ಎದುರಿಗೇ ಕೇಳಿದ್ದು, ಎಂದು ಹೇಳಿ ನೀವು ಛಾಯಾಪತಿಯವರಿಗೆ ಪ್ರಶಸ್ತಿ ನೀಡಿ ಬಹಳ ಒಳ್ಳೆಯ ಕೆಲಸ ಮಾಡಿದಿರಿ ಎಂದು ತಿಳಿಸಿದರು. ಮುಂದೆ ಪ್ರಶಸ್ತಿ ನೀಡುವ  ಸಮಾರಂಭಕ್ಕೆ ನನ್ನನ್ನು ಗೌರವಿಸಲು ಲಕ್ಕಪ್ಪಗೌಡರು ನಾಯಕರನ್ನು ಕರೆಸಿದ್ದರು. ಅವರೇ ಮುಂದೆ ನಿಂತು ಗೌರವಿಸಿದರು. ಮನೆಯಿಂದ ಸಮಾರಂಭಕ್ಕೆ ಹೊರಟ ನಾಯಕರು ಮತ್ತೆ ಒಳಗೆ ಬಂದಾಗ, ಅವರ ಪತ್ನಿ ಯಶೋದಮ್ಮ ಏಕೆ ವಾಪಸ್ಸು ಬಂದಿರಿ? ಏನಾದರು ಮರೆತಿದ್ದೀರ ಎಂದರಂತೆ. ಆಗ ನಾಯಕರು ಹೌದು ಮರೆತಿದ್ದೆ. ಈಗ ನೆನಪು ಬಂತು. ಆ ಹುಡುಗನಿಗೆ ನಾನು ಏನು ಮಾಡಲಿಲ್ಲ, ಎಂದು ಹೇಳುತ್ತಾ ರೂಮಿನ ಒಳಗೆ ಹೋಗಿ ಒಂದು ದೊಡ್ಡ ಶಾಲನ್ನು ತೆಗೆದುಕೊಂಡು ಬಂದು ಆಚೆ ಹೊರಟರಂತೆ. ನನಗೆ ಸಮಾರಂಭದಲ್ಲಿ ಆ ಶಾಲನ್ನು ಹೊದ್ದಿಸಿದ್ದರು.

ಇದಾದ ನಂತರ ಒಂದು ದಿವಸದ ನಂತರ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳು ನನಗೆ ಫೋನ್ ಮಾಡಿ ನನ್ನ 'ವ್ಯಕ್ತಿ ವಿಷಯ' ಬೇಕೆಂದು ಕೋರಿದರು. ಅದರಂತೆ ನಾನು ಅವರಿಗೆ ಅದನ್ನು ತಲುಪಿಸಿದೆ. ನಾಯಕರಲ್ಲಿ ಮತ್ತು ನನ್ನಲ್ಲಿ ಒಂದು ರೀತಿ ಗುರು, ಶಿಷ್ಯ ಬಾಂಧವ್ಯವಿತ್ತು. ಆದ್ದರಿಂದ ನಾನು ಯಾವುದೇ ವಿಚಾರವನ್ನು ನಾಯಕರಿಗೆ ತಿಳಿಸುತ್ತಿದ್ದೆ. ಈ ವಿಚಾರವನ್ನೂ ಸಹ ಅವರಿಗೆ ತಿಳಿಸಿದೆ. ಅವರು ಈ ವಿಚಾರವನ್ನು ತಾವೇ ಕಾರ್ಯದರ್ಶಿಗಳಿಗೆ ತಿಳಿಸಿದ್ದು ಎಂದಾಗ ಮನದಲ್ಲೇ ಹರ್ಷದಿಂದ ಅವರಿಗೆ ನಮಿಸಿದೆ.

ಇದೊಂದು ಪ್ರಸಂಗ, ನಾನೊಮ್ಮೆ, ಮೈಸೂರು ಆಕಾಶವಾಣಿಯಲ್ಲಿ 'ಪ್ರಕಟಣಾ ಪ್ರಪಂಚದ ಆಗು ಹೋಗುಗಳು' ಎಂಬ ವಿಷಯದ ಬಗ್ಗೆ ಮಾತನಾಡಿದೆ. ನನ್ನ ಮಾತುಗಳು ಬಿತ್ತರವಾದ ನಂತರ ದೂರವಾಣಿ ಕರೆ ಮೊಳಗಿತು. ಅತ್ತ ಕಡೆಯಿಂದ ಹಾ.ಮಾ. ನಾಯಕರ ಧ್ವನಿ. ಶಹಬಾಸ್, ಬಹಳ ಚೆನ್ನಾಗಿ ಮಾತನಾಡಿದಿರಿ ಸ್ವಾಮಿ ಎಂಬ ವಾಣಿ ಮೊಳಗಿತು. ಅವರೊಂದಿಗೆ ಮಾತು ಮುಗಿಸಿ ಇಟ್ಟೆ. ಮತ್ತೊಮ್ಮೆ ದೂರವಾಣಿ ಸದ್ದು ಮಾಡಿತು. ಅದು ನನ್ನ ಪ್ರೀತಿಯ, ಅಭಿಮಾನದ ಧ್ವನಿ. ನನ್ನ ತಂದೆಯ ಧ್ವನಿ. ಛಾಯಿ, ಎಷ್ಟು ಚೆನ್ನಾಗಿ ಮಾತನಾಡಿದೆಯಲ್ಲಾ ಎಂದಾಗ ನನ್ನ ಜೀವನ ಸಾರ್ಥಕವಾಯಿತು ಎಂದು ಕೊಂಡೆ. ನಾನು ಆಕಾಶವಾಣಿಯಲ್ಲಿ ಮಾತನಾಡಿದ ಭಾಷಣದ ವಿವರ ಇಗೋ ಈ ಕೆಳಕಂಡತಿದೆ.

## ಕನ್ನಡ ಪ್ರಕಟಣಾ ಪ್ರಪಂಚದ ಆಗು ಹೋಗುಗಳು

ಕನ್ನಡ ಪುಸ್ತಗಗಳ ಪ್ರಕಟಣೆ ಇಂದು ಒಂದು ಆಕರ್ಷಕ ಮತ್ತು ಸ್ಪರ್ಧಾತ್ಮಕ ಉದ್ಯಮವಾಗಿ ಬೆಳೆದು ಬಂದಿದೆ. ಈಗ ಇಪ್ಪತ್ತೈದು ವರ್ಷಗಳ ಹಿಂದೆ ಕನ್ನಡದಲ್ಲಿ ಬೆರಳೆಣಿಕೆಯಷ್ಟು ಪ್ರಕಾಶಕರಿದ್ದರು. ಆಗಲೇ ವೃತ್ತಿ ಪ್ರಕಾಶಕರ ಸಂಖ್ಯೆ ಕಡಿಮೆ ಇತ್ತು ಎಂದರೆ ಆಶ್ಚರ್ಯವಾಗಬಹುದಲ್ಲವೇ? ಹೌದು, ವೃತ್ತಿ ಮತ್ತು ಪ್ರವೃತ್ತಿಯುಳ್ಳ ಪ್ರಕಾಶಕರ ಸಂಖ್ಯೆಯೇ ಅಂದು ಸಿಂಹಪಾಲಾಗಿತ್ತು. ಆದರೆ ಇಂದು ಪ್ರಕಾಶಕರ ಸಂಖ್ಯೆ ಹಿಂದಿನವರಿಗಿಂತ ಎರಡು ಮೂರರಷ್ಟು ಪಟ್ಟು ಹೆಚ್ಚಾಗಿದೆ. ನಾನು ಈ ರೀತಿ ಹೇಳುವಾಗ ಪಠ್ಯಪುಸ್ತಕ ಮತ್ತು ಗೈಡ್ ಪುಸ್ತಕಗಳನ್ನು ಪ್ರಕಟಿಸುವ ಪ್ರಕಾಶಕರನ್ನು ಹೊರತುಪಡಿಸಿ ಹೇಳುತ್ತಿದ್ದೇನೆ.

ಸದಭಿರುಚಿಯ ಪುಸ್ತಕಗಳನ್ನು ಪ್ರಕಟಿಸುವ ಪ್ರಕಾಶೋದ್ಯಮ ಮೊದಲು ಪ್ರಾರಂಭವಾದದ್ದು ಪ್ರಮುಖವಾಗಿ ಮೈಸೂರಿನಲ್ಲೇ ಎಂಬುದು ಮುಖ್ಯವಾಗಿ ಗಮನಿಸ ಬೇಕಾದ ಸಂಗತಿ. ಪ್ರಕಾಶನದ ಕಲೆಯನ್ನು ಇಲ್ಲಿಯ ಪ್ರಕಾಶಕರು ಮೈಗೂಡಿಸಿ ಕೊಂಡಿದ್ದಂತೆ ರಾಜ್ಯದ ಇನ್ಯಾವುದೇ ಪ್ರದೇಶಗಳ ಪ್ರಕಾಶಕರಲ್ಲಿ ವಿರಳವಾಗಿತ್ತೆಂದರೆ ತಪ್ಪಾಗಲಾರದು, ಆದರೂ ಉತ್ತರ ಕರ್ನಾಟಕದ ಪ್ರಕಾಶಕರಾದ ಸಮಾಜ ಪುಸ್ತಕಾಲಯ ಮತ್ತು ಮನೋಹರ ಗ್ರಂಥಮಾಲೆಯವರ ಕೊಡುಗೆಯನ್ನು ಅಲ್ಲಗಳೆಯುವಂತಿಲ್ಲ. ಮೈಸೂರಿನ ಪ್ರಕಾಶಕರುಗಳಾದ ದಿವಂಗತ ಕೂಡಲಿ ಚಿದಂಬರಂ, ಗೀತಾ ಬುಕ್ ಹೌಸ್, ಉಷಾ ಪ್ರೆಸ್ಸಿನ ರಾ.ನಾ. ಹಬ್ಬು, ಕನ್ನಡ ಕವಿ ಕಾವ್ಯಮಾಲೆಯ ಎಚ್.ಎಂ. ಶಂಕರ ನಾರಾಯಣರಾವ್, ಡಿ.ವಿ.ಕೆ. ಮೂರ್ತಿ, ಸುರುಚಿ ಪ್ರಕಾಶನದ ಸಿಂಧುವಳ್ಳಿ ಅನಂತಮೂರ್ತಿ ಮತ್ತು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಛಾಯಾಪತಿ ಮುಂತಾದವರು ಪ್ರಕಾಶೋದ್ಯಮವನ್ನು ಕೇವಲ ವ್ಯವಹಾರೋದ್ಯಮ ವನ್ನಾಗಿಯಷ್ಟೆ ತೆಗೆದುಕೊಳ್ಳದೆ ಒಂದು ರೀತಿ ಅರ್ಪಣಾ ಮನೋಭಾವದಿಂದ ಪ್ರಕಾಶನದ ಉದ್ಯಮವನ್ನು ನಡೆಸಿಕೊಂಡು ಬರುತ್ತಿದ್ದರು, ಬರುತ್ತಿದ್ದಾರೆ. ಬೆಂಗಳೂರಿನ ಐ.ಬಿ.ಎಚ್. ಪ್ರಕಾಶನ ದವರು ಕನ್ನಡದ ಬಹು ಪಾಲು ಲೇಖಕರ ಪುಸ್ತಕಗಳನ್ನು ಪ್ರಕಟಿಸಿ ಪ್ರಕಟಣಾ ಪ್ರಪಂಚದಲ್ಲಿ ವಿಕ್ರಮವನ್ನೇ ಸ್ಥಾಪಿಸಿದರು. ಅನಂತರಾಮ್ ಅವರ ಸಮರ್ಥ ಸಾರಥ್ಯದಲ್ಲಿ ಇದು ಸಾಧ್ಯವಾಯಿತು. ಆದರೆ ಕಾರಣಾಂತರಗಳಿಂದ ಇಂದು ಅದು ಸ್ಥಗಿತವಾಗಿದೆ. ಕನ್ನಡ ಪ್ರಕಟಣಾ ಪ್ರಪಂಚದ ದೃಷ್ಟಿಯಿಂದ ಮತ್ತು ಲೇಖಕರ ದೃಷ್ಟಿಯಿಂದ ಇದೊಂದು ದೊಡ್ಡ ಕೊರತೆ ಎಂದರೆ ತಪ್ಪಾಗಲಾರದು.



# ಗ್ರಂಥ ಪ್ರಕಟಣೆಯ ಆರ್ಥಿಕ ಸ್ಥಿತಿ

ಒಂದು ಪುಸ್ತಕವನ್ನು ಪ್ರಕಟಿಸಬೇಕಾದರೆ, ಅದನ್ನು ಪ್ರಕಟಿಸುವ ಮುನ್ನ ವ್ಯವಸ್ಥಿತವಾದ ಆರ್ಥಿಕ ಯೋಜನೆ ಬಹಳ ಮುಖ್ಯ. ಪುಸ್ತಕ ಪ್ರಕಟಣೆಯಲ್ಲಿ ನಾಲ್ಕು ಮುಖ್ಯ ಅಂಶಗಳನ್ನು ಗಮನಿಸಬೇಕು. ಮೊದಲನೆಯದು ಮುದ್ರಣ ಕಾಗದಕ್ಕಾನುಗುಣವಾದ ಮುದ್ರಣ ವೆಚ್ಚ, ಎರಡನೆಯದಾಗಿ ಮುದ್ರಕನಿಗೆ ಕೊಡಬೇಕಾದ ಹಣ, ಮೂರನೆಯದಾಗಿ ಮುಖ ಚಿತ್ರವನ್ನು ರಚಿಸುವ ಕಲಾವಿದನ ಸಂಭಾವನೆ, ನಾಲ್ಕನೆಯ ಮತ್ತು ಬಹು ಮುಖ್ಯವಾದ ಅಂಶ ಲೇಖಕನಿಗೆ ಸಲ್ಲಿಸಬೇಕಾದ ಗೌರವ ಧನ ಇವೆಲ್ಲವನ್ನು ಪೂರ್ವಯೋಜಿತವಾಗಿ ವ್ಯವಸ್ಥಿಸುವ ಪ್ರಕಾಶಕ ಪುಸ್ತಕೋದ್ಯಮದಲ್ಲಿ ಸಫಲನಾಗುವುದರಲ್ಲಿ ಸಂದೇಹವಿಲ್ಲ.

ಪುಸ್ತಕೋದ್ಯಮದಲ್ಲಿ ಹಣ ತೊಡಗಿಸುವವನಿಗೆ ಸಮಾಧಾನ ಬಹಳ ಮುಖ್ಯ, ಏಕೆಂದರೆ ಈ ಉದ್ಯಮ ಇತರ ಉದ್ಯಮಗಳಂತಲ್ಲ. ಹಾಕಿದ ಹಣ ಹಿಂದಕ್ಕೆ ಬರಬೇಕಾದರೆ ಬಹಳ ಕಷ್ಟ. ಇದಲ್ಲದೆ ಪ್ರಕಾಶಕ ಒಟ್ಟಾಗಿ ಹಣ ಚೆಲ್ಲಬೇಕು, ಬಿಡಿಬಿಡಿಯಾಗಿ ಅದನ್ನು ಹಿಂದಕ್ಕೆ ಪಡೆಯಬೇಕು. ಪುಸ್ತಕದ ಮುಖಬೆಲೆಯನ್ನು ಯಾಜಿತ ರೀತಿಯಲ್ಲಿ ನಿರ್ಧರಿಸಬೇಕು. ಒಂದು ಪುಸ್ತಕಕ್ಕೆ ಹತ್ತು ರೂಪಾಯಿಗಳು ಖರ್ಚಾದರೆ ಪುಸ್ತಕದ ಮುಖಬೆಲೆಯನ್ನು ಮೂವತ್ತು ರೂಪಾಯಿಗಳೆಂದು ನಿರ್ಧರಿಸಬೇಕು. 1:3 ನಿಯಮ, ಅಂದರೆ ಖರ್ಚಿನ ಒಂದಕ್ಕೆ ಮೂರರಷ್ಟು ಬೆಲೆ ನಿಗದಿಪಡಿಸಬೇಕು. ಕೆಲವೊಮ್ಮೆ ಕಾರಣಾಂತರಗಳಿಂದ ಈ ನಿಯಮ ಸಡಿಲಿಸುವ ಸಾಧ್ಯತೆಯುಂಟು, ಏಕೆಂದರೆ ಜನಪ್ರಿಯವಾದ ಪುಸ್ತಕಗಳಿಗೆ ಈ ನಿಯಮವನ್ನು ಅನ್ವಯಿಸಬಹುದು, ಆದರೆ ಮಾರಲು ಕಷ್ಟಕರವಾದಂಥ ಶಾಸ್ತ್ರೀಯ ಗ್ರಂಥಗಳು ಮತ್ತು ಅಭಿನಂದನ ಗ್ರಂಥಗಳಿಗೆ 1:3 ನಿಯಮಕ್ಕಿಂತ ಹೆಚ್ಚಿನ ಬೆಲೆ ಇಡಲೇ ಬೇಕಾಗುತ್ತದೆ. ಇಷ್ಟೆಲ್ಲಾ ಸರ್ಕಸ್ಸು ಮಾಡಿದರೂ ಸಹ ಅಸಲನ್ನು ಹಿಂದಕ್ಕೆ ಪಡೆಯಲು ಸುಮಾರು ಒಂದು ವರ್ಷ ಬೇಕೆ ಬೇಕು. ಸಾಮಾನ್ಯವಾಗಿ ಜನಪ್ರಿಯವಲ್ಲದಂಥ ಪುಸ್ತಕಗಳು ಪ್ರಕಾಶಕನ ಪ್ರಯತ್ನದಿಂದ 300 ರಿಂದ 400 ಪ್ರತಿಗಳನ್ನು ಮಾರಬಹುದಾದ ಸಾಧ್ಯತೆಯುಂಟು. ಪುಸ್ತಕೋದ್ಯಮವನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಬೇಕು. ಚಲನಚಿತ್ರಗಳಿಗೆ ಸಹಾಯಧನ ಕೊಡುತ್ತದೆ, ಆದರೆ ಗ್ರಂಥ ಪ್ರಕಟಣೆಗಳಿಗೂ ಬೆಂಬಲ ಕೊಡಬೇಕು. ಸರ್ಕಾರ ಪುಸ್ತಕ ಪ್ರಾಧಿಕಾರವನ್ನೇನೋ ರಚಿಸಿದೆ. ಪುಸ್ತಕ ಪ್ರಾಧಿಕಾರ ಸ್ವಲ್ಪ ಪುಸ್ತಕಗಳನ್ನು ಪ್ರಕಾಶಕರಿಂದ ಖರೀದಿಸುತ್ತಿದೆ. ಆದರೆ ಅದರ ಅಳತೆಗೋಲು ಸರಿಯೆ ಎಂಬುದನ್ನು ಪ್ರಕಾಶನ ಕ್ಷೇತ್ರದ ಪರಿಣಿತರೇ ನಿರ್ಧರಿಸಬೇಕು. ಏಕೆಂದರೆ ಒಂದು ಪುಸ್ತಕವನ್ನು 5,000 ರೂಪಾಯಿಗಳ ಮುಖಬೆಲೆಗಿಂತ ಹೆಚ್ಚಿಗೆ ಕೊಳ್ಳಬಾರದು ಎಂಬ ನಿಯಮವನ್ನು ಕಟ್ಟುನಿಟ್ಟಾಗಿ

ಪಾಲಿಸುತ್ತಿದ್ದಾರೆ. ಆದರೆ ಹೆಚ್ಚು ಬೆಲೆಯ ಉದ್ಗ್ರಂಥಗಳಾದ ಶಾಸ್ತ್ರೀಯ ಗ್ರಂಥಗಳು ಮತ್ತು ಸಂಶೋಧನ ಗ್ರಂಥಗಳಿಗೂ ಈ ನಿಯಮವನ್ನು ಅಳವಡಿಸಿದ್ದಾರೆ. ಇದು ಸ್ವಲ್ಪ ಆಲೋಚಿಸಬೇಕಾದ ಸಂಗತಿ. ಇಂದು ಒಂದು ಸಾವಿರ ಪುಟದ ಗ್ರಂಥಕ್ಕೆ ಹೆಚ್ಚು ಕಡಿಮೆ 80,000ರೂಪಾಯಿಗಳು ಖರ್ಚಾಗುತ್ತವೆ. ಅಂಥ ಪುಸ್ತಕಗಳನ್ನು ಸಹಾ ಕೇವಲ 5000 ರೂಪಾಯಿಗಳ ಮುಖಬೆಲೆಯಷ್ಟು ಖರೀದಿಸಿದರೆ ಅದು ಯಾವ ನ್ಯಾಯ? ಇದು ಅರ್ಥವಾಗುತ್ತಿಲ್ಲ. ಕೇಲ ಅಳುವ ಮಗುವಿನ ಬಾಯಿಗೆ ಒಂದು ಚೂರು ಸಕ್ಕರೆ ಇಟ್ಟಂತೆ. ಕನ್ನಡ ಪುಸ್ತಕಗಳ ಮಾರಾಟವೇ ಬಹು ಕಷ್ಟಕರವಾಗಿರುವಾಗ ಇಂಥ ಸದಭಿರುಚಿಯ ಪುಸ್ತಕಗಳನ್ನು ಪ್ರಕಟಿಸುವ ಪ್ರಕಾಶಕರ ಪಾಡೇನು? ಹಾಗಾದರೆ ಇನ್ನು ಮುಂದೆ ಇಂಥ ಪುಸ್ತಕಗಳನ್ನು ಪ್ರಕಟಿಸುವ ಎದೆಗಾರಿಕೆ ಯಾರಿಗಿರುತ್ತದೆ? ಇದಲ್ಲದೆ ಇಂಥ ಪುಸ್ತಕಗಳನ್ನು ಪ್ರಕಟಿಸಿರುವುದರಿಂದ ಯಾರಿಗೆ ನಿಜವಾದ ನಷ್ಟ? ಪ್ರಕಾಶಕರಿಗೋ, ಲೇಖಕರಿಗೋ ಅಥವಾ ಸಾಹಿತ್ಯ ಜಗತ್ತಿಗೋ ಅದನ್ನು ಸಂಬಂಧಪಟ್ಟವರೇ ನಿರ್ಧರಿಸಬೇಕು.

ಪುಸ್ತಕೋದ್ಯಮ ಅಂದರೆ ಪುಸ್ತಕ ಪ್ರಕಟಣೆ ಬಹಳ ಕಷ್ಟಕರವಾದ ವೃತ್ತಿ, ಇದನ್ನು ಒಂದು ವೃತ್ತಿಯಾಗಿ ತೆಗೆದುಕೊಳ್ಳುವುದು ಎಂದರೆ ಒಂದು ಸವಾಲನ್ನು ಸ್ವೀಕರಿಸಿದಂತೆ. ಆದ್ದರಿಂದ ಅನೇಕ ಪ್ರಕಾಶಕರು ಉದರಾವಲಂಬನೆಗೆ ವೃತ್ತಿಯೊಂದಿಗೆ ಪ್ರವೃತ್ತಿಯ ಸಹಕಾರವನ್ನು ಅವಲಂಬಿಸಿದ್ದ ಸಮರ್ಥ ಪ್ರಕಾಶರಾಗದ್ದ ಕನ್ನಡ ಕವಿ ಕಾವ್ಯಮಾಲೆಯ ಎಚ್.ಎಂ. ಶಂಕರನಾರಾಯಣರಾವ್ ಮತ್ತು ಸುರುಚಿ ಪ್ರಕಾಶನದ ಸಿಂಧುವಳ್ಳಿ ಅನಂತಮೂರ್ತಿಯವರು ಪ್ರಕಾಶನದೊಂದಿಗೆ ಅಧ್ಯಾಪಕರಾಗಿದ್ದರು. ಉಷಾ ಪ್ರೆಸ್ಸಿನ ರಾ.ನಾ. ಹಬ್ಬುರವರು ಕನ್ನಡದ ಅನೇಕ ಹೆಸರಾಂತ ಲೇಖಕರ ಪುಸ್ತಕಗಳನ್ನು ಪ್ರಕಟಿಸಿದ್ದರು, ಅದರ ಜೊತೆ ಜೊತೆಗೆ ಮುದ್ರಣಾಲಯವನ್ನು ನಡೆಸುತ್ತಿದ್ದರು. ಜೊತೆಗೆ ಈ ಹಿಂದೆ ತಿಳಿಸಿದ ಪ್ರಕಾಶಕರುಗಳ ಪುಸ್ತಕಗಳು ಆಗಾಗ ಪಠ್ಯ ಪುಸ್ತಕಗಳಾಗುತ್ತಿದ್ದುದರಿಂದ ಪ್ರಕಾಶನ ವೃತ್ತಿಯನ್ನು ಮುನ್ನಡೆಸಲು ಸರಾಗವಾಗುತ್ತಿತ್ತು. ಆದರೆ ಕೇವಲ ಪುಸ್ತಕ ಪ್ರಕಾಶನವೊಂದನ್ನು ಅವಲಂಬಿಸಿದ್ದ ಡಿ.ವಿ.ಕೆ.ಮೂರ್ತಿ, ಸಮಾಜ ಪುಸ್ತಕಾಲಯದ ಮನೋಹರ ಘಾಣೇಕರ್, ಭಾರತೀ ಪ್ರಕಾಶನದ ಶ್ರೀನಿವಾಸ್ ಮತ್ತು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥ ಮಾಲೆಯ ಛಾಯಪತಿ ಅವರ ನಿಲುವನ್ನು ಪ್ರಕಟಣಾ ಪ್ರಪಂಚದಲ್ಲಿ ಗುರುತಿಸಬೇಕಾದುದು ಅತ್ಯವಶ್ಯಕವಾಗಿದೆ.

## ಪ್ರಕಟಣಾ ಪ್ರಪಂಚದಲ್ಲಿ ಪ್ರಕಾಶಕನ ಪಾತ್ರ

ಪುಸ್ತಕ ಪ್ರಕಾಶನ ಅಂದರೆ ಕೇವಲ ಹಸ್ತಪ್ರತಿಯನ್ನು ಲೇಖಕನಿಂದ ಪಡೆದು ಮುದ್ರಣಾಲಯಕ್ಕೆ ತಲುಪಿಸುವುದಷ್ಟೆ ಎಂದು ತಿಳಿಯಬಾರದು. ಪ್ರಕಾಶಕನಾದವನು ಪುಸ್ತಕೋದ್ಯಮದ ಒಳಹೊರಗನ್ನು ಬಲ್ಲವನಾಗಿರಬೇಕು. ಹಸ್ತಪ್ರತಿಯನ್ನು ಪ್ರಕಟಣೆಗೆ

ತೆಗೆದುಕೊಳ್ಳುವಾಗ ಅವರಲ್ಲಿರುವ ಗುಣಗಳನ್ನು ಗ್ರಹಿಸಬಲ್ಲವನಾಗಿರಬೇಕು, ಪುಸ್ತಕದ ಸಾರಾಂಶವನ್ನು ಅರಿತು ಅದರ ಒಟ್ಟು ಚಿತ್ರದ ಸಾಂಕೇತಿಕತೆಯನ್ನು ರಕ್ಷಾಪುಟದಲ್ಲಿ ಅಳವಡಿಸುವ ಕಲ್ಪನೆಯನ್ನು ಹೊಂದಿದವನಾಗಿರಬೇಕು. ಪುಸ್ತಕದ ಒಳಭಾಗದ ವಿನ್ಯಾಸವನ್ನು ರೂಪಿಸುವ ಕಲಾತ್ಮಕತೆಯನ್ನು ಅರಿತಿರಬೇಕು, ಪುಸ್ತಕದ ಒಟ್ಟು ರಚನೆಯಲ್ಲಿ ಕರಡು ತಿದ್ದುವುದು ಬಹಳ ಮುಖ್ಯವಾದ ಮತ್ತು ಜವಾಬ್ದಾರಿಯುತವಾದ ಕೆಲಸ. ಲೇಖಕ ಮತ್ತು ಪ್ರಕಾಶಕರಿಬ್ಬರೂ ಬಹಳ ಗಂಭೀರವಾಗಿ ಕೈಗೊಳ್ಳಬೇಕಾದ ಕಾರ್ಯ, ಇದನ್ನು ಖಂಡಿತ ಅಲಕ್ಷಿಸಬಾರದು, ಪ್ರಕಾಶಕ ವಿದ್ಯಾವಂತನಾಗಿದ್ದು ಕರಡು ತಿದ್ದುವುದರಲ್ಲಿ ಪರಿಣಿತನಾಗಿದ್ದರೆ ತೊಂದರೆಯಿಲ್ಲ, ಇಲ್ಲದಿದ್ದರೆ ಕರಡು ತಿದ್ದುವಂಥ ವರಿಂದ ಸಹಾಯ ಪಡೆಯಬಹುದು. ಅಂಥವರು ಪುಟಕ್ಕೆ ಒಂದು ರೂ.ಗಳಂತೆ ಹಣವನ್ನು ಪಡೆಯುತ್ತಾರೆ. ಪ್ರಕಾಶಕನ ಪಾತ್ರ ಇಲ್ಲಿಗೆ ಮುಗಿಯುವುದಿಲ್ಲ. ಲೇಖಕನಿಗೆ ಕೊಡುವ ಗೌರವಧನ ಬಹಳ ಮುಖ್ಯವಾದ ಅಂಶ, ಪ್ರಕಾಶಕರು ಇದನ್ನು ಗಂಭೀರವಾಗಿ ಪರಿಗಣಿಸಬೇಕು.

## ಲೇಖಕ ಪ್ರಕಾಶಕರ ಬಾಂಧವ್ಯ

ಪುಸ್ತಕೋದ್ಯಮದ ಅಸ್ತಿಭಾರ ಲೇಖಕ ಎಂದರೆ ತಪ್ಪಾಗಲಾರದು. ಆದ್ದರಿಂದ ಪ್ರಕಾಶಕ ಮತ್ತು ಲೇಖಕರ ಬಾಂಧವ್ಯ ಬಳ್ಳಿ ಮತ್ತು ಮರದ ಸಂಬಂಧದಂತಿರಬೇಕು. ಪ್ರಕಾಶಕ ಮತ್ತು ಲೇಖಕ ಪರಸ್ಪರ ಅರ್ಥಮಾಡಿಕೊಳ್ಳಬೇಕು. ಲೇಖಕರನ್ನು ನಂಬಿ ಪುಸ್ತಕಗಳನ್ನು ಪ್ರಕಟಿಸುವ ಪ್ರಕಾಶಕರಿಗೆ ತೊಂದರೆಯುಂಟಾಗಬಾರದು. ಅದೇ ರೀತಿ ಪ್ರಕಾಶಕರು ಲೇಖಕರನ್ನು ವಂಚಿಸಕೂಡದು. ಈ ರೀತಿ ನಡೆದುಕೊಳ್ಳದಿದ್ದರೆ ಸಂಬಂಧಪಟ್ಟ ಲೇಖಕ, ಪ್ರಕಾಶಕರ ವ್ಯಕ್ತಿಗತ ಮೌಲ್ಯಕ್ಕೆ ಧಕ್ಕೆಯುಂಟಾಗುತ್ತದೆ. ಆದ್ದರಿಂದ ಪರಸ್ಪರ ನೇರವಾಗಿ ನಡೆಯುವುದರಿಂದ ಇಬ್ಬರಿಗೂ ಒಳ್ಳೆಯದು. ಪ್ರಕಾಶಕರಿಂದ, ಲೇಖಕರಿಗೆ ತೊಂದರೆಯುಂಟಾಗುತ್ತದೆಂಬ ಆರೋಪ ಆಗಾಗ ಕೇಳಿ ಬರುತ್ತಿದೆ. ಆದರೆ ಕೆಲವು ಲೇಖಕರು ವಿನಾಕಾರಣ ಪ್ರಕಾಶಕರನ್ನು ಹಳದಿ ಕಣ್ಣಿನಿಂದ ನೋಡುವುದು ತಪ್ಪು. ಅವರು ಮೊದಲು ಪ್ರಕಾಶಕರನ್ನು ಕಾಣಲು ಬರುವಾಗ ನಡೆದುಕೊಳ್ಳುವ ರೀತಿಗೂ, ಪುಸ್ತಕ ಪ್ರಕಟವಾದ ಮೇಲೆ ನಡೆದುಕೊಳ್ಳುವ ರೀತಿಗೂ ಅಜಗಜಾಂತರವಿರುತ್ತದೆ. ಇಂಥ ವಿಪರ್ಯಾಸದ ಅನುಭವ ಪ್ರಕಾಶಕರುಗಳಿಗಾಗಿದೆ. ಆದರೆ ಅನೇಕ ಲೇಖಕರು ಪ್ರಕಾಶಕರಿಗೆ ಮಾಡಿರುವ ಸಹಾಯವನ್ನು ಮರೆಯುವಂತಿಲ್ಲ. ಅವರು ಮಾಡಿರುವ ಉಪಕಾರದಿಂದ ಅವರಿಂದು ದೀಪ ಹಚ್ಚುತ್ತಿದ್ದಾರೆ. ಆದ್ದರಿಂದ ಲೇಖಕ ಪ್ರಕಾಶಕರಲ್ಲಿ ಒಂದು ರೀತಿಯ ತಾತ್ವಿಕ ನಿಲುವು ಬಹಳ ಮುಖ್ಯ.

## ಕನ್ನಡ ಗ್ರಂಥ ಪ್ರಕಾಶನಗಳ ಕಥೆ

ಈ ಹಿಂದೆ ಒಂದು 500-600 ಪುಟಗಳ ಗ್ರಂಥವನ್ನು ಪ್ರಕಟಿಸಲು ಆರು ತಿಂಗಳು ಬೇಕಾಗುತ್ತಿತ್ತು. ಒಮ್ಮೆಗೆ ಒಂದೆರಡು ಫಾರಂ ಎಂದರೆ 16 ರಿಂದ 32 ಪುಟಗಳು ಕರಡು ಮುದ್ರಣಾಲಯದಿಂದ ಲಭ್ಯವಾಗುತ್ತಿತ್ತು. ಜೊತೆಗೆ ಸರಾಗವಾಗಿ ಕೆಲಸವನ್ನು ಜರುಗಿಸಲು ಮುದ್ರಣಾಲಯಕ್ಕೆ ಮೇಲಿಂದ ಮೇಲೆ ಭೇಟಿ ಕೊಡುವುದು ಅನಿವಾರ್ಯವಾಗಿತ್ತು. ಕರಡುಗಳಲ್ಲಿ ಜಾಸ್ತಿ ತಪ್ಪಿಲ್ಲದಿದ್ದರೆ ಪರವಾಗಿಲ್ಲ. ತಪ್ಪುಗಳು ಜಾಸ್ತಿಯಾದಾಗ ಮಾತರ ಪ್ರಕಾಶಕನ ಕಷ್ಟ ಒಂದಕ್ಕೆ ಎರಡರಷ್ಟಾಗುತ್ತಿತ್ತು. ಆದರೆ ಇಂದು ಮುದ್ರಣ ಪ್ರಪಂಚದಲ್ಲಿ ಆಗಿರುವ ಪ್ರಗತಿಪರ ಬದಲಾವಣೆಯಿಂದ ಪ್ರಕಾಶಕ ಬಹುಮಟ್ಟಿಗೆ ಸಮಾಧಾನ ಪಡೆಯುವಂತಾಗಿದೆ. ಮೊಳೆ ಜೋಡಿಸುವ ಬದಲು ಡಿಟಿಪಿ ಬಂದಿದೆ. ಡಿಟಿಪಿ ಅಂದರೆ 'ಡೆಸ್ಕ್ ಟಾಪ್ ಪಬ್ಲಿಂಷಿಗ್' ಅಂದರೆ ಕಂಪ್ಯೂಟರಿನಿಂದ ಅಕ್ಷರ ಜೋಡಣೆ. ಇದರಿಂದ ಈ ಹಿಂದೆ ತಿಳಿಸಿದ ಗಾತ್ರದ ಪುಸ್ತಕವನ್ನು ಕೇವಲ ಒಂದು ವಾರದಲ್ಲಿ ಪ್ರಕಟಿಸಬಹುದು. ಡಿಟಿಪಿ ಯೊಂದಿಗೆ ಆಫ್‌ಸೆಟ್ ಮುದ್ರಣದಿಂದ ಪುಸ್ತಕವನ್ನು ಮತ್ತು ಮುಖಚಿತ್ರವನ್ನು ಅಚ್ಚಿಸುವುದು ನಮಗಿಂದು ವರವಾಗಿ ಪರಿಮಿಸಿದೆ. ಆಧುನಿಕ ಮುದ್ರಣ ವಿನ್ಯಾಸದಿಂದ ಒಮ್ಮೆಗೆ ನಾಲ್ಕು ಪುಸ್ತಕಗಳ ಮುಖ ಚಿತ್ರವನ್ನು ಒಟ್ಟಿಗೆ ಅಚ್ಚು ಮಾಡಬಹುದು. ಇದರೊಂದಿಗೆ ಕಲಾವಿದ ಸೂಚಿಸಿದ ವರ್ಣವಿನ್ಯಾಸ ಮೂಡಿ ಬರುತ್ತದೆ. ಇದರಿಂದ ಪ್ರಕಾಶಕನಿಗೆ ಹಣದ ಮತ್ತು ಕಾಲದ ಉಳಿತಾಯವಾಗುತ್ತದೆ. ಆಫ್‌ಸೆಟ್ ಮುದ್ರಣ ಮಾಮೂಲಿ ಮುದ್ರಣಗಳಿಗಿಂತ ಕೊಂಚ ದುಬಾರಿಯಾಗುತ್ತದೆ, ನಿಜ. ಆದರೆ ನಿರಂತರ ಅಲೆದಾಟ ಮತ್ತು ಕಾಲ ವಿಳಂಬದಿಂದ ಪ್ರಕಾಶಕ ಮುಕ್ತನಾಗುವುದರಲ್ಲಿ ಸಂದೇಹವಿಲ್ಲ. ಆದ್ದರಿಂದ ಆಫ್‌ಸೆಟ್ ಮುದ್ರಣ ಇಂದು ಪ್ರಕಟಣಾ ಪ್ರಪಂಚಕ್ಕೆ ಒಂದು ವರ ಅಥವಾ ಪವಾಡವಾಗಿ ಪರಿಣಮಿಸಿದೆ.

## ವಿಶ್ವವಿದ್ಯಾನಿಲಯಗಳ ಪ್ರಸಾರಾಂಗಗಳು

ಪ್ರಸಾರಾಂಗಗಳ ಬಗ್ಗೆ ಹೇಳುವಾಗ ಮೊದಲನೆಯ ಆದ್ಯತೆ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗಕ್ಕೆ ಎಂದರೆ ತಪ್ಪಾಗಲಾರದು. ಮೈಸೂರು ವಿ ವಿ ನಿಲಯದ ಪ್ರಸಾರಾಂಗ ದಿವಂಗತ ಕುವೆಂಪು ಅವರ 'ಕನಸಿನ ಕೂಸು', ಅವರು ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದ ಕಾಲದಲ್ಲಿ ಕನ್ನಡ ಮಾಧ್ಯಮದಲ್ಲಿ ಪಠ್ಯ ಪುಸ್ತಕಗಳನ್ನು ಪ್ರಕಟಿಸಬೇಕೆಂದು ಆಶಿಸಿದ್ದರು. ಆಗ ಅವರಿಗೆ ತಮ್ಮ ಕನಸು ನನಸಾಗಲು ತ.ಸು. ಶಾಮರಾಯರೇ ಸರಿಯಾದ ವ್ಯಕ್ತಿ ಎಂದು ತೀರ್ಮಾನಿಸಿ ಅವರನ್ನು ಪ್ರಸಾರಾಂಗದ ನಿರ್ದೇಶಕರನ್ನಾಗಿ ನೇಮಿಸಿದರು. ಅದರಂತೆ ತ.ಸು. ಶಾಮರಾಯರು ಸಂಬಂಧಪಟ್ಟಂತೆ

*ಲೇಖಕರನ್ನು ಸಂಪರ್ಕಿಸಿ ಅವರಿಂದ ಪಠ್ಯಪುಸ್ತಕಗಳನ್ನು ಕನ್ನಡದಲ್ಲಿ ಬರೆಸಿ ಕನ್ನಡ ಪ್ರಕಟಣ ಪ್ರಪಂಚಕ್ಕೆ ಮತ್ತು 'ಕನ್ನಡ ಮಾಧ್ಯಮದಲ್ಲಿ ಕಲಿಕೆ' ಎಂಬ ಮಾತಿಗೆ ಅರ್ಥ ಬರುವಂತೆ ಮಾಡಿದರು. ಅವರಿಂದ ಮೊತ್ತ ಮೊದಲು ಕನ್ನಡದಲ್ಲಿ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಪಠ್ಯಪುಸ್ತಕಗಳು ದೊರೆಯುವಂತಾಯಿತು.*

*'ಪ್ರಚಾರೋಪನ್ಯಾಸಮಾಲೆ', ಪ್ರಸಾರಾಂಗದ ಕಿರೀಟಕ್ಕೆ ಸಿಕ್ಕಿಸಿದ ಮತ್ತೊಂದು ಗರಿ ಎಂದರೆ ತಪ್ಪಾಗಲಾರದು. ಕೇವಲ ಮೂರಾಣೆ ಮತ್ತು ನಾಲ್ಕಾಣೆಗಳಿಗೆ ಅಮೂಲ್ಯವಾದ ಪುಸ್ತಿಕೆಗಳು ಸಿಗುತ್ತಿದ್ದವೆಂಬುದು ಇಂದು ಕನಸಿಗೂ ಎಟುಕದ ವಿಷಯವಾಗಿದೆ. ಪ್ರಸಾರಾಂಗವು ಸಂಬಂಧಪಟ್ಟ ಕ್ಷೇತ್ರದಲ್ಲಿ ಮಾಡಿದ ಮಹನೀಯರನ್ನು ಗುರುತಿಸಿ, ಅವರಿಂದ ವಿಶೇಷಪನ್ಯಾಸವನ್ನು ಏರ್ಪಡಿಸಿ ಅದು ಅಲ್ಲಿಗೆ ಮುಗಿಯದಂತೆ ಉಪನ್ಯಾಸಕರಿಂದ ಉಪನ್ಯಾಸ ಮಾಡಿದ ಲೇಖನವನ್ನು ಪಡೆದು ಪುಸ್ತಕ ರೂಪದಲ್ಲಿ ಪ್ರಕಟಿಸಿ ಜ್ಞಾನ ಪ್ರಸಾರ ಮಾಡಿದ್ದು ಅತ್ಯಂತ ಸ್ತುತ್ಯವಾದದ್ದು; ಈ ಸರಣಿಯಲ್ಲಿ ನೂರಕ್ಕಿಂತ ಹೆಚ್ಚು ಪುಸ್ತಿಕೆಗಳು ಪ್ರಕಟವಾದವೆಂಬುದು ಬಹಳ ಮುಖ್ಯವಾಗಿ ಗಮನಿಸಬೇಕಾದ ಸಂಗತಿ. ಪ್ರಸಾರಾಂಗದ ಆರಂಭದ ದಿವಸಗಳಲ್ಲಿ ದಿವಂಗತ ಜಿ. ಹನುಮಂತರಾಯರು ಉತ್ತಮ ಮಟ್ಟದ ಪುಸ್ತಕಗಳನ್ನು ಪ್ರಕಟಿಸಿದರು. ಆದರೆ ಅವರ ಸಂಖ್ಯೆ ಮಾತ್ರ ಬಹಳ ಕಡಿಮೆ.*

*ಮೈಸೂರು ವಿ ವಿ ನಿಲಯದ ಪ್ರಸಾರಾಂಗದಂತೆಯೇ ಕರ್ನಾಟಕ ವಿಶ್ವವಿದ್ಯಾನಿಲಯ ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯಗಳ ಪ್ರಸಾರಾಂಗಗಳೂ ಸಹ ಗಮನಾರ್ಹವಾದ ಪ್ರಕಟಣೆಗಳನ್ನು ಪ್ರಕಟಿಸಿದವು. ಇತ್ತೀಚೆಗೆ ಹಂಪೆಯಲ್ಲಿ ಪ್ರಾರಂಭಿಸಿರುವ ಕನ್ನಡ ವಿ.ವಿ. ನಿಲಯ ಸಹ ಪ್ರಕಟಣೆಯ ಕ್ಷೇತ್ರಕ್ಕೆ ಅಮೂಲ್ಯವಾದ ಕೊಡುಗೆಯನ್ನುತ್ತಿದೆ.*

* * *

ನಾನು ಪ್ರಕಟಿಸಿರುವ ಸಾವಿರಾರು ಪುಸ್ತಕಗಳಲ್ಲಿ ಹಲವು ನನಗೆ ಬಹಳ ಖುಷಿ ನೀಡಿವೆ. ಅವುಗಳಲ್ಲಿ 'ನಿಸಾರ್ ಅಹಮದ್ ಅವರ ಆಯ್ದ ಕವಿತೆಗಳು' ಒಂದು. ಇದು ನನ್ನ ವೃತ್ತಿಯ ಆರಂಭದ ದಿವಸಗಳಲ್ಲಿ ಪ್ರಕಟಿಸಿದ ಪುಸ್ತಕ. ಆಗ ನಾನಿನ್ನು ಆರ್ಥಿಕವಾಗಿ ಸಾಕಷ್ಟು ಶಕ್ತಿವಂತನಾಗಿರಲಿಲ್ಲ. ಆದರೂ ನಿಸಾರ್ ಅಹಮದ್ ಅವರ ಇಚ್ಛೆಯ ಮೇರೆಗೆ ಮೈಸೂರಿನ ವೆಸ್ಲಿ ಪ್ರೆಸಿನಲ್ಲಿ ಇದನ್ನು ಅಚ್ಚುಮಾಡಿಸಿದ್ದೆ. ಅದು ಬಹಳ ದುಬಾರಿ ವೆಚ್ಚದ ಮುದ್ರಣಾಲಯ. ಆದರೆ ನಿಸಾರ್ ಅಹಮದ್ ಅವರಿಗೆ ಬಾಲ್ಯದಿಂದಲೂ ಒಂದು ಆಸೆ ಇತ್ತಂತೆ. ಅದು ಅವರ ಪುಸ್ತಕ ವೆಸ್ಲಿಪ್ರೆಸ್ಸಿನಲ್ಲಿ ಅಚ್ಚಾಗಬೇಕೆಂದು, ನನಗೂ ಸಹ ಆ ಆಸೆ ಇತ್ತು. ಆಯ್ದ ಕವಿತೆಗಳು ಅತ್ಯಂತ ಸುಂದರವಾಗಿ ವೆಸ್ಲಿ ಪ್ರೆಸ್ಸಿನಲ್ಲಿ ಅಚ್ಚಾಗಿ ನಮ್ಮಿಬ್ಬರಿಗೂ ಸಂತೋಷವನ್ನುಂಟುಮಾಡಿತ್ತು.

ಒಂದು ದಿವಸ ಬೆಳಿಗ್ಗೆ ಸುಮಾರು ಒಂಬತ್ತು ಘಂಟೆಯಿರಬಹುದು. ನಾನು ಬಲ್ಲಾಳ್ ಹೊಟೆಲ್ ಬಳಿ ಇರುವ ವೃತ್ತವನ್ನು ದಾಟಿ ಸೈಕಲ್ ಮೇಲೆ ಮುಂದೆ ಸಾಗುತ್ತಿದ್ದೆ. ಆಗ ಪಕ್ಕದಿಂದ ಒಂದು ಪರಿಚಿತ ಧ್ವನಿ ಏಯ್, ಛಾಯಾಪತಿ, ಬಾ ಇಲ್ಲಿ ಎಂದು ಕರೆದದ್ದು ಕೇಳಿಸಿತು. ನೋಡಿದರೆ ಅವರು ಇನ್ನಾರೂ ಅಲ್ಲ, ಕನ್ನಡ ಪುಸ್ತಕ ಪ್ರಕಾಶನದ ಭೀಷ್ಮ ಎಚ್.ಎಂ. ಶಂಕರನಾರಾಯಣರಾಯರು. ಅವರು ನನ್ನನ್ನು ಕುರಿತು ಅಲ್ಲಯ್ಯ, 'ನಾನು ನಿಸಾರ್ ಅಹಮದ್ ಅವರ ಕವಿತೆಗಳ ಪುಸ್ತಕ ನೋಡಿದೆ. ಸೊಗಸಾಗಿ ಅಚ್ಚಾಗಿದೆ. ಆದರೆ ನಿನಗೆ ಲೋಕ ಜ್ಞಾನ ಸಾಲದು. ಇಷ್ಟು ದುಬಾರಿ ವೆಚ್ಚ ಮಾಡಿ ಪುಸ್ತಕ ಪ್ರಕಟಿಸಬೇಕು, ಹೀಗಾದರೆ ಮುಂದೆ ನಿನ್ನ ಗತಿ ಏನು ಎಂದರು. ಸ್ವಲ್ಪ ಹುಷಾರಾಗಿ ಪುಸ್ತಕ ಪ್ರಕಟಿಸಬೇಕು ಎಂದು ಕಳಕಳಿ ವ್ಯಕ್ತಪಡಿಸಿದರು. ನಾನು ಏನೋ ಹೇಳಲು ಹೋದೆ, ಆಗ ಅವರು ಅಜ್ಜನಿಗೆ ಕೆಮ್ಮುವುದನ್ನು ಹೇಳಿ ಕೊಡಬೇಡ ಎಂದರು. ನಾನು ಅವರ ಎಚ್ಚರಿಕೆಯ ಮಾತನ್ನು ಇಂದಿಗೂ ಗಮನದಲ್ಲಿರಿಸಿಕೊಂಡಿದ್ದೇನೆ.

ಕಾಲ ಸರಿದಂತೆ ವೆಂಕಣ್ಣಯ್ಯನವರು ಡಿ.ಎಲ್. ನರಸಿಂಹಾಚಾರ್ ಅವರೊಂದಿಗೆ ಸಂಪಾದಿಸಿದ್ದ 'ಸಿದ್ಧರಾಮಚರಿತೆ' ಮುಕ್ತ ವಿಶ್ವವಿದ್ಯಾನಿಲಯದಲ್ಲಿ ಪಠ್ಯವಾಯಿತು. ಅದನ್ನು ನಾನು ಪ್ರಕಟಿಸಲು ಡಿ.ಎಲ್. ನರಸಿಂಹಾಚಾರ್ಯರ ಒಪ್ಪಿಗೆ ಬೇಕಿತ್ತು. ಶಂಕರನಾರಾಯಣರಾಯರು ನನ್ನನ್ನು ಅವರ ಬಳಿ ಕರೆದುಕೊಂಡುಹೋಗಿ ಡಿ.ಎಲ್.ಎನ್. ಅವರಿಂದ ಒಪ್ಪಿಗೆ ಕೊಡಿಸಿದ್ದರು. ವಾಸ್ತವವಾಗಿ ನಮ್ಮ ತಂದೆಯವರಿಗೆ, ಶಂಕರನಾರಾಯಣ ರಾಯರಿಗೆ ಭಿನ್ನಾಭಿಪ್ರಾಯವಿತ್ತು. ಆದರೆ ಶಂಕರನಾರಾಯಣ ರಾಯರು ಒಬ್ಬ ಪ್ರಕಾಶಕರಾಗಿ ಪ್ರಕಾಶನದ ಒಳ ಹೊರಗಳನ್ನು ತಿಳಿದಿದ್ದರು. ನಾನು ಪ್ರಕಾಶನಾದುದರಿಂದ ಪ್ರಾಮಾಣಿಕವಾಗಿ ಹುರಿದುಂಬಿಸಿದ್ದರು. ತಂದೆಯವರ ಭಿನ್ನಾಭಿಪ್ರಾಯದ ಬಗ್ಗೆ ಅವರು ತಲೆ ಕೆಡಿಸಿಕೊಂಡಿರಲಿಲ್ಲ. ಇದು ಎಚ್.ಎಂ.ಎಸ್. ಅವರ ದೊಡ್ಡ ಗುಣ.

ಒಮ್ಮೆ ನಮ್ಮ ಒಂದು ಪುಸ್ತಕ ಪಿ.ಯು.ಸಿ.ಗೆ ಪಠ್ಯವಾಗಿತ್ತು. ಆಗ ಶಂಕರ ನಾರಾಯಣರಾಯರು ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್ ಬಳಿ ಸಿಕ್ಕಿದ್ದರು. ನನ್ನನ್ನು ಕಂಡು ನಿನ್ನ ಶ್ರೀಮತಿಗೆ ಪಠ್ಯಪುಸ್ತಕದಿಂದ ಬಂದ ಲಾಭದ ಹಣದಿಂದ ಒಂದು ಚಿನ್ನದ ಸರ ಮಾಡಿಸಿಕೊಡು ಎಂದು ತಿಳಿಸಿದ್ದರು. ಆದರೆ ನಾನು ಅವರ ವಿವೇಕದ ಮಾತು ಕೇಳಲಿಲ್ಲ. 'ಕೆರೆಯ ನೀರನು ಕೆರೆಗೆ ಚೆಲ್ಲಿ' ಅನ್ನುವಂತೆ ಬಂದ ಹಣವ ಸಿಂಹಪಾಲನ್ನೆ ಪ್ರಕಾಶನಕ್ಕೆ ಹಾಕುತ್ತಿದ್ದೆ. ಹಾಗಾಗಿ ಈ ಹೊತ್ತು ನನ್ನ ಸಂಜೆಯ ಜೀವನದ ಕಾಲದಲ್ಲಿ ಈ ಬೃಹದಾಕಾರದ ಪುಸ್ತಕದ ರಾಶಿಯನ್ನು ಹೇಗೆ ವಿಲೇವಾರಿ ಮಾಡಲಿ ಎಂದು ತಲೆಯ ಮೇಲೆ ಕೈಹೊತ್ತು ಕುಳಿತಿದ್ದೇನೆ. ಈ ನಲವತ್ತಾರು ವರ್ಷಗಳ ನನ್ನ ಪುಸ್ತಕೋದ್ಯಮದ ಹಾದಿಯಲ್ಲಿ ಇದಿಷ್ಟೇ ಎಂಬ ಸತ್ಯವನ್ನು ಕಂಡುಕೊಂಡಿದ್ದೇನೆ.

ನನ್ನ ಪ್ರಕಾಶನದಲ್ಲಿ ನನಗೆ ಮತ್ತಷ್ಟು ಸಂತೋಷ ತಂದು ಕೊಟ್ಟ ಪುಸ್ತಕ. ಹಾ.ಮಾ. ನಾಯಕರು ಮೈಥಿಲಿ ಭಾಷೆಯಿಂದ ಅನುವಾದಿಸಿದ 'ವಿದ್ಯಾಪತಿಯ ಹಾಡುಗಳು', ಹಾಲು ಬಿಳಿಯ ಕಾಗದದ ಮೇಲೆ, ಚಂದ್ರನಾಥರ ಅತ್ಯಂತ ಮನೋಹರವಾದ ಕುಸುರಿ ಕೆಲಸ, ರಾಧಾ ಕೃಷ್ಣರ ಪ್ರೇಮಕ್ಕೆ ಸಂಬಂಧಿಸಿದ ಚಿತ್ರಗಳ ಮೇಲೆ 'ಪ್ರಣಯ ಪದಾವಳಿ' ಅಚ್ಚಾಯಿತು. ಈ ಪುಸ್ತಕ ಎಷ್ಟು ಮುದ್ದಾಗಿತ್ತು ಎಂದರೆ ತಾರಾನಾಥ್ ಅವರು ಇದನ್ನು ಗ್ರಂಥಾಲಯದಲ್ಲಿ ಕದ್ದು ಬಿಡಬಹುದು ಎನ್ನುತ್ತಿದ್ದರು. ಸುಪ್ರಸಿದ್ಧ ಕವಿಗಳಾದ ಚೆನ್ನವೀರ ಕಣವಿಯವರು ಇದನ್ನು ಕೈ ತೊಳೆದುಕೊಂಡು ಮುಟ್ಟಬೇಕಾದ ಪುಸ್ತಕ ಎಂದರು. ಸುಪ್ರಸಿದ್ಧ ಕವಿಗಳಾದ ನಿಸಾರ್‌ಅಹಮದ್ ಅವರು ನನ್ನನ್ನು ಪು.ತಿ.ನ. ಅವರ ಬಳಿಗೆ ಕರೆದೊಯ್ದು. ಅವರನ್ನು ಕುರಿತು ಸಾರ್, ನೀವೇ ಹೇಳಿ, ಛಾಯಾಪತಿಯವರ ಪ್ರಕಟಣೆ ಚೆನ್ನಾಗಿದೆಯೊ ಅಥವಾ ನಾಯಕರ ಬರವಣಿಗೆ ಚೆನ್ನಾಗಿದೆಯೊ ಎಂದು ಕೇಳಿದಾಗ ಪು.ತಿ.ನ. ಅವರಿಗೆ ಸ್ವಲ್ಪ ಮುಜುಗರವೇ ಆ ಕ್ಷಣದಲ್ಲಿ ಆಗಿರಬಹುದು. ಮುಂದೆ ಅವರು 'ಪ್ರಣಯ ಪದಾವಳಿ'ಯ ಬಗ್ಗೆ ವಿಮರ್ಶೆ ಮಾಡಿದರು, ಅದು ಬೇರೆ ಮಾತು.

'ಪ್ರಣಯ ಪದಾವಳಿ'ಯ ಬಗ್ಗೆ ಅನೇಕ ಲೇಖಕರ ಅಭಿಪ್ರಾಯಗಳು ಬಂದವು. ಅದರಲ್ಲಿ ನಿಸಾರ್‌ಅಹಮದ್ ಅವರ ಅಭಿಪ್ರಾಯವನ್ನು ಕಂಡು ನಾಯಕರು ಹುಬ್ಬೇರಿಸಿದ್ದರು. 'ಒಂದು ಕಾವ್ಯದ ಪುಸ್ತಕಕ್ಕೆ ಅದರಲ್ಲೂ ತತ್ರಾಪಿ ಅನುವಾದಕ್ಕೆ ಇಷ್ಟೆಲ್ಲಾ ಹಣ ವಿನಿಯೋಗಿಸಿರುವುದು ಆಶ್ಚರ್ಯ' ಎಂದು ಅಭಿಪ್ರಾಯಪಟ್ಟರು. ನಿಸಾರ್ ಅಹಮದ್ ಅವರದು ಸರಳ ಆದರೆ ನೇರವಾದ ವ್ಯಕ್ತಿತ್ವ.

ನನಗೆ ಸಂತೋಷ ನೀಡಿದ ಮತ್ತೊಂದು ಅದ್ಭುತ ಕೃತಿ ಎಂದರೆ ನನ್ನ ತಂದೆಯವರ ಅಭಿನಂದನ ಗ್ರಂಥ ಸ್ವಸ್ತಿ. ಹಾ.ಮಾ.ನಾಯಕರು ಈ ಬಾಗಿನವನ್ನು ನಮ್ಮ ತಂದೆಗೆ ಸಮರ್ಪಿಸಲು ನನಗೆ ಅನುವು ಮಾಡಿಕೊಟ್ಟರು. ಜನ್ಮ ಕೊಟ್ಟ ತಂದೆಗೆ ನಾನು ಏನು ತಾನೆ ಮಾಡಲು ಸಾಧ್ಯ? ಅವರಿಗೆ ಕಿಂಚಿತ್ತು ಗೌರವ ಸೂಚಿಸಲು ಅವರ ಜೀವಿತ ಕಾಲದಲ್ಲಿ ಸಾಧ್ಯವಾದದ್ದು ನನ್ನ ಭಾಗ್ಯ. ಸ್ವಸ್ತಿ ಒಂದು ಸಾವಿರ ಪುಟಗಳ ಗ್ರಂಥ. ಇಂಥದೊಂದು ಪುಸ್ತಕ ಪ್ರಕಟಿಸಲು ಯಮಧೈರ್ಯಬೇಕು ಎಂದು ಹಾಮಾ ನಾಯಕರು ಗ್ರಂಥದ ಬಿಡುಗಡೆಯ ಸಮಾರಂಭದಲ್ಲಿ ಅವರ ಸ್ವಾಗತ ಭಾಷಣದಲ್ಲಿ ಹೇಳಿದರು. ಯಾರಾದರೂ ಮಗ ತಂದೆಯವರ ಬಗ್ಗೆ ಮಾಡುತ್ತಿರುವ ಪುಸ್ತಕ, ಇದು ಯಾವ ಮಹಾ ಅನ್ನಬಹುದು. ಆದರೆ ಅದು ಹಾಗಲ್ಲ ಇದು ತಂದೆ ಮಕ್ಕಳ ಪ್ರೀತಿಯನ್ನು ಮೀರಿದ್ದು ಎಂದಾಗ ಮೂವತ್ತೆಂಟು ವರ್ಷದ ತರುಣನಾಗಿದ್ದ ನನಗೆ ಕಣ್ಣಲ್ಲಿ ನೀರು ಬಂತು. ವಾಸ್ತವವಾಗಿ ಈ ಗ್ರಂಥದ ಪ್ರಕಟಣೆಗಾಗಿ ನಾನು ಬಹಳ ಕಷ್ಟಪಟ್ಟಿದ್ದೆ. ನಾಯಕರು ಎಂದೂ ಅಸತ್ಯವನ್ನು ಆಡುತ್ತಿರಲಿಲ್ಲ. ಅವರ ಋಣ ತೀರಿಸುವುದಕ್ಕೆ ತಂದೆಯವರ ಇತರೆ ವಿದ್ಯಾರ್ಥಿಗಳಂತೆ ಯಾವ ಸವಲತ್ತನ್ನೂ ವಿಶೇಷವಾಗಿ ಪಡೆದಿರ

ಲಿಲ್ಲ. ಕೆಲವು ಕಾಲ ಅವರ ವಿದ್ಯಾರ್ಥಿಯಾಗಿದ್ದರಷ್ಟೆ. ಆ ಒಂದು ಗುರುಭಕ್ತಿಯಿಂದ ಶಾಮರಾಯರಿಗೆ ಈ ಅಭಿನಂದನ ಗ್ರಂಥವನ್ನು ಸಂಪಾದಿಸಿ ನಾನು ತಂದೆಯವರ ಬಗ್ಗೆ ಕೊಂಚ ಮಟ್ಟಿಗೆ ಋಣ ತೀರಿಸುವುದಕ್ಕೆ ಅನುವು ಮಾಡಿಕೊಟ್ಟರು. ಆದ್ದರಿಂದ ಈ ಹೊತ್ತು ನನಗೆ ಜಿ.ಎಸ್.ಎಸ್. ಅವರ ಈ ಕವಿವಾಣಿ ನೆನಪಿಗೆ ಬರುತ್ತಿದೆ.

*ಎನಿತು ಜನ್ಮದಲಿ*
*ಎನಿತು ಜೀವಿಗಳಿಗೆ*
*ಎನಿತು ನಾವು ಋಣಿಯೊ*
*ತಿಳಿದು ನೋಡಿದರೆ ಬಾಳು ಎಂಬುದಿದು*
*ಋಣದ ರತ್ನ ಗಣಿಯೊ*

ನಾಯಕರಿಗೆ ಪುಸ್ತಕ ಸಂಸ್ಕೃತಿಯಲ್ಲಿ ಅಪರೂಪದ ಪರಿಶ್ರಮವಿತ್ತು, ಆದರೆ ಅವರು ಇಂದು ಇಲ್ಲ, ಅವರ ನಂತರ ಬಹುಶಃ ಪುಸ್ತಕ ಸಂಸ್ಕೃತಿಯಲ್ಲಿ ಆಸಕ್ತಿ ಮತ್ತು ಅಭಿರುಚಿ ಇರುವ ಮತ್ತೊಬ್ಬ ವ್ಯಕ್ತಿ ಎಂದರೆ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾಗಿದ್ದ ಹಾಗೂ ಇಂದು ಸಂಸ್ಕೃತ ವಿಶ್ವವಿದ್ಯಾಲಯದ ಕುಲಪತಿಗಳಾದ ಮಲ್ಲೇಪುರಂ ಜಿ. ವೆಂಕಟೇಶ. ಅವರು ಪ್ರಾಧಿಕಾರದ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ನಾನು ಕನ್ನಡ ಪುಸ್ತಕ ಪ್ರಾಧಿಕಾರದ ಸದಸ್ಯನಾಗಿದ್ದೆ. ಪುಸ್ತಕ ಸಂಸ್ಕೃತಿಯಲ್ಲಿ ಅವರಿಗಿದ್ದ ಧೀಶಕ್ತಿಯನ್ನು ಕಂಡು ಬೆರಗಾಗಿದ್ದೆ..

ನಾನು ಕನ್ನಡ ಪುಸ್ತಕ ಪ್ರಾಧಿಕಾರದ ಸದಸ್ಯನಾದುದರ ಹಿಂದೆ ಒಂದು ರೋಚಕ ಘಟನೆ ನಡೆಯಿತು. ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿದ್ದ ನಿಸಾರ್ ಅಹಮದ್ ಅವರ ಪ್ರಾತಿನಿಧಿಕ ಕವನಸಂಕಲನದ ಬಿಡುಗಡೆಯ ಸಮಾರಂಭ ಬೆಂಗಳೂರಿನ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಯನ ಸಭಾಂಗಣದಲ್ಲಿ ಏರ್ಪಾಟಾಗಿತ್ತು. ನಾನು ಮತ್ತು ಭಗವಾನ್ ಈ ಸಮಾರಂಭಕ್ಕೆ ಮೈಸೂರಿನಿಂದ ಬಂದಿದ್ದೆವು. ಸಮಾರಂಭದಲ್ಲಿ ಕನ್ನಡ ಮತ್ತು ಸಂಸ್ಕೃತಿ ಸಚಿವೆ ರಾಣಿಸತೀಶ್ ಮತ್ತು ಕಾರ್ಯದರ್ಶಿ ಚಂದ್ರಹಾಸಗುಪ್ತ ಭಾಗವಹಿಸಿದ್ದರು. ನಿಸಾರ್ ಮಾತನಾಡುತ್ತ ನಾನು ಮತ್ತು ಭಗವಾನ್ ಸಮಾರಂಭಕ್ಕೆ ಬಂದಿರುವ ವಿಚಾರ ಸಭೆಗೆ ತಿಳಿಸಿದರು. ನಂತರ ಮುಂದುವರಿಯುತ್ತಾ ಇಂದು ಬಿಡುಗಡೆಯಾಗಿರುವಂಥ ಪುಸ್ತಕವನ್ನು ಈಗ ಮೂವತ್ತು ವರ್ಷಗಳ ಹಿಂದೆ ಛಾಯಾಪತಿಯವರು ಪ್ರಕಟಿಸಿದ್ದರು ಎಂದು ತಿಳಿಸಿದರು. ಆಗ ಸಚಿವೆಯವರು ಪಕ್ಕದಲ್ಲಿ ಕುಳಿತಿದ್ದ ಕಾರ್ಯದರ್ಶಿಗಳೊಂದಿಗೆ ನನ್ನ ಬಗ್ಗೆ ವಿಚಾರಿಸಿ ತಿಳಿದುಕೊಂಡರು. ಸಮಾರಂಭ ಮುಗಿದ ನಂತರ ನೇರವಾಗಿ ನನ್ನ ಬಳಿ ಬಂದರು. ನನ್ನನ್ನು ಕುರಿತು, ಛಾಯಾಪತಿಯವರೆ, ನೀವು ಕನ್ನಡದಲ್ಲಿ ಒಳ್ಳೆಯ ಕೆಲಸ ಮಾಡುತ್ತಿದ್ದೀರಿ ಎಂದು ತಿಳಿದೆ, ನಿಮಗೆ ಶುಭವಾಗಲಿ ಎಂದು ಹಾರೈಸಿ ಮುಂದೆ ಹೊರಟುಹೋದರು. ಆಗ ಪಕ್ಕದಲ್ಲೇ ನಿಂತಿದ್ದ ನನ್ನ ಆತ್ಮೀಯ ಸ್ನೇಹಿತರಾದ ಭಗವಾನ್, ನನ್ನನ್ನು ಕುರಿತು 'ಛಾಯಿ' ನೀನು ಒಳ್ಳೆಯ ಕೆಲಸ ಮಾಡಿದ್ದಿ,

ನಿನಗೆ ಶುಭವಾಗಲಿ ಎಂದರು. ನಂತರ ಭಗವಾನ್ ಮತ್ತು ನಾನು ಒಳಗೆ ಹೋಗಿ ನಿಸಾರ್ ಅಹಮದ್ ಅವರನ್ನು ಅಭಿನಂದಿಸಿದೆವು. ನಿಸಾರ್ ನನ್ನನ್ನು ಕುರಿತು, ಛಾಯಾಪತಿ, ನಾನು ಸಚಿವರಿಗೆ ನಿನ್ನ ಬಗ್ಗೆ ತಿಳಿಸಿದ್ದೇನೆ. ಅವರು ನಿನ್ನನ್ನು ಕನ್ನಡ ಪುಸ್ತಕ ಪ್ರಾಧಿಕಾರಕ್ಕೆ ಸದಸ್ಯರನ್ನಾಗಿ ಮಾಡುತ್ತಾರೆ ಎಂದು ತಿಳಿಸಿದರು. ನನಗೆ ಯಾವ ರಾಜಕಾರಣಿಯ ಬೆಂಬಲವೂ ಇರಲಿಲ್ಲ.ಆದರೆ ಇಂದು, ಅಂದೂ ಸಹ ರಾಜಕಾರಣಿಗಳ ಬೆಂಬಲವಿಲ್ಲದೆ ಅದು ಸಾಧ್ಯವಾಗುತ್ತಿರಲಿಲ್ಲ. ಜೊತೆಗೆ ನಾನು ಹಿಂದುಳಿದ ವರ್ಗಕ್ಕೆ ಸೇರಿದವನೂ ಆಗಿರಲಿಲ್ಲ. ಆದರೆ ನಿಸಾರ್ ಅಹಮದ್ ಅವರ ಒಂದು ಮಾತಿಗೆ ಸಿಕ್ಕ ಬೆಲೆ ಎಂಥದು ಎಂಬುದನ್ನು ಅರ್ಥ ಮಾಡಿಕೊಂಡಿದೆ.

ನಮ್ಮ ಮಾಲೆಯ ಮತ್ತೊಬ್ಬ ಪ್ರಮುಖ ಹಿತೈಷಿಗಳು ಹಾಗೂ ಲೇಖಕರು ದಿ. ಪಿ.ಆರ್. ತಿಪ್ಪೇಸ್ವಾಮಿಯವರು. ನನ್ನ ಮಗಳ ಮದುವೆಯ ಸಂದರ್ಭ. ಆ ಸಂದರ್ಭದಲ್ಲಿ ನನಗೆ ನನ್ನ ಬಂಧುಗಳಿಂದ ಯಾವ ರೀತಿಯ ಸಹಾಯವಾಗಲಿ, ಸಹಕಾರವಾಗಲಿ ದೊರೆಯಲಿಲ್ಲ. ಆದರೆ ನನ್ನ ಭಾಗಕ್ಕೆ ಆಗ ಬಂದು ನಿಂತವರು ನನ್ನ ಹಿರಿಯ ಸ್ನೇಹಿತರಾದ ತಿಪ್ಪೇಸ್ವಾಮಿ. ಆಗ ತಾನೆ ಅವರ **'ಕಲಾವಿದನ ನೆನಪುಗಳು'** ಎಂಬ ಪುಸ್ತಕ ಪ್ರಕಟಿಸಿದ್ದೆ. ಅವರಿಗೆ ಕರ್ನಾಟಕದಲ್ಲಿ ಅಪಾರವಾದ ಸ್ನೇಹಿತರ ಬಳಗವಿತ್ತು. ಸುಮಾರು ಮೂನ್ನೂರು ಜನಗಳ ಮನೆಗೆ ನನ್ನನ್ನು ಕರೆದುಕೊಂಡುಹೋಗಿ ಅವರಿಂದ ತಲಾ ಒಂದು ಪುಸ್ತಕ ಖರೀದಿಸುವಂತೆ ಮಾಡಿದ್ದರು. ಅಂದು ಗ್ರಂಥಾಲಯ ಇಲಾಖೆಯ ನಿರ್ದೇಶಕರಿಂದ ಐವತ್ತು ಸಾವಿರ ರೂಪಾಯಿಗಳ ಪುಸ್ತಕಗಳನ್ನು ಖರೀದಿಸುವಂತೆ ಮಾಡಿದ್ದರು. ಹಿಂದುಳಿದ ವರ್ಗ ಮತ್ತು ಅಲ್ಪ ಸಂಖ್ಯಾತರ ಕಛೇರಿಗಳಿಂದ ಐವತ್ತು ಸಾವಿರ ರೂಪಾಯಿಗಳ ಪುಸ್ತಕ ಖರೀದಿಸುವಂತೆ ಮಾಡಿದ್ದರು. ನೆಂಟರಿದೇನಾಗುತ್ತದೆ? ಆಪತ್ತಿಗೆ ಆದವರೇ ನೆಂಟರು.

1999ರ ದಶಕದಲ್ಲಿ ಚಿತ್ರದುರ್ಗದ ಮುರುಘರಾಜೇಂದ್ರಮಠದಿಂದ ನನಗೆ ಮತ್ತು ನನ್ನ ಗುರುಗಳಾದ ಎಚ್ಚೆಸ್ಕೆಯವರಿಗೆ ಸನ್ಮಾನವಾಯಿತು. ನಮಗೆ ಬಿರುದು ನೀಡಿದರು. ಎಚ್ಚೆಸ್ಕೆಯವರಿಗೆ 'ಅಂಕಣ ಭಾಸ್ಕರ' ಎಂದೂ ನನಗೆ **'ಸಾಹಿತ್ಯ ಸೇವಾ ಧುರೀಣ'** ಎಂದು ಗೌರವಿಸಿ ಶಾಲು ಹೊದಿಸಿ ಸನ್ಮಾನಿಸಿದರು. ಇವುಗಳ ಹಿಂದೆ ಶ್ರೀವಾನ್ ತಿಪ್ಪೇಸ್ವಾಮಿಯವರ ಪ್ರಭಾವವಿತ್ತೆಂದು ನಂತರ ನಮಗೆ ತಿಳಿಯಿತು. ಅಂದು ರಾತ್ರಿ ತಿಪ್ಪೇಸ್ವಾಮಿಯವರು ಎಚ್ಚೆಸ್ಕೆ ಮತ್ತು ನಾನು ಭೋಜನ ಮಾಡುತ್ತಿದ್ದಾಗ ನನ್ನನ್ನು ಕುರಿತು ಎಚ್ಚೆಸ್ಕೆಯವರ ಸುಧಾ ಅಂಕಣಗಳನ್ನು ಪ್ರಕಟಿಸಿ ಎಂದು ಸಲಹೆ ಇತ್ತರು. ಪ್ರಿಯ ಸ್ನೇಹಿತರ ಸೂಚನೆಯನ್ನು ನಾನು ಗೌರವಿಸಿದೆ. ಅದರಂತೆ ಎಚ್ಚೆಸ್ಕೆಯವರ 'ಬೆಳಕು ಚೆಲ್ಲಿದ ಬದುಕು', ಮಾನ್ಯರು ಸಾಮಾನ್ಯರು ಮತ್ತು ಗಗನಚುಕ್ಕಿ ಭರಚುಕ್ಕಿ ಎಂಬ ಮೂರು ಅಂಕಣ ಸಂಪುಟಗಳನ್ನು ಪ್ರಕಟಿಸಿದೆ. ಇವು ತಲಾ ಒಂದು ಸಾವಿರ

ಪುಟಗಳು, ಇದನ್ನು ಗಮನಿಸಿ ಗುರುತಿಸಿದ ಸಾಹಿತ್ಯವಲಯ ನನಗೆ 'ಸಾವಿರಪುಟಗಳ ಸರದಾರ' ಎಂದು ಗುರುತಿಸಿ ಗೌರವಿಸಿತು. ಈ ಪ್ರಕಟಣೆಗಳ ಹಿನ್ನಲೆಯನ್ನಿಟ್ಟುಕೊಂಡು ನನಗೆ 'ಅತ್ಯುತ್ತಮ ಪ್ರಕಾಶನ ಪ್ರಶಸ್ತಿ' ಲಭಿಸಿತು. ಇದು ನನಗೆ ಸಂತೋಷ ಸಮಾಧಾನ ನೀಡಿತು.

ನಮ್ಮ ತಂದೆಯವರು ದಿವಂಗತರಾದ ದಿವಸಗಳು ಅವು. ನಾನಿನ್ನು ಆ ಏಟಿನಿಂದ ಚೇತರಿಸಿಕೊಂಡಿರಲಿಲ್ಲ. ಆದರೂ ನಮ್ಮ ತಂದೆಯವರ ಮೇಲಿನ ಗೌರವದಿಂದ 'ತ.ಸು. ಶಾಮರಾಯ - ಪೂಜ್ಯ ನೆನಪು' ಎಂಬ ಪುಸ್ತಕವನ್ನು ಪ್ರಕಟಿಸಿ ಅವರು ತೀರಿಕೊಂಡ ಹದಿಮೂರನೆಯ ದಿವಸ ಬಿಡುಗಡೆ ಮಾಡುವ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದೆ. ಹೀಗಿರುವಾಗ ಒಂದು ಬೆಳಿಗ್ಗೆ ಹಾ.ಮಾ. ನಾಯಕರು ದೂರವಾಣಿ ಕರೆ ಮಾಡಿದರು. ನಂತರ ನನ್ನನ್ನು ಕುರಿತು ಏನು ಸ್ವಾಮಿ, ಇಂದಿನ ಡೆಕನ್‌ಹೆರಾಲ್ಡ್ ಪೇಪರಿನಲ್ಲಿ ನಿಮ್ಮ ತಂದೆಯವರ ಬಗ್ಗೆ ಒಂದು ಲೇಖನ ಬಂದಿದೆ, ನೋಡಿದಿರಾ ಎಂದರು. ನಂತರ ಅವರು ಫೋಟೋಗಳು ಚೆನ್ನಾಗಿವೆ, ಆದರೆ ಲೇಖನ ಚೆನ್ನಾಗಿಲ್ಲ ಎಂದರು. ತಂದೆಯವರ ಮೇಲಿನ ಲೇಖನವಾಗಿದ್ದರಿಂದ ನಾನು ಕುತೂಹಲದಿಂದ ಪತ್ರಿಕೆ ಕೊಂಡು ಓದಿದೆ. ನಾಯಕರು ಹೇಳಿದ ಮಾತು ನಿಜವಾಗಿತ್ತು. ಆ ಲೇಖನ ಸ್ವಲ್ಪವೂ ಚೆನ್ನಾಗಿರಲಿಲ್ಲ. ಬರವಣಿಗೆಯ ಬಿಗಿ ಮತ್ತು ಗಾಂಭೀರ್ಯ ಅದರಲ್ಲಿ ಇರಲಿಲ್ಲ. ಆದರೆ ಲೇಖನದ ಒಂದು ಕಡೆ ವಿನಾಕಾರಣ ನಮ್ಮ ಸಂಸ್ಥೆಯ ಬಗ್ಗೆ ಅವಹೇಳನಕಾರಿಯಾದ ಹೇಳಿಕೆಯಿತ್ತು. ಅದು ಈ ರೀತಿ ಇತ್ತು. Today T.V. Memorial series sans its originality and acts like any other succesful publishing conerns ಎಂದಿತ್ತು. ಇದು ನೆಂಟರಿಂದ ನನಗೆ ಸಂದ ಲಾಭ. ಯಾವ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯನ್ನು ನನಗೆ ನನ್ನ ತಂದೆ ವಹಿಸಿದ್ದರು, ಅದರಿಂದ ಎಷ್ಟು ಒಳ್ಳೆಯ ಪುಸ್ತಕಗಳು ಅಚ್ಚಾಗಿದ್ದವು. ಅದನ್ನು ತಿಳಿಯದ ಈ ಬಂಧುಗಳು, ಬೇಜವಾಬ್ದಾರಿಂದ ಈ ಮಾತನ್ನು ಬರೆದಿದ್ದರು. ಈ ಲೇಖನ ಬಹಳ ಜಾಳು ಜಾಳಾಗಿತ್ತು. ಆದರೆ ಪ್ರಕಾಶನದ ಬಗ್ಗೆ ಬರೆಯುವಾಗ ಮಾತ್ರ ಅವರು ಬೇರೆಯವರಿಂದ ಸಹಾಯವನ್ನು ತೆಗೆದುಕೊಂಡು sans ಎನ್ನುವ ಷೇಕ್ಸ್‌ಪಿಯರ್ ಎಂದು ಮಿತ್ರರಿಂದ ತಿಳಿಸಿದೆ ಈ ಪದ ಬಳಸಿದ್ದರು. ಇಷ್ಟೇ ಅಲ್ಲ, ಇದು ಸತ್ಯಕ್ಕೆ ಬಹಳ ದೂರವಾದ ಮಾತಾಗಿತ್ತು. ಷೇಕ್ಸ್‌ಪಿಯರ್‌ನ ಪದ ಬಳಸಿದ್ದು, ಅವರ ಅಲ್ಪ ಭಾಷಾ ಜ್ಞಾನದ ಬಗ್ಗೆ ನಾನು ಕನಿಕರಿಸಿದೆ. ನಮ್ಮ ಲೇಖಕರಲ್ಲಿ ಅನೇಕರು ಇವರನ್ನು ಖಂಡಿಸಿದರು. ನನಗಿದ್ದ ಪ್ರಭಾವದಲ್ಲಿ ಅವರನ್ನು ಮಟ್ಟಹಾಕಬಹುದಾಗಿತ್ತು. ಆದರೆ ಅವರು ಬಂಧುವಾಗಿದ್ದರಿಂದ ನಾನು ಹಾಗೆ ಮಾಡಲಿಲ್ಲ.

ನಾನು ವಾಣಿಜ್ಯ ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದ ದಿವಸಗಳು. ಒಂದು ದಿವಸ ಬೆಳಿಗ್ಗೆ ನಮ್ಮ ತಂದೆಯವರು ನನ್ನನ್ನು ಕುವೆಂಪು ಅವರ ಬಳಿಗೆ ಕರೆದುಕೊಡು ಹೋಗಿದ್ದರು. ಆಗ ಕುವೆಂಪು ಇವರ ಕಡೆ ತಿರುಗಿ ಶಾಮರಾವ್, ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಕಮಿಟಿಯಲ್ಲಿ ಒಂದು ಕೆಲಸ ಖಾಲಿ ಇದೆಯಂತೆ. ಹೋಗುತ್ತೀರಾ ಎಂದರು. ತಕ್ಷಣ ಅಣ್ಣ ನನ್ನ ಕಡೆ ತಿರುಗಿ, ನನ್ನನ್ನು ತೋರಿಸುತ್ತಾ ಸಾರ್, ನನಗೆ ನನ್ನ ಮಗ ಇದ್ದಾನೆ. ನಾನೆಲ್ಲು ಹೋಗುವುದಿಲ್ಲ ಎಂದರು. ಕುವೆಂಪು ಅವರ ಮನೆಯಿಂದ ಹಿಂದಿರುಗಿ ಬರುವಾಗ ದಾರಿಯಲ್ಲಿ ಅಣ್ಣ ನನ್ನನ್ನು ಕುರಿತು ಹೇಳಿದರು. ಮಗು, ನೀನು ತಿಂಗಳಿಗೆ ನೂರು ರೂಪಾಯಿಗಳನ್ನು ಕೊಡು, ನಾನು ಸಂಸಾರ ನಡೆಸುತ್ತೇನೆ ಎಂದರು. ಆದರೆ ಒಂದು ವರ್ಷವಾದನಂತರ ನೋಡೋ ಮಗು, ನಾನು ನೂರು ರೂಪಾಯಿ ಕೊಡುತ್ತೇನೆ, ನೀನೆ ಸಂಸಾರ ನಡೆಸು ಎಂದರು. 'ಬೆಳೆಯುವ ಕುಡಿ ಮೊಳಕೆಯಲ್ಲೆ' ಅನ್ನುತ್ತಾರೆ, ಒಂದು ವರ್ಷದಲ್ಲೇ ನಮ್ಮ ತಂದೆಯವರಿಗೆ ನನ್ನ ಕಾರ್ಯ ಶ್ರದ್ಧೆಯಲ್ಲಿ ನಂಬಿಯುಂಟಾಗಿತ್ತು. ನಮ್ಮ ಮನೆ, ಮನೆಯಲ್ಲಿ, ಅದೊಂದು ಛತ್ರ ಎಂಬ ಹೆಸರು ನಮ್ಮ ತಾತ ಸುಬ್ಬಣ್ಣನವರ ಕಾಲದಿಂದಲೂ ಬಂದಿದೆ. ಈ ದೊಡ್ಡ ರಥವನ್ನು ನಮ್ಮ ತಂದೆಯವರು ನನ್ನ ಜೊತೆ ಇರುವವರೆಗೂ ಬಹಳ ಶ್ರದ್ಧೆ, ನಿಷ್ಠೆಯಿಂದ ಎಳೆದುಕೊಂಡು ಬಂದೆ. ಮುಂದೆ ನನ್ನ ತಂಗಿಯ ಕಾರಣದಿಂದ ತಂದೆಯವರು ಮೈಸೂರು ಬಿಟ್ಟು ಗುಬ್ಬಿಗೆ ಹೋದಾಗ ನನಗೆ ಕೆಲವು ಕಾಲ ಪ್ರಕಟಣೆ ಹಾಗೂ ಸಂಸಾರಕ್ಕೆ ತೊಂದರೆಯಾಯಿತು. ಇಂಥ ಕಷ್ಟ ಕಾಲದಲ್ಲೂ 'ನಾನು ತಂದೆಯವರ ಅಭಿನಂದನ ಗ್ರಂಥವನ್ನು ಪ್ರಕಟಿಸಲು ಹಿಂದು ಮುಂದೆ ನೋಡಲಿಲ್ಲ. ಅಂದು ನಮಗೆ ಬಹಳ ಕಷ್ಟದ ದಿನಗಳಾಗಿದ್ದರೂ, ನನ್ನ ಶ್ರೀಮತಿಯ ಸಹಕಾರ ಲಭಿಸಿತು. ಇಲ್ಲದಿದ್ದರೆ ನನಗೆ ಬಹಳ ಕಷ್ಟವಾಗುತ್ತಿತ್ತು. ಈ ಹೊತ್ತು ನಾನು ಆಕೆಯನ್ನು ಪ್ರೀತಿ ವಿಶ್ವಾಸದಿಂದ ನೆನೆಯುತ್ತೇನೆ. ತಂದೆಯವರ ಅಭಿನಂದನ ಗ್ರಂಥವನ್ನು ಪ್ರಕಟಿಸಲು ಅವಳು ಅವಳ ಆಭರಣವನ್ನು ಒತ್ತೆಯಿಟ್ಟು, ಹಣ ನೀಡಿದ್ದನ್ನು ನಾನು ಮರೆಯಲಾರೆ. ತಂದೆಯವರ ಜೀವಿತ ಕಾಲದಲ್ಲಿ ಈ ಗ್ರಂಥ ಪ್ರಕಟಿಸಲು ಸಾಧ್ಯವಾಯಿತು. ಯಾವುದೇ ಪ್ರಸಿದ್ಧ ವ್ಯಕ್ತಿಗಳು ಇದ್ದಾಗ ಆತನನ್ನು ಸ್ಮರಿಸಬೇಕು. ಅದು 'ಇದ್ದಾಗ ಮಾರಕ ಸತ್ತಾಗ ಸ್ಮಾರಕ' ಆಗಬಾರದು.

ನಮ್ಮ ತಂದೆಯವರು ಸದಾ ಹೇಳುತ್ತಿದ್ದ ಒಂದು ಮಾತು ನನ್ನ ಜೀವನದಲ್ಲಿ ಹಸಿರಾಗಿರುತ್ತದೆ. ಅವರು 'ಧರ್ಮೋ ರಕ್ಷತಿ ರಕ್ಷಿತಃ' ಎನ್ನುತ್ತಿದ್ದರು. ತಂದೆಯವರಿಂದ ನಾನು ಕಲಿತ ಪಾಠ ಧರ್ಮವಾಗಿ ನಡೆದುಕೊಳ್ಳುವುದು. ನನಗೆ ಅವರ ಜೀವಿತ ಕಾಲದಲ್ಲೇ ಕಷ್ಟಗಳು ಬರುತ್ತಿದ್ದವು. ಆದರೆ ತಂದೆಯವರ ನುಡಿಯಂತೆ ನಾನು ನಡೆದದ್ದರಿಂದ ಬೆಟ್ಟದ ಹಾಗೆ ಬಂದ ಕಷ್ಟ ಮಂಜಿನಂತೆ ಕರಗಿ ಹೋಗುತ್ತಿತ್ತು. ನಾನು ನನ್ನ ಗ್ರಹಚಾರ

ಸರಿ ಇಲ್ಲ ಎಂದರೆ ಧರ್ಮರಾಯರಂತಿದ್ದ ಅವರು ಹೇಳುತ್ತಿದ್ದ ಮಾತು, ಮಗು, ಯಾವ ಗ್ರಹಚಾರವೂ ಇಲ್ಲ ಸಕಲ ಗ್ರಹಬಲ ನೀನೇ ಸರಸಿಜಾಕ್ಷ ಎನ್ನುತ್ತಿದ್ದರು. ಮಗು, ಪ್ರತಿನಿತ್ಯ ಗಾಯತ್ರಿಜಪ ಮಾಡಿಕೊ, ನಿನಗೆ ಎಲ್ಲ ಒಳ್ಳೆಯದಾಗುತ್ತದೆ' ಅನ್ನುತ್ತಿದ್ದರು.

ನನ್ನ ಉದ್ಯಮದಲ್ಲಿ ನನಗೆ ಸಹಾಯ ಮಾಡಿದ ಮತ್ತೊಬ್ಬ ಗಣ್ಯ ವ್ಯಕ್ತಿ ಮಾಜಿ ಕೇಂದ್ರ ಸಚಿವ ಹಾಗೂ ಇಂದು ಕ್ಯಾಬಿನೆಟ್ ಸಚಿವರಾಗಿರುವ ಶ್ರೀನಿವಾಸ ಪ್ರಸಾದ್ ಅವರು. ಅವರು ನನಗೆ ಪರಿಚಯವಾದ್ದರಿಂದ ನನಗೆ ಚಾಮರಾಜನಗರ ಜಿಲ್ಲೆಯಲ್ಲಿ ವ್ಯಾವಹಾರಿಕವಾಗಿ ಅನುಕೂಲವಾಯಿತು. ಸಾಹಿತಿಗಳು ಅವರನ್ನು ಈ ದೇಶದ ಬಹು ದೊಡ್ಡ ಸಾಂಸ್ಕೃತಿಕ ನಾಯಕ ಎಂದು ಬಣ್ಣಿಸುತ್ತಾರೆ. ಇಂದಿಗೂ ನೀವು ಚಾಮರಾಜನಗರ ಜಿಲ್ಲೆಗೆ ಹೋದರೆ, ಅಲ್ಲಿಯವರನ್ನು ನಿಮ್ಮ ನಾಯಕರು ಯಾರು ಎಂದು ಕೇಳಿದರೆ ಅವರು ಹೇಳುವ ಮೊದಲ ಮಾತು ಶ್ರೀನಿವಾಸಪ್ರಸಾದ್. ಈತನನ್ನು ಅಲ್ಲಿಯ ಅನಭಿಶಕ್ತದೊರೆ ಎಂದರೆ ತಪ್ಪಾಗಲಾರದು. ನಾನು ಅವರಿಗೆ ಬೇಕಾದವನು ಎಂಬ ಕಾರಣಕ್ಕೆ ಹಲವರು ನನಗೆ ಸಹಾಯ ಮಾಡಿದ್ದಾರೆ. ಅವರ ಕೃತಿ 'ಮಾಧ್ಯಮದಲ್ಲಿ ಶ್ರೀನಿವಾಸಪ್ರಸಾದ್' ಬಿಡುಗಡೆಯಾದಾಗ ನಾಲ್ಕುನೂರರಿಂದ ಐದುನೂರು ಕೃತಿಗಳು ಬಿಡುಗಡೆಯಾದ ಸಂದರ್ಭದಲ್ಲಿ ಮಾರಾಟವಾದವು. ಬಹುಶಃ ಕನ್ನಡ ಪುಸ್ತಕಗಳ ಬಿಡುಗಡೆಯ ಸಮಾರಂಭದಲ್ಲಿ ಇದೊಂದು ದಾಖಲೆ ಎಂದು ಭಾವಿಸಿದ್ದೇನೆ. ನಮ್ಮ ತಂದೆಯವರ ಶಿಷ್ಯರಾಗದಿದ್ದರೂ ಅವರಲ್ಲಿ ಪ್ರಸಾದ್ ಅವರಿಗೆ ವಿಶೇಷ ಗೌರವ ಅಭಿಮಾನ. ಸಾಹಿತಿಗಳನ್ನು ಕಂಡರೆ ಬಹಳ ಗೌರವ.

ಒಮ್ಮೆ ಸುಪ್ರಸಿದ್ಧ ಕವಿಗಳಾದ ಶ್ರೀ ಚೆನ್ನವೀರಕಣವಿಯವರು ದಸರಾ ಕವಿಗೋಷ್ಠಿಗೆ ಅಧ್ಯಕ್ಷರಾಗಿ ಮೈಸೂರಿಗೆ ಬಂದಿದ್ದರು. ಸಾಹಿತ್ಯ ಪ್ರಿಯರಾದ ಶ್ರೀನಿವಾಸ ಪ್ರಸಾದರ ಮನೆಗೆ ಭೇಟಿ ಇತ್ತಿದ್ದರು. ಅವರೊಡನೆ ಆಗ ನಾನೂ ಸಹ ಇದ್ದೆ. ಕವಿಗಳಿಗೆ ಸಹೃದಯಿ ಪ್ರಸಾದ್ ಅವರು ಅವರ ತಲೆಯ ಮೇಲೆ ಮೈಸೂರುಪೇಟ ಇರಿಸಿ ಶಾಲು ಹೊದಿಸಿ ಗೌರವಿಸಿದರು. ಒಂದು ಚಿಪ್ಪು ನಂಜನಗೂಡು ರಸಬಾಳೆಹಣ್ಣನ್ನು ನೀಡಿ ಹರ್ಷಿಸಿದರು.

ಪ್ರಸಾದ್ ಅವರು ಉಪಕಾರ ಜೀವಿ. ಹಾಗೆ ಮಾಡುವಾಗ ಅವರು ಜಾತಿ, ಕುಲ ನೋಡುವುದಿಲ್ಲ. ಕುವೆಂಪು ಅವರ ನುಡಿಮುತ್ತಿನಂತೆ 'ಮನುಜ ಮತ ವಿಶ್ವಪಥ'ದಂತೆ ನಡೆದುಕೊಳ್ಳುತ್ತಾರೆ. ಜಾತಿ ಅನ್ನುವ ಗೋಡೆಯನ್ನು ದಾಟಿದ್ದಾರೆ. ಅವರೊಬ್ಬ ದೊಡ್ಡ ಮಾನವತಾವಾದಿ. ನನ್ನ ಮಗ ಇಂದು ಹೋಟೆಲ್ ಉದ್ಯಮದಲ್ಲಿ ಉನ್ನತ ಸ್ಥಾನದಲ್ಲಿದ್ದಾನೆ. ಅದಕ್ಕೆ ಇವರೇ ಕಾರಣ. ಎಂ.ಬಿ.ಎ. ಮುಗಿಸಿದ ಮೇಲೆ ಅವನು ಹೊರದೇಶದಲ್ಲಿ ವಿದ್ಯಾಭ್ಯಾಸ ಮಾಡಬೇಕಾಗಿತ್ತು. ಆ ದಿವಸಗಳಲ್ಲಿ ವೀಸಾ ಸಿಗುವುದು ದುರ್ಭರವಾಗಿತ್ತು. ಆದರೆ ಪ್ರಸಾದ್ ಅವರು ಮನಸ್ಸುಮಾಡಿದ್ದರಿಂದ ಅದು ಸಿಗುವಂತಾಯಿತು.

ಈ ಓಂದೆ ನಾನು ತಿಳಿಸಿದಂತೆ, ನನ್ನ ಉದ್ಯಮದಲ್ಲಿ ಲೇಖಕರ ಪಾತ್ರ ಹಿರಿದು. ಒಂದು ಮನೆಗೆ ಯಾವ ರೀತಿ ಅಸ್ತಿಭಾರ ಮುಖ್ಯವೋ ಅದೇ ರೀತಿ ಪುಸ್ತಕೋದ್ಯಮಕ್ಕೆ ಲೇಖಕನ ಅಸ್ತಿಭಾರ ಅದರಲ್ಲೂ ಕೆಲವು ಲೇಖಕರು ನೀಡುತ್ತಿದ್ದಂಥ ಸೂಚನೆ ನನಗೆ ಸಮಯೋಚಿತವಾಗಿದೆ ನಮ್ಮ ಅನೇಕ ಪ್ರಕಟಣೆಗಳಲ್ಲಿ ಹಾ ಮಾ ನಾಯಕರ ಸಲಹೆಯನ್ನು ಪಡೆಯುತ್ತಿದ್ದೆ. ನಾಯಕರು ಕಣ್ಮರೆಯಾದ ನಂತರ ಶ್ರೀ ತಾರಾನಾಥ ಅವರಲ್ಲಿ ಅನೇಕ ಸಲಹೆ ಸೂಚನೆಗಳನ್ನು ಪಡೆಯುತ್ತಿರುತ್ತೇನೆ. ಆ ರೀತಿ ನನಗೆ ಆರೋಗ್ಯಕರ ಸೂಚನೆಗಳನ್ನು ನೀಡುವುದರಲ್ಲಿ ಶ್ರೀ ಸಿ. ನಾಗಣ್ಣ ಸಹ ಪ್ರಮುಖರು.

ನನ್ನ ಇತ್ತೀಚಿನ ಪ್ರಿಯಲೇಖಕರು ಎಚ್.ಎಸ್. ವೆಂಕಟೇಶಮೂರ್ತಿಯವರು. ಕಾರ್ಯಕಾರಣ ನಾನು ಬಹಳ ಕಾಲ ಅವರ ಪುಸ್ತಕಗಳನ್ನು ಪ್ರಕಟಿಸುವ ಸೌಭಾಗ್ಯ ದೊರೆತಿರಲಿಲ್ಲ. ಈಗ ಹತ್ತು ವರ್ಷದಿಂದೀಚೆಗೆ ಅವರ ಪುಸ್ತಕಗಳನ್ನು ಪ್ರಕಟಿಸುತ್ತಿದ್ದೇನೆ. ಅವರ ಒಂದು ಭಾವಗೀತೆಯ ಪುಸ್ತಕ 'ತೂಗುಮಂಚ' ಪ್ರಕಟಿಸಿದೆ. ಆ ಸಂದರ್ಭದಲ್ಲಿ ಜಿ.ಎಸ್.ಎಸ್. ನನ್ನನ್ನು ಅಭಿನಂದಿಸಿದ್ದು ನನ್ನ ಮನಸ್ಸಿನಲ್ಲಿ ಈಗಲೂ ಹಸಿರಾಗಿದೆ. ನಂತರ ಎಚ್ಚೆಸ್ವಿಯವರ ಅನೇಕ ಪುಸ್ತಕಗಳನ್ನು ಪ್ರಕಟಿಸಿದ್ದೇನೆ. ಅವರ ಪ್ರತಿಯೊಂದು ಪುಸ್ತಕ ಪ್ರಕಟವಾದಾಗಲೂ ಅವರು ಪಡುವ ಸಂತೋಷದಿಂದ ನನ್ನ ಶ್ರಮ ಸಾರ್ಥಕವಾಯಿತು ಎಂದು ಭಾವಿಸಿದ್ದೇನೆ. ಇದೇ ರೀತಿ ನನ್ನ ಇತರೆ ಲೇಖಕರು ಸಂತೋಷಪಟ್ಟಾಗಲೂ ನನಗೆ ನನ್ನ ಶ್ರಮ ಸಾರ್ಥಕವಾಯಿತು ಅನ್ನಿಸುತ್ತದೆ.

ನಾನು ಸರಿಯೋ ತಪ್ಪೋ, ಆದರೆ ಕೆಲವು ತತ್ವಗಳಿಗೆ ಬದ್ಧನಾಗಿದ್ದೇನೆ. ಈಗ ಇಪ್ಪತ್ತೈದು ವರ್ಷಗಳಿಂದಲೂ ಒಬ್ಬನೇ ಕಾಗದದ ವ್ಯಾಪಾರಿಯ ಬಳಿ ಕಾಗದ ಖರೀದಿಸುತ್ತಿದ್ದೇನೆ. ಆತ ಈವರೆಗೂ ಒಂದು ದಿವಸವೂ ಹಣ ಕೇಳಲು ನಮ್ಮ ಮನೆಗೆ ಬಂದಿಲ್ಲ. ಸುರೇಶ್, ಯಾಕೆ ನಮ್ಮ ಮನೆಗೆ ಬರೋದಿಲ್ಲ ಎಂದು ಒಮ್ಮೆ ಕೇಳಿದಾಗ, ಆತ ನಗುತ್ತಾ ನಿಮ್ಮ ಮನೆಗೆ ಯಾಕೆ ಬರಲಿ? ನೀವು ಎಂದೂ ನಾನು ನಿಮ್ಮ ಮನೆಗೆ ಬರುವಂತೆ ನಡೆದುಕೊಳ್ಳಲಿಲ್ಲವಲ್ಲ ಎಂದು ಹುಬ್ಬು ಹಾರಿಸಿದಾಗ ನಾನು ಸುಮ್ಮನಾಗಿದ್ದೇನೆ.

ಈಗ ಹತ್ತು ವರ್ಷಕ್ಕೂ ಮೇಲ್ಪಟ್ಟು, ನಾನು ಮೈಸೂರಿನ ಪ್ರತಿಷ್ಠಿತ ಗುಡ್‌ಟಚ್ ಪ್ರೆಸ್ಸಿನಲ್ಲಿ ನಮ್ಮ ಪುಸ್ತಕಗಳನ್ನು ಅಚ್ಚು ಮಾಡಿಸುತ್ತಿದ್ದೇನೆ. ಆತ ಎಷ್ಟು ಬೇಕಾದರೂ ಪುಸ್ತಕ ಅಚ್ಚು ಮಾಡಿ ಕೊಡುತ್ತೇನೆ. ಆದರೆ ಬಿಲ್ಲಿನ ಮೊತ್ತಕ್ಕೆ ಮಾತ್ರ ನಿಮ್ಮ ಮನೆಗೆ ಬರುವಂತೆ ಮಾಡಬೇಡಿ ಎಂದು ತಿಳಿಸಿದರು. ಈವರೆಗೆ ಆತ ನಮ್ಮ ಮನೆಗೆ ಬಿಲ್ಲು ಕೇಳಲು ಬಂದಿಲ್ಲ. ಆದರೆ ಸ್ನೇಹಿತನಾಗಿ ಅನೇಕ ಬಾರಿ ಬಂದಿದ್ದಾನೆ.

ನನಗೆ ಈವರೆಗೆ ನಮ್ಮ ಪ್ರಕಟಣೆಗಳ ಬಗ್ಗೆ ಲಭಿಸಿರುವ ಒಳ್ಳೆಯ ಹೆಸರಿಗೆ, ನಮ್ಮ ಮುಖಪುಟ ಕಲಾವಿದರೇ ಕಾರಣ. ಕಳೆದ ಇಪ್ಪತ್ತು ವರ್ಷಗಳಿಂದಲೂ ಕಲಾವಿದ

ಸುಧಾಕರ ದರ್ಬೆ. ಅವರು ಅವರ ನಿರಂತರ ಸಹಕಾರವನ್ನು ನನ್ನ ಜೀವನದಲ್ಲಿ ಮರೆಯುವುದಿಲ್ಲ. ನಾವು ಈವರೆಗೆ ಅವರಲ್ಲಿ ಸಾಕಷ್ಟು ವ್ಯವಹಾರ ಮಾಡಿರಬಹುದು. ಆದರೆ ಅವರು ಮಾಡಿಕೊಟ್ಟಿರುವ ಕಲೆಗೆ ನಾನು ಕೊಟ್ಟಿರುವ ಹಣ ಸಾಟಿಯಲ್ಲ.

ನನ್ನ ಕಾಯಕ ನಿಷ್ಠೆಯನ್ನು ಗಮನಿಸಿ ಅನೇಕ ಸಂಘ ಸಂಸ್ಥೆಗಳು ಗುರುತಿಸಿವೆ. ಅವರಿಗೆ ನಾನು ಋಣಿ. ಒಮ್ಮೆ ನಾನು ನನ್ನ ಕುಟುಂಬದವರೊಂದಿಗೆ ಹಂಪೆಗೆ ಪ್ರವಾಸಕ್ಕೆ ಹೋಗಿದ್ದೆ. ಹಾಗೆ ಅಲ್ಲಿ ಅಲೆದಾಡುತ್ತಿದ್ದಾಗ ನನ್ನ ಮೊಬೈಲ್‌ಗೆ ಒಂದು ದೂರವಾಣಿ ಕರೆ ಬಂತು. ಅತ್ತಕಡೆಯಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಿಂದ ಒಂದು ಕರೆ ಬಂದಿತ್ತು. ಅವರು ಪ್ರೀತಿಯಿಂದ ನನ್ನನ್ನು ಕುರಿತು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಬೆಂಗಳೂರಿನಲ್ಲಿ ಜರುಗುತ್ತಿದೆ. ನೀವು ಪ್ರಕಾಶೋದ್ಯಮಕ್ಕೆ ಸಂಬಂಧಿಸಿದಂತೆ ಒಂದು ಪ್ರಬಂಧ ಮಂಡಿಸಬೇಕು ಎಂದು ಕೇಳಿಕೊಂಡರು. ನಾನು ಸಂತೋಷದಿಂದ್ದೊಪ್ಪಿ ಸಮ್ಮೇಳನದಲ್ಲಿ ಭಾಗವಹಿಸಿ ನನ್ನ ಪ್ರಬಂಧ ಮಂಡಿಸಿದೆ. ಇದೋ ನನ್ನ ಪ್ರಬಂಧ

## *ಪ್ರಕಾಶಕರು ಮತ್ತು ಮಾರಾಟ ವ್ಯವಸ್ಥೆ*

*ಪ್ರಕಾಶಕ ಅಂದರೆ ಯಾರು ಎಂಬುದನ್ನು ನಾವು ಮೊಟ್ಟ ಮೊದಲು ತಿಳಿಯ ಬೇಕಾಗಿದೆ. ಕಾಗದವನ್ನು ಖರೀದಿಸಿ. ಅಚ್ಚಿನ ಮನೆಗೆ ದೌಡಾಯಿಸಿ ಹಸ್ತಪ್ರತಿಯನ್ನು ಮುದ್ರಕನಿಗೆ ಕೊಟ್ಟು, ಪುಸ್ತಕವನ್ನು ಕೈಲಿ ಹಿಡಿದರಷ್ಟೇ ಸಾಲದು. ಪ್ರಕಾಶಕನಾದವನು ಒಂದು ಹಸ್ತಪ್ರತಿ ಅವನ ಬಳಿಗೆ ಬಂದಾಗ, ಅದು ಪ್ರಕಟಣೆಗೆ ಯೋಗ್ಯವೆ ಎಂದು ತಿಳಿಯುವ ಸಾಮರ್ಥ್ಯವನ್ನು ಹೊಂದಿರಬೇಕು. ಎರಡನೆಯದಾಗಿ ಕರಡನ್ನು ತಿದ್ದುವ ಶ್ರದ್ಧೆ ಅವನಿಗಿರಬೇಕು. ಕೆಲವೊಮ್ಮೆ ಪ್ರಕಾಶಕರು ಈ ದಿಶೆಯಲ್ಲಿ ಅಸಮರ್ಥರಾದರೆ, ಕರಡು ತಿದ್ದುವ ಸಮರ್ಥರಿಂದ ಸೂಕ್ತ ಸಂಭಾವನೆಯನ್ನು ನೀಡಿ ಕರಡು ತಿದ್ದಿಸಬೇಕು. ಪುಸ್ತಕದ ಒಳ ಪುಟಗಳ ವಿನ್ಯಾಸವನ್ನು ರೂಪಿಸುವ ಕಲೆ ಅವನಿಗೆ ತಿಳಿದಿರಬೇಕು. ಪುಸ್ತಕದ ಒಳ ಹೂರಣವನ್ನು ಗಮನಿಸಿ. ಅದಕ್ಕೆ ತಕ್ಕಂತೆ ಸಮರ್ಥ ಕಲಾವಿದರಿಂದ ಮುಖಪುಟವನ್ನು ರಚಿಸುವಂತೆ ಮಾಡಬೇಕು. ಆಯಾ ಕ್ಷೇತ್ರಗಳಲ್ಲಿ ಪರಿಣಿತಿ ಪಡೆದಿರುವ ಅರ್ಹ ಲೇಖಕರನ್ನು ಗುರುತಿಸಿ ಅವರಿಂದ ಅವರ ಕ್ಷೇತ್ರಕ್ಕೆ ಸಂಬಂಧಪಟ್ಟ ವಿಷಯಗಳನ್ನು ಬರೆಯುವಂತೆ ಸೂಚಿಸುವ ಗುಣಗ್ರಾಹಿಯಾಗಿರಬೇಕು. ಲೇಖಕರಿಗೆ ಸಲ್ಲಬೇಕಾದ ಗೌರವಧನವನ್ನು ನೀಡಬೇಕು. ಇದರೊಂದಿಗೆ ಅವರಿಗೆ ನೀಡಬೇಕಾದ ಇಪ್ಪತ್ತೈದು ಗೌರವ ಪ್ರತಿಗಳನ್ನೂ ಸಹ ನೀಡಬೇಕು. ಮೇಲಿನ ಅಂಶಗಳನ್ನು ರೂಢಿಸಿಕೊಂಡ ವ್ಯಕ್ತಿ ಸಮರ್ಥ ಪ್ರಕಾಶಕನಾಗುವುದರಲ್ಲಿ ಸಂದೇಹವಿಲ್ಲ.*

*1980ರ ದಶಕದಲ್ಲಿ ನಾನು ಧಾರವಾಡದಲ್ಲಿರುವ ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಹೋಗಿದ್ದೆ. ಅಲ್ಲಿ ಸುಪ್ರಸಿದ್ಧ ಸಂಶೋಧಕರೂ, ವಿಮರ್ಶಕರೂ, ವಿದ್ವಾಂಸರೂ ಹಾಗೂ*

ಪ್ರಾಧ್ಯಾಪಕರಾಗಿದ್ದ ಎಂ.ಎಂ. ಕಲ್ಬುರ್ಗಿಯವರನ್ನು ಭೇಟಿಯಾಗಿದ್ದೆ. ಗುಣಪಕ್ಷಪಾತಿಗಳಾದ ಅವರು ಒಡನೆಯೆ ಮೈಸೂರಿನ ಪ್ರಕಾಶಕರು ಮತ್ತು ಅವರ ಪುಸ್ತಕ ಸಂಸ್ಕೃತಿ ಮತ್ತು ಕಲೆಯನ್ನು ಶ್ಲಾಘಿಸಿದರು. ಮೈಸೂರಿನಲ್ಲಿ ಬೆಳೆದಿರುವಷ್ಟು ಪ್ರಕಟಣ ಕಲೆ ರಾಜ್ಯದ ಇತರೆ ಭಾಗಗಳಲ್ಲಿ ಅಷ್ಟು ಹೆಚ್ಚಾಗಿ ಕಾಣಬರುವುದಿಲ್ಲ ಎಂದರು. ಅವರ ಮಾತು ನಿಜ. ಸುಪ್ರಸಿದ್ಧ ಪ್ರಕಾಶಕರಾದ ಕಾವ್ಯಾಲಯದ ಕೂಡಲಿ ಚಿದಂಬರಂ, ಡಿ.ವಿ.ಕೆ. ಮೂರ್ತಿ, ಉಷಾ ಪ್ರೆಸ್ಸಿನ ರಾ.ನಾ. ಹುಬ್ಳಿ, ಸುರುಚಿ ಪ್ರಕಾಶನದ ಸಿಂಧುವಳ್ಳಿ ಅನಂತಮೂರ್ತಿ, ಗೀತಾ ಬುಕ್ ಹೌಸಿನ ಸತ್ಯನಾರಾಯಣರಾವ್, ಕನ್ನಡ ಕವಿ ಕಾವ್ಯ ಮಾಲೆ ಕನ್ನಡದ ಪೆಂಗ್ವಿನ್ ಎಂದೇ ಖ್ಯಾತರಾಗಿದ್ದ ಎಚ್.ಎಂ. ಶಂಕರನಾರಾಯಣರಾವ್, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ತ.ಸು. ಶಾಮರಾವ್ ಮತ್ತು ಅವರ ಮಗ ಇಂದು ಸಾವಿರ ಪುಟಗಳ ಸರದಾರ ಎಂದೇ ಖ್ಯಾತರಾಗಿರುವ ಛಾಯಾಪತಿ, ಭಾರತೀ ಪ್ರಕಾಶನದ ನರಸಿಂಗರಾವ್, ವೋಹನ ಪ್ರಕಾಶನದ ರಾ.ವೆಂ. ಶ್ರೀನಿವಾಸಮೂರ್ತಿ ಮತ್ತು ನೆಲೆಮನೆ ಪ್ರಕಾಶನದ ದೇವೇಗೌಡ ಮತ್ತು ಇಂದಿನ ಉತ್ಸಾಹಿ ಪ್ರಕಾಶಕ ಶ್ರೀನಿವಾಸ್ ಮುಂತಾದವರು. ಈ ಪ್ರಕಾಶನಗಳ ಯಶಸ್ಸಿನ ಹಿನ್ನೆಲೆಯಲ್ಲಿ ಹಾ.ಮಾ. ನಾಯಕರ ಪಾತ್ರವಿತ್ತು. ಅವರು ಈ ಪ್ರಕಾಶನಗಳನ್ನು ಬೆನ್ನು ತಟ್ಟಿ, ಪ್ರೋತ್ಸಾಹಿಸುವುದರೊಂದಿಗೆ, ಅವರ ಉದ್ಯಮಗಳಲ್ಲಿ ಸೂಕ್ತ ಸಲಹೆ ನೀಡಿ ಮಾರ್ಗದರ್ಶನ ಮಾಡುತ್ತಿದ್ದರು. ಇದರೊಂದಿಗೆ ಕನ್ನಡ ಅಧ್ಯಯನ ಸಂಸ್ಥೆ ಮತ್ತು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಂಗ ಪ್ರಕಟಿಸುತ್ತಿದ್ದ ಅನೇಕ ಉತ್ತಮ ಗ್ರಂಥಗಳ ಪ್ರಕಟಣೆಗೆ ಹಾ.ಮಾ. ನಾಯಕ ಮತ್ತು ದೇ. ಜವರೇಗೌಡ ಅವರು ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ಸಲ್ಲಿಸಿದ್ದರು.

ಕರ್ನಾಟಕದಲ್ಲಿ ಮೈಸೂರನ್ನು ಬಿಟ್ಟರೆ ಪ್ರಕಾಶನ ದೃಷ್ಟಿಯಿಂದ ಪರಿಗಣಿಸಬೇಕಾದ ಮತ್ತೊಂದು ಪ್ರದೇಶ ಎಂದರೆ ಧಾರವಾಡ. ಇಲ್ಲಿಯ ಮನೋಹರ ಗ್ರಂಥಮಾಲ ಮತ್ತು ಸಮಾಜ ಪುಸ್ತಕಾಲಯ ಕನ್ನಡ ಪ್ರಕಾಶನ ಕ್ಷೇತ್ರಕ್ಕೆ ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ಸಲ್ಲಿಸಿದ್ದಾರೆ. ಹುಬ್ಬಳ್ಳಿ ಮತ್ತು ಬೆಂಗಳೂರಿನಲ್ಲಿರುವ ಸಾಹಿತ್ಯ ಭಂಡಾರದವರೂ ಸಹ ಕನ್ನಡ ಪ್ರಕಟಣ ಕ್ಷೇತ್ರದಲ್ಲಿ ಬಹಳ ಒಳ್ಳೆಯ ಕೆಲಸ ಮಾಡಿದ್ದಾರೆ. ಬಳ್ಳಾರಿಯ 'ಲೋಹಿಯ ಪ್ರಕಾಶನ ಸಹ ಕನ್ನಡದಲ್ಲಿ ಅತ್ಯಂತ ಉತ್ತಮ ಪುಸ್ತಕಗಳನ್ನು ಪ್ರಕಟಿಸಿದೆ. ಇತ್ತೀಚೆಗೆ ಬೆಂಗಳೂರಿಗೆ ಸಪ್ನ ಬುಕ್ ಹೌಸ್ ತನ್ನ ಪ್ರಕಾಶನ ಕ್ಷೇತ್ರವನ್ನು ವೈವಿಧ್ಯಕಾರವಾಗಿ ಬೆಳೆಸಿದೆ. ಈ ಪ್ರಕಾಶನದ ಕನ್ನಡ ವಿಭಾಗದ ಮುಖ್ಯಸ್ಥ ದೊಡ್ಡೇಗೌಡರ ವೈತ್ಯಪ್ರತಿಭೆ ವಿದ್ವಾಂಸರ ಹುಬ್ಬೇರಿಸಿದೆ. ಅಂಕಿತ ಪ್ರಕಾಶದ ಪ್ರಕಾಶ್ ಕಂಬತ್ತಳ್ಳಿಯವರು ಈ ದಶಕದಲ್ಲಿ ಅದ್ಭುತವಾದ ಕನ್ನಡ ಪುಸ್ತಕಗಳನ್ನು ಅತ್ಯಂತ ಸುಂದರವಾಗಿ ಪ್ರಕಟಿಸುತ್ತಿದ್ದಾರೆ. ಅವರ ಪ್ರಕಟಣೆಯ ಶುಚಿ ರುಚಿ ಅನುಕರಣೀಯ.

ಪುಸ್ತಕೋದ್ಯಮದಲ್ಲಿ ಪ್ರಕಾಶಕರ ಪಾತ್ರ ಅತ್ಯಂತ ಪ್ರಧಾನವಾದುದು ಆದರೆ ಬಹಳ ಕಾಲ ಯಾವುದೇ ಅಕಾಡೆಮಿಯಿಂದ ಪುರಸ್ಕೃತರಾಗಿರಲಿಲ್ಲ ಆದ್ದರಿಂದ ಪುಸ್ತಕ ಸಂಸ್ಕೃತಿಯಲ್ಲಿ ಅಪಾರವಾದ ಆಸಕ್ತಿಯಿದ್ದ ಹಾಗೂ ನಾಯಕರು ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದ ಅವಧಿಯಲ್ಲಿ Best Publisher, Best Printer, Best Artist ಎಂದು ಪರಿಗಣಿಸಿ ಪ್ರಶಸ್ತಿ ನೀಡಬೇಕೆಂದು ಆಶಿಸಿದ್ದರು. ಆದರೆ ಅವರ ಅವಧಿಯಲ್ಲಿ ಸಾಧ್ಯವಾಗಲಿಲ್ಲ. ಮುಂದೆ ಬಂದ ಅಧ್ಯಕ್ಷರು ಸಾಹಿತ್ಯ ಅಕಾಡೆಮಿ ನಿಲುವಳಿಗಳಲ್ಲಿ ಇದಕ್ಕೆ ಅವಕಾಶಗಳಲ್ಲಿ ಎಂದು ತಳ್ಳಿ ಹಾಕಿದರು.

ಕಾಲ ಸರಿದಂತೆ ವೀರಪ್ಪ ಮೊಯ್ಲಿಯವರು ಮುಖ್ಯಮಂತ್ರಿಗಳಾಗಿದ್ದ ಅವಧಿಯಲ್ಲಿ ಕನ್ನಡ ಪುರೋಭಿವೃದ್ಧಿಗಾಗಿ 'ಕನ್ನಡ ಪುಸ್ತಕ ಪ್ರಾಧಿಕಾರ' ರಚಿಸಿದರು, ಇದರ ಮೊದಲ ಅಧ್ಯಕ್ಷರು ಎಲ್.ಎಸ್. ಶೇಷಗಿರಿರಾಯರು. ನಂತರ ಮುಂದೆ ಅಧ್ಯಕ್ಷರಾಗಿ ಬಂದ ಲಕ್ಕಪ್ಪಗೌಡರು, ಪ್ರಾಧಿಕಾರದ ನೀತಿ ನಿಯಮಾವಳಿಗಳಲ್ಲಿ ಅವಕಾಶವಿಲ್ಲದಿದ್ದರೂ ಪ್ರಕಾಶಕರನ್ನು ಗೌರವಿಸಿ ಪ್ರಶಸ್ತಿ ನೀಡುವುದಕ್ಕೆ ಅಡಿಪಾಯ ಹಾಕಿದರು. ಆ ವರ್ಷದಿಂದಲೇ 'ಅತ್ಯುತ್ತಮ ಪ್ರಕಾಶನ ಪ್ರಶಸ್ತಿ'ಚಾಲ್ತಿಗೆ ಬಂತು. ಈವರೆಗೆ ಸುಮಾರು ಹತ್ತು ಜನ ಪ್ರಕಾಶಕರು ಈ ಪ್ರಶಸ್ತಿಗೆ ಭಾಜನರಾಗಿದ್ದಾರೆ. ಮುಂದೆ ಮೈಸೂರಿನ ಉಪಾಪ್ರೆಸ್ಸಿನ ಮನೆತನದವರು 'ರಾ.ನಾ. ಹಬ್ಬು' ಅವರ ಹೆಸರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಒಂದು ಪ್ರಸಸ್ತಿಯನ್ನಿರಿಸಿದ್ದಾರೆ. ಇದೀಗ ಕಳೆದ ವರ್ಷದಿಂದ ಅಂಕಿತಾ ಪ್ರಕಾಶನದವರೂ ಸಹ ಕನ್ನಡ ಸಾಹಿತ್ಯ ಪರಿಷತ್ತಿನವರ ಸಹಯೋಗದೊಂದಿಗೆ ಪ್ರಕಾಶಕರಿಗಾಗಿ ಒಂದು ಪ್ರಶಸ್ತಿಯನ್ನಿರಿಸಿದ್ದಾರೆ.

ಇಂದು ಕರ್ನಾಟಕದಲ್ಲಿ ಒಂದು ಅಂದಾಜಿನ ಪ್ರಕಾರ ಸುಮಾರು ಒಂದು ಸಾವಿರದ ಇನ್ನೂರು ಜನ ಪ್ರಕಾಶಕರಿರಬಹುದು. ಆದರೆ ಇವರಲ್ಲಿ ಮುನ್ನೂರು ಜನ ವೃತ್ತಿ ಪ್ರಕಾಶರಿರಬಹುದು. ಉಳಿದಿರುವ ಪ್ರಕಾಶಕರು ಕೇವಲ ಯೋಜನೆಗಾಗಿ ನಾಯಿಕೊಡೆಗಳಂತೆ ಹುಟ್ಟಿಕೊಂಡಿರುವ ಹವ್ಯಾಸಿ ಪ್ರಕಾಶಕರು. ಎಲ್ಲಿಯವರಿಗೆ ಯೋಜನೆಗಳಿರುತ್ತವೊ, ಅಲ್ಲಿಯವರೆಗೆ ಮಾತ್ರ ಇವರ ಚಟುವಟಿಕೆಗಳು, ಯೋಜನೆಗಳು ಬಿದ್ದುಹೋದರೆ ಇವರೂ ಸಹ ಕಣ್ಮರೆಯಾಗುತ್ತಾರೆ ಇವರ ಉದ್ದೇಶ ಕೇವಲ ಹಣ ಮಾಡುವುದಷ್ಟೆ. ಆದರೆ ವೃತ್ತಿ ಪ್ರಕಾಶಕರು ತಾವು ತುಳಿದ ದಾರಿ ಅಳಿಸದಂತೆ ನಡೆದಿದ್ದಾರೆ, ನಡೆಯುತ್ತಿದ್ದಾರೆ. ತಾವು ಪ್ರಕಟಿಸಿದ ಉತ್ತಮ ಕೃತಿಗಳಿಂದ ಕೃತಕೃತ್ಯರಾಗಿದ್ದರೆ, ವೃತ್ತಿ ಪ್ರಕಾಶನದ ತೃಪ್ತಿ ಅವರಿಗಿದೆ.

ಒಟ್ಟಿನಲ್ಲಿ ಒಂದು ಸಂತೋಷ ಮತ್ತು ಅಭಿಮಾನದ ಸಂಗತಿ ಎಂದರೆ. ಇಂದು ಕನ್ನಡದಲ್ಲಿ ಪ್ರಕಟವಾಗುತ್ತಿರುವ ಅನೇಕ ಪುಸ್ತಕಗಳು ಹಾಗೂ ಅವುಗಳ ಮುಖಪುಟಗಳು ವಿಶ್ವದ ಯಾವುದೇ ಪ್ರಕಟಣೆಗಳಿಗೆ ಸರಿಸಮವಾಗಿ ನಿಲ್ಲುವಂತ ಸಾಮರ್ಥ್ಯವನ್ನು

ಹೊಂದಿವೆ. ಕೆಲವು ಪ್ರಕಾಶಕರಂತೂ ಗುಣಮಟ್ಟದ ದೃಷ್ಟಿಯಿಂದ ಪುಸ್ತಕದ ಉತ್ಪಾದನೆಯಲ್ಲಿ ರಾಜಿ ಮಾಡಿಕೊಳ್ಳಲು ಸಿದ್ಧರಿಲ್ಲ.

## ಮಾರಾಟ ವ್ಯವಸ್ಥೆ

ಒಂದು ಅಂದಾಜಿನ ಪ್ರಕಾರ ಇಂದು ಕರ್ನಾಟಕದಲ್ಲಿ ವರ್ಷಕ್ಕೆ ನಾಲ್ಕು ಸಾವಿರ ಪುಸ್ತಕಗಳು ಪ್ರಕಟವಾಗುತ್ತಿವೆ. ಆದರೆ ಇವುಗಳ ಮಾರಾಟದ ಗತಿ ಏನು ಎಂಬ ಪ್ರಶ್ನೆ ಪ್ರಕಾಶಕರ ಮುಂದೆ ವಿಕಟಾಟ್ಟಹಾಸ ಮಾಡುತ್ತ ನಿಂತಿದೆ. ಕಾರಣ ಕರ್ನಾಟಕದಲ್ಲಿ ನೂರಾರು ಜನ ಪುಸ್ತಕ ಮಾರಾಟಗಾರರಿದ್ದರೂ ಸಹ ಸಾಧಾರಣ ಪುಸ್ತಕಗಳು ಕೊಳ್ಳುವವರ ಸಂಖ್ಯೆ ಕೇವಲ ಮೂವತ್ತರಿಂದ ನಲವತ್ತು ಪ್ರತಿಗಳು ಮಾತ್ರ ಎಂದರೆ ಆಶ್ಚರ್ಯವಾಗಬಹುದು ಒಂದು ಪುಸ್ತಕ ಪ್ರಕಟಿಸಿದಾಗ ಅದರ ಅಸಲು ಬರಬೇಕಾದರೆ ಕನಿಷ್ಠ ಮುನ್ನೂರು ಪ್ರತಿಗಳು ಮಾರಾಟವಾಗಬೇಕು. ಲೇಖಕರಿಗೆ ಕೊಡುವ ಗೌರವಧನ ಸೇರಿದಂತೆ ನಾಲ್ಕು ನೂರು ಪ್ರತಿಗಳು ಮಾರಾಟವಾದರೆ ಮಾತ್ರ ಪ್ರಕಾಶಕ ನಿರಾಳವಾಗಿ ಉಸಿರಾಡಲು ಸಾಧ್ಯ. ಇದಾದ ನಂತರವೇ ಪ್ರಕಾಶಕ ಲಾಭದ ಕಡೆ ನೋಡಬೇಕು.

ಹಾಗಾದರೆ ಪ್ರಕಾಶಕರ ಗತಿ ಏನು? ಈ ಹೊತ್ತು ಅವರೇನು ಮಾಡಬೇಕು? ಇದಕ್ಕೆ ಮುಖ್ಯ ಪರಿಹಾರ ಪ್ರಕಾಶಕ ಆದಷ್ಟು ಪುಸ್ತಕಗಳನ್ನು ತನ್ನ ಸ್ವಶಕ್ತಿಯಿಂದ ಮಾರಾಟ ಮಾಡಬೇಕು. ಅಂದರೆ ಪ್ರಕಾಶನಿಗೆ Promotional Ability ಇರಬೇಕು. ಇದು ಎಷ್ಟು ಜನ ಪ್ರಕಾಶಕರಿಗೆ ಸಾಧ್ಯ. ಹೀಗಾಗಿ ಆಯಾಯ ಪ್ರಕಾಶಕರು, ತಮಗೆ ತೋಚಿದಂತೆ ಮಾರಾಟದ ಜಾಲವನ್ನು ನಿರ್ಮಿಸಿಕೊಂಡಿದ್ದಾರೆ.

ಪುಸ್ತಕ ಸಂಸ್ಕೃತಿಯಲ್ಲಿ ಅಪಾರವಾದ ಆಸಕ್ತಿಯಿದ್ದ ದಿ.ಹಾ.ಮಾ. ನಾಯಕರಿಗೆ ಕನ್ನಡ ಪುಸ್ತಕ ಪ್ರಕಾಶನದ ಸ್ಥಿತಿ ಗತಿಗಳ ಅರಿವಿತ್ತು. ಹಾಗಾಗಿ ಅವರು ಸರ್ಕಾರದ ಮುಂದೆ ಕನ್ನಡ ಪುಸ್ತಕ ಪ್ರಕಾಶಕರ ಕನಿಷ್ಠ ಮೂನ್ನೂರು ಪುಸ್ತಕಗಳನ್ನು ಖರೀದಿಸುವ ಯೋಜನೆಯನ್ನು ಮಾತ್ರ ಮುಂದಿಟ್ಟಿದ್ದರು. 'ಶುಕ್ರವಾರದ ಹಾಡು', 'ಶನಿಮಹಾತ್ಮೆ' ಮುಂತಾದ ಪುಸ್ತಕಗಳನ್ನು ಹೊರತುಪಡಿಸಿ ಕನ್ನಡದಲ್ಲಿ ಪ್ರಕಟವಾಗುವ ಶುದ್ಧ ಸಾಹಿತ್ಯಗಳನ್ನು ಖರೀದಿಸಿದರೆ ಮಾತ್ರ ಪ್ರಕಾಶಕ ಸ್ವಲ್ಪ ಸಲೀಸಾಗಿ ಉಸಿರಾಡಬಹುದು ಎಂಬ ನಂಬಿಕೆ ಅವರಿಗಿತ್ತು. ದೇ. ಜವರೇಗೌಡರು ಸಹ ಇದೇ ನಿಟ್ಟಿನಲ್ಲಿ ಆಲೋಚಿಸಿದರು. ಇಷ್ಟೆ ಅಲ್ಲ ಸಮಗ್ರ ಕನ್ನಡ ಪುಸ್ತಕ ಪ್ರಕಾಶಕರ ದೃಷ್ಟಿಯಿಂದ ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿ 'ಏಕ ಗವಾಕ್ಷಿ ಯೋಜನೆ'ಯನ್ನ ಜಾರಿಗೆ ಬರುವಂತೆ ಹರ ಸಾಹಸ ಮಾಡಿದರು. ಈ ಯೋಜನೆಯಲ್ಲಿ ಒಮ್ಮೆಗೆ ಸಾರ್ವಜನಿಕ ಗ್ರಂಥಾಲಯ ಇಲಾಖೆ, ಆಯ್ಕೆ ಸಮಿತಿಯ ಮೂಲಕ ಮುನ್ನೂರು ಪುಸ್ತಕಗಳನ್ನು ಖರೀದಿಸುತ್ತಿವೆ.

ನಾಡಿನ ಉದ್ದಗಲಗಳಲ್ಲಿ ಇಂದು ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ಪ್ರಕಟಣ ಶಾಖೆಗಳಿವೆ. ಇವರಲ್ಲಿ ಮೈಸೂರು ವಿ.ವಿ. ಯ ಪ್ರಕಟಣ ಶಾಖೆ ಬಹು ಪುರಾತನವಾದುದು, ಹಾಗೂ ಗುಣಮಟ್ಟದಿಂದ ಕೂಡಿದ್ದು, ಇದರ ಮೊದಲ ನಿರ್ದೇಶಕರು ಜಿ. ಹನುಮಂತರಾಯರು. ನಂತರ ಶಾಮರಾಯರು ನಿರ್ದೇಶಕರಾಗಿ ಕನ್ನಡ ಪಠ್ಯ ಪುಸ್ತಕಯೋಜನೆಗಳನ್ನು ಗಮನಾರ್ಹವಾಗಿ ಪ್ರಕಟಿಸಿ ಪ್ರಸಾರಾಂಗವನ್ನು ಮುನ್ನಡಿಸಿದರು. ದೇ. ಜವರೇಗೌಡರು ಕುಲಪತಿಗಳಾಗಿದ್ದ ಕಾಲದಲ್ಲಿ ಪ್ರಸಾರಂಗ ಸರ್ವತೋಮುಖವಾಗಿ ಬೆಳೆಯಿತು. ಆದರೆ ಕಾಲ ಸರಿದಂತೆ ಚಿನ್ನದ ಮೊಟ್ಟೆ ಇಡುತ್ತಿದ್ದ ಪ್ರಸಾರಾಂಗ ಇಂದು ತನ್ನ ಅಂತಃಶಕ್ತಿಯನ್ನು ಕಳೆದುಕೊಳ್ಳುತ್ತಿರುವುದು ವಿಪರ್ಯಾಸ. ಆದರೆ ಕನ್ನಡ ವಿಶ್ವವಿದ್ಯಾನಿಲಯದ ಪ್ರಸಾರಾಂಗ ಪ್ರಕಟಣೆಗಳ ಮಾರಾಟದಿಂದ ಒಂದು ವಿಕ್ರಮವನ್ನೇ ಸಾಧಿಸಿದೆ ಎಂದರೆ ತಪ್ಪಾಗಲಾರದು. ಚಂದ್ರಶೇಖರ ಕಂಬಾರರು ಕುಲಪತಿಗಳಾಗಿದ್ದ ಕಾಲದಲ್ಲಿ ಒಂದು ವರ್ಷದಲ್ಲಿ ಅದು ಐದು ಕೋಟಿ ರೂಪಾಯಿಗಳ ಲಾಭ ಸಂಪಾದಿಸಿತು. ಬಹುಶಃ ಕುಲಪತಿಗಳಿಗೆ ಮುಂದಿನ ಪ್ರಕಟಣೆಗಳಿಗೆ ಸರ್ಕಾರದಿಂದ ಹಣ ಸಹಾಯ ಬೇಡ ಎನ್ನಿಸಿದರೆ ಆಶ್ಚರ್ಯಪಡಬೇಕಾದುದಿಲ್ಲ.

ಕನ್ನಡ ಪುಸ್ತಕಗಳ ಖರೀದಿಯ ದೃಷ್ಟಿಯಿಂದ ಕನ್ನಡ ಪುಸ್ತಕ ಪ್ರಾಧಿಕಾರ ತನ್ನದೇ ಆದ ನೀತಿ ನಿಯಮಗಳನ್ನು ಪಾಲಿಸಿಕೊಂಡು ಬಂದಿವೆ. ಪ್ರಕಾಶಕರಿಗೆ ಸ್ವಲ್ಪ ಮಟ್ಟಿಗೆ ಸಮಾಧಾನ ತಂದಿದೆ, 'ಮರಳುಗಾಡಿನಲ್ಲಿ ಓಯಸಿಸ್ ಸಿಗುವಂತೆ'.

ಸರ್ಕಾರ ಮೇಲಿಂದ ಮೇಲೆ ಪ್ರಕಾಶಕರಿಗೆ ತನ್ನ ಸಹಾಯ ಹಸ್ತ ಚಾಚುತ್ತಲೇ ಬಂದಿದೆ. ಆದರೆ ಪ್ರಕಾಶಕರೂ ಸಹ ಪುಸ್ತಕ ಮಾರಾಟಕ್ಕಾಗಿ ತಮ್ಮದೇ ಆದ ಯೋಜನೆಗಳನ್ನು ರೂಪಿಸಿಕೊಳ್ಳಬೇಕು, ನಾಡಿನ ಉದ್ದಗಲಗಳಲ್ಲಿ ಜಿಲ್ಲಾ ಹಾಗೂ ತಾಲ್ಲೂಕು ಸಾಹಿತ್ಯ ಸಮ್ಮೇಳನಗಳಾಗುತ್ತಿರುತ್ತವೆ. ಜಾತ್ರೆಗಳಾಗುತ್ತಿರುತ್ತವೆ. ಕನ್ನಡ ಪುಸ್ತಕ ಪ್ರಾಧಿಕಾರ ಸಹ ಪುಸ್ತಕ ಪ್ರದರ್ಶನ ಹಾಗೂ ಮಾರಾಟದ ವ್ಯವಸ್ಥೆಗಳನ್ನು ಮಾಡುತ್ತಿರುತ್ತವೆ. ಪ್ರಕಾಶಕರು ಇವುಗಳಲ್ಲಿ ಭಾಗವಹಿಸಿ ಇವುಗಳ ಪ್ರಯೋಜನ ಪಡೆಯಬಹುದು.

ಹೊಸ ಹೊಸ ಪುಸ್ತಕಗಳು ಪ್ರಕಟವಾದಾಗ ಅವುಗಳ ಲೋಕರ್ಪಣೆ ಬಹಳ ಮುಖ್ಯ. ಪತ್ರಿಕೆಗಳಿಗೆ, ವಿಮರ್ಶೆಗೆ ಪುಸ್ತಕಗಳನ್ನು ಕಳಿಸುವ ಪರಿಪಾಠ ಬೆಳೆಸಿಕೊಳ್ಳಬೇಕು. ಇದರಿಂದ ಜಗತ್ತಿಗೆ ಸುದ್ದಿ ಮುಟ್ಟುತ್ತದೆ. ಇಂದು ಕರ್ನಾಟಕದಲ್ಲಿ ಮುನ್ನೂರು ಸರ್ಕಾರಿ ಪದವಿ ಕಾಲೇಜುಗಳಿವೆ. ಅಷ್ಟೆ ಸಂಖ್ಯೆಯ ಖಾಸಗಿ ಕಾಲೇಜುಗಳಿವೆ. ಸುದ್ದಿ ಮಾಧ್ಯಮಗಳಿಂದ ಇವರಿಗೆ ವಿಷಯ ತಿಳಿದಾಗ ಪ್ರಕಾಶಕರಿಗೆ ಪರೋಕ್ಷವಾಗಿ ಅನುಕೂಲವಾಗುತ್ತದೆ.

*ರಾಜ್ಯದ ಕೇಂದ್ರ ಗ್ರಂಥಾಲಯ ಏಕ ಗವಾಕ್ಷಿ ಯೋಜನೆಯಲ್ಲಿ ತಾನು ಖರೀದಿಸಿದ ಗ್ರಂಥಗಳ ಪಟ್ಟಿಯನ್ನು ತನ್ನ ಶಾಖೆಗಳಿಗೆ ಕಳುಹಿಸುತ್ತದೆ. ಇದರಿಂದ ಪ್ರಕಾಶಕರು ಹೆಚ್ಚು ಹೆಚ್ಚು ಪುಸ್ತಕಗಳನ್ನು ವಿತರಿಸುವ ಅವಕಾಶಗಳು ಲಭ್ಯವಾಗುತ್ತವೆ.*

*ಇವೆಲ್ಲ ಸವಲತ್ತುಗಳನ್ನು ಒಬ್ಬ ಬುದ್ಧಿವಂತ ಪ್ರಕಾಶಕ ಸದುಪಯೋಗ ಪಡಿಸಿಕೊಳ್ಳಬಹುದು.*

* * *

ನಮ್ಮ ತಂದೆಯವರು ನನ್ನೊಡನೆ ಸದಾ ಹೇಳುತ್ತಿದ್ದ ಒಂದು ಮಾತು ಹಲವು ಸಂಭ್ರಮದ ಸಮಯದಲ್ಲಿ ನೆನಪಿಗೆ ಬರುತ್ತಿರುತ್ತದೆ. ಅವರು ನನ್ನನ್ನು ಕುರಿತು ಮಗು, ನನ್ನ ನಂತರ ನೀನು ದೊಡ್ಡವನಾಗಬೇಕು ಎನ್ನುತ್ತಿದ್ದರು. ಅವರ ಆಶಯ ಇಂದು ಕೆಲವು ಮಟ್ಟಿಗೆ ಸಫಲವಾಗಿದೆ. ಇತ್ತೀಚೆಗೆ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಕನ್ನಡ ಸಂಘದವರು ಬಹಳ ಅದ್ದೂರಿಯಾಗಿ ಅದರ 37ನೆಯ ವಾರ್ಷಿಕೋತ್ಸವವನ್ನು ಜರುಗಿಸಿದರು. ಆ ಸಮಾರಂಭಕ್ಕೆ ನನ್ನನ್ನು ಆಹ್ವಾನಿಸಿ ಮೈಸೂರು ಪೇಟ ಇರಿಸಿ, ಶಾಲು ಹೊದಿಸಿ, ಫಲತಾಂಬೂಲ ನೀಡಿ ಭರ್ಜರಿಯಾಗಿ ಸನ್ಮಾನಿಸಿದರು. ಆ ಹೊತ್ತು ನನಗೆ ನನ್ನ ತಂದೆಯ ನೆನಪು ಬಂತು. ನಾನು ಅವರ ಸನ್ಮಾನಕ್ಕೆ ಉತ್ತರಿಸಿ ಮಾತನಾಡುವಾಗ ಗದ್ಗದಿತನಾದೆ. ಏಕೆಂದರೆ ನಾನು ಇಂದು ಏನಾಗಿದ್ದೇನೆ, ಹೇಗೆ ಈ ಮಟ್ಟಕ್ಕೆ ಬಂದಿದ್ದೇನೆ, ಇವುಗಳಿಗೆಲ್ಲ ನನ್ನ ತಂದೆಯವರೇ ಕಾರಣ. ಅವರು ಅಂದು ನನಗೆ ಈ ಪ್ರಕಾಶನದ ಜವಾಬ್ದಾರಿ ಹೊರಸದಿದ್ದಿದ್ದರೆ ಯಾವುದೋ ಒಂದು ಉದ್ಯಮ ಮಾಡಿಕೊಂಡಿರುತ್ತಿದ್ದೆ. ಆಗ ನನಗೆ ಇಂಥ ಗೌರವ ಹೇಗ ಲಭಿಸುತ್ತಿತ್ತು? ಅದ್ದರಿಂದಲೇ ಈ ಗೌರವ ಅವರಿಗೇ ಸಲ್ಲಬೇಕು. ಅಣ್ಣಾ, ನೀನು ಹೇಳಿದ ಮಾತು ನಿಜವಾಗಿದೆ. ಇಂದು ಜನ ನನ್ನನ್ನು ಗೌರವಿಸುತ್ತಾರೆ. ಇದು ನಿನಗೆ ಸೇರಬೇಕು ಎಂದು ಮನದಲ್ಲೇ ಅಣ್ಣನಿಗೆ ವಂದಿಸಿದೆ.

ಈಗ ಸುಮಾರು ಒಂದು ವರ್ಷದ ಹಿಂದೆ ನಾಗಲಕ್ಷ್ಮಿ ಹರಿಹರೇಶ್ವರ ನನಗೊಂದು ಪತ್ರ ಬರೆದರು. ಅವರು ಮೈಸೂರಿನ ಏಳು ಜನ ಪ್ರಕಾಶಕರನ್ನು ಸನ್ಮಾನಿಸುತ್ತಿರುವುದಾಗಿಯೂ, ಆ ಸಂದರ್ಭದಲ್ಲಿ ಅವರು ತರುತ್ತಿರುವ ನೆನಪಿನ ಸಂಚಿಕೆಯಲ್ಲಿ ನಾವೊಂದು ಲೇಖನ 'ನಮ್ಮ ಪ್ರಕಾಶನ ನಡೆದು ಬಂದು ದಾರಿಯ ಬಗ್ಗೆ' ಬರೆದುಕೊಡುವಂತೆ ತಿಳಿಸಿದ್ದರು. ಅದರಂತೆ ನಮ್ಮ ಮಾಲೆಯ ಬಗ್ಗೆ ಈ ಕೆಳಕಂಡ ಲೇಖನ ಬರೆದೆ.

## ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ
## ನಡೆದು ಬಂದ ದಾರಿ

ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಪ್ರಾರಂಭವಾದದ್ದು 1940 ರ ದಶಕದಲ್ಲಿ. ಉದ್ದೇಶ ವೆಂಕಣ್ಣಯ್ಯನವರ ಹೆಸರು ಈ ಜಗತ್ತಿನಲ್ಲಿ ಶಾಶ್ವತವಾಗಿ ಉಳಿಯಬೇಕು ಎಂಬ ಸಂಕಲ್ಪದಿಂದ ತ.ಸು. ಶಾಮರಾಯರು ಇದನ್ನು ಸ್ಥಾಪಿಸಿದರು. ಲಾಭಾಂಶದ ಕಡೆಗೆ ಹೆಚ್ಚು ಒತ್ತು ಕೊಡದೆ ಯುವ ಲೇಖಕರನ್ನು ಉತ್ತೇಜಿಸುವ ಆದರ್ಶದಿಂದ ಹಾಗೂ ಜಾತ್ಯಾತೀತ ಮನೋಭಾವದಿಂದ ಪ್ರಾರಂಭಿಸಿದರು. ಗ್ರಂಥಮಾಲೆ ಪ್ರಾರಂಭವಾದಾಗ ಎಚ್.ಎಂ. ಶಂಕರನಾರಾಯಣರಾಯರು ಶಾಮರಾಯರೊಂದಿಗೆ ಕೈಜೋಡಿಸಿದ್ದರು. ಆದರೆ ಕಾಲ ಸರಿದಂತೆ ಶಂಕರನಾರಾಯಣರಾಯರು ಬೇರೆಯಾಗಿ ತಮ್ಮದೇ ಗ್ರಂಥಮಾಲೆಯನ್ನು ಪ್ರಾರಂಭಿಸಿದರು.

ಶಾಮರಾಯರು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯನ್ನು ಪ್ರಾರಂಭಿಸಲು ಒಂದು ನೈಜ ಘಟನೆ ಕಾರಣವಾಯಿತು. ಶಾಮರಾಯರು ವೆಂಕಣ್ಣಯ್ಯನವರ ಪ್ರಿಯ ಸೋದರರು. ಅವರಿಗೆ ವೆಂಕಣ್ಣಯ್ಯನವರಲ್ಲಿ ಅಪಾರವಾದ ಪ್ರೀತಿ, ಭಕ್ತಿ ಆದರ ಗೌರವಗಳಿದ್ದವು. ವೆಂಕಣ್ಣಯ್ಯನವರ ತಾತ್ವಿಕ ನಿಲುವಿಗೆ ಶಾಮರಾಯರು ತಲೆಬಾಗಿದ್ದರು. ಶಾಮರಾಯರು ತೊಂಬತ್ತನಾಲ್ಕು ವರ್ಷಗಳು ಬದುಕಿದ್ದರು. ಅವರ ಜೀವಿತದ ಕೊನೆಯ ಉಸಿರು ಇರುವವರೆಗೂ ಅವರು ವೆಂಕಣ್ಣಯ್ಯನವರ ನಾಮಮಂತ್ರವನ್ನು ಜಪಿಸುತ್ತಲೆ ಇದ್ದರು. ವೆಂಕಣ್ಣಯ್ಯನವರು ಅವರಿಗೆ ಸಾಕ್ಷಾತ್ ದೇವರೇ ಆಗಿದ್ದರು. ಶಾಮರಾಯರ ಮನೆಯಲ್ಲಿ ವೆಂಕಣ್ಣಯ್ಯನವರ ದೊಡ್ಡ ಭಾವಚಿತ್ರವಿತ್ತು. ಶಾಮರಾಯರು ಪ್ರತಿನಿತ್ಯ ಬೆಳಿಗ್ಗೆ ದೇವರ ಪೂಜೆ ಮಾಡಿದ ನಂತರ ದೇವರಿಗೆ ಮಂಗಳಾರತಿ ಎತ್ತಿ ಹಾಗೆ ಪಡಸಾಲೆಗೆ ಬಂದು ವೆಂಕಣ್ಣಯ್ಯನವರಿಗೆ ಮಂಗಳಾರತಿ ಬೆಳಗಿ ಭಕ್ತಿಯಿಂದ ಅದನ್ನು ಕಣ್ಣಿಗೊತ್ತಿಕೊಳ್ಳುವುದು ದಿನನಿತ್ಯದ ಆಚರಣೆಯಾಗಿತ್ತು. ವೆಂಕಣ್ಣಯ್ಯನವರು ಅವರಿಗೆ ಸಾಕ್ಷಾತ್ ದೇವರೇ ಆಗಿದ್ದರು.

ಅಣ್ಣನ ಬಗ್ಗೆ ಚಿಕ್ಕಂದಿನಿಂದಲೇ ಇಂಥ ಭಾವನೆ ಮೂಡಿಸಿಕೊಂಡಿದ್ದ ಶಾಮರಾಯರು, ಒಮ್ಮೆ ವೆಂಕಣ್ಣಯ್ಯನವರನ್ನು ಕುರಿತು 'ಅಣ್ಣಾ' ನೀನು ಬಹಳ ದೊಡ್ಡವನು ಎಂದರು. ಶಾಮರಾಯರ ಬಾಯಿಂದ ಬಂದ ಈ ಮಾತುಗಳನ್ನು ಕೇಳಿ ವೆಂಕಣ್ಣಯ್ಯನವರು ಒಂದು ಕ್ಷಣ ಮೌನವಾದರು. ನಂತರ ಶಾಮರಾಯರನ್ನು ಕುರಿತು 'ಶಾಮಣ್ಣ', ನಿನಗೆಲ್ಲೋ ಭ್ರಾಂತಿ. ಅಬ್ಬಬ್ಬಾ, ಎಂದರೆ ಇನ್ನು ಇಪ್ಪತ್ತು ವರ್ಷ ಜನ ನನ್ನನ್ನು ಸ್ಮರಿಸಬಹುದು. ನಾನೇನು ಬುದ್ಧನೇ ಬಸವನೇ ಈ ಜಗತ್ತಿನಲ್ಲಿ ಶಾಶ್ವತವಾಗಿ ನೆನೆಯಲು ಎಂದು ಹೇಳಿ ಸುಮ್ಮನಾದರು. ವೆಂಕಣ್ಣಯ್ಯನವರ ಈ ಮಾತುಗಳು

ಶಾಮರಾಯರ ಮನಸ್ಸನ್ನು ನಾಟಿವವು. ಅಂದೇ ಶಾಮರಾಯರು ವೆಂಕಣ್ಣಯ್ಯನವರ ಹೆಸರು ಈ ಜಗತ್ತಿನಲ್ಲಿ ಶಾಶ್ವತವಾಗಿ ಉಳಿಯುವಂತೆ ಏನಾದರು ಮಾಡಬೇಕೆಂದು, ನಿರ್ಧರಿಸಿದರು. 1937ರಲ್ಲಿ ವೆಂಕಣ್ಣಯ್ಯನವರು ತಮ್ಮ 53ನೆಯ ವಯಸ್ಸಿನಲ್ಲಿ ಈ ಇಹಲೋಕವಿಂದ ದೂರವಾದರು. ಕಾಲ ಸರಿದಂತೆ1940ರಲ್ಲಿ ಶಾಮರಾಯರು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯನ್ನು ಪ್ರಾರಂಭಿಸಿದರು.

ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯಲ್ಲಿ ಮೊದಲು ಪ್ರಕಟವಾದ ಪುಸ್ತಕಗಳಲ್ಲಿ ವೆಂಕಣ್ಣಯ್ಯನವರ ಪ್ರಾಚೀನ ಸಾಹಿತ್ಯ, ಬಸವರಾಜದೇವರರಗಳೆ, ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು ಬಹಳ ಪ್ರಮುಖವಾದವುಗಳು ನಂತರ ಸ್ವತಃ ಶಾಮರಾಯರೇ ಸಂಪಾದಿಸಿದ ಮಹಾಭಾರತದ ಪರ್ವಗಳಾದ ಆದಿಪರ್ವ, ಸಭಾಪರ್ವ, ವಿರಾಟಪರ್ವ, ಕರ್ಣಪರ್ವ, ಉದ್ಯೋಗ ಪರ್ವ, ದ್ರೋಣಪರ್ವ ಮೊದಲಾದವುಗಳು ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕಗಳಾಗಿದ್ದವು.

ಇವುಗಳಲ್ಲಿ ಉದ್ಯೋಗಪರ್ವಸಂಗ್ರಹ ಮತ್ತು ಸಭಾಪರ್ವಸಂಗ್ರಹ ಭರತೇಶವೈಭವ ಸಂಗ್ರಹ ಮೊದಲಾದವುಗಳು ಇಂದಿಗೂ ಪಠ್ಯ ಪುಸ್ತಕಗಳಾಗುತ್ತಿವೆ. ಶಾಮರಾಯರು ಸುಮಾರು ಅರವತ್ತಕ್ಕೂ ಹೆಚ್ಚು ಪುಸ್ತಕಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಬಹುಪಾಲು ಪುಸ್ತಕಗಳು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯಲ್ಲಿ ಪ್ರಕಟವಾಗಿವೆ.

ಶಾಮರಾಯರು ತಮ್ಮ ಗ್ರಂಥಮಾಲೆಯಲ್ಲಿ ಅನೇಕ ಜನ ವಿದ್ಯಾರ್ಥಿಗಳ ಮತ್ತು ಯುವ ಬರಹಗಾರರ ಪುಸ್ತಕಗಳನ್ನು ಪ್ರಕಟಿಸಿದರು. ಅವರಲ್ಲಿ ಪ್ರಮುಖವಾಗಿ ನಮಗಿಂದು ಕಾಣಸುತ್ತಿರುವವರು ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ ಮತ್ತು ಪ್ರಭಾಶಂಕರ. ಜಿ.ಎಸ್. ಶಿವರುದ್ರಪ್ಪನವರ ಆರಂಭದ ಎರಡು ಕವಿತಾ ಸಂಕಲನಗಳು ಇಂದು ಜನಪ್ರಿಯವಾಗಿವೆ. 'ಚಲುವು ಒಲವು' ಮತ್ತು 'ಸಾಮಗಾನ'. ಅವರೆ ಇವನ್ನು ಬರೆದ ಕಾಲದಲ್ಲಿ ಶಿವರುದ್ರಪ್ಪನವರು ಪ್ರಕಟಣೆಗಾಗಿ ಆತಂಕ ವ್ಯಕ್ತಪಡಿಸಿದಾಗ ಶಾಮರಾಯರು ಅವುಗಳನ್ನು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯಲ್ಲಿ ಪ್ರಕಟಿಸಿದರು. ಕಾಲಸರಿದಂತೆ ಒಂದು ಹಂತದಲ್ಲಿ ಶಾಮರಾಯರ ಮಗ ಛಾಯಾಪತಿ ಜಿ.ಎಸ್. ಶಿವರುದ್ರಪ್ಪನವರ ಎಲ್ಲಾ ಕೃತಿಗಳನ್ನು ಸುಂದರವಾಗಿ ಪ್ರಕಟಿಸಿದಾಗ ಶಿವರುದ್ರಪ್ಪನವರು ಸಂತೋಷಿಸಿದ್ದರು. ಶಿವರುದ್ರಪ್ಪನವರ ಅಭಿನಂದನ ಗ್ರಂಥ 'ಸ್ನೇಹ ಕಾರ್ತಿಕ' ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯಲ್ಲೇ ಪ್ರಕಟವಾಯಿತು. ಶಾಮರಾಯರು ಪುಸ್ತಕ ಪ್ರಕಟಣೆಯೊಂದಿಗೆ ತಮ್ಮನ್ನು ಅರಸಿ ಬಂದ ಲೇಖಕರಿಗೆ ಊಟ ಹಾಕಿ ಪುಸ್ತಕ ಪ್ರಕಟಿಸುತ್ತಿದ್ದರು. ಅವರು ದಾಸೋಹಕ್ಕೆ ಹೆಸರುವಾಸಿಯಾಗಿದ್ದರು. ಒಮ್ಮೆ ಜಿ. ವೆಂಕಟಯ್ಯ ಎಂಬುವರು ಸುಮಾರು ಮಧ್ಯಾಹ್ನ ಒಂದು ಘಂಟೆಗೆ ಶಾಮರಾಯರ ಮನೆಗೆ ಬಂದರು. ಶಾಮರಾಯರು ಅವರನ್ನು ಬರಮಾಡಿಕೊಂಡು

ಕುಶಲೋಪಚಾರ ಮಾಡಿದರು. ವೆಂಕಟಯ್ಯ ತಾವು ಬರೆದಿದ್ದ ಕಾದಂಬರಿಯ ಹಸ್ತ ಪ್ರತಿಯನ್ನು ಚೀಲದಿಂದ ಆಚೆಗೆ ತೆಗೆದು ಶಾಮರಾಯರಿಗೆ ಪ್ರಕಟಿಸಲು ತೋರಿಸಿದರು. ಶಾಮರಾಯರು ವೆಂಕಣ್ಣಯ್ಯನವರನ್ನು ಕುರಿತು ಈಗ ಊಟದ ಸಮಯ, ಮೊದಲು ಊಟ ಮಾಡೋಣ ಎಂದರು. ಊಟವಾದ ಮೇಲೆ ಹಸ್ತಪ್ರತಿಯನ್ನು ವೀಕ್ಷಿಸಿ ಬಹಳ ಬೇಗ ಪ್ರಕಟಿಸಿದರು. ಈ ರೀತಿ ವೆಂಕಟ್ಟಯ್ಯನವರ ಚೊಚ್ಚಲ ಕಾದಂಬರಿ 'ಮುರಿದ ಮದುವೆ' ತಳುಕಿನ ವೆಂಕಣ್ಣಯ್ಯ ಸ್ಮಾರಕಗ್ರಂಥಮಾಲೆಯಲ್ಲಿ ಪ್ರಕಟವಾಯಿತು. ಇದರಿಂದ ಉತ್ತೇಜನಗೊಂಡ ವೆಂಕಟ್ಟಯ್ಯನವರು ಕಾಲ ಸರಿದಂತೆ ಕೃತಿ ರಚನೆ ಮಾಡುತ್ತಾ ಪ್ರಸಿದ್ಧರಾದರು. ಒಂದು ಅವಧಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರಾದರು. ಶಾಮರಾಯರು ಪುಸ್ತಕಗಳ ಮಾರಾಟಕ್ಕಾಗಿ ಯಾರನ್ನು ಜಾಸ್ತಿ ಆಶ್ರಯಿಸುತ್ತಿರಲಿಲ್ಲ. ಅವರಿಗೆ ಪ್ರಕಾಶನ ಒಂದು ಹವ್ಯಾಸವಾಗಿತ್ತು. ಆದರೆ ಪ್ರಕಾಶನಕ್ಕೆ ಹಣ ಬೇಕಲ್ಲವೇ? ಅವರ ವಿದ್ಯಾರ್ಥಿಗಳಲ್ಲಿ ಕೆಲವರು ಶಾಮರಾಯರ ಮನೆಗೆ ಒಂದು ಪುಸ್ತಕ ಖರೀದಿಸಿ, ತಾವೇ ಬಿಲ್ಲು ಮಾಡಿಕೊಂಡು ಕಾಲೇಜಿಗೆ ಸರಬರಾಜು ಮಾಡಿ ತಾವೇ ಹಣ ತಂದು ಕೊಡುತ್ತಿದ್ದರು. ಶಾಮರಾಯರು ಪ್ರಕಾಶನ ನಡೆಸುತ್ತಿದ್ದ ಕಾಲದಲ್ಲಿ ಕರ್ನಾಟಕದಲ್ಲಿ ಬೆರಳೆಣಿಕೆಯಷ್ಟು ಪ್ರಕಾಶಕರು ಮತ್ತು ಪುಸ್ತಕ ಮಾರಾಟಗಾರರಿದ್ದರು. ಅವರಿಂದ ನಡೆಯುತ್ತಿದ್ದ ವ್ಯಾಪಾರದಿಂದ ಬಂದ ಹಣವನ್ನು ಶಾಮರಾಯರು ಕೆರೆಯ ನೀರನ್ನು ಕೆರೆಗೆ ಚೆಲ್ಲಿ ಎನ್ನುವಂತೆ ಪ್ರಕಾಶನಕ್ಕೆ ವಿನಿಯೋಗಿಸುತ್ತಿದ್ದರು. ಶಾಮರಾಯರು ವೃತ್ತಿ ಪ್ರಕಾಶಕರಾಗಿರಲಿಲ್ಲ. ಆದ್ದರಿಂದ ಅವರು ಪ್ರಕಾಶನದ ಕಲೆಯ ಬಗ್ಗೆ ಹೆಚ್ಚು ಒತ್ತುಕೊಡಲಿಲ್ಲ ಹಾಗೂ ಅದರ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ.

1960ರ ದಶಕದ ಕೊನೆಯಲ್ಲಿ ಶಾಮರಾಯರ ಮಗ ವಾಣಿಜ್ಯಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದರು. ಆದರೆ ಆ ಹೊತ್ತು ಶಾಮರಾಯರು ಛಾಯಾಪತಿಯವರು ಕೆಲಸಕ್ಕೆ ಹೋಗಲು ಒಪ್ಪಲಿಲ್ಲ ಹೀಗಾಗಿ ಶಾಮರಾಯರ ಆದೇಶದ ಮೇರೆಗೆ ಹಾಗೂ ಇಚ್ಛೆಯಂತೆ ಗ್ರಂಥಮಾಲೆಯ ಹೊಣೆ ಹೊರೆಗಳನ್ನು ಛಾಯಾಪತಿಯವರ ಯುವ ಭುಜದ ಮೇಲಿರಿಸಿ ಮುಂದೆ ಬಾ ಎಂದೇ ಆಶೀರ್ವದಿಸಿ ದರು. ಅವರ ಆಶೀರ್ವಾದ ಹುಸಿಯಾಗಲಿಲ್ಲ. ಪ್ರಕಾಶನವನ್ನು ಕೈಗೆತ್ತಿಕೊಂಡ ಛಾಯಾಪತಿಯವರಿಗೆ, ಹಿರಿಯ ಪ್ರಕಾಶಕರಾಗಿದ್ದ ಡಿ.ವಿ.ಕೆ. ಮೂರ್ತಿಯವರು ಮಾನಸಿಕ ಗುರುಗಳಾಗಿದ್ದರು. ಅವರಂತೆ ತಾನು ಒಬ್ಬ ಸಮರ್ಥ ಪ್ರಕಾಶಕನಾಗಬೇಕೆಂಬ ಆಸೆಯಿತ್ತು. ಕಾಲ ಸರಿದಂತೆ ಆ ದಿಸೆಯಲ್ಲಿ ಯಶಸ್ವಿಯಾದರು. 1999ರಲ್ಲಿ ತಾವು ಮಾಡಿದ ಸಾಧನೆಗೆ ಸಿದ್ಧಿ ಪಡೆದರು. ಕನ್ನಡ ಪುಸ್ತಕ ಪ್ರಾಧಿಕಾರ ಕೊಡಮಾಡುವ 'ಅತ್ಯುತ್ತಮ ಪ್ರಕಾಶನ ಪ್ರಶಸ್ತಿ' ಅವರ ಕಿರೀಟಕ್ಕೆ ಸೇರಿದ ಒಂದು ಮುಖ್ಯ ಗರಿ ಯಾಯಿತು. ನಂತರ ಒಂದು ಅವಧಿಗೆ. ಅವರು ಕನ್ನಡ ಪುಸ್ತಕ ಪ್ರಾಧಿಕಾರದ

ಕ್ರಿಯಾಶೀಲ ಸದಸ್ಯರಾಗಿದ್ದರು. ಇದಕ್ಕೆ ಮುನ್ನ ಅವರಿಗೆ ಚಿತ್ರದುರ್ಗದ ಮುರುಘರಾಜೇಂದ್ರ ಮಠದ ಶ್ರೀ ಶ್ರೀಗಳಿಂದ 'ಸಾಹಿತ್ಯಾ ಸೇವಾ ಧುರೀಣ' ಎಂಬ ಬಿರುದನ್ನು ನೀಡಿದರು. ಅನೇಕ ಸಂಘ ಸಂಸ್ಥೆಗಳು ಛಾಯಾಪತಿಯವರ ಪ್ರಕಾಶನ ನಿಷ್ಠೆಗೆ ಸನ್ಮಾನಿಸಿದವು. 2010ರ ಡಿಸೆಂಬರ್ ತಿಂಗಳಿನಲ್ಲಿ ಮೈಸೂರಿನ ನವಿಗನ್ನಡ ಪತ್ರಿಕೆ ಮತ್ತು ಹೊಯ್ಸಳ ಕನ್ನಡ ಸಂಘ 'ಹೊಯ್ಸಳ ಪ್ರಶಸ್ತಿ' ನೀಡಿ ಗೌರವಿಸಿತು.

1980ರ ದಶಕದಲ್ಲಿ ಹಾ ಮಾ ನಾಯಕರ ಸಂಪಾದಕತ್ವದಲ್ಲಿ ಬಿಡುಗಡೆಯಾದ 'ಸ್ವಸ್ತಿ' ಮಾಲೆಯು ಒಂದು ಅದ್ಭುತ ಪ್ರಕಟಣೆ. ಸುಮಾರು ಒಂದು ಸಾವಿರ ಪುಟಗಳಿಂದ ಕೂಡಿದ್ದ ಈ ಗ್ರಂಥ ತ.ಸು. ಶಾಮರಾಯರಿಗೆ 75 ವರ್ಷಗಳು ತುಂಬಿದಂಥ ಸಂದರ್ಭದಲ್ಲಿ 75 ವಿಮರ್ಶೆಗಳಿಂದ ಕೂಡಿದ ಒಂದು ಬಾಗಿನ. ರಾಷ್ಟ್ರಕವಿ ಕುವೆಂಪು ಅವರು ಈ ಕೃತಿಯನ್ನು ಕುರಿತು 'ಆಧುನಿಕ ಸಾಹಿತ್ಯ ಚರಿತ್ರೆಯ ಓದುಗರಿಗೆ ಇದೊಂದು ಒಳ್ಳೆಯ ಆಕರ ಗ್ರಂಥ' ಎಂದು ಅಭಿಪ್ರಾಯಪಟ್ಟರು. ಸಾವಿರ ಪುಟಗಳ ಇಂಥ ಗ್ರಂಥ ಪ್ರಕಟಿಸಲು ತಂದೆಯ ಮೇಲಿನ ಪ್ರೀತಿ ಸಾಲದು. ಯಮ ಧೈರ್ಯವೇ ಬೇಕು ಎಂದು ಹಾ.ಮಾ. ನಾಯಕರು ಗ್ರಂಥದ ಬಿಡುಗಡೆಯ ಸಂದರ್ಭದಲ್ಲಿ ಪ್ರಕಾಶಕರಾದ ಛಾಯಾಪತಿಯವರು ಕುರಿತು ತಿಳಿಸಿದ್ದರು.

1980ರ ದಶಕದಲ್ಲೇ ಪ್ರಕಟವಾದ ಮತ್ತೊಂದು ವಿಶಿಷ್ಟ ಪ್ರಕರಣೆ ಹಾಗೂ ಹಾಮಾ ನಾಯಕರು ಮೈಥಿಲಿ ಭಾಷೆಯಿಂದ ಕನ್ನಡಕ್ಕೆ ಅನುವಾದಿಸಿದ ವಿದ್ಯಾಪತಿಯ ಹಾಡುಗಳು 'ಪ್ರಣಯ ಪದಾವಳಿ'. ಈ ಕೃತಿಯ ಒಳ ಹೂರಣಕ್ಕೂ ಮಿಗಿಲಾಗಿ ಅದರ ಬಾಹ್ಯ ಸೌಂದರ್ಯ ಅನೇಕ ಸಾಹಿತಿಗಳ ಹುಬ್ಬೇರಿಸಿತ್ತು. ಸುಪ್ರಸಿದ್ಧ ಕವಿಗಳಾದ ನಿಸಾರ್ ಅಹಮ್ಮದ್ ಅವರು 'ಇಂಥ ಚೆಲುವು ಹೊತ್ತ ಪುಸ್ತಕವನ್ನು ನಾನು ಇದುವರೆಗೂ ಕನ್ನಡ ಪ್ರಕಟಣಾ ಪ್ರಪಂಚದಲ್ಲಿ ಕಂಡಿಲ್ಲ ಎಂದು ತಮ್ಮ ಅಭಿಪ್ರಾಯ ತಿಳಿಸಿದ್ದರು. ಇದೇ ರೀತಿ ಪು.ತಿ. ನರಸಿಂಹಾಚಾರ್. ಯು.ಆರ್. ಅನಂತಮೂರ್ತಿ, ಚದುರಂಗ, ಚೆನ್ನವೀರಕಣವಿ, ವಿ. ಕೃ. ಗೋಕಾಕ್, ರಾಘವೇಂದ್ರ ಇಟಗಿ ಮುಂತಾದ ಸಿದ್ಧ ಪ್ರಸಿದ್ಧರು ಪ್ರಶಂಸಿಸಿದ್ದರು.

1990ರ ದಶಕದಲ್ಲಿ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಐವತ್ತು ವರ್ಷಗಳನ್ನು ಮುಟ್ಟಿತು. ಆ ಸಂದರ್ಭದಲ್ಲಿ ಮಾಲೆ 'ಬಂಗಾರದ ಬೆಳೆ' ಎಂಬ ಶೀರ್ಷಿಕೆಯಲ್ಲಿ 50 ಪುಸ್ತಕಗಳನ್ನು ಪ್ರಕಟಿಸಿತು. ಇವು ವಿದ್ವಾಂಸರ ಮತ್ತು ವಿಮರ್ಶಕ ಮೆಚ್ಚುಗೆಗಳಿಸಿದ್ದವು.

'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ 2009ರಲ್ಲಿ ಪ್ರಕಟಣಾ ಪ್ರಪಂಚದ ಕ್ಷೇತ್ರದಲ್ಲೇ ಒಂದು ಅಚ್ಚರಿ ಮೂಡಿಸಿತು. ಇದು ಪ್ರಕಟಣಾ ಪ್ರಪಂಚದಲ್ಲೇ ನಡೆದ ಒಂದು ಅಪೂರ್ವ ಘಟನೆ. ಸುಪ್ರಸಿದ್ಧ ಕವಿಗಳಾದ ಚೆನ್ನವೀರ ಕಣವಿಯವರ ಎಲ್ಲಾ

ಕವಿತೆಗಳನ್ನು ಒಮ್ಮೆಗೇ ಪುನರ್‌ಮುದ್ರಣ ಮಾಡಿ ರಾಷ್ಟ್ರಕವಿ ಶಿವರುದ್ರಪ್ಪನವರ ಅಧ್ಯಕ್ಷತೆಯಲ್ಲಿ ಬಿಡುಗಡೆ ಮಾಡಿತು. ಇವು ಪುಸ್ತಕ ಸಂಸ್ಕೃತಿಯಲ್ಲಿ ಅಪಾರವಾದ ಆಸಕ್ತಿಯುಳ್ಳ ಹರಿಹರೇಶ್ವರ, ಎಚ್.ಎಸ್. ವೆಂಕಟೇಶಮೂರ್ತಿ ಮುಂತಾದವರ ಮೆಚ್ಚುಗೆ ಗಳಿಸಿತ್ತು.

'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ' ಇಂದು ಈ ಗಾತ್ರದಲ್ಲಿ ಬೆಳೆದಿರುವುದಕ್ಕೆ ನಾಡಿನ ಉದ್ದಗಲಗಳಲ್ಲಿ ಪ್ರಸಿದ್ಧಿ ಪಡೆದಿರುವುದಕ್ಕೆ ಇದರ ಲೇಖಕರು ಪ್ರಮುಖ ಕಾರಣ. 'ಪುಸ್ತಕ ಸಂಸ್ಕೃತಿ'ಯಲ್ಲಿ ಅಪಾರವಾದ ಆಸಕ್ತಿಯಿದ್ದ ಹಾ.ಮಾ. ನಾಯಕರು ಮಾಲೆ ಒಳ್ಳೆಯ ಕೆಲಸ ಮಾಡಿದಾಗಲೆಲ್ಲ ಅವರ ಬೆನ್ನು ತಟ್ಟಿ, ಪ್ರೋತ್ಸಾಹಿಸಿ ತಮ್ಮ ಅಧಿಕಾರಾವಧಿಯಲ್ಲಿ ಮಾಲೆಗೆ ನೀಡಬಹುದಾದ ಎಲ್ಲ ಒಳ್ಳೆಯದನ್ನ ಮಾಡಿದರು. ಕನ್ನಡದ ಕೆಲಸ ಎಂದರೆ ಮೆಚ್ಚುವ, ಪ್ರೋತ್ಸಾಹಿಸುವ ಗುಣಪಕ್ಷಪಾತಿಗಳ ಮುಂತಾದವರು. ಎಲ್ಲಿ ಒಳ್ಳೆಯ ಕನ್ನಡದ ಕೆಲಸ ನಡೆಯುತ್ತಿರುತ್ತದೊ ಅಲ್ಲಿ ದೇಜಗೌ ಅವರು ಮರೆಯಾಗಿ ನಿಂತು ಒಳ್ಳೆಯದನ್ನು ಮಾಡುತ್ತಾರೆ. ಅವರಿಂದ ಇಂಥ ಒಳ್ಳೆಯ ಕೆಲಸ ಮಾಲೆಗೆ ಆಗಿದೆ. ಅದೇ ರೀತಿ ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ, ನಿಸಾರ್ ಅಹಮದ್, ಚೆನ್ನವೀರಕಣವಿ, ಮತ್ತು ಈಚೆಗೆ ಎಚ್.ಎಸ್. ವೆಂಕಟೇಶಮೂರ್ತಿ, ಮಾಲೆ ಪ್ರಕಟಿಸುತ್ತಿರುವ ಕೃತಿಗಳನ್ನು ಮೆಚ್ಚಿ ತಮ್ಮ ಬಹುಪಾಲು ಕೃತಿಗಳನ್ನು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಗೆ ನೀಡಿದ್ದಾರೆ.

ಇಂದು ಸುಮಾರು ಒಂದು ಅಂದಾಜಿನಂತೆ ಕರ್ನಾಟಕದಲ್ಲಿ ಒಂದೂವರೆ ಸಾವಿರ ಜನ ಪ್ರಕಾಶಕರಿದ್ದಾರೆ. ಇವುಗಳಲ್ಲಿ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ತನ್ನದೇ ಆದ ಛಾಪನ್ನು ಮೂಡಿಸಿದೆ. ಕನ್ನಡ ಪುಸ್ತಕ ಪ್ರಾಧಿಕಾರದಿಂದ ಎರಡನೆಯ ಸಾಲಿನ 'ಅತ್ಯುತ್ತಮ ಪ್ರಕಾಶನ ಪ್ರಶಸ್ತಿ'ಯನ್ನು ಪಡೆದದ್ದು, ಇದೀಗ ಮುಂದಿನ ತಿಂಗಳು ಫೆಬ್ರವರಿ 4, 5, 6 ರಂದು ಬೆಂಗಳೂರಿನಲ್ಲಿ ನಡೆಯುತ್ತಿರುವ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕನ್ನಡ ಪುಸ್ತಕೋದ್ಯಮಕ್ಕೆ ಸಂಬಂಧಿಸಿದಂತೆ ಪ್ರಬಂಧ ಮಂಡಿಸಲು ಆಹ್ವಾನಿಸಿರುವುದು ಛಾಯಾಪತಿಯವರು ಈ ಐವತ್ತು ವರ್ಷಗಳು ಎಷ್ಟು ಪ್ರಾಮಾಣಿಕವಾಗಿ ಪ್ರಕಾಶನದಲ್ಲಿ ತೊಡಗಿಸಿಕೊಂಡಿದ್ದಾರೆ ಎಂಬುದಕ್ಕೆ ಜೀವಂತ ಸಾಕ್ಷಿಯಾಗಿದೆ.

ಪ್ರಕಾಶನದ ಕಾಯಕದಲ್ಲಿ ಮೂರು ಮುಖ್ಯ ಅಂಶಗಳನ್ನು ಯಾವುದೇ ಪ್ರಕಾಶಕರು ಅತ್ಯಗತ್ಯವಾಗಿ ಗಮನಿಸಬೇಕು. ಮೊದಲನೆಯದಾಗಿ ಲೇಖಕ ಮನೆಗೆ ಅಸ್ತಿಭಾರವಿದ್ದಂತೆ. ಎರಡೆಯವರು ಕಾಗದದ ವ್ಯಾಪಾರಿ, ಮೂರನೆಯವರು ಮುದ್ರಕ. ಯಾವ ಪ್ರಕಾಶಕ ಈ ಮೂರು ಅಂಶಗಳನ್ನು ಗಮನಿಸಿ ಗೌರವಿಸುತ್ತಾನೋ ಅವನೇ ನಿಜವಾದ ಪ್ರಕಾಶಕ. ಅವರಿಗೆ ಪ್ರಕಾಶನದಲ್ಲಿ ಸೋಲಿರುವುದಿಲ್ಲ.

*'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ' ಈ ಅಂಶಗಳನ್ನು ಗೌರವಿಸಿದೆ ಎಂದು ಅಭಿಮಾನದಿಂದ ಹೇಳಲು ಈ ಹೊತ್ತು ನಾನು ಆಶಿಸುತ್ತೇನೆ.*

## ನಾನು ಲೇಖಕನಾದೆ

ನಾನು ಬರಹಗಾರನಾದದ್ದು ಆಕಸ್ಮಿಕ. ನಮ್ಮ ತಂದೆ ಒಮ್ಮೆ ತಾಯಿಯವರೊಂದಿಗೆ ಕಾಶಿ ಮತ್ತು ಇತರ ಉತ್ತರ ಭಾರತದ ಪ್ರದೇಶಗಳಿಗೆ ಪ್ರವಾಸ ಹೋಗಿದ್ದರು. ಸದಾ ಅವರ ಜೊತೆ ಒಟ್ಟಿಗೆ ಇರುತ್ತಿದ್ದ ನನಗೆ ಹಾಗೆಯೇ ಸುಮ್ಮನೆ ಅವರ ನೆನಪು ಮನಸ್ಸಿನಲ್ಲಿ ಮೂಡಿತು. ಅದರ ಫಲವಾಗಿ ಅವರ ಬಗ್ಗೆ ಒಂದು ವ್ಯಕ್ತಿ ಚಿತ್ರ ಬರೆಯಬೇಕೆಂದುಕೊಂಡೆ, ಬರೆದೆ. ಲೇಖಕನಾದೆ.

ನಾನು ಬರೆದ ಮೊದಲ ಪುಸ್ತಕ ಗುರುಶ್ರೇಷ್ಠ. ತಂದೆಯವರನ್ನು ಕುರಿತ ವ್ಯಕ್ತಿ ಚಿತ್ರ. ಇದು ಪುಸ್ತಕವಲ್ಲ, ಪುಸ್ತಿಕೆ. ಇದನ್ನು ಪ್ರಶ್ನೋತ್ತರ ರೂಪದಲ್ಲಿ ಬರೆದೆ. ಇದನ್ನು ತಂದೆಯವರ ಶಿಷ್ಯರಾಗಿದ್ದ ರಾಜ್ಯ ಪ್ರಶಸ್ತಿ ಶಿಕ್ಷಕ ಸುಬ್ರಹ್ಮಣ್ಯಂ ಅವರಿಂದ ಬಿಡುಗಡೆ ಮಾಡಿಸಿದೆ. ಬಿಡುಗಡೆಗೆ ಚದುರಂಗ, ಸಿಂಧುವಳ್ಳಿ ಸುಬ್ರಹ್ಮಣ್ಯಂ, ಶ್ರೀಧರರಾಜೇ ಅರಸ್ ಮುಂತಾದವರು ಬಂದಿದ್ದರು.

ಈ ಪುಟ್ಟ ಪುಸ್ತಕವನ್ನು ಬಹಳ ಜನ ಮೆಚ್ಚಿದರು. ದಿ. ಜೀ.ಶಂ.ಪರಮಶಿವಯ್ಯ ಅವರು Fallow up literature ಗೆ ಇದು ಬಹಳ ಅನುಕೂಲವಾಗಿದೆ ಎಂದು ಮೆಚ್ಚಿದ್ದರು.

ಈ ವ್ಯಕ್ತಿ ಚಿತ್ರ ನಾನು ಬರೆದದ್ದರಿಂದ ಸುಪ್ರಸಿದ್ಧ ಲೇಖಕರಾದ ಚದುರಂಗ ಮತ್ತು ಹಾಮಾ ನಾಯಕರು ಬರವಣಿಗೆ ಮುಂದುವರಿಸಲು ಉತ್ತೇಜಿಸಿದರು, ನಮ್ಮ ವಂಶದ ಹಿರಿಯರಾದ ತ.ರಾ.ಸು. ಮತ್ತು ವೆಂಕಣ್ಣಯ್ಯನವರ ಬಗ್ಗೆ ಕೃತಿ ರಚಿಸುವಂತೆ ಪ್ರೇರೇಪಿಸಿದರು. ಅದರಂತೆ ನಮ್ಮ ವಂಶದ ಸುಪ್ರಸಿದ್ಧ ಕಾದಂಬರಿಕಾರ ತ.ರಾ.ಸು. ಅವರ ಬಗ್ಗೆ ವ್ಯಕ್ತಿ ಬರೆದೆ. ತ.ರಾ.ಸು. ಅವರ ಮನೆಯಲ್ಲೇ ತ.ರಾ.ಸು. ವ್ಯಕ್ತಿಚಿತ್ರವನ್ನು ಹಾ.ಮಾ. ನಾಯಕರು ಬಿಡುಗಡೆ ಮಾಡಿದರು. ಅವರೊದಿಗೆ ಸಿ.ಪಿ.ಕೆ. ಮತ್ತು ಪಿ.ಆರ್. ತಿಪ್ಪೇಸ್ವಾಮಿ ಸಹ ಇದ್ದರು. ನನ್ನ ಅದೃಷ್ಟವೋ ಎಂಬಂತೆ ನನ್ನ ತಂದೆಯವರೂ ಸಹ ಬಿಡುಗಡೆಯ ಸಮಾರಂಭಕ್ಕೆ ನನ್ನೊಡನೆ ಬಂದರು. ಆದರೆ ಅವರು ಒಂದು ಮಾತೂ ಆಡಲಿಲ್ಲ. ನಗು ನಗುತ್ತಾ ಮೂಕ ಪ್ರೇಕ್ಷಕರಾಗಿದ್ದರು. ಆಗ ನಾಯಕರು, ತಂದೆಯವರನ್ನು ಕುರಿತು, ಸಾರ್, ನೀವು ಏಕೆ ಮೌನವಾಗಿದ್ದಿರಿ ಎಂದು ನನಗೆ ಗೊತ್ತು. ನೀವು ಬಾಯಿ ತೆರೆದರೆ ಛಾಯಾಪತಿಯವರ ಕೃತಿಯ ಬಗ್ಗೆ ಒಳ್ಳೆಯ ಮಾತಾಡಬೇಕಾಗುತ್ತದೆ. ಆದ್ದರಿಂದ ಸುಮ್ಮನಿದ್ದೀರಿ ಎಂದಾಗ ತಂದೆಯವರು ನಸುನಕ್ಕರು ಆಗ ನನಗೆ ಮೌನೇನ ಸಮ್ಮತಿ ಸೂಚನಂ ಎಂಬ ಮಾತು ನೆನಪಿಗೆ ಬಂತು.

ನನಗೆ ತಂದೆಯವರ ಬಗ್ಗೆ ತಿಳಿದಿತ್ತು. ಅಣ್ಣ ತ.ರಾ.ಸು. ಬಗ್ಗೆ ತಿಳಿದಿತ್ತು. ಆದರೆ ದೊಡ್ಡಪ್ಪ ವೆಂಕಣ್ಣಯ್ಯನವರ ಬಗ್ಗೆ ತಿಳಿದಿರಲಿಲ್ಲ. ತಂದೆಯವರಿಗೆ ನೂರಾರು ಜನ ವಿದ್ಯಾರ್ಥಿಗಳಿದ್ದರು. ಬಹಳಷ್ಟು ಜನಗಳಿಗೆ ಅನ್ನ ಹಾಕಿದ್ದರು. ಸುಮಾರು ಎಪ್ಪತ್ತು ಕೃತಿಗಳ ರಚನೆ ಮಾಡಿದ್ದರು. ಆದ್ದರಿಂದ ಆ ಹೊತ್ತು ನನಗೆ ಯಾವ ರೀತಿ ವೆಂಕಣ್ಣಯ್ಯನವರು ನಮ್ಮ ತಂದೆಯವರಿಗಿಂತ ದೊಡ್ಡವರು ಎಂಬ ಸಂದೇಹ ತಲೆದೋರಿತು.

ನಾನು ಸ್ವಲ್ಪ ಸಂಕೋಚದಿಂದಲೇ ತಂದೆಯವರನ್ನು ಕುರಿತು, ಅಣ್ಣ, ದೊಡ್ಡಪ್ಪ ವೆಂಕಣ್ಣಯ್ಯನವರು ನಿನಗಿಂತ ಯಾವ ರೀತಿ ದೊಡ್ಡವರು ಎಂದು ಕೇಳಿದೆ? ನೀನು ಎಪ್ಪತ್ತು ಪುಸ್ತಕ ಬರಿದಿದ್ದೀಯ, ಅವರು ಕೇವಲ ಏಳೆಂಟು ಪುಸ್ತಕ ಬರೆದಿದ್ದಾರೆ. ನೀನು ನೂರಾರು ಜನಗಳಿಗೆ ಊಟ ಹಾಕಿದ್ದೀಯ. ಈ ವಿಚಾರದಲ್ಲಿ ಅವರೇನು ಮಾಡಿದ್ದರೋ ನನಗೆ ತಿಳಿಯದು. ನಿನಗೆ ನೂರಾರು ಜನ ವಿದ್ಯಾರ್ಥಿಗಳಿದ್ದಾರೆ. ಅವರ ವಿದ್ಯಾರ್ಥಿಗಳ ಸಂಖ್ಯೆ ಎಷ್ಟಿತ್ತೋ ನನಗೆ ತಿಳಿಯದು, ಹೀಗಿರುವಾಗ ನಾನು ಅವರ ಬಗ್ಗೆ ಏನು ಬರೆಯಬೇಕೋ ತಿಳಿಯುತ್ತಿಲ್ಲ ಎಂದೆ.

ತಂದೆಯವರು ಒಂದು ನಿಮಿಷ ಉತ್ತರಿಸಲಿಲ್ಲ. ಗಂಭೀರ ಚಿತ್ತರಾದರು. ನಂತರ ನನ್ನ ಕಡೆಗೆ ದಿಟ್ಟಿಸುತ್ತಾ, ಅಯ್ಯೊ ಹುಚ್ಚುಮುಂಡೇದೆ, ನಮಣ್ಣನೆಲ್ಲಿ, ನಾನೆಲ್ಲಿ? 'He use to have always over draft in his account, only to help others. ಆತ ಸಾಲ ಮಾಡುತ್ತಿರಲಿಲ್ಲ, ಮಾಡುತ್ತಿದ್ದುದೇ ಬೇರೆಯವರಿಗೆ ಸಹಾ ಮಾಡುವುದಕ್ಕೆ. ನನಗೆಲ್ಲಿದೆ ಆ ಯೋಗ್ಯತೆ? ನಾನು Neither lend, Nor barrow ಅನ್ನುವ ಮಾತಿಗೆ ಸೇರಿದವನು. ಅಬ್ಬಬ್ಬ ಅಂದರೆ ಈಗ ಎರಡು ತಿಂಗಳ ಹಿಂದೆ ನನಗೆ ನಾಲ್ಕು ಸಾವಿರ ರೂಪಾಯಿಗಳು ಬಂದವು, ಅದರಲ್ಲಿ ಒಂದು ಸಾವಿರ ರೂಪಾಯಿಗಳನ್ನು ಕೃಷ್ಣಾರ್ಪಣಮಸ್ತು ಅಂತ ದಾನ ಮಾಡಿದೆ.

ವೆಂಕಣ್ಣಯ್ಯ ಬರೆದದ್ದು ಕಡಿಮೆ ಇರಬಹುದು. ಆದರೆ ಬರೆದದ್ದೆಲ್ಲಾ ಚೊಕ್ಕ ಬಂಗಾರ. ಅವರು ಬರೆದ ಬರವಣಿಗೆಯಲ್ಲಿ ಒಂದು ಪದ ಸೇರಿಸೊ ಹಾಗೂ ಇರಲಿಲ್ಲ ತೆಗೆಯೋ ಹಾಗೂ ಇರಲಿಲ್ಲ ಎಂದರು.

ದೇವರು ಯಾವ ರೀತಿ ಎಲ್ಲ ಒಳ್ಳೆಯ ಕೆಲಸದ ಹಿಂದೆ ಇದ್ದು ಜನಗಳ ಕಣ್ಣಿಗೆ ಕಾಣಿಸುವುದಿಲ್ಲವೋ ಅದೇ ರೀತಿ ವೆಂಕಣ್ಣಯ್ಯನವರು ಸಹ ಇದ್ದರು, ಎಂದರು. ವೆಂಕಣ್ಣಯ್ಯನವರು ಬರೆದದ್ದು ಕಡಿಮೆಯಾದರೂ ಕುವೆಂಪು ಅಂಥ ಮಹಾನ್ ಲೇಖಕರನ್ನು ಹುರಿದುಂಬಿಸಿ ಪ್ರೋತ್ಸಾಹಿಸಿ ಬೆಳೆಸಿದರು. ವೆಂಕಣ್ಣಯ್ಯನವರ ಬಗ್ಗೆ ಅಣ್ಣನಿಂದ ವಿಚಾರಗಳನ್ನು ತಿಳಿದ ನನಗೆ ವೆಂಕಣ್ಣಯ್ಯನವರೇ ಕಣ್ಣೆದುರಿಗೆ ಬಂದು ನಿಂತಂತಾಯಿತು. ವೆಂಕಣ್ಣಯ್ಯನವರ ವ್ಯಕ್ತಿ ಚಿತ್ರ 'ದೇವಮಾನವ' ರಚಿಸಿದೆ.

ಕಾಲ ಸರಿದಂತೆ ವ್ಯಕ್ತಿ ಚಿತ್ರಗಳ ಕ್ಷೇತ್ರದಲ್ಲಿ ಮತ್ತಷ್ಟನ್ನು ಕುರಿತಂತೆ ಪುಸ್ತಕಗಳನ್ನು ಬರೆದೆ. ಚದುರಂಗ, ಅಬ್ದುಲ್ ನಜೀರ್‌ಸಾರ್, ಬಿ.ಪಾರ್ಥಸಾರಥಿ ಮುಂತಾದವರ ಬಗ್ಗೆ.

ಬಿ. ಪಾರ್ಥಸಾರಥಿಯವರನ್ನು ಕುರಿತ ವ್ಯಕ್ತಿಚಿತ್ರ 'ಕನ್ನಡದ ಕಲಿ'. ಅವರು ಜಿಲ್ಲಾಧಿಕಾರಿಗಳಾಗಿ ಚಿಕ್ಕಮಗಳೂರಿನಲ್ಲಿ ಮಾಡಿದ ಕನ್ನಡದ ಕೆಲಸ ಅನುಕರಣೀಯ. 'ಕನ್ನಡದ ಕಲಿ' ಪುಸ್ತಕ ಹಾಸನದಲ್ಲಿ ಬಿಡುಗಡೆಯಾಯಿತು. ಪಾರ್ಥಸಾರಥಿಗಳಿಗೆ ಅದನ್ನು ಎಚ್ಚೆಸ್ಕೆಯವರು ಬಿಡುಗಡೆ ಮಾಡಬೇಕೆಂಬ ಆಸೆಯಿತ್ತು. ಅವರ ಆಶಯವನ್ನು ಎಚ್ಚೆಸ್ಕೆ ಅವರಿಗೆ ತಿಳಿಸಿದಾಗ ಅವರು ಸಂತೋಷದಿಂದ ತಮ್ಮ ಒಪ್ಪಿಗೆ ನೀಡಿದರು. ಹಾಸನದಲ್ಲಿ ಪುಸ್ತಕ ಬಿಡುಗಡೆ ಮಾಡುತ್ತ 'ವ್ಯಕ್ತಿಚಿತ್ರ' ನನ್ನ ಕ್ಷೇತ್ರ. ಅದರಲ್ಲಿ ನನ್ನ ಶಿಷ್ಯ ಛಾಯಾಪತಿ ನನ್ನನ್ನು ಮೀರಿ ಮುನ್ನಡೆದಿದ್ದಾನೆ, ಎಂದು ಎಚ್ಚೆಸ್ಕೆಯವರು ಹೃದಯ ತುಂಬಿ ಮಾತಾಡಿದಾಗ ನನಗೆ ಅತೀವ ಸಂತೋಷವಾಯಿತು.

'ಕನ್ನಡದ ಕಲಿ'ಯ ಬರವಣಿಗೆ ವಿದ್ವಾಂಸರ, ವಿಮರ್ಶಕರ, ಮೆಚ್ಚುಗೆ ಗಳಿಸಿತು. ಅದರಲ್ಲೂ ಸುಪ್ರಸಿದ್ಧ ರಾಷ್ಟ್ರಕವಿದ ಕುವೆಂಪು ಅವರ ಮೆಚ್ಚುಗೆ ಬಂದಾಗ ನಾನು ಬರೆದದ್ದು ಸಾರ್ಥಕ ಎನ್ನಿಸಿತು. ಎಚ್ಚೆಸ್ಕೆ, ಚದುರಂಗ, ಪ್ರೊ. ನಟರಾಜ್, ಪ್ರೊ. ಅನಂತಕೃಷ್ಣ, ಪ್ರೊ. ಕೆ.ಎಸ್. ಭಗವಾನ್ ಮತ್ತು ಪ್ರೊ. ಕೆ.ಎನ್. ಶಿವತೀರ್ಥನ್ ಅವರ ಮೆಚ್ಚುಗೆಯ ನುಡಿಯಿಂದ ನನಗೆ ಮತ್ತಷ್ಟು ಬರೆಯಬೇಕು ಎಂಬ ಆಸೆ ನನ್ನಲ್ಲಿ ಗರಿಗೆದರಿತು.

ಕಾಲ ಸರಿದಂತೆ, ಕರ್ನಾಟಕದಲ್ಲಿ ಜಿಲ್ಲಾ ಪರಿಷತ್ತಿನ ಕಾಯಿದೆ ಜಾರಿಗೆ ಬಂತು. ಆಗ ನಾನು ಈ ಕಾಯಿದೆಗಳನ್ನು ಕುರಿತಂತೆ, ಗ್ರಾಮಸ್ವರಾಜ್ಯದ ಬಗ್ಗೆ ಒಂದು ಪುಸ್ತಕ ಪ್ರಕಟಿಸಬೇಕೆಂದುಕೊಂಡೆ. ಅದರಂತೆ ಒಬ್ಬ ಲೇಖಕರಿಗೆ ಮುಂಗಡ ಹಣ ನೀಡಿದೆ. ಅವರು ನಾನು ನಿರೀಕ್ಷಿಸಿದ ಹಾಗೆ ನಡೆದುಕೊಳ್ಳಲಿಲ್ಲ. ಕಾರ್ಯಕಾರಣ ಈ ಸಂಗತಿಯನ್ನು ನಾನು ಚದುರಂಗರಿಗೆ ತಿಳಿಸಿದೆ. ಅವರು ನನ್ನನ್ನು ಕುರಿತು, ಸಾರ್, ಈಗಾಗಲೆ ನೀವು ಬರವಣಿಗೆ ಮಾಡಿದ್ದೀರ. ನೀವೇ ಯಾಕೆ ಬರೆಯಬಾರದು? ಎಂದರು. ನಂತರ ಬರೆಯಿರಿ, ಬರೆದುದನ್ನು ನನ್ನ ಮುಂದೆ ಓದಿ ಎಂದು ತಿಳಿಸಿದರು. ಅದರಂತೆ ನಾನು ಬರೆಯುತ್ತಾ ಹೋದೆ. ಬರವಣಿಗೆಯಲ್ಲಿ ಪ್ರಗತಿಯಾಗುತ್ತಿದ್ದಂತೆ ಆಗಾಗ ಚದುರಂಗರ ಬಳಿ ಕುಳಿತು ಓದುತ್ತಿದ್ದೆ. ಶಿಲ್ಪಿ ವಿಗ್ರಹವನ್ನು ಕೆತ್ತುವಾಗ ಅದಕ್ಕೆ ಉಳಿಪೆಟ್ಟು ಕೊಡುವಂತೆ, ಚದುರಂಗರು ನನ್ನ ಬರವಣಿಗೆಯನ್ನು ಅಲ್ಲಲ್ಲಿ ತಿದ್ದುತ್ತಾ ಹೋದರು ಮುಖಪುಟ ವಿನ್ಯಾಸದ ಬಗ್ಗೆ ಸಲಹೆ ನೀಡಿದರು. ಪುಸ್ತಕ ಅಚ್ಚಾಗಿ ಸುಂದರವಾಗಿ ಹೊರ ಬಂದಾಗ ಅದು ತನ್ನದೇ ಪುಸ್ತಕ ಎನ್ನುವಂತೆ ಹರ್ಷಪಟ್ಟರು. ಕೆಲವೊಮ್ಮೆ ನಮಗೆ ತೊಂದರೆಯಾಗುವುದು ಒಳ್ಳೆಯದಕ್ಕೆ ಎಂಬ ಭಾವನೆ ಮನದಟ್ಟಾಯಿತು.

'ಗಾಂಧೀಜಿಯ ಕನಸು ನಜೀರರಿಂದ ನನಸು' ಪುಸ್ತಕ ಬಹಳ ಜನಪ್ರಿಯತೆ ಗಳಿಸಿತು. ವಿದ್ವಾಂಸರ ಮೆಚ್ಚುಗೆಯನ್ನು ಪಡೆಯಿತು. ಅವರಲ್ಲಿ ಮುಖ್ಯವಾಗಿ ಕುವೆಂಪು ಅವರ ಮೆಚ್ಚುಗೆ ಗಳಿಸಿದ್ದನ್ನು ನಾನು ಜೀವನದಲ್ಲಿ ಮರೆಯಲು ಸಾಧ್ಯವಿಲ್ಲ.

ಕರ್ನಾಟಕ ಸರ್ಕಾರ ಈ ಪುಸ್ತಕವನ್ನು ಎಲ್ಲಾ ಜಿಲ್ಲಾ ಪರಿಷತ್ತುಗಳು ಖರೀದಿಸುವಂತೆ ಸುತ್ತೋಲೆ ನೀಡಿತು. ಇದರಿಂದ ನನಗೆ ಬಹಳ ಜನ ಐ.ಎ.ಎಸ್. ಅಧಿಕಾರಿಗಳು ಆಪ್ತರಾದರು. ಅವರಲ್ಲಿ ಪ್ರಮುಖವಾಗಿ ಬಿ. ಪಾರ್ಥಸಾರಥಿ ಅವರು ಇವರ ಐದುನೂರು ಪ್ರತಿಗಳನ್ನು ಖರೀದಿಸಿದರು. ಇದರೊಂದಿಗೆ ಮುಂದೆ ನಾನು ಬರೆದ 'ಆಡಳಿತ ಭಾಷೆ ಕನ್ನಡ'ದ ಐದು ಸಾವಿರ ಪ್ರತಿಗಳನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಖರೀದಿಸುವಂತೆ ಮಾಡಿದರು. ಇದು ನನ್ನ ಮಗಳ ಮದುವೆಯ ಸಂದರ್ಭದಲ್ಲಿ ಪಾರ್ಥಸಾರತಿಗಳು ಮಾಡಿದ ಸಹಾಯ. ಇದನ್ನು ನಾನು ಹೇಗೆ ಮರೆಯಲಿ? ಇದರಿಂದ ನಾನು ಲೇಖಕನಾದುದಕ್ಕೆ ಸಾರ್ಥಕವಾಯಿತು ಎಂದುಕೊಂಡೆ.

ನಾನು ಬರೆದ ಮತ್ತೊಂದು ಪುಸ್ತಕ 'ಆಡಳಿತ ಭಾಷೆ ಕನ್ನಡ', ಪ್ರಸ್ತುತ ಪುಸ್ತಕಕ್ಕೆ ಸಿ.ಪಿ.ಕೆ. ಯವರು ಬರೆದ ಮುನ್ನುಡಿಯನ್ನು ನಮ್ಮ ತಂದೆಯವರು ಗಮನಿಸಿದ್ದರು. ಅವರು ಸಿ.ಪಿ.ಕೆ.ಯವರನ್ನು ಕುರಿತು, ಏನು ಸಿ.ಪಿ.ಕೆ.ಯವರೆ ಛಾಯಾಪತಿಯ ಪುಸ್ತಕ 'ಆಡಳಿತ ಭಾಷೆ ಕನ್ನಡ'ಕ್ಕೆ ಎಷ್ಟು ಒಳ್ಳೆಯ ಮುನ್ನುಡಿ ಬರೆದಿದ್ದೀರಲ್ಲ ಅಂದರು. ಆಗ ಸಿ.ಪಿ.ಕೆ.ಯವರು ನನ್ನದೇನಿಲ್ಲ ಸಾರ್, ಛಾಯಾಪತಿಯವರು ಒಳ್ಳೆಯ ಪುಸ್ತಕ ಬರೆದಿದ್ದಾರೆ, ಅದನ್ನು ನಾನು ತಿಳಿಸಿದ್ದೇನೆ ಅಷ್ಟೇ ಎಂದರು. ಆ ಹೊತ್ತು ಸಿ.ಪಿ.ಕೆ. ಯವರು ಕನ್ನಡ ಅಧ್ಯಯನ ಸಂಸ್ಥೆಯ ಪಠ್ಯ ಪುಸ್ತಕ ಸಮಿತಿಯ ಅಧ್ಯಕ್ಷರಾಗಿದ್ದರು. ಅವರು 'ಆಡಳಿತ ಭಾಷೆ ಕನ್ನಡ'ವನ್ನು ಮೈಸೂರು ವಿ.ವಿ. ನಿಲಯದ ವಿದ್ಯಾರ್ಥಿಗಳಿಗೆ ಆಧಾರ ಗ್ರಂಥವನ್ನಾಗಿ ಶಿಫಾರಸ್ಸು ಮಾಡುವ ಪಟ್ಟಿಯಲ್ಲಿ ಆಕರಗ್ರಂಥವಾಗಿ ಸೇರಿಸಿದ್ದರು.

ನಾನು ಬರೆದ ಮತ್ತೊಂದು ಪುಸ್ತಕ 'ನಮ್ಮ ಕ್ರಿಕೆಟ್'. ಇದು ಈ ಕ್ಷೇತ್ರದಲ್ಲಿ ಬಹಳ ಒಳ್ಳೆಯ ಪುಸ್ತಕ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಸುಪ್ರಸಿದ್ಧ ಅಂಕಣಕಾರರಾದ ಎಚ್ಚೆಸ್ಕೆ, ಐ.ಎಸ್.ಎಸ್. ಅಧಿಕಾರಿಗಳಾದ ಜಿ.ವಿ. ಕೊಂಗವಾಡ್, ಆಡಳಿತ ತರಬೇತಿ ಸಂಸ್ಥೆಯ ನಿರ್ದೇಶಕರಾಗಿದ್ದ ಚಿರಂಜೀವಿಸಿಂಗ್ ಹಾಗೂ ಸುಪ್ರಸಿದ್ಧ ಪತ್ರಿಕಾ ಬರಹಗಾರರಾದ ಈಚನೂರ್ ಕುಮಾರ್ ಅವರು ಇವುಗಳನ್ನು ಹಾಡಿ ಹೊಗಳಿದ್ದರು.

ನನಗೆ ಹಣ ಮತ್ತು ಹೆಸರು ತಂದು ಕೊಟ್ಟ ಮತ್ತೊಂದು ಪುಸ್ತಕ **'ಪಂಚತಂತ್ರ ಕಥಮಾಲಿಕೆ'** ಇದು ಕಪ್ಪು ಹಲಗೆ ಯೋಜನೆಯಡಿಯಲ್ಲಿ ಬಹಳ ಚೆನ್ನಾಗಿ ಮಾರಾಟ ವಾಯಿತು. ಇದರೊಂದಿಗೆ ವಯಸ್ಕರ ಶಿಕ್ಷಣ ಸಮಿತಿಯವರೂ ಸಹ ಇದರ ಉಪಯುಕ್ತತೆಯನ್ನು ಮನದಟ್ಟು ಮಾಡಿಕೊಂಡು ಆದೇಶ ನೀಡಿದ್ದು ಪುಸ್ತಕದ ಗುಣಮಟ್ಟವನ್ನು ಎತ್ತಿ ತೋರಿಸಿತು.

ನಾನು ಬರೆದ 'ಪುಟ್ಟನ ಸಚಿತ್ರ ರಾಮಾಯಣ' ಬಹಳ ಜನಪ್ರಿಯತೆಯನ್ನು ಗಳಿಸಿತು. ನಾನು ಬರೆಯುತ್ತಿದ್ದ ಪ್ರತಿಯೊಂದು ಪುಸ್ತಕವನ್ನು ತಂದೆಯವರ ಮುಂದೆ ಓದುತ್ತಿದ್ದೆ, ರಾಮಾಯಣವನ್ನು ಅವರ ಮುಂದೆ ಓದಿದಾಗ ಅವರು ಬಹಳ ಸಂತೋಷಪಟ್ಟರು. ಅಷ್ಟೇ ಅಲ್ಲ ತಮ್ಮ ಅಮೂಲ್ಯವಾದ ಅಭಿಪ್ರಾಯವನ್ನು ತಿಳಿಸಿದರು. ಇವರೊಂದಿಗೆ ಹಾಮಾ ನಾಯಕರೂ ಸಹ ಮೆಚ್ಚಿ ತಮ್ಮ ಅಭಿಪ್ರಾಯವನ್ನು ತಿಳಿಸಿದ್ದರು.

ನನಗೆ ಕೀರ್ತಿ ಮತ್ತು ಸಂತೋಷ ನೀಡಿದ ಮತ್ತೊಂದು ಪುಸ್ತಕ 'ಅಣ್ಣನ ಸ್ಮರಣೆ'. ತಂದೆಯವರನ್ನು ಕುರಿತು ನೂರು ಪ್ರಸಂಗಗಳು ಇದರಲ್ಲಿವೆ. ತಂದೆಯವರ ಪ್ರಿಯ ಶಿಷ್ಯರಾಗಿದ್ದ ಪ್ರಭುಶಂಕರ ಅವರ 'ಗುರುನಮನ' ಹಾಗೂ ಮಲ್ಲೇಪುರಂ ಜಿ. ವೆಂಕಟೇಶ ಅವರ ಬೆನ್ನುಡಿಯೊಂದಿಗೆ ಸುಂದರವಾಗಿ ಪ್ರಕಟವಾದ ಪುಸ್ತಕ ಅಣ್ಣನ ಸ್ಮರಣೆ. ನಾಡಿನ ಸುಪ್ರಸಿದ್ಧ ಪತ್ರಿಕೆಗಳು ಪುಸ್ತಕವನ್ನು ಹಾಡಿ ಹೊಗಳಿವೆ. ಸುಪ್ರಸಿದ್ಧ ರಾಷ್ಟ್ರಕವಿಗಳಾದ ಜಿ.ಎಸ್.ಎಸ್. ಮತ್ತು ಇಂದು ಕಂದಾಯ ಸಚಿವರಾಗಿರುವ ಶ್ರೀ ವಿ. ಶ್ರೀನಿವಾಸ ಪ್ರಸಾದ್ ಅವರು 'ಅಣ್ಣನ ಸ್ಮರಣೆ' ಕೃತಿಯ ಬಿಡುಗಡೆಯ ಸಂದರ್ಭದಲ್ಲಿ ನನ್ನನ್ನು ಅಭಿನಂದಿಸಿದ್ದನ್ನು ಮರೆಯಲು ಸಾಧ್ಯವಿಲ್ಲ.

ನಾನು ಬರೆದ ಮೊದಲ ಜೀವನಚರಿತ್ರೆ ನಮ್ಮ ತಂದೆ ಶಾಮರಾಯರ ಬಗ್ಗೆ. ಅನೇಕ ಜನ ಬಡ ವಿದ್ಯಾರ್ಥಿಗಳಿಗೆ ವಾರಾನ್ನ ಹಾಕಿದ, ಜಾತಿ, ಮತವನ್ನು ನೋಡದ ಮಾನವತಾವಾದಿ ನನ್ನ ತಂದೆ ಶಾಮರಾಯರು. ಯಾವ ಮಕ್ಕಳಿಗೂ ಸಿಗದ ಅವರೊಂದಿಗೆ ಬದುಕುವ ಸದವಕಾಶ ನನಗೆ ಲಭಿಸಿತು ಅದು ನನ್ನ ಜೀವನದ ಪುಣ್ಯ ವಿಶೇಷ. ತಂದೆಯವರು ಸ್ವಲ್ಪ ಅಲೌಕಿಕ ವ್ಯಕ್ತಿ. ಇದರಿಂದ ಅವರ ಸುತ್ತ ಇದ್ದವರಿಗೆ ಕೆಲವೊಮ್ಮೆ ಮುಜುಗರವಾಗುತ್ತಿತ್ತು. ಆದರೆ ಇದನ್ನು ಮೀರಿ ರಾರಾಜಿಸಿದ ಅವರ ಸದ್ಗುಣಗಳು ಬಹಳ ಮುಖ್ಯ. ಅವರೊಬ್ಬ ನಿಸ್ವಾರ್ಥಿ. ಹಣಕ್ಕೆ ಆಸೆ ಪಟ್ಟವರಲ್ಲ. ಅದಕ್ಕೆ ಅವರು ಎಂದೂ ಹಿಮ್ಮುಖವಾಗಿಯೇ ನಡೆದರು. ಕೀರ್ತಿ, ಗೌರವಗಳನ್ನು ಬೆನ್ನಟ್ಟಿ ಹೋಗಲಿಲ್ಲ. ಎಲೆ ಮರೆಯ ಕಾಯಿಯಂತೆ ಬಾಳಿ ಬದುಕಿದರು. ಅವರು ಸದಾ ನಮ್ಮೊಡನೆ ಹೇಳುತ್ತಿದ್ದ ಮಾತು ನನ್ನನ್ನು ಕುರಿತು, ಮಗ ಅಂದರೆ ನೀನು ಎಂದು ಹೇಳುತ್ತಿದ್ದರು. ಅವರ ಈ ನಂಬಿಕೆಯೇ ನಾನು ಅವರ ಜೀವನ ಚರಿತ್ರೆ 'ತಂಪು ನೆಳಲು' ಬರೆಯಲು ಕಾರಣ. ವಾಸ್ತವವಾಗಿ ಅವರು ನನ್ನ ಅಣ್ಣನಿಗೆ ಪದೇ ಪದೇ ಅವನನ್ನು ಕುರಿತು ನನ್ನ ಜೀವನ ಚರಿತ್ರೆಯನ್ನು ನೀನು ಬರೆಯಬೇಕು ಅನ್ನುತ್ತಿದ್ದರು. ಆತನಿಗೂ ಆಸೆ ಇತ್ತು. ಆತ ಒಮ್ಮೆ ನನ್ನೊಂದಿಗೆ ಅದರ ಏಳೆಂಟು ಪುಟ ಬರೆದಿದ್ದೇನೆ ಎಂದು ತಿಳಿಸಿದ್ದ. ಆದರೆ ಆತ ಕಾರ್ಯ ಕಾರಣ ಮುಂದುವರಿಸಲಿಲ್ಲ. ವಾಸ್ತವವಾಗಿ ನಾನು 'ತಂಪು ನೆಳಲು' ಬರೆದಾಗ ಬಹಳ ಸಂತೋಷಪಟ್ಟ. ಅದಕ್ಕೆ ಆತನೇ ಮುನ್ನುಡಿ ಬರೆದ.

ನನ್ನ ಪ್ರಕಾಶನ ಮತ್ತು ಬರವಣಿಗೆಗೆ ನನ್ನ ಶ್ರೀಮತಿಯಿಂದ ಅಪಾರವಾದ ಬೆಂಬಲ ಸಿಕ್ಕಿದೆ. ನನ್ನ ಸಹೋದರರಿಬ್ಬರೂ ಬಹಳ ಸಂತೋಷಪಟ್ಟಿದ್ದಾರೆ. Charity Begins at Home ಅನ್ನುತ್ತಾರೆ. ಜಗತ್ತು ಎಷ್ಟು ಕೊಂಡಾಡಿದರೂ ಮನೆಯವರೇ ಅರ್ಥ ಮಾಡಿಕೊಳ್ಳದಿದ್ದರೆ ಸಾಧಕರಿಗೆ ಬೇಸರವಾಗುವುದು ಸಹಜ. ಆದರೆ ಈ ಹೊತ್ತು ನನ್ನ ಶ್ರೇಯಾಭಿಲಾಷಿ ಹಾಗೂ ನನ್ನ ಆತ್ಮೀಯ ಹಿರಿಯಣ್ಣ ಈ ನನ್ನ ಎಪ್ಪತ್ತರ ವಸಂತಗಳು ಆಗುತ್ತಿರುವ ಸಂಭ್ರಮದಲ್ಲಿ ನನ್ನೊಂದಿಗೆ ಇಲ್ಲದಿರುವುದು ನನಗೆ ನಿರಾಸೆಯನ್ನುಂಟುಮಾಡಿದೆ. ನನ್ನ ತಂದೆಯವರ ನಂತರ ನನಗೆ ಅವನು ಆ ಸ್ಥಾನ ತುಂಬಿದ್ದ. ಪುಸ್ತಕ ಸಂಸ್ಕೃತಿಯಲ್ಲಿ ಅಪಾರವಾದ ಒಲವನ್ನು ಇರಿಸಿಕೊಂಡಿದ್ದ ಆತ ನನ್ನ ಬರವಣಿಗೆ ಮತ್ತು ಪ್ರಕಟಣೆಗಳಿಗೆ ಬಹಳ ಮಾನ್ಯತೆ ನೀಡಿದ್ದ. ಈ ಹೊತ್ತು ಆತನ ನೆನಪು ಮಾಡಿಕೊಂಡೇ ನಾನು ಸಮಾಧಾನಪಡಬೇಕಾಗಿದೆ.

ಕೊನೆಯದಾಗಿ ನಾನು ಒಂದು ಮಾತು ಹೇಳಿದರೆ ತಪ್ಪಾಗಲಾರದು. ಒಮ್ಮೆ ನಾನು ನಮ್ಮ ತಂದೆಯವರ ಮುಂದೆ ಓದುತ್ತಿದ್ದಾಗ, ಅವರು ಮಧ್ಯೆ ಒಂದು ನಿಮಿಷ ನಿಲ್ಲಿಸುವಂತೆ ತಿಳಿಸಿದರು. ನಂತರ ನೋಡು ಮಗು, ನಿನ್ನ ಬರವಣಿಗೆಯಲ್ಲಿ Emotion ಇದೆ, ಇದು ಒಬ್ಬರ ಬರವಣಿಗೆಯಲ್ಲಿ ಬಹಳ ಮುಖ್ಯ, ನೀನು ಮುಂದೆ ಒಳ್ಳೆಯ ಲೇಖಕನಾಗುತ್ತೀಯ ಎಂದಾಗ ಕಣ್ಣಲ್ಲಿ ನೀರು ಬಂತು. ಹಿರಿಯರ ಮಾತು ನಿಜವಾಗುತ್ತದಂತೆ. ಕಾಲ ಸರಿದಂತೆ ಅಣ್ಣ ದಿವಂಗತರಾದ ಮೇಲೆ 'ಅಣ್ಣನ ಸ್ಮರಣೆ' ಬರೆದೆ. ಅದಕ್ಕೆ ಬಂದ ಪ್ರತಿಕ್ರಿಯೆಯಿಂದ ಹರ್ಷಿತನಾದೆ. ಇಂದು ಒಳ್ಳೆಯ ಲೇಖಕನೆಂದು ಹೆಸರು ಪಡೆದಿದ್ದೇನೆ. ಇದಕ್ಕೆ ನನ್ನ ಸಾಧನೆಗಿಂತ ಅಣ್ಣನ ಆಶೀರ್ವಾದವೇ ಮುಖ್ಯ ಅನ್ನಿಸುತ್ತಿದೆ.

## ‘ಗಾಂಧೀಜಿಯ ಕನಸು - ನಜೀರರಿಂದ ನನಸು’

ಈ ಪುಸ್ತಕ ಜಿಲ್ಲಾ ಪರಿಷತ್ತು ಮತ್ತು ಮಂಡಲಪಂಚಾಯಿತಿಗೆ ಸಂಬಂಧಿಸಿರುವುದರಿಂದ ಪ್ರತಿಯೊಬ್ಬ ರೈತರೂ ಗಮನಿಸಿದರೆ ಒಳ್ಳೆಯದು. ಗಾಂಧೀಜಿಯವರ ಕನಸು ಏನಿತ್ತು ಅದನ್ನು ಈ ಪುಸ್ತಕದಲ್ಲಿ ಸರಳವಾಗಿ ಪ್ರತಿಯೊಬ್ಬ ಗ್ರಾಮಸಥರೂ ತಿಳಿದುಕೊಳ್ಳುವಂತೆ ಚರ್ಚಿಸಲಾಗಿದೆ ಹಾಗೂ ಅನಕ್ಷರಸ್ಥರೂ ಕೂಡ ಅಕ್ಷರಸ್ಥರಿಂದ ಈ ಪುಸ್ತಕದ ಸಾರಾಂಶವನ್ನು ತಿಳಿದರೆ ಈ ಪುಸ್ತಕದ ಉದ್ದೇಶ ಸಾರ್ಥಕವಾಗುತ್ತದೆ. ಸರ್ಕಾರ ಈಗ ಜನಗಳ ಕೈ ಸೇರಿದೆ. ಆದ್ದರಿಂದ ಈ ತತ್ವವನ್ನು ಜನತೆ ಅರ್ಥಮಾಡಿ ಕೊಂಡರೆ ಈ ಕಾಯಿದೆ ಸಾರ್ಥಕವಾಗುತ್ತದೆ. ಇದಲ್ಲದೆ ಜಿಲ್ಲಾ ಪರಿಷತ್ತು ಹಾಗೂ ಮಂಡಲ ಪಂಚಾಯಿತಿಗಳಲ್ಲಿ ಆಡಳಿತ ನಡೆಸತಕ್ಕಂಥ ಅಧಿಕಾರವರ್ಗವೂ ಸಹ ಈ ಪುಸ್ತಕದಿಂದ ಸಹಾಯ ಪಡೆಯಬಹುದಾಗಿದೆ. ಅಲ್ಲದೆ, ಚುನಾಯಿವಾಗಿ ಗೆದ್ದು ಅಧಿಕಾರ ವಹಿಸಿಕೊಂಡವರಿಗೂ ಮಾರ್ಗದರ್ಶಕವಾಗಿ ಎಚ್ಚರಿಕೆಯ ತೋರುಬೆರಳ ಗುರುವೂ ಆಗುತ್ತದೆ.

**- ಕುವೆಂಪು**

**26-4-1988**

ಗಾಂಧೀಜಿಯ ಕನಸು : ನಜೀರರಿಂದ ನನಸು ಎಂಬ ಪುಸ್ತಕದಲ್ಲಿ ಜಿಲ್ಲಾ ಪರಿಷತ್ತು ಮಂಡಲ ಪಂಚಾಯಿತಿ, ಗ್ರಾಮಸಭೆ ಇತ್ಯಾದಿ ಸಂಘಗಳ ಮುಖಾಂತರ ರಾಮಣ್ಣ ಅಮ್ಮಾತ ಜಮೀನ್ದಾರರಿಗೂ, ರಂಗಣ್ಣ ಎಂಬಾತ ರೈತನಿಗೂ ಸಹಸ್ರಾರು ಪ್ರಶ್ನೋತ್ತರಗಳಿಂದ ಎಲ್ಲ ವಿಷಯಗಳನ್ನು ಸಂಗ್ರಹಿಸಿ ವಿವರಿಸಿದ್ದಾರೆ. ಈ ಪುಸ್ತಕ ಜನಕ್ಕೆ ತಲುಪಿ ಸಾರ್ಥಕವಾಗಬೇಕಾದರೆ ವಿದ್ಯಾಭ್ಯಾಸ ಇಲಾಖೆಯವರು ಪ್ರತಿಯೊಂದು ಮಿಡಲ್ ಸ್ಕೂಲ್ ಮತ್ತು ಹೈಸ್ಕೂಲುಗಳಲ್ಲಿ ಪಠ್ಯ ಪುಸ್ತಕವನ್ನಾಗಿ ಇಟ್ಟರೆ ಪ್ರತಿಯೊಂದು ಮಿಡಲ್ ಸ್ಕೂಲ್ ಮತ್ತು ಹೈಸ್ಕೂಲುಗಳಲ್ಲಿ ಪಠ್ಯ ಪುಸ್ತಕವನ್ನಾಗಿ ಇಟ್ಟರೆಪ್ರತಿಯೊಂದು ಮನೆಯಲ್ಲೂ ಸಹ ಆ ಪುಸ್ತಕವನ್ನು ಓದುತ್ತಲೇ ಇರುತ್ತಾರೆ. ಇದು ಎಲ್ಲರ ಹಸ್ತಗತವಾಗು

ತ್ತದೆ. ಇದಲ್ಲದೆ ರಾಜ್ಯದಲ್ಲಿರ ತಕ್ಕಂಥ ಎಲ್ಲ ಗ್ರಂಥಾಲಯಗಳಲ್ಲೂ ಇರುವಂತಾಗ ಬೇಕು. ಈ ಪುಸ್ತಕವನ್ನು ಜನಸಾಮಾನ್ಯರೂ ಓದುತ್ತಾರೆ. ಉಪಾಧ್ಯಾಯ ರಿಗೂ ಚೆನ್ನಾಗಿ ಶಿಕ್ಷಣವಾಗುತ್ತದೆ' ಈ ರೀತಿ ವಿದ್ಯಾಭ್ಯಾಸ ಇಲಾಖೆಯಲ್ಲಿ ಪುಸ್ತಕ ಇರಿಸಬೇಕೆಂದು ಮುಖ್ಯಮಂತ್ರಿಗೂ, ಅಬ್ದುಲ್ ನಜೀರ್ ಸಾಹೇಬರು ವಿಶ್ವ ಪ್ರಯತ್ನಪಟ್ಟು ಈ ಪುಸ್ತಕವನ್ನು ವಿದ್ಯಾಭ್ಯಾಸ ಇಲಾಖೆಯಿಂದ ಮಾಡಿಸಿದರೆ ಈ ಪುಸ್ತಕ ಸಾರ್ಥಕವಾಗುತ್ತದೆ ಎಂಬುದು ನಮ್ಮ ಖಚಿತವಾದ ಅಭಿಪ್ರಾಯ.

**- ತಗಡೂರು ರಾಮಚಂದ್ರರಾವ್**

**29-6-87**

ಕರ್ನಾಟಕ ಜಿಲ್ಲಾ ಪರಿಷತ್ತು ಮತ್ತು ಮಂಡಲ ಪಂಚಾಯ್ತಿಗಳ ವ್ಯಾಪ್ತಿ ಸ್ವರೂಪ ಉದ್ದೇಶಗಳನ್ನು ಕುರಿತು ಶ್ರೀ ಛಾಯಾಪತಿಯವರ ಈ ಪುಸ್ತಕವನ್ನು ನಾನು ಆಸಕ್ತಿಯಿಂದ ಓದಿದ್ದೇನೆ. ಅದು ಮಾಹಿತಿಗಳಿಂದ ತುಂಬಿದೆ; ಅದು ಮಾತನ್ನೇ ಬಳಸಿರುವ ಬರವಣಿಗೆ ಸರಳವಾಗಿದೆ; ಸಂಭಾಷಣೆ ಮೂಲಕದ ನಿರೂಪಣೆ ಸ್ವಾರಸ್ಯವಾಗಿದೆ. ಸಾಮಾನ್ಯ ಅಕ್ಷರಸ್ಥರನ್ನೂ ಮುಟ್ಟಬೇಕೆಂಬ ಉದ್ದೇಶದಲ್ಲಿ ಲೇಖಕರು ಸಾಕಷ್ಟು ಸಫಲರಾಗಿದ್ದಾರೆ.

**- ಹಾಮಾ ನಾಯಕ**

**24-6-87**

ಶ್ರೀ ಟಿ.ಎಸ್. ಛಾಯಾಪತಿ ಬರೆದಿರುವ 'ಗಾಂಧೀಜಿಯ ಕನಸು - ನಜೀರರಿಂದ ನನಸು' ಎಂಬ ಪುಸ್ತಕವನ್ನು ಅಮೂಲಾಗ್ರವಾಗಿ ಓದಿದ್ದೇನೆ, ಓದಿ ಸಂತಸಗೊಂಡಿದ್ದೇನೆ ಜಿಲ್ಲಾ ಪರಿಷತ್ತಿನ ಎಲ್ಲ ವಿಷಯಗಳನ್ನು ಒಳಗೊಂಡ ಈ ಪುಟ್ಟ ಪುಸ್ತಕ ಸಂಭಾಷಣೆ ರೂಪವಲ್ಲದ್ದು ಕಥೆ, ಕಾದಂಬರಿಯಂತೆ ಹೃದಯಸ್ಪರ್ಶಿಯಾಗಿದೆ. ಇದರ ಶೈಲಿ ಸರಳವಾಗಿದೆ, ಸುಲಭವಾಗಿದೆ, ಶಕ್ತಿಯುತವಾಗಿಯೂ ಇದೆ. ಪ್ರತಿಯೊಂದು ಹಳ್ಳಿಯ ಪುಸ್ತಕ ಭಂಡಾರದಲ್ಲಿಯೂ ಅತ್ಯಗತ್ಯವಾಗಿ ಇರಬೇಕಾದ ಪುಸ್ತಕ ಇದು. ಜಿಲ್ಲಾ ಪರಿಷತ್ತಿನ ಪ್ರತಿಯೊಬ್ಬ ಅಧಿಕಾರಿಯೂ, ಸದಸ್ಯರೂ ಇದರ ಮೇಲೆ ಕಣ್ಣಾಡಿಸುವುದು ಉಪಯುಕ್ತ ಎಂದು ಹೇಳಿದರೆ ತಪ್ಪಾಗಲಾರದು.

**- ತ.ಸು. ಶಾಮರಾಯ**

ಜನಸಾಮಾನ್ಯರು ಓದಿ ತಿಳಿಯುವಂತೆ, ಸರ್ಕಾರದ ಉದ್ದೇಶ ಸಫಲವಾಗುವಂತೆ, ಸಾರ್ಥಕವಾಗುವಂತೆ ಮಾಡಿರುವುದು ಈ ಪುಸ್ತಕದ ವೈಶಿಷ್ಟ್ಯ. ಹಿಂದಿದ್ದ ಹಳ್ಳಿಗಾಡಿನ ವ್ಯವಸ್ಥೆಯೊಂದಿಗೆ ಇಂದು ಸರ್ಕಾರ ರೂಪಿಸಿರು ಯೋಜನೆಗಳನ್ನು ಹೋಲಿಸಿ, ಇಂದಿನ ವ್ಯವಸ್ಥೆ ಹಿಂದಿನವರ ಉತ್ತಮಾಂಕಗಳನ್ನು ಹೇಗೆ ಅಳವಡಿಸಿಕೊಳ್ಳಬೇಕು ಮತ್ತು ಕೆಲವು

ವಿಷಯಗಳಲ್ಲಿ ಹೇಗೆ ಅಳವಡಿಸಿಕೊಂಡಿದೆ ಎಂಬುದರ ಬಗ್ಗೆ ಕಕ್ಷಿರಣವನ್ನು ಇಲ್ಲಿ ಬೀರಲಾಗಿದೆ. ಬಹು ಪ್ರಯಾಸದಿಂದ ಅನೇಕ ಅಪೂರ್ವ ಮಾಹಿತಿಗಳನನು ಒಳಗೊಂಡಿರುವ ಈ ಉಪಯುಕ್ತ ಕೃತಿ ಕರ್ನಾಟಕದ ಹಳ್ಳಿಗಳ ಪ್ರತಿ ಮನೆ ಮನೆಯಲ್ಲೂ ಇರಬೇಕಾದಂಥದ್ದು. ಇಷ್ಟು ಸೊಗಸಾದ ಕೃತಿಯನ್ನು ರಚಿಸಿದ್ದಕ್ಕಾಗಿ ಲೇಖಕರು ಅಭಿನಂದನಾರ್ಹರು.

-ಚದುರಂಗ

ಇದೊಂದು ತುಂಬ ಸಮಯೋಚಿತವಾದ ಗ್ರಂಥ. ಅಧಿಕಾರವನ್ನು ವಿಕೇಂದ್ರಿಕರಣಗೊಳಿಸಿ ಪ್ರಜೆಗಳಿಂದ ಪ್ರಜೆಗಳಿಗಾಗಿ ಅಧಿಕಾರವೆಂಬ ಪ್ರಜಾಪ್ರಭುತ್ವದ ಮೂಲಭೂತ ಅಂಶವನ್ನು ಕಾರ್ಯಗತಗೊಳಿಸುವ ಮಾರ್ಗದಲ್ಲಿ ಕರ್ನಾಟಕ ದಿಟ್ಟ ಹೆಜ್ಜೆಯನ್ನು ಕೈಗೊಂಡಿರುವ ಈ ಸಂದರ್ಭದಲ್ಲಿ ಇದರ ಬೆಳವಣಿಗೆಯ ದಿಕ್ಕನ್ನು ಕಂಡು ಆತಂಕಗೊಳ್ಳುವಂತಾಗಿದೆ. ಇದು ಹಳ್ಳಿಹಳ್ಳಿಗಳಲ್ಲಿ ಪಕ್ಷ, ಜಾತಿ ಕೋಮುಗಳ ರಾಜಕೀಯವನ್ನು ಬಿತ್ತಿ ಬೆಳೆಯುವ ಸಮೃದ್ಧ ಸಾಧನವಾಗದೆ ಸಮಷ್ಟ ಹಿತವನ್ನು ಕೈಗೊಡಿಸುವಂತಹ ರೀತಿಯಲ್ಲಿ ಬೆಳೆದು ಗಾಂಧೀಜಿಯ ಕನಸು ನನಸಾಗಬೇಕಾದರೆ ಜನ ಸಾಮಾನ್ಯರು ವಿಚಾರವಂತರಾಗಿ ಎಚ್ಚರಗೊಳ್ಳುವುದು ಅವಶ್ಯಕ. ಹಾಗೆ ಜನಮನವನ್ನು ಮುಟ್ಟಿ ಅದನ್ನು ಜಾಗೃತಗೊಳಿಸುವ ಒಂದು ಒಳ್ಳೆಯ ಪ್ರಯತ್ನ ಇಲ್ಲಿದೆ. ತೀರಾ ಸರಳವಾದ ಭಾಷೆಯಲ್ಲಿ ಎಲ್ಲರಿಗೂ ತಿಳಿಯುವಂತೆ ಮಂಡಲ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ, ಜಿಲ್ಲಾ ಪರಿಷತ್ತು ಇವುಗಳ ಸ್ವರೂಪ, ವ್ಯಾಪ್ತ, ಕಾರ್ಯ ವಿಧಾನಗಳನ್ನು ಎಳೆ ಎಳೆಯಾಗಿ ಬಿಡಿಸಿ ತೋರಿಸಲಾಗಿದೆ ಈ ಗ್ರಂಥದಲ್ಲಿ. ಇದು ಸಂಭಾಷಣೆಯ ರೂಪದಲ್ಲಿರುವುದರಿಂದ ಆತ್ಮೀಯವಾಗಿ ಓದಿಸಿಕೊಳ್ಳುತ್ತದೆ. ಬುದ್ಧಿಗೆ ಹೊರೆಯಾಗದ ರೀತಿಯಲ್ಲಿ ಗ್ರಾಮ ಸ್ವರಾಜ್ಯದ ಸಮಗ್ರ ಕಲ್ಪನೆಯನ್ನು ಜನ ಸಾಮಾನ್ಯರಿಗೂ ಇದು ತಂದು ಕೊಡುತ್ತದೆ. ಇದರ ಪ್ರಯೋಜನವನ್ನು ಹಳ್ಳಿ ಹಳ್ಳಿಗೂ ಪಡೆಯುವಂತಾಗಲಿ ಎಂದು ಹಾರೈಸುತ್ತೇನೆ. ಇಂತಹ ಉಪಯುಕ್ತವನ್ನು ಕೊಟ್ಟು ಶ್ರೀ ಟಿ.ಎಸ್. ಛಾಯಾಪತಿ ಅವರನ್ನು ಅಭಿನಂದಿಸುತ್ತೇನೆ.

- ಎಚ್. ತಿಪ್ಪೇರುದ್ರಸ್ವಾಮಿ

ಮಿತ್ರರಾದ ಶ್ರೀ ಛಾಯಾಪತಿಯವರು ಬರೆದು ಪ್ರಕಟಿಸಿರುವ ಈ ಪುಸ್ತಕ ಚೆನ್ನಾಗಿದೆ. ಕರ್ನಾಟಕದಲ್ಲಿ ಜಾರಿಗೆ ಬಂದಿರುವ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯಿತಿ ಕಾನೂನಿನ ಸಾರಭೂತ ಅಂಶಗಳನ್ನು ಸಂಭಾಷಣೆಯ ರೂಪದಲ್ಲಿ

ಸರಳವಾಗಿ ನಿರೂಪಣೆ ಮಾಡಿದ್ದಾರೆ. ಕರ್ನಾಟಕದ ಜನರು ಇದರಿಂದ ಪ್ರಯೋಜನ ಪಡೆಯಲೆಂದು ಆಶಿಸುತ್ತೇನೆ.

- ಬಿ.ಆರ್. ಪ್ರಾಣೇಶರಾವ್

24-6-87

ಕರ್ನಾಟಕ ಸರ್ಕಾರ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯಿತಿಗಳ ವ್ಯವಸ್ಥೆಯನ್ನು ಜಾರಿಗೆ ತಂದು ಆಡಳಿತ ಕ್ಷೇತ್ರದಲ್ಲಿ ಒಂದು ಕ್ರಾಂತಿಕಾರಕ ಹೆಜ್ಜೆಯನ್ನಿಟ್ಟಿದೆ. ಆಡಳಿತದ ಸೂತ್ರವನ್ನು ಪ್ರಜೆಗಳ ಕೈಗೆ ನೀಡಿ ಒಂದು ವಿನೂತನ ಪ್ರಯೋಗವನ್ನು ನಡೆಸಿದೆ. ಜಿಲ್ಲಾ ಪರಿಷತ್ತು ಮತ್ತು ಮಂಡಲ ಪಂಚಾಯಿತಿಯು ಅಸ್ತಿತ್ವಕ್ಕೆ ಬಂದ ಸಂದಿಗ್ಧ ಸಮಯದಲ್ಲಿ ಅವುಗಳ ರೂಪ ರೇಖೆಗಳನ್ನು ಜನತೆಗೆ ಮನದಟ್ಟು ಮಾಡಿಕೊಳ್ಳುವುದು ತೀರ ಅಗತ್ಯ. ಮಿತ್ರರಾದ ಛಾಯಾಪತಿಯವರು ಈ ನಿಟ್ಟಿನಲ್ಲಿ 'ಗಾಂಧೀಜಿಯ ಕನಸು - ನಜೀರರಿಂದ ನನಸು' ಎಂಬ ಶೀರ್ಷಿಕೆಯ ಒಂದು ಪರಿಚಯಾತ್ಮಕ ಕೃತಿಯನ್ನು ಅರ್ಪಿಸುತ್ತಿದ್ದಾರೆ. ರಾಮಣ್ಣ ಮತ್ತು ರಂಗಣ್ಣ ಎಂಬ ಎರಡು ಪಾತ್ರಗಳ ನಡುವೆ ಅತ್ಯಂತ ಕೌಶಲ್ಯದಿಂದ ಸಂಭಾಷಣೆಯನ್ನು ಹೇಳಿ, ಹೇಳ ಬೇಕಾದ ವಿಷಯವನ್ನು ಅತ್ಯಂತ ಸರಳವ, ನೇರವೂ ಆದ ರೀತಿಯಲ್ಲಿ ನಿರೂಪಿಸಿದ್ದಾರೆ. ಜಿಲ್ಲಾ ಪರಿಷತ್ತಿನ ವ್ಯಾಪ್ತಿ, ಮಂಡಲ ಪಂಚಾಯಿತಿಯ ಜವಾಬ್ದಾರಿ ಇವುಗಳ ಹಿನ್ನೆಲೆಯಲ್ಲಿ ಹುದುಗಿರುವ ಅನೇಕ ಚಿಂತಕರ ದೃಷ್ಟಿ ಧೋರಣೆ ಮುಂತಾದುವನ್ನು ತುಂಬ ಸಮರ್ಥವಾದ ರೀತಿಯಲ್ಲಿ ತಂದಿದ್ದಾರೆ. ಈಗಾಗಲೇ ಎರಡು ಮೂರು ಕೃತಿಗಳನ್ನು ರಚಿಸಿ ಹೆಸರು ಮಾಡಿರುವ ಛಾಯಾಪತಿಯವರು ಇಂಥ ಒಂದು ವಿಚಾರಾತ್ಮಕವಾದ ಕೃತಿಯನ್ನು ಕನ್ನಡ ಜನತೆಗೆ ನೀಡಿ ಅವರ ಅಭಿನಂದನೆಗೆ ಪಾತ್ರರಾಗಿದ್ದಾರೆ. ಈ ಕೃತಿ ನಮ್ಮ ರಾಜ್ಯದ ಪ್ರತಿಯೊಬ್ಬ ಜಿಲ್ಲಾ ಪರಿಷತ್ತು ಮತ್ತು ಮಂಡಲ ಪಂಚಾಯಿತಿ ಸದಸ್ಯರ ಕೈಲಿ ಒಂದು ಕೈಪಿಡಿಯಾಗಿ ಇರಬೇಕಾದದ್ದು ಅತ್ಯಗತ್ಯ. ಏಕೆಂದರೆ ಈ ಯೋಜನೆಗಳ ಯಶಸ್ಸು ನಮ್ಮ ಸದಸ್ಯರನ್ನು ಅವಲಂಬಿಸಿರುತ್ತದೆ. ಅವರು ತಾವು ಪ್ರತಿನಿಧಿಸುವ ಸಂಸ್ಥೆಯ ಆಳ ಅಗಲಗಳನ್ನು ಸರಿಯಾಗಿ ಅರ್ಥಮಾಡಿ ಕೊಂಡರೆ ಸಾರ್ಥಕವಾದ ಸೇವೆ ಸಲ್ಲಿಸಲು ಅನುಕೂಲವಾಗುತ್ತದೆ.

- ಜೀ. ಶಂ. ಪರಮಶಿವಯ್ಯ

30-6-1987

# ಅಣ್ಣನ ಸ್ಮರಣೆ

ಶ್ರೀ ಟಿ.ಎಸ್.ಛಾಯಾಪತಿಯವರು ನನ್ನ ಪೂಜ್ಯ ಗುರುಗಳಾದ ದಿವಂಗತ ಶ್ರೀ ತ.ಸು. ಶಾಮರಾಯರ ಪುತ್ರ. ಅವರ ತಂದೆ ನನ್ನಂತಹ ನೂರಾರು ಜನರಿಗೆ ವಿದ್ಯಾದಾನ ಮಾಡಿದ್ದವರು. ಅನೇಕ ವಿದ್ಯಾರ್ಥಿಗಳನ್ನು ಅವರಲ್ಲಿ ಖ್ಯಾತನಾಮರೂ, ಅಷ್ಟೇನೂ ಖ್ಯಾತ ನಾಮರಲ್ಲದವರೂ ಇದ್ದಾರೆ. ತಮ್ಮ ಮಕ್ಕಳಿಗಿಂತ ಹೆಚ್ಚು ಪ್ರೀತಿ ವಿಶ್ವಾಸಗಳನ್ನು ತೋರಿಸಿ ಮುಂದಕ್ಕೆ ತಂದಿದ್ದರು. ಅವರ ಶಿಷ್ಯ ಪ್ರೇಮದ ಸವಿಯನ್ನು ದೀರ್ಘಕಾಲ ಉಂಡವನು ನಾನು. ಮೈಸೂರು ವಿಶ್ವವಿದ್ಯಾನಿಲಯವು ಸದ್ಯದಲ್ಲೇ ಪ್ರಕಟಿಸಲಿರುವ ಒಂದು ಕಿರು ಹೊತ್ತಗೆಯಲ್ಲಿ ನಾನು ಅವರ ಔದಾರ್ಯ. ವಿದ್ವತ್ತುಗಳನ್ನು ಪರಿಚಯಿಸಲು ಪ್ರಯತ್ನಿಸಿದ್ದೇನೆ.

ಶ್ರೀ ಛಾಯಾಪತಿಯವರು ತಮ್ಮ ತಂದೆಯವರ ಜೀವನದ ಕೆಲವು ಘಟನೆಗಳನ್ನು, ಅವರ ನಿಜ ಜೀವನದ ನಡೆನುಡಿಗಳಲ್ಲಿ ಮಾರ್ಗದರ್ಶನವಾದಂಥವನ್ನು, ಸಂಗ್ರಹಿಸಿ ಪ್ರಕಟಿಸುತ್ತಿದ್ದಾರೆ. ಇವು ಈ ತಲೆಮಾರಿನವರಿಗಲ್ಲದೆ ಮುಂದಿನ ತಲೆಮಾರಿನವರಿಗೂ ಉಪಯುಕ್ತವಾಗುತ್ತದೆ ಎಂಬುದು ನನ್ನ ನಂಬಿಕೆ. ಹೀಗಾಗಿ, ಇಂತಹ ಅಪರೂಪದ ಕೃತಿಯನ್ನು ಸಂಕಲಿಸುವುದಲ್ಲದೆ, ಅದನ್ನು ಪ್ರಕಟಿಸುತ್ತಿರುವ ಶ್ರೀ ಛಾಯಾಪತಿಯವರಿಗೆ ಒಳ್ಳೆಯ ರೀತಿಯಲ್ಲಿ, ಪ್ರಾಮಾಣಿಕರಾಗಿದ್ದು ನಾಲ್ಕು ಜನರಿಗೆ ಉಪಕಾರಿಗಳಾಗಿ ಬಾಳಬೇಕು ಎಂಬ ಅಪೇಕ್ಷೆಯುಳ್ಳವರೆಲ್ಲ ಕೃತಜ್ಞರಾಗಿರಬೇಕು ಎಂಬುದು ನನ್ನ ಬಯಕೆ.

ಶ್ರೀ ಛಾಯಾಪತಿಯವರಿ ಶುಭವನ್ನು ಕೋರುತ್ತೇನೆ.

ಪ್ರಭುಶಂಕರ : ಗುರುನಮನ

# ಅಣ್ಣನ ಸ್ಮರಣೆ

ಪ್ರೊ. ತ.ಸು. ಶಾಮರಾಯರು ಮಾನವೀಯತೆಯ ಸಾಕಾರಮೂರ್ತಿ ಆಗಿದ್ದರು. ಅವರು ತಮ್ಮ ಅಣ್ಣ ಪ್ರೊ. ತಳುಕಿನ ವೆಂಕಣ್ಣಯ್ಯ ಅವರ 'ಆದರ್ಶ'ದ ದಾರಿಯನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡು ನಡೆದವರು. ಪ್ರೊ. ತ.ಸು. ಶಾಮರಾಯರ ಮಕ್ಕಳಾದ ಶ್ರೀ ಟಿ.ಎಸ್. ಛಾಯಾಪತಿ ತಮ್ಮ ತಂದೆಯವರ ವಿಶಿಷ್ಟವೂ ಮಾನವೀಯವೂ ಪ್ರಾಮಾಣಿಕವೂ ಆದ ಬದುಕಿನ ಹತ್ತಾರು ಮುಖಗಳನ್ನು 'ಅಣ್ಣನ ಸ್ಮರಣೆ'ಯ ಮೂಲಕ ಕಂಡಿದ್ದಾರೆ ಅಂಥ ಹತ್ತಾರು ಮುಖಗಳನ್ನು ಶ್ರೀ ಛಾಯಾಪತಿ ನಮ್ಮ ಮುಂದೆ ಹರಡಿದ್ದಾರೆ. ಇಲ್ಲಿಯ ಸ್ಮರಣೆಗಳ ಮೂಲಕ ಬದುಕಿನ ಅನಂತ ಮೌಲ್ಯಗಳು ಅನಾವರಣಗೊಳ್ಳುತ್ತವೆ. ಹಿರಿಯ ಜೀವ ಶ್ರೀ ತ.ಸು. ಶಾಮರಾಯರು ನಂಬಿದ್ದ ಬದುಕಿನ 'ಸತ್ಯ'ಗಳು ಅಂದಿಗೆ ಮಾತ್ರ ಸಲ್ಲುವಂಥವಲ್ಲ, ಇಂದಿಗೂ ಅವು ಸಲ್ಲುತ್ತವೆ. ಬದುಕು ದೊಡ್ಡದು, ಅದೊಂದು ಸತ್ಯಸೂರ್ಯ. ಆ ಬದುಕನ್ನು ನಾವು ವಿನಯದಿಂದ, ಪ್ರೀತಿಯಿಂದ, ಗೌರವದಿಂದ ಪ್ರಾಂಜಲ ಮನಸ್ಸಿನಿಂದ ಸ್ವೀಕರಿಸಬೇಕೆಂಬ 'ಶಾಶ್ವತ' ಸತ್ಯವನ್ನು ನಮ್ಮ ಮುಂದೆ ಇಲ್ಲಿಯ ಪ್ರಸಂಗಗಳು ಅನಾವರಣಗೊಳಿಸುತ್ತವೆ. ಲೇಖಕರಾದ ಟಿ.ಎಸ್. ಛಾಯಾಪತಿ ಅವರು ಮೂಡಿಸಿರುವ ಇಲ್ಲಿಯ ಪುಟ್ಟ ಪುಟ್ಟ ಪ್ರಸಂಗಗಳನ್ನು ಒಮ್ಮೆ ಓದಿ ಮರೆಯಲು ಎಂದಿಗೂ ನಮಗೆ ಅವಕಾಶ ಮಾಡಿಕೊಡುವುದಿಲ್ಲ. ಅವು ನಮ್ಮ 'ಸ್ಮರಣೆ'ಯಲ್ಲಿ ಉಳಿದು ಬಿಡುತ್ತವೆ. ಇಲ್ಲಿಯ ಪ್ರಸಂಗಗಳನ್ನು ತುಸುವೇ ಓದುತ್ತ, ಧ್ಯಾನಿಸುತ್ತ, ವಾಚಿಸುತ್ತ, ನಮ್ಮೊಳಗೆ ಕರಗಿಸಿಕೊಳ್ಳಬೇಕು. ಅಂಥ ಪರಿಣಾಮವನ್ನು ಈ ಪುಸ್ತಕ ಉಂಟು ಮಾಡುತ್ತದೆ! ಬದುಕಲು ಧೈರ್ಯ ತುಂಬುತ್ತದೆ!!

ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ : ಬೆನ್ನುಡಿ

# ಮೌಲ್ಯಗಳ ದಾಖಲೀಕರಣ

ಕನ್ನಡ ನಾಡಿನಲ್ಲಿ ಕನ್ನಡ ಪುಸ್ತಕಗಳ ಪ್ರಕಾಶಕರು ವಿರಳ; ಅವರಲ್ಲಿ ಬರವಣಿಗೆ ಮಾಡುವವರು ಇನ್ನೂ ಕಡಿಮೆ. ಈ ಬೆರಳೆಣಿಕೆಯವರಲ್ಲಿ ಟಿ.ಎಸ್. ಛಾಯಾಪತಿ ಒಬ್ಬರು.

ಅವರ ತಂದೆ ಪ್ರೊ. ತ.ಶು. ಶಾಮರಾಯರು ಪ್ರಸಿದ್ಧ ವಿದ್ವಾಂಸ ಲೇಖಕ. ತ.ಸು.ಶಾ. ಅವರ ಹಿರಿಯಣ್ಣ ಪ್ರೊ. ಟಿ.ಎಸ್. ವೆಂಕಣ್ಣಯ್ಯ ಕನ್ನಡದ ಪ್ರಾತಃಸ್ಮರಣೀಯರಲ್ಲಿ ಒಬ್ಬರು. ಇವರ ಹೆಸರಿನಲ್ಲಿ ತ.ಸು.ಶಾ. 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ' ಎಂಬ ಪ್ರಕಾಶನ ಸಂಸ್ಥೆಯನ್ನು ಐದು ದಶಕಗಳ ಹಿಂದೆ ಪ್ರಾರಂಭಿಸಿದರು. ಇದನ್ನು ಮಗ ಛಾಯಾಪತಿ ಅವರಿಗೆ ವಹಿಸಿದ ಮೇಲೆ ಛಾಯಾಪತಿ ಇದನ್ನು ಹೆಚ್ಚಿನ ಪ್ರವರ್ಧಮಾನಕ್ಕೆ ತಂದಿದ್ದಾರೆ.

ಛಾಯಾಪತಿ ಪ್ರಕಾಶಕ, ಲೇಖಕ. ಇತ್ತೀಚಿನ ಅವರ ಕೃತಿ 'ಅಣ್ಣನ ಸ್ಮರಣೆ'. ಈ ಶೀರ್ಷಿಕೆ ಸ್ವಯಂಸೂಚಿ ಆಗಿದೆ. ಇದರಲ್ಲಿ ಅವರು ಒಂದು ನೂರು ಪ್ರಸಂಗಗಳನ್ನು ಪೋಣಿಸಿದ್ದಾರೆ. ಆಯ್ದ ಹೂವುಗಳನ್ನು ಕೂಡಿಸಿ ಮಾಲೆ ಕಟ್ಟಿದಂತಿದೆ ಅವರ ಕೆಲಸ. ಇಲ್ಲಿನ ಪ್ರಸಂಗಗಳನ್ನು ನೋಡಿದವರಿಗೆ 'ಇಂಥವರೂ ಇದ್ದರೇ?' ಎಂದು ಅನುಮಾನ ಉಂಟಾಗುವುದು ಸಹಜ. ತ.ಸು.ಶಾ. ಅಪ್ಪಟ ಮಾನವತಾಜೀವಿ. ನಿರ್ಜಾತಿ ಮನುಷ್ಯ ಅವರು ಮಾನವೀಯ ಮೌಲ್ಯಗಳ ಅಮೂಲ್ಯ ಸಿದ್ಧಿ ಆಗಿದ್ದರು. ಅವರ ವಿಶಾಲ ಮನೋಭಾವ, ಶಿಷ್ಯ ವಾತ್ಸಲ್ಯ, ಕಷ್ಟದಲ್ಲಿ ಇದ್ದ ವಿದ್ಯಾರ್ಥಿಗಳಿಗೆ ಹಣಕಾಸಿನ ನೆರವು, ಇತ್ಯಾದಿ ಪ್ರಸಂಗಗಳು ಕೃತಿಯಲ್ಲಿವೆ. ಈಗಿನ ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ, ಪ್ರಭುಶಂಕರ, ಮಾಜಿ ಮುಖ್ಯಮಂತ್ರಿ ಬಂಗಾರಪ್ಪ, ದಿವಂಗತ ಮಲ್ಲಿಕಾರ್ಜುನ ಸ್ವಾಮಿ, ಪ್ರೊ. ಸುಜನಾ, ಅಬ್ದುಲ್ ನಜೀರ್‌ಸಾಬ್, ಹಾ.ಮಾ. ನಾಯಕ್, ಎಚ್.ಎಸ್. ನಂಜೇಗೌಡ - ಅವರ ಶಿಷ್ಯಕೋಟಿಯಲ್ಲಿ ಕೆಲವು ಗಣ್ಯರು.

ಮುಖ್ಯಮಂತ್ರಿ ಬಂಗಾರಪ್ಪನವರು ಪ್ರೊ. ತ.ಸು.ಶಾ. ಅವರ ಮನೆ ಬಾಗಿಲಿಗೆ ಬಂದು 'ಸರ್, ಸರ್ಕಾರ ತಮ್ಮ ಮನೆಯ ಬಾಗಿಲಿಗೆ ಬಂದಿದೆ... ತಮಗೇನು ಬೇಕು,

**ಕೆ.ಎಸ್. ಭಗವಾನ್ : ಪ್ರಜಾವಾಣಿ**

ಹೇಳಿ' ಎಂದು ಕೇಳಿದರು. ತ.ಸು.ಶಾ. ಕೊಟ್ಟ ಉತ್ತರ ಅವರ ದೊಡ್ಡ ವ್ಯಕ್ತಿತ್ವವನ್ನು ತೋರಿಸುತ್ತದೆ. 'ಮಗು (ಪು. 41) ದೇವರು ನನಗೆ ಅನ್ನ ಬಟ್ಟೆ ಕೊಟ್ಟಿದ್ದಾನೆ. ನನಗೇನೂ ಬೇಡ, ಆದರೆ ನೀನು ಮುಖ್ಯಮಂತ್ರಿ, ನನಗೆ ವಿದ್ಯಾರ್ಥಿ ಎಂದು ಜನಗಳಿಗೆ ತಿಳಿದಿರುವುದರಿಂದ ಏನಾದರೂ ಸಹಾಯ ಕೇಳಲು ನನ್ನ ಹತ್ತಿರ ಬರಬಹುದು. ಅಂಥವರಲ್ಲಿ ಅರ್ಹರು ಎಂದು ಕಂಡು ಬರುವಂಥವರನ್ನು ಮಾತ್ರ ನಿನ್ನ ಬಳಿ ಕಳುಹಿಸುತ್ತೇನೆ. ದಯವಿಟ್ಟು ಅಂಥವರಿಗೆ ನೀನು ಸಹಾಯ ಮಾಡಬೇಕು'. ತನಗೆ, ತಮ್ಮ ಮಕ್ಕಳಿಗೆ ಅದು ಬೇಕು ಇದು ಬೇಕು ಎಂದು ಹಲ್ಲು ಗಿಂಜುವ ಜನರ ನಡುವೆ ತ.ಸು.ಶಾ. ಅವರ ವಿಶಿಷ್ಟತೆಯನ್ನು ಛಾಯಾಪತಿ ದಾಖಲಿಸಿರುವುದು ಅನುಕರಣೀಯ.

ತಂದೆ ತನ್ನ ಮಕ್ಕಳು ಎಷ್ಟೇ ದೊಡ್ಡ ಸ್ಥಾನದಲ್ಲಿದ್ದರೂ ಏಕವಚನದಲ್ಲಿ ಸಂಬೋಧಿಸುವಂತೆ ತ.ಸು.ಶಾ. ತಮ್ಮ ಶಿಷ್ಯರನ್ನು ಅಷ್ಟು ಪ್ರೀತಿಯಿಂದ ಮಾತನಾಡಿಸುತ್ತಿದ್ದರು.

ಇಲ್ಲಿ ಕೃತಿಗೊಂಡಿರುವ ಪ್ರಸಂಗಗಳ ಭಾಷೆಯಲ್ಲಿ ಉತ್ಪ್ರೇಕ್ಷೆ ಇಲ್ಲ. ಅದು ಸದಭಿರುಚಿಯ ಶೈಲಿ. ಛಾಯಾಪತಿ ವೈಭವೀಕರಿಸಲು ಪ್ರಯತ್ನಿಸಿಲ್ಲ. ಅವರ ನಿರೂಪಣೆ ಸಂಯಮಯುತವಾಗಿದೆ. ಇದು ಛಾಯಾಪತಿ ಅವರಿಗೆ ತಂದೆಯ ಸ್ಮರಣೆಯಾದರೆ, ಓದುಗರಿಗೆ ಉತ್ತಮ ಜೀವನ ಮೌಲ್ಯಗಳು ಮತ್ತು ಆದರ್ಶಗಳ ಸ್ಮರಣೆಯಾಗಿ ಪರಿಣಮಿಸುವುದು.

ನಿಜವಾದ ಅರ್ಥದಲ್ಲಿ ಪತಿಗೆ ಸಹಧರ್ಮಿಣಿಯಾಗಿದ್ದ ತಮ್ಮ ತಾಯಿಗೆ 'ಅಣ್ಣನ ನೆನಪು' ಕೃತಿಯನ್ನು ಛಾಯಾಪತಿ ಅರ್ಪಿಸಿರುವುದು ಸಮುಚಿತವೇ ಆಗಿದೆ.

# ನಾನು ಓದಿದ ಪುಸ್ತಕ

ಇದೊಂದು ಅಪೂರ್ವ ಸ್ಮರಣೆಯ ಮಹಾಕೋಶ. ಮಧುರ ಬಾಂಧವ್ಯದ ಸವಿನೆನಪು. ನಮ್ಮೊಡನೆ ಇಂತಹವರು ಇದ್ದರಾ? ಎಂಬ ಪ್ರಶ್ನೆಗೆ ಇಂದು ಉತ್ತರ ಗೌಣ. ಹೌದಾದರೂ ಇಂತಹ ಸಾಧಕರು ಪರೋಪಕಾರಿಗಳು ಇದ್ದರು ಎಂಬ ಒಂದು ದೊಡ್ಡ ಶಕ್ತಿಯನ್ನು ನಮ್ಮೆದುರಿಗೆ ನೀಡಿದ್ದಾರೆ ಟಿ.ಎಸ್. ಛಾಯಾಪತಿ. ತಮ್ಮ ಅಣ್ಣನ ಸ್ಮರಣೆಯ ಕೃತಿಯಲ್ಲಿ ಇದು ಕೃತಿಯಲ್ಲ. ಪ್ರೀತಿಯ ಸಲ್ಮೆಯ ಔದಾರ್ಯದ ಜಾತಿ ರಹಿತವಾದ 'ನಭೂತೋ ನ ಭವಿಷ್ಯತಿ' ಎಂಬಂತೆ ಇದ್ದ ಗುರುವರ್ಯ ಶ್ರೀ ತ.ಸು. ಶಾಮರಾಯರ ಸ್ಮರಣೆಯ ಉದಾರ ಹೃದಯದ ನೆನಪು ಇಲ್ಲಿದೆ.

ಅವರು ವಿದ್ಯಾರ್ಥಿಗಳನ್ನು ಮಗು ಎಂದು ಕರೆಯುತ್ತಿದ್ದದ್ದು ಅವರೆಷ್ಟೇ ದೊಡ್ಡವರಾಗಲಿ ಗಣ್ಯರಾಗಲಿ 'ಮಗು' ಎಂದೇ ಸಂಭೋಧಿಸಿ ಮಾತನಾಡುತ್ತಿದ್ದದ್ದು ಓದಿದಾಗ ಕಣ್ಣುಗಳನ್ನು ತೇವವಾಗಿಸುತ್ತದೆ. ಕೃತಿಯ ಒಂದೊಂದು ಪುಟವೂ ಒಂದು ಅವಿಸ್ಮರಣೀಯ. ಮರೆಯಲಾಗದ ಸವಿನೆನಪು ಅಳಿಸಲಾಗದ ಹಸಿರು. ಶಾಮರಾಯರ ಮನೆ ಲಕ್ಷ್ಮೀಕಟಾಕ್ಷದಲ್ಲಿ ಇಲ್ಲದಿದ್ದರೂ ಸರಸ್ವತಿಯ ವಾಸಸ್ಥಾನ. ಅನ್ನಪೂರ್ಣಾ ಮಂದಿರ ಅವರ ಉದಾರತೆ ನಿಷ್ಕಲ್ಮಶ ಮನಸ್ಸು ಜಾತಿಯ ಸೋಂಕಿಲ್ಲದ ಪ್ರೀತಿಯ ಬಾಂಧವ್ಯಕ್ಕೆ ಕೊಟ್ಟ ಕೊಡುಗೆ ಅಪಾರ. ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ ಲಕ್ಷ್ಮೀನಾರಾಯಣ ಭಟ್, ಪ್ರಭುಶಂಕರ ಅವರ ಮಡಿಲಿನಲ್ಲಿ ಬೆಳೆದ ಕಣ್ಮಣಿಗಳು. ಒಬ್ಬ ಸಾಮಾನ್ಯರನ್ನು ಏಕವಚನದಲ್ಲಿ ಮಾತಾಡಿಸುವುದು ಅಸಾಧ್ಯವಾದ ದಿನಗಳಲ್ಲಿ ಗಣ್ಯಾತಿಗಣ್ಯರಾದ ಬಂಗಾರಪ್ಪ, ಅಬ್ದುಲ್ ನಜೀರ್ ಸಾಬ್‌ರಂತಹವರನ್ನು ಏನೋ ಮಗು ಎಂದು ಪ್ರೀತಿಯಿಂದ ಕರೆದ ಶಾಮರಾಯರದು ಅವ್ಯಾಜ ಕರುಣೆ. ನಜೀರ್‌ಸಾಬ್ ನಿಧನರಾದಾಗ 'ನನ ಹಿರಿಯ ಮಗ ಹೋಗಿಬಿಟ್ಟ' ಎಂದು ಕಂಬನಿಮಿಡಿದ ದೃಶ್ಯ ಮನಕಲಕುತ್ತದೆ. ಅಶ್ವಿನಿ ದೇವತೆಗಳೆಂದು ಪ್ರಸಿದ್ಧರಾಗಿದ್ದ ಟಿ.ಎಸ್. ವೆಂಕಣ್ಣಯ್ಯನವರ ಬಗ್ಗೆ ಶಾಮರಾಯರಿಗಿದ್ದ ಭಕ್ತಿ, ಶ್ರದ್ಧೆ, ಪ್ರೀತಿ ಕಂಡರೆ ಹನುಮಂತ ಶ್ರೀರಾಮರ ಮಧುರ ಬಾಂಧವ್ಯ ಸ್ನೇಹದ ನೆನಪು ಬರುತ್ತದೆ. ಅದೆಂತಹ ಪ್ರೀತಿ, ವಾತ್ಸಲ್ಯ. ರಾಮಲಕ್ಷ್ಮಣರಂತೆ

**ಬಿ.ಎಸ್. ಚಂದ್ರಶೇಖರ : ಕರ್ಮವೀರ**

ಸೋದರ ವಾತ್ಸಲ್ಯ, ದೇವರಿಗೆ ಮಂಗಳಾರತಿ ಮಾಡುವಾಗ ಅಣ್ಣ ವೆಂಕಣ್ಣಯ್ಯನವರ ಛಾಯಾಚಿತ್ರಕ್ಕೂ ಮಂಗಳಾರತಿ ಮಾಡಿ ಕಣ್ಣಿಗೆ ಒತ್ತಿಕೊಂಡು ತಮ್ಮ ಅನನ್ಯ ಪ್ರೀತಿ ಭಕ್ತಿಯನ್ನು ತೋರುವ ಶಾಮರಾಯರು ತಮ್ಮ ಮಕ್ಕಳಲ್ಲಿ ತೋರುವ ಪ್ರೀತಿ ಅವರನ್ನು ಬೆಳೆಸಿದ ರೀತಿ ಮನೋಜ್ಞ. ಒಂದೊಂದು ಸನ್ನಿವೇಶ, ಘಟನೆ ಮನೋಜ್ಞ, ಇಂದಿನ ಶಿಕ್ಷಕ ವಿದ್ಯಾರ್ಥಿ ಇಬ್ಬರು ಓದಲೇಬೇಕಾದ ಪುಸ್ತಕ. ಅವರಂತೆ ಆಗದಿದ್ದರೂ ಆ ಹಾದಿಯಲ್ಲಿ ಶಿಕ್ಷಕರು ನಡೆದರೆ ಖಂಡಿತವಾಗಿ ವಿದ್ಯಾರ್ಥಿಗಳೊಡನೆ ಬಾಂಧವ್ಯ ಸುಖಕರವಾಗಿರುತ್ತದೆ.

ಚುಟುಕಾಗಿ ಮನವನ್ನು ತಟ್ಟುವ ಈ ಕೃತಿಯಲ್ಲಿ ಶಾಮರಾಯರೇ ಮಾತಾಡಿದಂತೆ ಭಾಸವಾಗುತ್ತದೆ. ಇಂತಹ ಆದರ್ಶ ಮಾನವೀಯ ಮೌಲ್ಯಗಳಿಗೆ ವಾತ್ಸಲ್ಯಕ್ಕೆ ವಿದ್ಯಾರ್ಥಿ ವೃಂದಕ್ಕೆ ತ.ಸು. ಶಾಮರಾಯರು ಒಂದು ಅನರ್ಘ್ಯ ರತ್ನ. ಶಾಲಾ - ಕಾಲೇಜುಗಳ ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೆ ಈ ಕೃತಿ ಬಹಳ ಉಪಯುಕ್ತ. ಹಳೆಯ ನೆನಪುಗಳನ್ನು ಮೆಲುಕು ಹಾಕಬಹುದು. ಶಾಮರಾಯರಂತಹ ಉಪಾಧ್ಯಾಯರು ಅಪರೂಪ. ಸಿಗಲಾರ ದಂತಹ ಕಾಣಲಾಗದಂತಹ ಒಂದು ವಿಶಿಷ್ಟ ವ್ಯಕ್ತಿ ಅವರೊಂದು ಅಧ್ಯಾಯ. ಈ ಕೃತಿ ಓದಿದ ಮೇಲೆ ಹೃದಯ ಕಣ್ಣು ಭಾವುಕತೆಯಲ್ಲಿ ಕರಗಿ ಹನಿಯೊಂದು ಶಾಮರಾಯರ ಪಾದಗಳಿಗೆ ಉದುರುತ್ತದೆ.

## ಛಾಯಾಪತಿ ಅವರ 'ಅಣ್ಣನ ಸ್ಮರಣೆ'

**(ನೂರು ಥರ ಒಂದೊಂದೂ ಅತಿ ಮಧುರ)**

ಸೃಜನಾತ್ಮಕ ಸಾಹಿತ್ಯದಲ್ಲಿ ಹೇಗೋ ಸೃಜನೇತರ ಸಾಹಿತ್ಯದಲ್ಲೂ ಆಗಾಗ ಒಳ್ಳೊಳ್ಳೆಯ ಪುಸ್ತಕಗಳು ಪ್ರಕಟವಾಗುತ್ತಿರುತ್ತವೆ. 'ಅಣ್ಣನ ಸ್ಮರಣೆ' ಅಂಥ ಒಂದು ಪುಸ್ತಕ.

ಪ್ರಾತಃಸ್ಮರಣೀಯರಾಗಿದ್ದ ಒಂದು ಎತ್ತರದ ಜೀವಕ್ಕೆ ಸಂಬಂಧಿಸಿದ ಪುಸ್ತಕ ಇದು. ಆ ಸಜ್ಜನರ ದೊಡ್ಡತನದ (ಅವರಿಗೆ ಸಂಬಂಧಿಸಿದ ನೂರು ಪ್ರಸಂಗಗಳ) ಸೆಂಚುರಿ ಬಾರಿಸಿದ ಪುಸ್ತಕ. ವಿದ್ವತ್ಪೂರ್ಣ ಗ್ರಂಥಗಳ ರಚಯಿತ, ದೊಡ್ಡ ವಿದ್ವಾಂಸ, ಶ್ರೇಷ್ಠ ಶಿಕ್ಷಕರಾಗಿದ್ದ, ತಮ್ಮ ಜೀವಿತ ಕಾಲದಲ್ಲೆ 'ಸಂತ' ಕಥೆಯಾಗಿದ್ದ ತಳುಕಿನ ವೆಂಕಣ್ಣಯ್ಯನವರ ಸಹೋದರ ತ.ಸು. ಶಾಮರಾಯರ ಹಿರಿಮೆ -ಗರಿಮೆಗೆ, ಅವರ ವ್ಯಕ್ತಿತ್ವದ ಔನ್ನತ್ಯಕ್ಕೆ ಸಾಂದರ್ಭಿಕ ಸಾಕ್ಷಿಯಂತಿರುವ ನೂರು ಪ್ರಸಂಗಗಳನ್ನೊಳಗೊಂಡ ಕಿರುಹೊತ್ತಗೆ. ಈ ಪ್ರಸಂಗಗಳನ್ನು ನೆನಪಿನಲ್ಲಿ ಹಿಡಿದಿಟ್ಟು ಅಕ್ಷರ ರೂಪಕ್ಕಿಳಿಸಿದವರು ಶಾಮರಾಯರ ಸುಪುತ್ರ ಟಿ.ಎಸ್. ಛಾಯಾಪತಿ ಅವರು. ಇಲ್ಲಿ ಛಾಯಾಪತಿಯವರು ಮಾಡಿರುವುದು ಸದಾ ತೆರೆಗಣ್ಣಿನ ಓರ್ವ ಚುರುಕು ಪೋಟೋಗ್ರಾಫರ್ - ವರದಿಗಾರನ ಕೆಲಸ. ಪ್ರಾಯಶಃ ಎಲ್ಲೂ ದಾಖಲಾಗದೆ ಮರೆವಿಗೆ ಸಲ್ಲಬಹುದಾಗಿದ್ದ ಈ ಪ್ರಸಂಗಗಳನ್ನು ದಾಖಲಿಸಿದ 'ಸಾಕ್ಷಿ' ಪುರುಷ ಛಾಯಾಪತಿಯವರು ಕನ್ನಡಿಗರ ಕೃತಜ್ಞತೆಗೆ ಪಾತ್ರರು.

ಶಾಮರಾಯರ ಅಚ್ಚುಮೆಚ್ಚಿನ ವಿದ್ಯಾರ್ಥಿಗಳಲ್ಲೊಬ್ಬರಾಗಿದ್ದ ಪ್ರಭುಶಂಕರರು ತಮ್ಮ ಮುನ್ನುಡಿಯಲ್ಲಿ (ಅವರು ಮುನ್ನುಡಿ ಎನ್ನದೆ ವಿನೀತಭಾವದಿಂದ 'ಗುರುನಮನ' ಎಂದಿದ್ದಾರೆ. ಮತ್ತೆ ಅವರಿಗೇ ಸಂಬಂಧಿಸಿದ ಉದಾತ್ತ ಪ್ರಸಂಗವೊಂದು 'ಅಣ್ಣನ ಸ್ಮರಣೆ'ಯಲ್ಲಿದೆ) ಮತ್ತು ಮಲ್ಲೇಪುರಂ ಜಿ. ವೆಂಕಟೇಶ ಅವರು ಬೆನ್ನುಡಿಯಲ್ಲ ತೂಕದ ಮಾತುಗಳನ್ನು ಬರೆದು 'ಅಣ್ಣನ ಸ್ಮರಣೆಯ' ವಜನು ಹೆಚ್ಚಿಸಿದ್ದಾರೆ.

---

**ಶ್ರೀನಿವಾಸ ಜಿ. ರಾವ್ : ಗಾಂಧಿಬಜಾರ್**

---

ಇವೆಲ್ಲಾ ಸತ್ಯಕತೆಗಳು, ಸತ್ಕತೆಗಳು. ಒಂದರ್ಥದಲ್ಲಿ ಈ ನೂರು ಪ್ರಸಂಗಗಳು ಏಕತ್ರ ಬಂದು ಒಟ್ಟಾಗಿ ಸೃಷ್ಟಿಸಿದ ಒಬ್ಬ ಅಪರೂಪ ವ್ಯಕ್ತಿಯ ವ್ಯಕ್ತಿಚಿತ್ರ. ಆದರೆ ಸಾಂಪ್ರದಾಯಿಕ ವ್ಯಕ್ತಿ - ಚಿತ್ರಕ್ಕಿಂತ ಭಿನ್ನ. ಪ್ರಾಯಶಃ ಇದನ್ನು ಸಾಕ್ಷ್ಯ ವ್ಯಕ್ತಿ ಚಿತ್ರವೆಂದು ಕರೆಯಬಹುದೇನೋ.

ಸಾಹಿತಿಯ ಮಕ್ಕಳೋ, ಪತ್ನಿಯೋ ಬರೆದುದಕ್ಕೂ ಇತರರು ಬರೆಯುವುದಕ್ಕೂ ಫರಕಿರುವುದು ಸಹಜ. ಮೊದಲನೆಯದು ಗರ್ಭಗುಡಿಯ ಪೂಜಾರಿ ಮತ್ತು ಮೂರ್ತಿಯ ಸಂಬಂಧ. ಎರಡನೆಯದು ಗರ್ಭಗುಡಿಯಿಂದ ಈಚೆಗಿರುವ ಶ್ರದ್ಧಾಳು ಮತ್ತು ಮೂರ್ತಿಯದು. ಗರ್ಭಗುಡಿಯ ಪೂಜಾರಿಗೆ ಶಿಲ್ಪದ ಚಿಕ್ಕಪುಟ್ಟ ನ್ಯೂನತೆ. ಪ್ರಮಾಣ ದೋಷ ನಿಚ್ಚಳವಾಗಿ ಕಾಣುವಂತಿದ್ದರೆ ಶ್ರದ್ಧಾಳು ಅಷ್ಟರ ಮಟ್ಟಿಗೆ ಈ ಸೌಲಭ್ಯದಿಂದ ಕೊಂಚ ವಂಚಿತನೇ. ಮತ್ತೆ ಪೂಜಾರಿಗಿರುವ ಹೊಕ್ಕುಬಳಕೆ, ಸ್ವಾತಂತ್ರ್ಯದಿಂದಾಗಿ ಅವನ ಒಳನೋಟಕ್ಕೊಂದು ವಿಶೇಷತೆ, ವಜನು ಪ್ರಾಪ್ತವಾಗುವುದು ಸಹಜ. ಆದರೆ ಇದೇ ಆ ಸ್ವಾತಂತ್ರ್ಯ ಆರಾಧ್ಯಮೂರ್ತಿಯ ವೈಭವೀಕರಣಕ್ಕೆ ಅತಿರೇಕಕ್ಕೆ ಹೋಗುವ ಸಾಧ್ಯತೆ ಇದೆ ಎನ್ನುವುದೂ ಅಷ್ಟೇ ಸತ್ಯ. ವಸ್ತುನಿಷ್ಠತೆ ಮತ್ತು ಪ್ರಮಾಣಿಕತೆಯ ಜವಾಬ್ದಾರಿಯ ಭಾರ ಹೊರುವ ತಾಕತ್ತು ಸ್ವಾತಂತ್ರ್ಯಕ್ಕಿರಬೇಕಾಗುತ್ತದೆ. ಕೊನೆಗೂ ಅದು ಬರೆಯುವವನ ಆತ್ಮಸಾಕ್ಷಿಗೆ ಬಿಟ್ಟ ವಿಷಯ. ಎಂದೋ ಘಟಿಸಿದ, ತಾವು ಸಾಕ್ಷಿಯಾಗಿದ್ದ ಪ್ರಸಂಗಗಳನ್ನು ಯಥಾವತ್ತಾಗಿ ದಾಖಲಿಸಲ್ಪಟ್ಟ ಈ ಕಿರುಹೊತ್ತಗೆ ವೈಭವೀಕರಣ ಮತ್ತು ಅತಿರೇಕದಿಂದ ಪಾರಾಗಿರುವುದು ಪುಸ್ತಕದ ಧನಾತ್ಮಕ ಅಂಶ.



ಸನ್ನಡತೆ, ಸದಾಚಾರ, ನೈತಿಕತೆ ಇವುಗಳನ್ನು ತಮ್ಮ ಬದುಕಿನುದ್ದಕ್ಕೂ ವ್ರತದಂತೆ ಪಾಲಿಸಿಕೊಂಡು ಬಂದ ಸಜ್ಜನರು ಶಾಮರಾಯರು. ಸರ್ವಕಾಲಕ್ಕೂ ಸರ್ವರಿಗೂ ಮಾದರಿಯಾಗುವಂತೆ ಬದುಕಿದವರು ಅವರು ಹಾಗೂ ಅವರಣ್ಣ ಟಿ.ಎಸ್. ವೆಂಕಣ್ಣಯ್ಯನವರು. ಹೆಚ್ಚಿನವರಂತೆ ಮಾತು-ಕೃತಿಗಳ ನಡುವಿನ ಕಂದಕದಲ್ಲಿ ಬಿದ್ದುಬಿಟ್ಟವರಲ್ಲ. ಸೇತುವೆ ಕಟ್ಟಿದವರು. ಬದುಕುವುದು ಎಂದರೇನು ಎನ್ನುವುದನ್ನು ಉಡಾಫೆಯ ಸೋಂಕಿಲ್ಲದೆ, ತೋರಿಕೆಯ ಹಂಗಿಲ್ಲದೆ ತಮ್ಮ ಸ್ವಂತದ ಬದುಕಿನ ರೀತಿ - ನೀತಿಯಿಂದಲೇ, ಮಾತು-ಕೃತಿಗಳ ಸಮಪಾಕದ ಮಾದರಿಯಿಂದಲೇ ಸಹಜವಾಗಿ, ಸದ್ದುಗದ್ದಲವಿಲ್ಲದೆ ಬದುಕಿದವರು. ಹಾಗಾಗಿ ಬದುಕಿನ ಅನುಕ್ತ ನಿಯಮಗಳ, ಅಲಿಖಿತ ಗೈಡ್ ನಂತಿದ್ದ ಇವರ ಜೀವನ ಅಗೋಚರ ಟೈಂಪೀಸ್‌ನ ಅಲಾರಮ್ಮಿನಂತೆ ನಿದ್ದೆಗಣ್ಣಿನವರ ಕಣ್ಣು ತೆರೆಯಿಸುತ್ತಿರುತ್ತದೆ. ಮನುಷ್ಯ ಮನುಷ್ಯನಾಗಿಯೇ ಇರಬೇಕಾದ, ಬದುಕಬೇಕಾದ ಮನುಷ್ಯ, ಮನುಷ್ಯ ಪ್ರಾಣಿಯಾಗಿ ರೂಪಾಂತರಗೊಂಡ ಸದ್ಯದ ದುರ್ದಿನಗಳಲ್ಲಿ, ಬದುಕುತ್ತಾ ಬದುಕಗೊಡುತ್ತಾ ಹಾಗೆ ಬದುಕುತ್ತಲೇ ಸೃಷ್ಟಿಶೀಲತೆ ಮತ್ತು ಸಹಜೀವಿಪರ ಕಾಳಜಿಯ ನಡುವೆ ಓಡಾಡುತ್ತ, ಹೀಗೆ ತೊಡಗಿಸಿಕೊಳ್ಳುವ

ಮೂಲಕವೇ ಬದುಕಿಗೆ ಗೌರವ ಸಲ್ಲಿಸುತ್ತಾ ಸಮುದಾಯದ ಗೌರವಕ್ಕೆ, ಪ್ರೀತಿಗೆ, ಕೃತಜ್ಞತೆಗೆ ಪಾತ್ರರಾದವರು ಶಾಮರಾಯರು. ಇಂಥವರ ಕುರಿತು ಬಂದ, ಬರುವ ಪುಸ್ತಕಗಳು, ಜೀವನ ಚರಿತ್ರೆಗಳು ಸಂಸ್ಕೃತಿಯಾಗಿ, ಸಾಮಾಜಿಕವಾಗಿ ಮಹತ್ವ ಉಳ್ಳವುಗಳಾಗಿರುತ್ತವೆ.

ಛಾಯಾಪತಿಯವರು ತಮ್ಮ 'ಎರಡುಮಾತು'ವಿನಲ್ಲಿ 'ಇಲ್ಲಿನ ಪ್ರಸಂಗಗಳನ್ನು ಓದುವಾಗ ಹಲವರು ಹುಬ್ಬೇರಿಸಬಹುದು ನಂಬದೇ ಇರಬಹುದು. ಆದರೆ ಇದು ವಾಸ್ತವ ಸತ್ಯ' ಎಂದು ಬರೆಯುತ್ತಾರೆ. ನಾಲ್ಕಡಿಯ ಅಳತೆಪಟ್ಟಿಯನ್ನಷ್ಟೇ ನೋಡಿ ನೋಡಿ ಒಗ್ಗಿ ಹೋದ ಕಣ್ಣಿಗೆ ಏಳಡಿ, ಎಂಟಡಿಯ ಅಳತೆ ಪಟ್ಟಿ ತೋರಿಸಿದಾಗ ನಂಬುವುದೇ ಸಾಧ್ಯವಾಗದಂಥ ವರ್ತಮಾನದಲ್ಲಿ ನಾವಿದ್ದೇವೆ. ಸಮಾಜದಲ್ಲಿ ಅವರಿಗಿದ್ದ ಸ್ಥಾನ-ಮಾನಕ್ಕೆ, ಹೃದಯ ವೈಶಾಲ್ಯಕ್ಕೆ ಕನ್ನಡಿ ಹಿಡಿಯುವ ಮೂರು ಪ್ರಸಂಗಗಳನ್ನಷ್ಟೇ ಕೊಡುತ್ತಿದ್ದೇನೆ:

ಅಣ್ಣ ಪ್ರತಿದಿನ ಬೆಳಿಗ್ಗೆ ವಾಯು ವಿಹಾರಕ್ಕೆ ಹೋಗುತ್ತಿದ್ದರು. ಅವರೊಂದಿಗೆ ಕೆಲವು ಕಾಲ ನಿವೃತ್ತ ಡಿಪಿಐ ಶ್ರೀರಂಗರಾಜು ಸಹ ಹೋಗುತ್ತಿದ್ದರು. ಒಂದು ದಿವಸ ಹೀಗೆ ವಾಯು ವಿಹಾರಕ್ಕೆ ಹೋಗುವಾಗ ಅಣ್ಣ ಹಾಕಿಕೊಂಡಿದ್ದ ಚಪ್ಪಲಿ ಕಿತ್ತು ಹೋಯಿತು. ತಕ್ಷಣ ಶ್ರೀರಂಗರಾಜು ಚಪ್ಪಲಿಯನ್ನು ತಮ್ಮ ಕೈಗೆ ತೆಗೆದುಕೊಂಡರು. ಆಗ ಅಣ್ಣ ಸಂಕೋಚದಿಂದ, ಸಾರ್, ದಯವಿಟ್ಟು ನನ್ನ ಚಪ್ಪಲಿಯನ್ನು ಎತ್ತಿಕೊಳ್ಳಬೇಡಿ. ನನ್ನ ಕೈಗೆ ಕೊಡಿ ಎಂದು ಕೋರಿಕೊಂಡರು. 'ಶಾಂತಂ ಪಾಪಂ' ಎಂದು ಕೆನ್ನೆಗೆ ಹೊಡೆದುಕೊಂಡರು. ಆಗ ಶ್ರೀರಂಗರಾಜು ಅವರು ಸಾರ್, ನೀವು ರಾಮ, ನಾನು ಭರತ. ಶ್ರೀರಾಮನ ಪಾದುಕೆ ನನಗೆ ಸಿಕ್ಕಿದೆ ಎಂಬ ಸಂತೋಷ ನನಗಾಗಿದೆ. ಇದನ್ನು ತಪ್ಪಿಸಬೇಡಿ ಎಂದು ತಿಳಿಸಿದರು. (ಪ್ರಸಂಗ 68)

ಜಿ. ವೆಂಕಟ್ಟಯ್ಯ ಒಬ್ಬ ಹರಿಜನ. ಅವರು ಮೀನುಗಾರಿಕೆ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದರು. ಅವರು ಒಂದು ಮಧ್ಯಾಹ್ನ ಒಂದು ಗಂಟೆಗೆ ಅಣ್ಣನನ್ನು ನೋಡಲು ಬಂದರು. ಅಣ್ಣ ಅವರನ್ನು ಕುಳ್ಳಿರಿಸಿ ಬಂದ ಕಾರಣವೇನೆಂದು ವಿಚಾರಿಸಿದರು. ವೆಂಕಟಯ್ಯನವರು ತಾವು ತಂದಿದ್ದ ಕೈ ಚೀಲದಿಂದ ಒಂದು ಹಸ್ತಪ್ರತಿಯನ್ನು ಆಚೆ ತೆಗೆದು ಅಣ್ಣನ ಮುಂದಿರಿಸಿದರು. ಅದನ್ನು ಪ್ರಕಟಿಸಲು ಸಾಧ್ಯವೇ ಎಂದು ಕೇಳಿದರು. ಅಣ್ಣ ತಲೆ ಎತ್ತಿ ಮೇಲಿದ್ದ ಗಡಿಯಾರ ನೋಡಿದರು. ಗಂಟೆ 1.15 ಆಗಿತ್ತು. ಅಣ್ಣ ವೆಂಕಟಯ್ಯನವರನ್ನು ಕುರಿತು ಗಂಟೆ ಒಂದಾಗಿದೆ. ಇದು ಊಟದ ಸಮಯ. ಮೊದಲ ಊಟ ಮಾಡೋಣ. ಆಮೇಲೆ ಮುಂದಿನ ವಿಷಯ ಎಂದು ತಿಳಿಸಿದರು. ವೆಂಕಟಯ್ಯನವರಿಗೆ ತಮ್ಮ ಪಕ್ಕದಲ್ಲೇ ತಟ್ಟೆ ಹಾಕಿಸಿ ಊಟ ಹಾಕಿಸಿದರು. ಊಟವಾದ ನಂತರ ಅವರ ಹಸ್ತಪತಿಯನ್ನು ಪಡೆದರು. ಬಹಬೇಗ ಅವರ ಚೊಚ್ಚಲ ಕಾದಂಬರಿ 'ಮುರಿದ

ಮದುವೆ' ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯಲ್ಲಿ ಪ್ರಕಟವಾಯಿತು. ಇದರಿಂದ ಪ್ರೋತ್ಸಾಹಗೊಂಡ ಲೇಖಕರು, ಮುಂದೆ ಒಂದೊಂದಾಗಿ ಅವರ ಕೃತಿಗಳನ್ನು ಪ್ರಕಟಿಸಿದರು. ಮೇಲಿಂದ ಮೇಲೆ ಪ್ರಕಟವಾಗಿ ಅವರು ಪ್ರಸಿದ್ಧ ಲೇಖಕರಾದರು. ಸಾಧನೆಯಿಂದ ಸಿದ್ಧಿ ಪಡೆದ ವೆಂಕಟಯ್ಯನವರು ಕಾಲ ಸರಿದಂತೆ ಒಂದ ಅವಧಿಗೆ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿದ್ದರು. (ಪ್ರಸಂಗ 4).

ಅಣ್ಣಾ ತಮ್ಮ ತಾಯಿಯ ವೈದೀಕವನ್ನು ಬಹಳ ಶ್ರದ್ಧೆ, ನಿಷ್ಠೆಯಿಂದ ಮಾಡುತ್ತಿದ್ದರು. ಆಗ ಸಿಡಿಲಂತೆ ಒಂದು ಸುದ್ದಿ ಬಂದು ಅಣ್ಣಾನನ್ನು ಅಪ್ಪಳಿಸಿತು. ಯಾರೋ ಆಗಂತುಕರು ಬಂದು ಸಾರ್, ನಜೀರ್ ಸಾಬರು ಸತ್ತು ಹೋದರು ಎಂದು ತಿಳಿಸಿದರು. ಒಡನೆಯೇ ಅಣ್ಣಾ ಒಂದು ನಿಮಿಷ ಮೌನವಾಗಿ ಆಕಾಶದತ್ತ ನಿಟ್ಟಿಸಿದರು. ನಂತರ 'ಇಂದು ನನ್ನ ಹಿರಿಯ ಮಗ ಸತ್ತು ಹೋದ' ಎಂದು ತಿಳಿಸಿದರು (ಪ್ರಸಂಗ 77).

ಜಾತೀಯತೆ, ಧರ್ಮಾಂಧತೆಯ ನಾರುವ ಗಟಾರದ ಪರಿಸರದಿಂದ ಎದ್ದು ಹೊರಡುವ ಸೂಚನೆಯನ್ನೇ ಕೊಡದಿರುವ ವರ್ತಮಾನದಲ್ಲಿರುವ ನಾವು, ಎಷ್ಟೋ ವರ್ಷಗಳ ಹಿಂದೆಯೇ ಅಂಥವನ್ನೆಲ್ಲಾ ಮೀರಿ ಬೆಳೆದು ನಿಂತ ಶಾಮರಾಯರ ಉದಾತ್ತ ಚರಿತೆಯನ್ನು ನಂಬದಿರಬಹುದು ಎಂದು ಛಾಯಾಪತಿಯವರು ಸರಿಯಾಗಿಯೇ ಊಹಿಸಿದ್ದಾರೆ.

ಅಲ್ಲಲ್ಲಿ ಸಡಿಲು ವಾಕ್ಯರಚನೆ, ಅಸಮರ್ಪಕ ಪದಪ್ರಯೋಗ (ಶಾಮರಾಯರ ವಿದ್ಯಾರ್ಥಿ ನಜೀರ್ ಸಾಬರು ಕರ್ನಾಟಕದಲ್ಲಿ ಮಂತ್ರಿಯಾಗಿದ್ದವರು. ಅವರ ಸಾವಿನ ಸಂದರ್ಭದಲ್ಲಿ 'ಸತ್ತು ಹೋದರು' ಪದ ಪ್ರಯೋಗ ಅಷ್ಟುಸರಿ ಎನಿಸುವುದಿಲ್ಲವಲ್ಲವೇ?) ಕಾಣಿಸಿಕೊಂಡರೂ ಶಾಮರಾಯರ ಮೇರು ಸದೃಶ ವ್ಯಕ್ತಿತ್ವವೇ ನಮ್ಮ ಪ್ರಜ್ಞೆಯನ್ನಾವರಿಸಿ ಮಿಕ್ಕಿದ್ದೆಲ್ಲಾ ಅಮುಖ್ಯವಾಗಿಬಿಡುತ್ತದೆ. ಬದುಕಿಗೆ ಬೆನ್ನು ಹಾಕಿ ಓಡಾಡುವವರರಿಗೂ ಬದುಕನ್ನು ಪ್ರೀತಿಸುವವರಿಗೂ ಅದರಲ್ಲೂ ಶಿಕ್ಷಕರಿಗೂ (ನನ್ನ ತರಗತಿ ಹಾಗೂ ವಿದ್ಯಾರ್ಥಿಗಳೇ ನನ್ನ ಮಕ್ಕಳು. ವಿದ್ಯಾರ್ಥಿಗಳಲ್ಲಿ ನಾನು ಜಾತಿ ನೋಡುವುದಿಲ್ಲ. ಹಾಗೆ ನೋಡಿದರೆ ನನಗೆ ಸಿಡಿಲು ಬಡಿಯಲಿ - ಪು. 10) ವಿದ್ಯಾರ್ಥಿಗಳಿಗೂ ಇದೊಂದು ಉದ್ಬೋಧಕದ ಹರಿಕಥಾ ಕಾಲಕ್ಷೇಪ. ಅವಶ್ಯ ಓದಬೇಕಾದ ಪುಸ್ತಕ. ಈ ಪುಸ್ತಕಕ್ಕಾಗಿ ಛಾಯಾಪತಿಯವರನ್ನು ಮನಃಪೂರ್ವಕ ಅಭಿನಂದಿಸುತ್ತೇನೆ.

# ಮೌಲ್ಯಗಳು ಪಲ್ಲಟಗೊಳ್ಳುತ್ತಿರುವ ಪ್ರಸ್ತುತ ದಿನಮಾನಗಳಲ್ಲಿ ದೊಡ್ಡವರ ನೆನಪು

ತ.ಸು.ಶಾಮರಾಯರು ತ.ಸು. ವೆಂಕಣ್ಣಯ್ಯನವರ ಸೋದದರು. ಆ ಕಾರಣಕ್ಕಾಗಿ ಅವರನ್ನು ನೆನೆಯಬೇಕಾಗಿಲ್ಲ; ಅವರ ಮಾನವೀಯತೆ, ಶಿಷ್ಯಪ್ರೇಮ, ಮನೆಯಲ್ಲಿ ಜಾತಿಬೇಧ ಮರೆತು ನಿತ್ಯ ನಡೆಸುತ್ತಿದ್ದ ದಾಸೋಹ, ಅಕೃತ್ರಿಮ ವರ್ತನೆ, ಮುಗ್ಧ ನೇರ ಮನಸ್ಸು ಕನ್ನಡದ ಬಗೆಗಿನ ಅವರ ಅಪಾರ ಪ್ರೀತಿ - ಇವೆಲ್ಲವೂ ತ.ಸು. ಶಾಮರಾಯರಾಯರ ವ್ಯಕ್ತಿತ್ವದ ಒಂದು ಅವಿಭಾಜ್ಯ ಭಾಗ. ಒಮ್ಮೆ ಅವರ ಮಗ ಛಾಯಾಪತಿ 'ಅಣ್ಣ, ನಿಮಗಿಂತ ದೊಡ್ಡಪ್ಪ ಯಾವ ರೀತಿ ದೊಡ್ಡವರು?' ಎಂದು ಕೇಳಿದರು. ಅದಕ್ಕೆ ಅವರು 'ಹುಚ್ಚು ಮುಂಡೇದೆ, ನಮ್ಮಣ್ಣನೆಲ್ಲಿ, ನಾನೆಲ್ಲಿ? ಆತ ಜನಗಳಿಗೆ ಸಹಾಯ ಮಾಡುವ ಸಂದರ್ಭ ಬಂದಾಗ ಸ್ವಂತ ಹಣವಿಲ್ಲದಿದ್ದರೆ, ಸಾಲ ಮಾಡಿಸಹಾಯ ಮಾಡುತ್ತಿದ್ದ. He used to have alwasys overdraft in his account, only to help others. ನನಗೆಲ್ಲಿದೆ ಆ ಯೋಗ್ಯತೆ. ನಾನು Neither lend, nor borrower ಎನ್ನುವ ತತ್ತ್ವಸಿದಧಾಂತಕ್ಕೆ ಸೇರಿದವನು' ಎಂದು ಹೇಳಿದರಂತೆ. ಮರೆಯಾದರು ಅವರು ನಂಬಿಕೊಂಡು ಬಂದ, ಆಚರಣೆಗೆ ತಂದ ಮೌಲ್ಯಗಳು ಇಂದಿಗೂ ಮಗೆ ಮಾದರಿ ಎನಿಸಿವೆ. ತ.ಸು. ಶಾಮರಾಯರ ಮಗ ಛಾಯಾಪತಿ ತಮ್ಮ ತಂದೆ ಬದುಕಿನಲ್ಲಿ ಅಳವಡಿಸಿಕೊಂಡಿದ್ದ ಮೌಲ್ಯಗಳನ್ನು ಕೆಲವು ಘಟನೆಗಳನ್ನು ಮೆಲುಕು ಹಾಕುವ ಮೂಲಕ 'ಅಣ್ಣನ ಸ್ಮರಣೆ' ಎನ್ನುವ ಕೃತಿಯಲ್ಲಿ ಅವರ ಘನೀಭೂತ ವ್ಯಕ್ತಿತ್ವದ ಹಲವು ಮುಖಗಳ ಪರಿಚಯ ಮಾಡಿಕೊಟ್ಟಿರುವರು. ಇಲ್ಲಿ 100 ನೆನಪುಗಳು (Anecdotes) ದಾಖಲಾಗಿವೆ. ಕೆಲವು ನೆನಪುಗಳು ಉಜ್ವಲವಾಗಿವೆ. ವ್ಯಕ್ತಿತ್ವದ ಘನತೆಯಿಂದ. ಕುವೆಂಪುರವರ ಬಗೆಗೆ ಶಾಮರಾಯರಿಗೆ ವಿಶೇಷ ಅಭಿಮಾನ. ಅವರಿಗೂ ಸಹಾ, ಕುವೆಂಪು ಕುಲಪತಿಗಳಾಗಿದ್ದಾಗ ಶಾಮರಾಯರನ್ನು ಪ್ರಾಧ್ಯಾಪಕರನ್ನಾಗಿ ಮಾಡಬೇಕೆಂಬ ಆಸೆ ಇತ್ತು. ಆದರೆ ಅದು ಸಾಧ್ಯವಾಗಲಿಲ್ಲ. ಅವರು ಶಾಮರಾಯರನ್ನು

---

ವಿದ್ಯಾಶಂಕರ್ : ಭಾನುವಾರ

---

ಕುರಿತು 'ದುರದೃಷ್ಟಕ್ಕೆ ನೀವು ಬ್ರಾಹ್ಮಣರಾಗಿರುವಿರಿ' ಎಂದು ನೊಂದು ಕೊಂಡರು. ಅದಕ್ಕೆ ಶಾಮರಾಯರು 'ಸಾರ್, ನಾನು ಬ್ರಾಹ್ಮಣನಲ್ಲ' ಎಂದರು. ಒಡನೆಯೆ ಶಾಮರಾಯರು 'ಮಗು, ನಿನಗಿಂತ ದೊಡ್ಡ ಬ್ರಾಹ್ಮಣರು ನನಗೆ ಯಾರು?' ಪ್ರಭುಶಂಕರರ ಬಾಯಿ ಕಟ್ಟಿತು. ಪ್ರಭುಶಂಕರರು ಶಾಮರಾಯರಿಗೆ ವಿದ್ಯಾರ್ಥಿಯಾಗಿ ಕೇವಲ ಒಂದು ತಿಂಗಳಾಗಿತ್ತು ಅಷ್ಟೆ !! (ಪು. 11) ಬಂಗಾರಪ್ಪನವರು ಶಾಮರಾಯರ ಶಿಷ್ಯರು. ಅವರ ಮನೆಗೆ ಬಂದು 'ತಮಗೇನು ಬೇಕು ಹೇಳಿ' ಎಂದು ಕೇಳಿದಾಗ 'ಮಗು, ದೇವರು ನನಗೆ  'ರಾಷ್ಟ್ರಕವಿ' ಜಿ.ಎಸ್. ಶಿವರುದ್ರಪ್ಪನವರು ಅವರ ನೆಚ್ಚಿನ ಶಿಷ್ಯ. ಬಡತನದಿಂದ ಬಂದ ತಮ್ಮ ಈ ಶಿಷ್ಯನಿಗೆ ವಿದ್ಯಾರ್ಥಿನಿಲಯದಲ್ಲಿ ಪ್ರವೇಶ ಸಿಗದಿದ್ದಾಗ, ಸುತ್ತೂರು ಮಠದ ಶ್ರೀ ಶಿವರಾತ್ರಿ ರಾಜೇಂದ್ರಮಹಾಸ್ವಾಮಿಗಳ ಬಳಿಗೆ ಶಿಷ್ಯನನ್ನು ಕರೆದುಕೊಂಡು ಹೋಗಿ ಅವರ ವಿದ್ಯಾರ್ಥಿನಿಲಯದಲ್ಲಿ ಪ್ರವೇಶ ದೊರೆಯುವಂತೆ ಮಾಡಿದರು. ತಮ್ಮ ಶಿಷ್ಯ ಕವಿತೆ ಬರೆದಾಗ ಅದರ ಮೊದಲ ಕೇಳುಗ ತಾವಾದುದ್ದಷ್ಟೇ ಅಲ್ಲ, ತಮ್ಮ ಮೆಚ್ಚಿನ ಶಿಷ್ಯನ ಮೊದಲ ಕವಿತಾ ಸಂಕಲನ 'ಸಾಮಗಾನ'ವನ್ನು ಅವರು ತಮ್ಮ ತ.ವೆಂ. ಸ್ಮಾರಕ ಗ್ರಂಥಮಾಲೆಯಲ್ಲಿ ಪ್ರಕಟಿಸಿ ಶಿಷ್ಯನ ಪ್ರತಿಭೆ ಬಿ.ಎ. ಆನರ್ಸ್ ಓದುತ್ತಿದ್ದಾಗಲೇ ಕಾವ್ಯ ಲೋಕಕ್ಕೆ ಪರಿಚಯವಾಗುವಂತೆ ಮಾಡಿದರು. ಇದು ನಿಜವಾದ ಶಿಷ್ಯಪ್ರೇಮ! ಜಿ.ಎಸ್. ಶಿವರುದ್ರಪ್ಪನವರೂ ತಮ್ಮ ಕವಿತೆಯ ಮೊದಲ ಕೇಳುಗರಾದ ತಮ್ಮ ಗುರುವನ್ನು ಕುರಿತು ತಮ್ಮ ಪ್ರಸಿದ್ಧ ಕವಿತೆಯೊಂದರಲ್ಲಿ -

*ಎದೆ ತುಂಬಿ ಹಾಡಿದೆನು ಅಂದು ನಾನು,*<br>*ಮನವಿಟ್ಟು ಕೇಳಿದಿರಿ ಅಲ್ಲಿ ನೀವು*<br>*ಇಂದು ನಾ ಹಾಡಿದರು ಅಂದಿನಂತೆಯೇ ಕುಳಿತು*<br>*ಕೇಳುವಿರಿ ಸಾಕೆನಗೆ ಅದುವೆ ಬಹುಮಾನ*<br>*ಹಾಡುಹಕ್ಕಿಗೆ ಬೇಕೆ ಬಿರುದು ಸನ್ಮಾನ.*<br>*ಎಂದು ಹೃದಯತುಂಬಿ ನೆನೆದಿರುವರು.*

ಇದು ನಿಜವಾದ ಗುರುಭಕ್ತಿ!'

ತ.ಸು.ಶಾಮರಾಯರು ಇಂದು ನಮ್ಮ ನಡುವೆ ಇಲ್ಲ. 94ರ ತುಂಬುಬಾಳನ್ನು ಗೌರವಯುತವಾಗಿ ನಡೆಯಿಸಿ ನಮ್ಮಿಂದ [Fortuately Iam Brahmin. ಏಕೆಂದರೆ ನನಗೆ ಇದನ್ನು ಸಹಿಸಿಕೊಳ್ಳುವ ಶಕ್ತಿ ಇದೆ' ಎಂದರು (ಪು. 81)] ಒಮ್ಮೆ ವೆಂಕಣ್ಣಯ್ಯನವರು ತಮ್ಮ ತಮ್ಮನಿಗೆ ಪ್ರತಿಭಾವಂತ ವಿದ್ಯಾರ್ಥಿ ಎಂದು ವಿದ್ಯಾರ್ಥಿವೇತನ ಘೋಷಿಸಿದರು. ನೋಟಿಸ್ ಬೋರ್ಡ್‌ನಲ್ಲಿ ತಮ್ಮ ಹೆಸರಿದ್ದುದನ್ನು ಅಣ್ಣ ವೆಂಕಣ್ಣಯ್ಯನವರಿಗೆ ತಿಳಿಸಿದರು. ಮುಂದಿನ ನೋಟಿಸ್ ಬೋರ್ಡ್‌ನಲ್ಲಿ ಇವರ ಹೆಸರಿನ ಬದಲಿಗೆ ಇನ್ನೊಬ್ಬ ವಿದ್ಯಾರ್ಥಿಗೆ ವೇತನ ನೀಡಿರುವ ವಿಷಯ ತಿಳಿಸಲಾಗಿದ್ದಿತು. ಈ

ಮಾರ್ಪಾಟನ್ನು ಶಾಮರಾಯರು ವೆಂಕಣ್ಣಯ್ಯನವರ ಗಮನಕ್ಕೆ ತಂದರು. ಆಗ ವೆಂಕಣ್ಣಯ್ಯನವರು ಹೇಳಿದರು. 'ಶಾಮಣ್ಣ ಈ ಮಾರ್ಪಾಟು ಮಾಡಿದ್ದು ನಾನೇ. ನೀನು ಆ ಹುಡುಗನಿಗಿಂತ ಜಾಣ ಎಂದು ನನಗೆ ಗೊತ್ತಿಲ್ಲವೇ? ಆದರೆ ಆ ಹುಡುಗ ಬಡವ, ಫೀಜು ಕಟ್ಟುವ ಶಕ್ತಿ ಅವನಿಗಿಲ್ಲ. ಆದ್ದರಿಂದ ಆ ವ್ಯವಸ್ಥೆ ನಾನೇ ಮಾಡಿದೆ. ಶಾಮಣ್ಣ ವಿದ್ಯಾರ್ಥಿವೇತನ ಅಂದರೇನು? ಹಣ ಅಲ್ಲವೆ, ನಿನಗೆ ನಾನಿಲ್ಲವೇ? ನಾನು ಒಂದು ಸಾರಿ ಮದರಾಸಿಗೆ ಹೋಗಿ ಬಂದರೆ ವಿದ್ಯಾರ್ಥಿವೇತನದಷ್ಟು ಟಿ.ಎ. ಹಣ ನನಗೆ ಬರುತ್ತದೆ. ನಿನಗೆ ಬೇಕಾದರೆ ಅದನ್ನು ನಾನು ಕೊಡುತ್ತೇನೆ.' (ಪು. 96). ವೆಂಕಣ್ಣಯ್ಯನವರ ನಿಷ್ಠುರ ಹಾಗೂ ಉದಾರ ಮನೋಭಾವಕ್ಕೆ ಈ ಘಟನೆ ಸಾಕ್ಷಿ.

ಶಾಮರಾಯರು ಕೆಲವು ಕಾಲ ಪ್ರಸಾರಾಂಗದ ನಿರ್ದೇಶಕರಾಗಿದ್ದರು. ಮುದ್ರಣದ ಬೇಡಿಕೆಯನ್ನು ತನಗೆ ನೀಡಿದ್ದೇ ಆದರೆ ಒಂದು ಕಾರನ್ನು ಬಳುವಳಿಯಾಗಿ ನೀಡುತ್ತೇನೆಂಬ ಆಮಿಷ ಒಡ್ಡಿದ ಆ ಮುದ್ರಕನಿಗೆ ಕಾಫಿ ತರಿಸಿಕೊಟ್ಟು 'ಧರ್ಮೋ ರಕ್ಷತಿ ರಕ್ಷಿತಃ' ಎಂದು ಬುದ್ಧಿವಾದ ಹೇಳಿ ಧರ್ಮದಿಂದ ನಡೆದುಕೊಳ್ಳಿ ಎಂದರು (ಪು. 22). ಪ್ರಭುಶಂಕರರು ಶಾಮರಾಯರ ಪ್ರಿಯ ಶಿಷ್ಯರು. ಲಿಂಗಾಯತರಾದ ಅವರನ್ನು ಒಮ್ಮೆ ಊಟಕ್ಕೆ ಕರೆದರು. ಅಂದು ಮನೆಯಲ್ಲಿ ನಜೀರ್‌ಸಾಬರು ಶಾಮರಾಯರ ಪ್ರಿಯ ಶಿಷ್ಯರು. ಅವರ ಸಾವಿನ ಸುದ್ದಿ ಬಂದಾಗ ಶಾಮರಾಯರು ಆಕಾಶದ ಕಡೆ ನೋಡುತ್ತ 'ಇಂದು ನನ್ನ ಹಿರಿಯ ಮಗ ಸತ್ತು ಹೋದ'ಎಂದರು (ಪು. 85). ನಜೀರ್‌ಸಾಬ್‌ರಿಗೆ ಸಂಬಂಧಿಸಿದ ಮತ್ತೆರಡು ಘಟನೆಗಳು ಸ್ಮರಣೀಯವಾಗಿವೆ (ಪು. 31-84). ಮಾಜಿ ಶಿಕ್ಷಣ ಸಚಿವರಾಗಿದ್ದ ಮಲ್ಲಿಕಾರ್ಜುನ ಸ್ವಾಮಿಗಳು ಶಾಮರಾಯರ ವಿದ್ಯಾರ್ಥಿ. ಅವರು ವಿದೇಶದಲ್ಲಿ ಪಾರ್ಶ್ವವಾಯು ಚಿಕಿತ್ಸೆ ಪಡೆದು ಸ್ವದೇಶಕ್ಕೆ ಬಂದಾಗ ಅವರನ್ನು ನೋಡಲು ಶಾಮರಾಯರು ಹೋದರು. ಅವರನ್ನು ನೋಡಿದ ಸಚಿವರು 'ಸಾರ್, ನಿಮ್ಮ ಮೂರನೆಯ ಮಗ ಇಂಡಾಲಜಿ ಎಂ.ಎ. ಮಾಡಿದ್ದಾರಲ್ಲ, ಅವರಿಗೆ ಕೆಲಸ ಸಿಕ್ಕಿತೆ?' ಎಂದು ವಿಚಾರಿಸಿದರು. ಒಡನೆಯೆ ಶಾಮರಾಯರು 'ನೋಡು ಮಗು, ನನ್ನ ಮಗನಿಗೆ ಕೆಲಸ ಹೇಗೋ ಸಿಕ್ಕುತ್ತದೆ. ನನಗೆ ನಿನ್ನ ಆರೋಗ್ಯ ಹೇಗಿದೆ ಅದು ಮುಖ್ಯ ತಿಳಿಸು' ಎಂದರು. ವಾಸ್ತವ ಸತ್ಯವೆಂದರೆ, ಅವರ ಮೂರನೆಯ ಮಗ ಸೂರಿ ಕೆಲಸವಿಲ್ಲದೆ ಪೇಚಾಡುತ್ತಿದ್ದ (ಪು. 9).

ಹೀಗೆ 'ಅಣ್ಣನ ಸ್ಮರಣೆ'ಯಲ್ಲಿ ನೆನಪುಗಳು ದಾಖಲಾಗುತ್ತಾ ಹೋಗುತ್ತವೆ. ತ.ಸು.ಶಾಮರಾಯರ ಜೀವನಚರಿತ್ರೆಯನ್ನೇ ಆಗಲಿ, ಅಭಿನಂದನ ಗ್ರಂಥ 'ಸ್ವಸ್ತಿ'ಯನ್ನೇ ಆಗಲಿ ಓದಲೇಬೇಕಾದ ಅಗತ್ಯವಿಲ್ಲ. ಅಷ್ಟರ ಮಟ್ಟಿಗೆ ಶಾಮರಾಯರ ವ್ಯಕ್ತಿತ್ವದ ಹಲವು ಮುಖಗಳು ಈ ನೆನಪುಗಳ ಮೂಲಕ ತೆರೆದುಕೊಳ್ಳುತ್ತದೆ. ಛಾಯಾಪತಿ ತಮ್ಮ ತಂದೆಯ ಜೊತೆಗಿನ ತಮ್ಮ ನಿರಂತರ ಸಾಹಚರ್ಯ ಹಾಗೂ ಆಪ್ತತ್ವವನ್ನು ನೆನಪುಗಳ

ಮೂಲಕ ಹೇಳುತ್ತಾ ಹೋಗುವರು. ಆ ಮಾಗಿದ ಜೀವನ ಉದಾತ್ತ ಚಿಂತನೆಗಳ ಪರಿಚಯ ಇಲ್ಲಿ ಆಗುತ್ತದೆ. ಪ್ರೊ. ಸಿ.ಡಿ. ನರಸಿಂಹಯ್ಯನವರ ಮಗ ಸತ್ತಾಗ ಶಾಮರಾಯರು ಸಮಾಧಾನ ಮಾಡುತ್ತಾ ಮಹಾಭಾರತದ ಕಥೆಯೊಂದನ್ನು ಉಲ್ಲೇಖಿಸಿದ ಪ್ರಸಂಗ (ಪು. 58) ನಮ್ಮ ನೆನಪಿನಂಗಳದಲ್ಲಿ ಆಳವಾಗಿ ನಿಲ್ಲುತ್ತದೆ. ನಿಸ್ವಾರ್ಥ, ಆದರ್ಶಮಯ ಬದುಕು ಹೇಗಿರಬೇಕು ಎನ್ನುವುದಕ್ಕೆ ಒಂದು ಜ್ವಲಂತ ಉದಾಹರಣೆ ಈ ನೆನಪುಗಳು. ಮೌಲ್ಯಗಳು ಪಲ್ಲಟಗೊಂಡು ಬದುಕಿಕೊಂಡು ಮಾರ್ಗದರ್ಶಿ ಸೂತ್ರಗಳೇ ಇಲ್ಲದ ಇಂದಿನ ದಿನಮಾನಗಳಲ್ಲಿ ಹಳೆಯ ತಲೆಮಾರಿನ ದೊಡ್ಡವರು ಬಾಳಿದ ಬದುಕು ನಮಗೆ ದಾರಿದೀಪವಾಗಬೇಕಾದ ಅಗತ್ಯವಿದೆ.

* * *

## ಅಣ್ಣನ ಸ್ಮರಣೆ

ಪದ್ಯಶೈಲಿಯ ಚುಟುಕುಗಳೇನೋ ಸುಪ್ರಸಿದ್ಧವಾಗಿವೆ. ನೀವು ಗದ್ಯಶೈಲಿಯ ಚುಟುಕುಗಳನ್ನು ಎಂದಾದರೂ ಕಂಡಿದ್ದೀರೇನು, ಕೇಳಿದ್ದೀರೇನು? ಆ ರಚನೆಗಳು ನೋಡಿದರೆ ಗದ್ಯದಂತೆ ಕಾಣುತ್ತವೆ. ಓದಿದಿರೋ ಆತ್ಮೀಯ ಭಾವ ಸರಾಗವಾಗಿ ಹರಿವ ಮನೋಹರ ಸ್ವರ ಸಂಗಮವಾಗಿ ಆಹ್ಲಾದ ಕೊಡುತ್ತೆ. ಹೊಸಗನ್ನಡ ನವೋದಯದ ಪ್ರಥಮಾಚಾರ್ಯರಾದ ಟಿ.ಎಸ್. ವೆಂಕಣ್ಣಯ್ಯನವರ ಪರಮಪ್ರಿಯ ಸಹೋದರ ಟಿ.ಎಸ್. ಶಾಮರಾಯರ ಬದುಕಿನ ಬಗೆಯನ್ನು ಬಗೆ ಬಗೆಯಾಗಿ ಕುರಿತ ಈ ರಚನೆಗಳು ಅವರ ಸುಪುತ್ರ ಛಾಯಾಪತಿಯವರ ಸೃಜನಶೀಲ ಪ್ರಯತ್ನದಿಂದಾಗಿ ಹೊಸ ಬಗೆಯ ರಸಪಾಕವಾಗಿ ಪರಿಪಕ್ವಗೊಂಡಿವೆ.

- ಡಾ. ಎಲ್. ಬಸವರಾಜು

7-10-2007

ಶ್ರೀ ಟಿ.ಎಸ್. ಛಾಯಾಪತಿಯವರಿಗೆ ಶುಭಾಶಯಗಳು. ವಿಶ್ವಾಸಪೂರ್ವಕವಾಗಿ ಕಳಿಸಿದ 'ಅಣ್ಣನ ಸ್ಮರಣೆ' ಮತ್ತು 'ತಂಪು ನೆಳಲು' ಪುಸ್ತಕಗಳನ್ನು ಓದಿದೆ. ಪ್ರತಿಪುಟದ ಅಕ್ಷರಗಳಲ್ಲೂ ಅಡಗಿರುವ - ನನ್ನ ಪಿತೃ ಸಮಾನರೂ, ಗುರುಗಳು, ಆಶ್ರಯದಾತರೂ ಆಗಿದ್ದ 'ಮೇಷ್ಟ್ರ' ಹೃದಯ ಶ್ರೀಮಂತಿಕೆ, ವಿದ್ಯಾರ್ಥಿಗಳ ಬಗ್ಗೆ ಅವರ ಪ್ರೀತಿ,

ಮಾನವೀಯ ಗುಣಗಳು, ಯಾರನ್ನೂ ಯಾವುದಕ್ಕೂ ಯಾಚಿಸವೆ ಇರುವುದರಲ್ಲೇ 'ಕೊಪುಗ್ಗೈ'ಯಾಗಿದ್ದ ಅವರ ಅದ್ಭುತ ವ್ಯಕ್ತಿತ್ವ, ಉಪಾಧ್ಯಾಯರಾಗಿದ್ದು ತಮ್ಮ ವಿದ್ವತ್ತನ್ನು ತಮ್ಮ ವಿದ್ಯಾರ್ಥಿಗಳಿಗೆ ನಿರ್ವಂಚನೆಯಿಂದ ಕೊಟ್ಟ ಅವರ ವಿದ್ಯಾದಾನದ ಸಾರ್ಥಕ ಬದುಕು, ಮನೆಯ ಬಾಗಿಲಿಗೆ ಬಂದವರನ್ನು ಯಾವ ಭೇದಭಾವವಿಲ್ಲದೆ ಆದರಿಸಿ ಸತ್ಕರಿಸಿದ ಅವರ ಆತಿಥ್ಯದ ಹೃದಯ ಶ್ರೀಮಂತಿಕೆ, ಬದುಕಿನ ಜಂಜಾಟದ ಮಧ್ಯೆಯೂ ವಿಚಲಿತರಾಗದೆ ಜೀವನೋತ್ಸಾಹದಿಂದ ಬಾಳಿದ ಬಗೆ, ಯಾರಬಗ್ಗೆಯೂ ದ್ವೇಷಾಸೂಯೆಗಳಿಲ್ಲದೆ ಸ್ಥಿತಮತಿ -ಚಿತ್ತಶಾಂತಿಯಿಂದ ಬಾಳಿದ 'ಸಂತತ್ವ'ದ ನೆಮ್ಮದಿ, -ಈ ಎಲ್ಲವೂ ನಿಮ್ಮ ಎರಡೂ ಪುಸ್ತಕಗಳಲ್ಲೂ ನೀವು ದಾಖಲಿಸಿರುವ ಘಟನೆಗಳ ಮುಖೇನ ಸೊಗಸಾಗಿ ಚಿತ್ರಿತವಾಗಿದೆ. ಎಲ್ಲೂ ಉತ್ಪ್ರೇಕ್ಷೆ ಇಲ್ಲ - ಉದ್ವೇಗವಿಲ್ಲ, ವಾದ-ವಿವಾದಗಳ ಸುಳಿವಿಲ್ಲ ಎಂಥಹ ಸ್ವಚ್ಛ -ಸಾಧಾ - ನಿಚ್ಚಳ ಬದುಕು! ಕಾವಿ ಧರಿಸದೆ ತುಂಬು ಬಾಳಿನ 'ಅವಧೂತ' ಮೇಷ್ಟ್ರು ಕಟ್ಟಿದ್ದು ವ್ಯಕ್ತಿತ್ವ ವಿಕಸನದ 'ಮಠ'!!

ನಾನು ಚಿತ್ರದುರ್ಗದವನು; 'ಮೇಷ್ಟ್ರು' ನಮ್ಮ ಜಿಲ್ಲೆಯ ತಳುಕಿನವರು. ಅಣ್ಣ ಶ್ರೀ ವೆಂಕಣ್ಣಯ್ಯ ನಮ್ಮ ಕನ್ನಡ ಸಾಹಿತ್ಯ ಜಗತ್ತಿನ ದಿನಮಣಿ. ಅದು ನಮಗೆಲ್ಲಾ ಹೆಮ್ಮೆಯ ವಿಷಯ.

ಇರಲಿ... ಅವರ ಮಕ್ಕಳು ನೀವು ಪುಣ್ಯಾತ್ಮರು. ಅವರು ಗಳಿಸಿರುವ ಕೀರ್ತಿಯೆಂಬ ಆಸ್ತಿಯ ಪಾಲುದಾರರು. ಅವರ ಶಿಷ್ಯಕೋಟಿಯ ಪುಣ್ಯವೇ ದೊಡ್ಡದು; ಇನ್ನು ನಿಮ್ಮದು ! ನಿಜಕ್ಕೂ ನೀವು 'ಪಿತೃಋಣ'ವನ್ನು ತೀರಿಸಿದ್ದೀರಿ. ಹಾಗೆಯೇ ನಮ್ಮಂತಹ ಶಿಷ್ಯರಿಗೆ ನಿಮ್ಮ ಪುಸ್ತಕಗಳನ್ನು ಓದುವ ಮೂಲಕ ಮತ್ತೊಮ್ಮೆ ಗುರುಗಳ ಸಂಸ್ಮರಣೆಯ ಸದವಕಾಶ ಕಲ್ಪಿಸಿ ನಮ್ಮನ್ನು ಕೃತಾರ್ಥರಾಗಿಸಿದ್ದೀರಿ.

ಶ್ರೀ ಗುರುಗಳಿಗೆ ಸಾವಿರ ಸಾವಿರ ನಮನಗಳು. ನಿಮಗೆ ಹಾರ್ದಿಕ ಅಭಿನಂದನೆ ಹಾಗೂ ಧನ್ಯವಾದಗಳು.. 'ಮಗೂ - ಸೋಮು - ಇಷ್ಟು ದಿವಸ ಎಲ್ಲಿ ಹಾಳಾಗಿ ಹೋಗಿದ್ಯೋ, ಮುಂದೇದೆ' ಎಂಬ ಅವರ ಆಶೀರ್ವಾದ ಜ್ಞಾಪಿಸಿಕೊಳ್ಳುತ್ತ -

**- ಎಚ್.ಜಿ. ಸೋಮಶೇಖರ್**

4-5-2013

ಮನುಷ್ಯನಿಗೆ ಮುಖ್ಯವಾಗಿ ಎರಡು ಬಗೆಯ ಚಿತ್ರಗಳಿವೆ; ಒಂದು ಭವಚಿತ್ರ, ಮತ್ತೊಂದು ಭಾವಚಿತ್ರ, ಭೌತಿಕ ಕಣ್ಣಿಗೆ ಕುಂಚಕ್ಕೆ ಕ್ಯಾಮೆರಾಕ್ಕೆ ದಕ್ಕುವಂಥದು ಭವಚಿತ್ರ; ಭೌತಿಕ ಮಾಧ್ಯಮಕ್ಕೆ ಸಿಕ್ಕುವಂಥದಲ್ಲ ಭಾವಚಿತ್ರ. ವ್ಯಕ್ತಿಯ ಬುದ್ಧಿ ಮನಸ್ಸು ಭಾಷೆ ನಡವಳಿಕೆಗಳು. ಈ ಭಾವಚಿತ್ರವನ್ನು ಬಿಂಬಿಸುವ ಸಾಧನಗಳು. ವ್ಯಕ್ತಿ ದೊಡ್ಡವ ನಾದಷ್ಟು, ಆ ವ್ಯಕ್ತಿತ್ವವನ್ನು ಹಿಡಿದಿರುವ ಬರಹಗಾರನ ವಿಶಿಷ್ಟ ನೋಟ, ಸೂಕ್ಷ್ಮತೆ,

ಲೋಕ ಪರಿಜ್ಞಾನ, ಚಿತ್ರಕ ಸಾಮರ್ಥ್ಯ, ಸಂಬಂಧ ಮತ್ತು ಭಾಷೆ ಗಾಢವೂ ಸೃಜನಶೀಲವೂ ಆರ್ದ್ರವೂ ಆಪ್ತವೂ ಅನುಭವ ಸಮೃದ್ಧವೂ ಆದಷ್ಟೂ ಈ ವ್ಯಕ್ತಿ ಚಿತ್ರಗಳು ಸಹಜವಾಗುತ್ತವೆ. ಸಶಕ್ತವಾಗುತ್ತವೆ, ಓದುಗರ ಮನದಲ್ಲಿ ಅಚ್ಚೊತ್ತಿ ನಿಲ್ಲುತ್ತವೆ ಬೆಳೆಯುತ್ತವೆ. ಬದುಕಿಗೆ ಬೆಳಕಿನ ಪಥವನ್ನು ಕೊರೆಯುತ್ತವೆ. ಇಂಥದೊಂದು ನಿದರ್ಶನ ಇಲ್ಲಿದೆ.

ತಮ್ಮ ತಂದೆಯವರಾದ ಜನಪ್ರಿಯ ಪ್ರಾಧ್ಯಾಪಕ, ಲೇಖಕ ಪ್ರೊ.ತ.ಸು. ಶಾಮರಾಯರ ನಡೆ ನುಡಿಗಳ, ಸರಳ ಸಹಜ ಸುಂದರ ಆತ್ಮೀಯ ಗೌರವ ಪೂರ್ಣ ಚುಕ್ಕಿ ಚಿತ್ರಗಳನ್ನು ಶ್ರೀ ಟಿ.ಎಸ್. ಛಾಯಾಪತಿಯವರು 'ಅಣ್ಣನ ಸ್ಮರಣೆ' ಎಂಬ ಈ ಕಿರಣ ಮಂಜರಿಯಲ್ಲಿ ಹಾಗೆ ಕಟ್ಟಿಕೊಟ್ಟಿದ್ದಾರೆ. ಲೇಖಕರ ಗ್ರಹಿಕೆಗೆ, ತಂದೆಯವರ ಬಗೆಗಿನ ಅಕೃತಕ ಆದರ. ಅವರ ಮಾತುಕತೆ ಚಿಂತನೆ ಮತ್ತು ವಿದ್ವತ್ತುಗಳನ್ನು ಕುರಿತ ಪೂಜ್ಯತೆ ಹಾಗೂ ವಾತ್ಸಲ್ಯ ಹದವಾಗಿ ಬೆರೆತ ಮನೋಧರ್ಮ. ಈ ಮಿನುಗು ಬರಹಗಳಲ್ಲಿ ಜೇನ ಹನಿಯಾಗಿ ತೊಟ್ಟಿಕ್ಕಿದೆ. ಇಲ್ಲಿನ ಒಂದೊಂದು ಪ್ರಸಂಗವೂ ಅವರ ಬದುಕಿಗೆ ವಿವಿಧ ಮುಖಗಳನ್ನು ಹೃದ್ಯವಾಗಿ ಅನಾವರಣ ಮಾಡುತ್ತ ಎಲ್ಲರಂಥಲ್ಲ ಈ ಗುರು ಎಂಬ ಭಾವನೆಯನ್ನು ಬಲಿಸುತ್ತ ನಮ್ಮಲ್ಲಿ ಜೀವನ ಭರವಸೆಯ ಬೆಳಕಿನ ಬೀಜಗಳನ್ನು ಬಿತ್ತುತ್ತ ಹೋಗುತ್ತದೆ. ಶಾಮರಾಯರ ಪಾರದರ್ಶಕ ವ್ಯಕ್ತಿತ್ವದಂತೆಯೇ ಈ ಬರಹಗಳ ಭಾಷೆ ನಿರಾಭರಣ ಸುಂದರವಾಗಿದೆ. ಇಲ್ಲಿ ಪಂಡಿತನ ವಾಕ್ ಚಾತುರ್ಯವಿಲ್ಲ, ಕೃತಕ ಅಲಂಕಾರಗಳ ಮೆರವಣಿಗೆಯಿಲ್ಲ, ಉತ್ಪ್ರೇಕ್ಷೆಯ ಉಡುಪಿಲ್ಲ. ಇಲ್ಲಿ ತಾಯಿಯ ವಾತ್ಸಲ್ಯದ ಕಣ್ಣಿದೆ, ಮಗುವಿನ ಮನಸ್ಸಿನ ಅರ್ಥಪೂರ್ಣ ಮುಗ್ಧತೆ ಕುತೂಹಲ ಬೆರಗು ಅಕ್ಕರೆಗಳು, ಹರಳುಗಳಿವೆ; ಅಪೂರ್ವವೆನಿಸುವ ಜೀವನಪ್ರೀತಿಯ ಸ್ವಾಭಾವಿಕ ಮಿಂಚುಗಳಿವೆ. ತಮ್ಮ ಜೀವಿತಕಾಲದಲ್ಲಿ ಪ್ರಕಾಂಡ ವಿದ್ವಾಂಸರಾಗಿ, ಮಮತೆಯ ಗುರುವಾಗಿ, ಸತ್ವಪೂರ್ಣ ಪಾಠ ಪ್ರವಚನಗಳ ಗಂಭೀರ ತರಂಗಿಣಿಯಾಗಿ, ನಿರ್ಜಾತೀಯ ಮನೋಧರ್ಮದ ಜ್ಞಾನ ನಿಧಿಯಾಗಿ, ಶ್ರೇಷ್ಠ ಲೇಖಕರಾಗಿ, ಸರಳ ಗಂಭೀರ ವಿಶಾಲ ಹೃದಯದ ಆದರ್ಶ ಮಾರ್ಗದರ್ಶಕರಾಗಿ ಬದುಕಿ ಹಲವರ ಬದುಕನ್ನು ಬೆಳಗಿಸಿದ ಪ್ರೊ. ಶಾಮರಾಯರ ವ್ಯಕ್ತಿತ್ವವನ್ನು ಧ್ವನಿಪೂರ್ಣವಾಗಿ ಬಿಂಬಿಸುವ ಛಾಯಾಪತಿಯವರ ಈ ನುಡಿ ಚಿತ್ರಗಳು ತಮ್ಮ ಕಿರುಶರೀರ ದಿಂದ ಹಿರಿ ಆಶಯಗಳಿಂದ ಅಕೃತಕ ಜೀವನ ಪ್ರೇಮದಿಂದ ಪಾರಿಜಾತದ ಹೂಗಳಂತೆ ಆಸ್ವಾದನೀಯವಾಗಿವೆ; ಕಳೆದ ಕಾಲದ ಹಿರಿಯ ಜೀವವೊಂದರ ಸಾಂಕೇತಿಕ ಅನಾವರಣದ ಮೂಲಕ ನಮ್ಮ ಮನಸ್ಸನ್ನು ತುಂಬುತ್ತದೆ.

ಇವು ವೈಭವೀಕೃತ ವರ್ಣಚಿತ್ರಗಳಲ್ಲ, ರಸ ಚಿತ್ರಗಳೂ ಅಲ್ಲ; ಇವು ಅನುಭವ ಚಿತ್ರಗಳು ಅಮೃತ ಚಿತ್ರಗಳು, ಆದರ್ಶ ಚಿತ್ರಗಳು, ಸರಳ ಮಾತುಗಳಲ್ಲಿ ಶ್ರದ್ಧೆ ಗೌರವಗಳಿಂದ ಕಡೆದಿಟ್ಟ, ಸರಳೋನ್ನತ ವ್ಯಕ್ತಿತ್ವದ ಬಿಡಿಬಿಡಿ ಪ್ರಸಂಗಗಳ ...........

ಪ್ರತಿಮೆಗಳು. ಇಲ್ಲಿ ಮೂಡಿಸಲಾಗಿರುವ ಜೀವನದ ಕ್ಷಣಲೋಕದ ವಿವರಗಳನ್ನು ಓದುವುದು ಸುಲಭ, ಮರೆಯುವುದು ಸುಲಭವಲ್ಲ.

**- ಪ್ರೊ. ಎಚ್.ಜೆ. ಲಕ್ಕಪ್ಪಗೌಡ**

ತ.ಸು. ಶಾಮರಾಯರ ಬದುಕಿನ ಅದ್ಭುತ ಕ್ಷಣಗಳನ್ನು ಅವರ ಮಗ ಲೇಖಕ / ಪ್ರಕಾಶಕ ಛಾಯಾಪತಿ ಅಪೂರ್ವವಾಗಿ ದಾಖಲಿಸಿದ್ದಾರೆ. ಶಾಮರಾಯರ ಬದುಕು ಬರಹಗಳನ್ನು ನೋಡಿ ಓದಿ ಅವರ ಬಗ್ಗೆ ತಾಳಿದ್ದ ಗೌರವ ಅಭಿಮಾನ ಈ ಪುಸ್ತಿಕೆಯ ಓದಿನಿಂದ ಇಮ್ಮಡಿಗೊಂಡಿದೆ. ಜಾತ್ಯತೀತತೆಯ ನಿಜವಾದ ಅರ್ಥ ತ. ಸು. ಶಾ ಅವರ ಬದುಕಿನಲ್ಲಿದೆ. ಬಡವರ ಬಗ್ಗೆ ದೀನರ ಬಗ್ಗೆ ಅವರಿಗಿದ್ದ ಕಾಳಜಿ, ಪದವಿ ಪುರಸ್ಕಾರ ಅಧಿಕಾರಗಳ ಬಗ್ಗೆ ದಿವ್ಯನಿರ್ಲಕ್ಷ, ಅಧಿಕಾರಸ್ಥರು ಮನೆ ಬಾಗಿಲಿಗೆ ಬಂದರೂ ಸಂಪತ್ತನ್ನು ಧಿಕ್ಕರಿಸುವ ಪ್ರಾಮಾಣಿಕತೆ - ಇಂತಹ ನೂರಾರು ಅಮೃತ ಗುಣಗಳನ್ನು ತ.ಸು. ಶಾಮರಾಯರ ಬದುಕಿನ ನೂರಾರು ಘಟನೆಗಳು ನಮ್ಮ ಕಣ್ಣ ಮುಂದಿಡುತ್ತವೆ; ಅಂತಹ ಆದರ್ಶದ ಕಡೆಗೆ ನಮ್ಮನ್ನು ಸೆಳೆಯುತ್ತವೆ. ಛಾಯಾಪತಿಯವರು ನಿರೂಪಿಸಿದ ಹಾಗೆ ಮತ್ತು ಶಾಮರಾಯರ ಹೇಳಿಕೊಂಡ ಹಾಗೆ - ಹೀಗೆ ಇಲ್ಲಿನ ಬರೆಹಕ್ಕೆ ಜೀವನಚರಿತ್ರೆ ಹಾಗೂ ಆತ್ಮಪ್ರತ್ಯಯ ಗುಣಗಳು ಒಟ್ಟಿಗೆ ಪಾತ್ರವಾಗಿವೆ. ಆದರೆ ಕನ್ನಡ ಓದುಗರ ಪಾಲಿಗೆ ಇದೊಂದು ಜೀವನ ದರ್ಶನ.

ಛಾಯಾಪತಿಯವರ ಸರಳ ಮುಗ್ಧ ಪ್ರೀತಿತುಂಬಿದ ಸಹಜ ಶೈಲಿ ತ.ಸು. ಶಾಮರಾಯರ ಬದುಕಿನಷ್ಟೇ ಶುದ್ಧ ಹಾಗೂ ಆಪಾಯಮಾನ.

**- ಡಾ. ಬಿ.ಎ. ವಿವೇಕ ರೈ**

ಶ್ರೀ ಟಿ.ಎಸ್. ಛಾಯಾಪತಿಯವರು ಪ್ರಸ್ತುತ ಪಡಿಸಿರುವ 'ಅಣ್ಣನ ಸ್ಮರಣೆ' ಒಂದು ವಿನೂತನ ಕೃತಿ. ಪೂಜ್ಯ ತ.ಸು. ಶಾಮರಾಯರ ವಿದ್ವತ್ತು, ಕನ್ನಡ ಪ್ರೇಮ ಎಲ್ಲರಿಗೂ ತಿಳಿದಿರುವ ವಿಷಯ. ಆದರೆ ಅವರ ಅಂತರಂಗದ ಮಾನವೀಯ ಗುಣಗಳನ್ನು ಅವರ ಕುಟುಂಬ ವರ್ಗದವರು ಮಾತ್ರ ಬಲ್ಲರು. ಇಂತಹ ಉತ್ತಮ ಗುಣಗಳ ಪರಿಚಯ ಎಲ್ಲ ಕನ್ನಡಿಗರಿಗೂ ಆಗಲಿ ಎನ್ನುವ ಸದುದ್ದೇಶದಿಂದ, ಅವರಿಗೆ ಸಂಬಂಧಿಸಿದ ಒಂದು ನೂರು ಘಟನೆಗಳನ್ನು ಕುರಿತು ಕೆಲವೇ ಸುಂದರ ವಾಕ್ಯಗಳಲ್ಲಿ ಶ್ರೀ ಛಾಯಾಪತಿಯವರು ದಾಖಲಿಸಿದ್ದಾರೆ. ಈ ಘಟನೆಗಳು ಮತ್ತೆ ಮತ್ತೆ ಮೆಲುಕು ಹಾಕಲು ಹಾಗೂ ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲು ಯೋಗ್ಯವಾಗಿವೆ. ಈ ಪ್ರಕಾರದ ರಚನೆಗಳು ತೀರ ವಿರಳ. ಈ ಪುಸ್ತಕವು ಈ ರೀತಿಯ ಸಾಹಿತ್ಯ ಪ್ರಕಾರವನ್ನು ಜನಾನುರಾಗಿಯಾಗಿ ಮಾಡುವುದರಲ್ಲಿ ಸಂದೇಹವಿಲ್ಲ. ಈ ರೀತಿಯ ರಚನೆಗಳಿಗೆ

ಇದೊಂದು ಉತ್ತಮ ಮಾದರಿಯನ್ನು ಒದಗಿಸುತ್ತದೆ ಎಂದರೆ ಅತಿಶಯೋಕ್ತಿಯಲ್ಲ. ಶ್ರೀ ಛಾಯಾಪತಿಯವರಲ್ಲಿ ಉತ್ತಮ ಸಾಹಿತಿಯ ಎಲ್ಲ ಗುಣಗಳೂ ಇವೆ ಎಂಬುದನ್ನು ಈ ಪುಸ್ತಕ ದೃಢಪಡಿಸುತ್ತದೆ. ಈ ಎಲ್ಲ ದೃಷ್ಟಿಗಳಿಂದ ಶ್ರೀ ಟಿ.ಎಸ್. ಛಾಯಾಪತಿಯವರು ಅಭಿನಂದನಾರ್ಹರು.

- ಡಾ. ಎ.ವಿ. ನರಸಿಂಹಮೂರ್ತಿ

ವಿಜಯದಶಮಿ, 2007

# ಕನ್ನಡದ ಕಲಿ

ಶ್ರೀ ಪಾರ್ಥಸಾರಥಿಯವರು ಒಬ್ಬ ಸಮರ್ಥ ಅಧಿಕಾರಿ. ಅವರು ಆಡಳಿತದಲ್ಲಿ ಕನ್ನಡವನ್ನು ಸಮರ್ಥವಾಗಿ ಅನುಷ್ಠಾನಕ್ಕೆ ತಂದಿರುವುದನ್ನು ಅನೇಕರಿಂದ ಕೇಳಿದ್ದೆ. ಪತ್ರಿಕೆಗಳಲ್ಲೂ ನೋಡಿದ್ದೆ. ಇದೀಗ ಶ್ರೀ ಛಾಯಾಪತಿಯವರು ಅವರ ಬಗ್ಗೆ ಬರೆದಿರುವ 'ಕನ್ನಡದ ಕಲಿ' ಪುಸ್ತಕವನ್ನು ನೋಡಿ ಸಂತೋಷವಾಯಿತು. ಇದು ಕೇವಲ ಕನ್ನಡದ ಅಭಿಮಾನದ ಪ್ರಶ್ನೆಯಲ್ಲ, ನಿಜಕ್ಕೂ ಕನ್ನಡದ ಜನತೆಗೆ ಉಪಕಾರವಾಗುವಂಥದ್ದು. ಕೇವಲ ಭಾಷಾಭಿಮಾನಕ್ಕೆ ಸೀಮಿತವಾದುದಲ್ಲ, ಲೋಕ ಸೇವೆಗೂ ಅನ್ವಯವಾಗುತ್ತದೆ. ಈ ದೃಷ್ಟಿಯಿಂದ 'ಕನ್ನಡದ ಕಲಿ' ಪುಸ್ತಕ ಕನ್ನಡ ಸಾರಸ್ವತ ಲೋಕಕ್ಕೆ ಸ್ವಾಗತಾರ್ಹ.

**- ಕುವೆಂಪು**

ನಮ್ಮಲ್ಲಿ ದಕ್ಷ ಅಧಿಕಾರಿಗಳುಂಟು, ಪ್ರಾಮಾಣಿಕರೂ ಉಂಟು, ನಾಡು ನುಡಿಗಳಲ್ಲಿ ವಿಶೇಷವಾದ ಅಭಿಮಾನ ತಳೆದು ಅವುಗಳ ಮೇಲ್ಮೈಗಾಗಿ ದುಡಿಯು ವವವರೂ ಉಂಟು. ಆದರೆ ಈ ಮೂರು ಗುಣಗಳು ಒಬ್ಬ ವ್ಯಕ್ತಿಯಲ್ಲಿ ಮೇಳೈಸಿರು ವುದು ಬಹಳ ವಿರಳ. ಅಂಥ ಕೆಲವೇ ಅಧಿಕಾರಿಗಳಲ್ಲಿ ಬಿ. ಪಾರ್ಥಸಾರಥಿ ಅವರು ಒಬ್ಬರು.

ಪುರಾಣ ಪುರುಷನಾದ ಋಷ್ಯಶೃಂಗನ ವಿಚಾರವನ್ನು ನಾವು ಕೇಳಿದ್ದೇವೆ. ಆತ ಹೋದಲ್ಲಿ ಮಳೆ, ಬೆಳೆ, ಸಂತಸದ ಸುಗ್ಗಿ, ಹೊಸತನದ ಕಳೆ; ಪಾರ್ಥಸಾರಥಿ ಅವರು ಹೋದಲ್ಲಿ ಕಛೇರಿ ಸ್ವಚ್ಛ, ಕೆಲಸ ಚುರುಕು, ಶ್ರೀ ಸಾಮಾನ್ಯ ಸುಪ್ರಸನ್ನ. ಅವನ ಮೇಲ್ಮೆಗಾಗಿ ಕಾಳಜಿ. ಅದಕ್ಕಾಗಿ ಹಲವೆಂಟು ಕಾರ್ಯಕ್ರಮಗಳು ಕಾರ್ಯಗತ. ಆಲಸ್ಯ ಹತಾಶೆಗಳಿಗೂ ಪಾರ್ಥಸಾರಥಿಯವರಿಗೂ ಹರಿದಾರಿ ದೂರ.

ಪಾರ್ಥಸಾರಥಿಯವರು ಕನ್ನಡ ಪ್ರೇಮಿ. ಕರ್ನಾಟಕದಲ್ಲಿ ಕನ್ನಡ ಆಡಳಿತ ಭಾಷೆಯಾಗದಿದ್ದರೆ ಬೇರೆಲ್ಲಿ ಆಗುವುದು ಸಾಧ್ಯ? ಆದರೆ ಇದು ಬರೀ ಅಭಿಮಾನದ ಪ್ರಶ್ನೆಯಲ್ಲ. ಜನರ ಸರ್ಕಾರದ ವ್ಯವಹಾರವೆಲ್ಲ ಜನರ ನುಡಿಯಲ್ಲೇ ಆದಾಗಲೇ

ಜನತಂತ್ರ ಪರಿಪೂರ್ಣ. ಇದುವರೆಗೂ ಈ ಕೆಲಸ ನೂರಕ್ಕೆ ನೂರರಷ್ಟು ಆಗದಿದ್ದರೆ ಇದಕ್ಕೆ ಮೂರು ಕಾರಣ: ದಾಸ್ಯ ಮನೋಭಾವ, ಆಲಸ್ಯ ಮನೋಭಾವ, ಹೀನ ಮನೋಭಾವ, ಹೀಗೆನ್ನುತ್ತಾರೆ ಪಾರ್ಥಸಾರಥಿ. ಅರ್ಜುನ ಸಹಸ್ರರ ಹೃದಯ ದೌರ್ಬಲ್ಯವನ್ನು ತೊಲಗಿಸಿದ್ದಾರೆ ಪಾರ್ಥಸಾರಥಿ. ಅವರೊಬ್ಬ ಆದರ್ಶ ಅಧಿಕಾರಿ.

ಪಾರ್ಥಸಾರಥಿಯವರ ಬದುಕು - ಸಾಧನೆ ಕುರಿತ ಈ ಪುಟ್ಟ ಪುಸ್ತಕವನ್ನು ಬರೆದಿರುವ ಟಿ.ಎಸ್. ಛಾಯಾಪತಿ ಅವರು ಈಗಾಗಲೇ ನಮ್ಮ ಹಲವು ನುಡಿ ಸೇವಕರನ್ನೂ ಸಾಹಿತ್ಯ ಸಿದ್ಧರನ್ನೂ ಆಡಳಿತ ಮುತ್ಸದ್ದಿಗಳನ್ನೂ ಕುರಿತು ಪುಸ್ತಕಗಳನ್ನು ಬರೆದಿದ್ದಾರೆ. ಆ ಸಾಲಿಗೆ ಇದು ಇನ್ನೊಂದು; ನೇರ ಸರಳ ಶೈಲಿ. ಸತ್ಯನಿಷ್ಠೆಯ ನಿರೂಪಣೆ. ಸಾರ್ವಜನಿಕರಲ್ಲಿ ಸಾತ್ತ್ವಿಕವನ್ನು ಬಯಸುವ ಪ್ರತಿಯೊಬ್ಬರೂ ಓದಬೇಕಾದ ಪುಸ್ತಕ.

**- ಎಚ್ಚೆಸ್ಕೆ**

## ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರ ಅಭಿಪ್ರಾಯ

ಕನ್ನಡ ಪುಸ್ತಕ ಪ್ರಕಾಶನದ ಮೂಲಕ ಕನ್ನಡಿಗರೆಲ್ಲರಿಗೆ ಸುಪರಿಚಿತವಾಗಿರುವ ಶ್ರೀ ಟಿ.ಎಸ್. ಛಾಯಾಪತಿಯವರು ಇದಿಲ್ಲಿ 'ಕನ್ನಡದ ಕಲಿ' ಶ್ರೀ ಬಿ. ಪಾರ್ಥಸಾರಥಿ ಯವರ ಅನನ್ಯ ವ್ಯಕ್ತಿತ್ವವನ್ನು ಆಕರ್ಷಕವಾಗಿ ಕಡೆದು ನಿಲ್ಲಿಸಿದ್ದಾರೆ. ಪ್ರಜಾಪ್ರಭುತ್ವದ ನೈಜಮೌಲ್ಯಗಳನ್ನು ಎತ್ತಿ ಹಿಡಿಯುವ ಅವರ ಆಡಳಿತದಲ್ಲಿನ ದಕ್ಷತೆ, ಸೇವಾತತ್ಪರತೆ ಹಾಗೂ ಕನ್ನಡ ಪ್ರಜೆಗಳ ಮೇಲೆ ತನಿಯಾದ ಬೆಳಕು ಚೆಲ್ಲಿದ್ದಾರೆ. ಹಿತಮಿತವಾದ ವಿವರಣ, ಆಡಂಬರವಿಲ್ಲದ ಸರಳ ಸ್ನಿಗ್ಧ ಚಿತ್ರಣ ಈ ಪುಟ್ಟ ಕೃತಿಯ ವಿಶೇಷಗಳಾಗಿವೆ.

**- ಡಾ.ಎಂ. ಅಕಬರ ಅಲಿ**

ಹಿಂದೊಮ್ಮೆ ಡಾ. ಹಾ.ಮಾ. ನಾಯ್ಕರು ಶ್ರೀ ಬಿ. ಪಾರ್ಥಸಾರಥಿಯವರ ಬಗ್ಗೆ ಬರೆದಿದ್ದ ಲೇಖನವನ್ನು ಓದಿದ್ದೆ. ಅಂತೆಯೇ ಹಲವಾರು ವ್ಯಕ್ತಿಗಳು ಅವರ ಬಗ್ಗೆ ಹೆಮ್ಮೆಯಿಂದ ಆಡಿದ ಮಾತುಗಳನ್ನು ಕೇಳಿ ಅವರೊಬ್ಬ ಜನಪ್ರಿಯ, ಹಾಗೂ ಸಮರ್ಥ ಆಡಳಿತಗಾರ ಎಂಬ ಚಿತ್ರ ನನ್ನ ಮನದಲ್ಲಿ ಮೂಡಿತ್ತು.

ಮಾನ್ಯ ಮಿತ್ರ ಛಾಯಾಪತಿಯವರು ಬರೆದಿರುವ 'ಕನ್ನಡದ ಕಲಿ' ಕಿರು ಹೊತ್ತಿಗೆ ಯನ್ನು ಓದಿದ ನಂತರ, ನನ್ನ ಮನದಲ್ಲಿ, ಶ್ರೀ ಪಾರ್ಥಸಾರಥಿಯವರ ಬಗ್ಗೆ ಮೂಡಿದ್ದ ಚಿತ್ರ ಮತ್ತಷ್ಟು ಸ್ಪಷ್ಟವಾಯ್ತು. ಎಚ್ಚೆಸ್ಕೆಯವರು ಹೇಳಿರುವಂತೆ ನಮ್ಮಲ್ಲಿ ದಕ್ಷ ಅಧಿಕಾರಿಗಳಿದ್ದಾರೆ, ಪ್ರಾಮಾಣಿಕರಿದ್ದಾರೆ, ನಾಡು ನುಡಿಯ ಬಗ್ಗೆ ವಿಶೇಷ ಅಭಿಮಾನ ವುಳ್ಳವರಿದ್ದಾರೆ, ಆದರೆ ಈ ಮೂರು ಗುಣಗಳೂ ಉಳ್ಳ ಅಧಿಕಾರಿಗಳು ಬಹಳ

ಅಪರೂಪ. ಅಂಥ ಅಪರೂಪದ ಅಧಿಕಾರಿಗಳಲ್ಲಿ ಶ್ರೀ ಪಾರ್ಥಸಾರಥಿಯವರು ಒಬ್ಬರು. ಇದು ಕನ್ನಡಿಗರ ಹೆಮ್ಮೆಯ ವಿಷಯ.

ಅವರೊಬ್ಬ ಸಮರ್ಥ ವಿದ್ಯಾರ್ಥಿ ಪ್ರಿಯ ಅಧ್ಯಾಪಕರಾಗಿದ್ದರು, ಹಾಗೂ ಗ್ರಂಥಕರ್ತರಾಗಿದ್ದರು, ಎನ್ನುವುದರ ಜೊತೆಗೆ ಸಮರ್ಥ ಆಡಳಿತಗಾರ, ಕನ್ನಡ ಅಭಿಮಾನಿ, ವಿನಯ ಶೀಲ, ಪ್ರಕೃತಿ ಸೌಂದರ್ಯೋಪಾಸಕ, ಆಡಳಿತ ಸುಧಾರಕ, ನುಡಿದಂತೆ ನಡೆವ ನಡೆದಂತೆ ನುಡಿವ ಧೀಮಂತ ವ್ಯಕ್ತಿ, ಜನರ ನಾಡಿಯ ಮಿಡಿತಕ್ಕೆ ಅನುಗುಣವಾಗಿ ಸ್ಪಂದಿಸುವ ಅಧಿಕಾರಿ, ಮಿತ ಭಾಷಿ, ಕಾರ್ಯದುರಂಧರ, ಶ್ರದ್ಧಾವಂತ, ಪ್ರಾಮಾಣಿಕ, ಇತ್ಯಾದಿ ಗುಣಗಳ ಸುಂದರ ಚಿತ್ರವನ್ನು ಶ್ರೀ ಛಾಯಾಪತಿಯವರು ನೇರ ಹಾಗೂ ಸರಳಭಾಷೆಯಲ್ಲಿ ಚಿತ್ರಿಸಿ ಉಪಕೃತರಾಗಿದ್ದಾರೆ.

ಅವರ ಈ ಎಲ್ಲಾ ಸಾಧನೆಗಳ ಹಾಗೂ ಯಶಸ್ಸಿನ ಹಿನ್ನೆಲೆಯಲ್ಲಿ ನಮ್ಮ ದೇಶದ ಹಿರಿಯ ಆದರ್ಶ ಜೀವಿಗಳ ಪ್ರಭಾವವನ್ನು, ಸಾಧನ ಪ್ರೇರಣೆಯ (Achievement Motive) ಕಾರ್ಯ ನಿರ್ವಹಣೆಯನ್ನು ಮತ್ತು ಮಾನವಿಕ ಮಧುರ ಸಂಬಂಧವನ್ನು (Good human relation) ಗುರುತಿಸಬಹುದು. ಅಧಿಕಾರಿಯು ಬಹಳಷ್ಟು ಜನಪ್ರಿಯತೆಗೆ ಈ ಮೂರನೆಯ ಗುಣ ಬಹಳ ಮುಖ್ಯ. ವ್ಯಕ್ತಿಚಿತ್ರವನ್ನು ಮೂಡಿಸುವಾಗ ಗ್ರಂಥಕರ್ತರು ಈ ಅಂಶವನ್ನೂ ಸ್ಪಷ್ಟಪಡಿಸಿದ್ದರೆ. ಚಿತ್ರಕ್ಕೆ ಮತ್ತಷ್ಟು ಕಳೆ ಬರುತ್ತಿತ್ತು. ಅವರ ಆಡಳಿತ ಯಶಸ್ಸಿನ ಗುಟ್ಟು 'ವ್ಯವಹಾರ ವಿಶ್ಲೇಷಣೆ ನಿಯಮಗಳು' ಆಚರಣೆ ಇರಬೇಕೆನಿಸುತ್ತದೆ. ಅಲ್ಲದೆ ಅವರೆಲ್ಲ ಸಾಧನೆಗಳ ಹಿನ್ನೆಲೆಯಲ್ಲಿ ಅವರ ಪತ್ನಿಯನ್ನು ಗುರುತಿಸಬಹುದು.

ಇವುಗಳೇನೇ ಇರಲಿ ಈ ಒಂದು ಆಡಳಿತ ವ್ಯಕ್ತಿಯ ಕಿರುಚಿತ್ರ ನಮ್ಮ ನಾಡಿನ ಹಲವಾರು ಅಧಿಕಾರಿಗಳನ್ನೂ ರೂಪಿಸುವುದಾದರೆ, ಅಥವಾ ಒಬ್ಬ ಅಧಿಕಾರಿಯನ್ನು ರೂಪಿಸಿದರೂ ಸಾಕು ಗ್ರಂಥಕರ್ತರ ಶ್ರಮ ಸಾರ್ಥಕವಾಗುತ್ತದೆ.

**- ಪಿ. ನಟರಾಜ್**

## 'ಕನ್ನಡದ ಕಲಿ' ಬಗ್ಗೆ ಅನಿಸಿಕೆಗಳು

ಸಾಮಾನ್ಯವಾಗಿ ಒಂದು ವ್ಯಕ್ತಿಯ ಬಗ್ಗೆ ಲೇಖನ ಬರೆಯುವುದು ಸ್ವಲ್ಪ ಮುಜುಗರವೇ. ಅದರಲ್ಲಿಯೂ ಸರಕಾರದಲ್ಲಿ ಆಡಳಿತ ನಡೆಸುತ್ತಿರುವ ವ್ಯಕ್ತಿಗಳ ಬಗ್ಗೆ ಬರೆಯುವುದು ಇನ್ನೂ ಹೆಚ್ಚಿನ ಮುಜುಗರವೇ ಸರಿ ಆದರೆ ಶ್ರೀ ಟಿ.ಎಸ್. ಛಾಯಾಪತಿಯವರು ಅತ್ಯಂತ ಸರಳವಾಗಿ ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ 'ಕನ್ನಡದ ಕಲಿ' ನಾಮಾಂಕಿತದಲ್ಲಿ ಶ್ರೀ ಪಾರ್ಥಸಾರಥಿಯವರ ಸಮಗ್ರ ಪರಿಚಯ ಮಾಡಿಸಿರುವುದು ಪ್ರಶಂಸನೀಯ. ಈ ಕಿರು ಹೊತ್ತಿಗೆಯನ್ನು ಓದಿದರೆ ಶ್ರೀ ಪಾರ್ಥಸಾರಥಿಯವರ ವ್ಯಕ್ತಿತ್ವ,

ಅಭಿರುಚಿ, ಸಾಧನೆಗಳು, ಆದರ್ಶಗಳು ಇತ್ಯಾದಿಗಳು ಸುಸ್ಪಷ್ಟವಾಗಿ ತಿಳಿಯುತ್ತವೆ. ಕರ್ನಾಟಕದ ನೆಲದಲ್ಲಿ ಕನ್ನಡ ಭಾಷೆಗೆ ಸಲ್ಲಬೇಕಾದ ಮಾನ್ಯತೆ, ಹಿರಿಮೆಗಳ ಬಗ್ಗೆ ತಿಳಿಸಲು ತ್ರಿಕರಣ ಶುದ್ಧಿಯಿಂದ ನಿಸ್ವಾರ್ಥವಾಗಿ ಸೇವೆ ಸಲ್ಲಿಸುತ್ತಿರುವ ಮಹಾ ವ್ಯಕ್ತಿಯ ವ್ಯಕ್ತಿತ್ವ ಎಷ್ಟು ಹಿರಿದೋ ಅಷ್ಟೇ ಹಿರಿದು 'ಕನ್ನಡದ ಕಲಿ' ಕರ್ತೃವಿನ ಶೈಲಿ. ಈ ಕಿರು ಹೊತ್ತಿಗೆಯನ್ನು ಕರ್ನಾಟಕದ ಪ್ರತಿಯೊಬ್ಬ ವ್ಯಕ್ತಿಯೂ ಓದಿ ಸ್ಪಂದಿಸಿ ಶ್ರೀ ಪಾರ್ಥಸಾರಥಿಯವರ ವ್ಯಕ್ತಿತ್ವದ ಹಿರಿಮೆಯ ಆದರ್ಶಗಳಲ್ಲಿ ಒಂದನ್ನಾದರೂ ಅನುಕರಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸಿದರೆ ಶ್ರೀ ಛಾಯಾಪತಿಯವರ ಶ್ರಮ ಸಾರ್ಥಕವಾಗುತ್ತದೆ. ಶ್ರೀ ಛಾಯಾಪತಿಯವರ ಲೇಖನ ಅವಿರತವಾಗಿ ಮುಂದುವರೆದು ಇನ್ನೂ ಹೆಚ್ಚು ಕೃತಿಗಳು ಅವರಿಂದ ಹೊರಬರಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

**- ಎ. ಅನಂತಕೃಷ್ಣ**

ಶ್ರೀ ಟಿ.ಎಸ್. ಛಾಯಾಪತಿಯವರು ಪ್ರಮುಖ ಪ್ರಕಾಶಕರು, ಹಾಗೂ ಬರಹಗಾರರು. ಸಾಹಿತ್ಯಕ್ಕೆ ಮುಖ್ಯವಾಗಿ ಬೇಕಾಗಿರುವುದು ಓದಿಸಿಕೊಳ್ಳುವ ಗುಣ. ಹತ್ತಾರು ಸಾಲುಗಳಲ್ಲಿ ಹೇಳುವುದನ್ನು ನಾಲ್ಕಾರು ಮಾತುಗಳಲ್ಲಿ ದಾಖಲಿಸುವುದು. ಓದಿದ ಮೇಲೆ ಅದು ನಮ್ಮನ್ನು ಕಾಡುತ್ತ ಇರುವುದು. ಈ ಎಲ್ಲ ಗುಣಗಳೂ ಹಿತಮಿತವಾಗಿ ಶ್ರೀ ಛಾಯಾಪತಿಯವರಲ್ಲಿ ಹದಗೊಂಡಿರುವುದಕ್ಕೆ 'ಕನ್ನಡದ ಕಲಿ' ಹೊತ್ತಿಗೆ ಸಾಕ್ಷಿಯಾಗಿದೆ.

**-ಕೆ. ಸ. ಶಿವಲೇರ್ಥನ್**

ಕನ್ನಡದ ಕಲಿ ಎಂಬ ವ್ಯಕ್ತಿ ಚಿತ್ರದಲ್ಲಿ ಟಿ.ಎಸ್. ಛಾಯಾಪತಿ ಕರ್ನಾಟಕದ ಒಬ್ಬ ಸಮರ್ಥ ಅಧಿಕಾರಿಯನ್ನು ಪರಿಚಯ ಮಾಡಿ ಕೊಟ್ಟಿದ್ದಾರೆ. ಶ್ರೀ ಪಾರ್ಥಸಾರಥಿ ಅವರು ಎಂಥ ಮಾದರಿ ಆಡಳಿತಗಾರ ಎಂಬುದನ್ನು ಈ ಪುಸ್ತಕದಲ್ಲಿ ಓದಿ ತಿಳಿಯಬೇಕು.

ಛಾಯಾಪತಿ ಅವರದು ತಿಳಿಯಾದ ಭಾಷೆ. ಅವರಿಗೆ ತಮ್ಮ ಗ್ರಂಥದ ನಾಯಕನ ಬಗ್ಗೆ ಅಭಿಮಾನವಿದೆ, ಗೌರವವಿದೆ. ಈಗಾಗಲೇ ಇಂಥ ಕೆಲವು ವ್ಯಕ್ತಿಚಿತ್ರಗಳನ್ನು ಬರೆದಿರುವ ಛಾಯಾಪತಿಯವರು ಈ ಪ್ರಕಾರದಲ್ಲಿ ತಮ್ಮ ಮೇಲ್ಮೆಯನ್ನು ಕಾಣುತ್ತಿರುವುದು ಅವರಲ್ಲಿ ಪ್ರೀತಿಯುಳ್ಳವರಿಗೆ ಸಂತೋಷವನ್ನುಂಟುಮಾಡುತ್ತದೆ.

**- ಕೆ. ಎಸ್. ಭಗವಾನ್**

ಶ್ರೀ ಛಾಯಾಪತಿಯವರು ತಮ್ಮ ಪ್ರಕಾಶನದ ಮೂಲಕ ಶ್ರೇಷ್ಠ ವಿದ್ವಾಂಸರ ಹಲವಾರು ಗ್ರಂಥಗಳನ್ನು ಪ್ರಕಟಿಸಿ ಉಪಕರಿಸಿದ್ದಾರೆ. ಇದಕ್ಕಿಂತ ಹೆಚ್ಚಾಗಿ ಸ್ವತಃ

ಲೇಖಕರಾಗಿ ವಿಶಿಷ್ಟ ರೀತಿಯ ಗ್ರಂಥವನ್ನು ರಚಿಸಿ ಒಂದು ಹೊಸ ಅಧ್ಯಾಯವನ್ನೇ ಆರಂಭಿಸಿದ್ದಾರೆ. ಸಾಮಾಜಿಕ, ರಾಜಕೀಯ, ಆಡಳಿತ ಮೊದಲಾದ ಕ್ಷೇತ್ರಗಳಿಗೆ ಸಂಬಂಧಿಸಿದ ಕೃತಿಗಳ ರಚನೆಯಿಂದಾಗಿ ಕನ್ನಡಿಗರೆಲ್ಲರ ಅಭಿನಂದನೆಗೆ ಪಾತ್ರರಾಗಿದ್ದಾರೆ. ತಳುಕಿನ ವೆಂಕಣ್ಣಯ್ಯ, ತ.ಸು. ಶಾಮರಾಯ, ತ.ರಾ.ಸು., ಅಬ್ದುಲ್ ನಜೀರ್‌ಸಾಬ್ ಮೊದಲಾದವರ ಸಾಧನೆಗಳನ್ನು ಕುರಿತು ಅವರು ರಚಿಸಿರುವ ವ್ಯಕ್ತಿಚಿತ್ರಗಳು ಸಂಕ್ಷಿಪ್ತ ವಾಗಿ ಹೃದ್ಯವಾಗಿವೆ. ಆ ಕೃತಿಗಳಿಗೆ ಕಲಶಪ್ರಾಯವಾಗಿರುವಂತೆ ಆಯಾಯ ವ್ಯಕ್ತಿಗಳ ಗುಣಗಳನ್ನು ಕೃತಿಗಳಿಗೆ ಶೀರ್ಷಿಕೆಯನ್ನಾಗಿ ಇಟ್ಟಿರುವುದು ಒಂದು ವಿಶೇಷ.

ಬರಹಗಾರರಿಗೆ ಹದ್ದಿನ ಕಣ್ಣಿರಬೇಕು. ಇದು ಛಾಯಾಪತಿಯವರ ಕೃತಿಗಳಲ್ಲಿ ಕಂಡುಬರುವ ಒಂದು ವಿಶೇಷ ಸಂಗತಿ. ಕಥೆ, ಕವನ, ಕಾದಂಬರಿಗಳಿಗೆ ನಮ್ಮಲ್ಲಿ ಕೊರತೆ ಇಲ್ಲ. ಆಡಳಿತದಲ್ಲಿ ಕನ್ನಡ ಬರಬೇಕು, ಅಧಿಕಾರಿಗಳು ಕನ್ನಡ ಬಳಸಬೇಕು, ಶಿಕ್ಷಣ ಮಾಧ್ಯಮ ಕನ್ನಡವಾಗಬೇಕು ಎಂಬ ಕೂಗು ಇಂದು ಸರ್ವೇ ಸಾಮಾನ್ಯ. ಈ ದಿಶೆಯಲ್ಲಿ ಅವುಗಳ ಜಾರಿಗಾಗಿ ಕೆಲಸ ಮಾಡುವವರನ್ನು ಗುರುತಿಸಿ, ಅಭಿನಂದಿಸುವುದು ಕನ್ನಡಿಗರೆಲ್ಲರ ಕರ್ತವ್ಯ. ಶ್ರೀ ಛಾಯಾಪತಿಯವರು 'ಕನ್ನಡದ ಕಲಿ' ಕೃತಿಯಲ್ಲಿ ಆ ಕೆಲಸ ಮಾಡಿದ್ದಾರೆ. ಪಾರ್ಥಸಾರಥಿಯವರ ಬಾಲ್ಯ, ವಿದ್ಯಾರ್ಥಿಜೀವನ, ಅಧ್ಯಾಪಕ ವೃತ್ತಿ, ಆಡಳಿತದ ಕಾರ್ಯ ವೈಖರಿ ಇವುಗಳ ಬಗ್ಗೆ ಛಾಯಾಪತಿಯವರು ಸಮರ್ಥ ರೀತಿಯಲ್ಲಿ ಪಾರ್ಥಸಾರಥಿಯವರ ವ್ಯಕ್ತಿತ್ವವನ್ನು ನಿರೂಪಿಸಿದ್ದಾರೆ. ಅತ್ಯಂತ ಸರಳವಾಗಿ ರಚಿಸಿರುವ ಈ ಕೃತಿ ಅಧಿಕಾರಿಗಳಿಗೆ, ವಿದ್ಯಾರ್ಥಿಗಳಿಗೆ ಕನ್ನಡದಲ್ಲಿ ಅಭಿಮಾನ ಉಂಟಾಗು ವಂತೆ ಮಾಡಿದ್ದಾರೆ. ಈ ರೀತಿ ವಿಶಿಷ್ಟ ಬಗೆಯ ಕೃತಿಗಳು ಶ್ರೀ ಛಾಯಾಪತಿಯವರಿಂದ ಹೊರಬಂದು ತನ್ಮೂಲಕ ಕನ್ನಡದ ಸರ್ವತೋಮುಖ ಬೆಳವಣಿಗೆಗೆ ಕಾರಣರಾಗಿ ಕನ್ನಡಿಗರೆಲ್ಲರ ಶಾಶ್ವತ ಪ್ರೀತಿಗೆ ಭಾಜನರಾಗಲಿ.

- ನೀ. ಗಿರೀಗೌಡ

# ಆಡಳಿತಭಾಷೆ ಕನ್ನಡ

ಪ್ರಕಾಶಕ - ಲೇಖಕರೂ ನನ್ನ ಬಹುಕಾಲದ ಮಿತ್ರರೂ ಆದ ಶ್ರೀ ಟಿ.ಎಸ್. ಛಾಯಾಪತಿಯವರ 'ಆಡಳಿತ ಭಾಷೆ ಕನ್ನಡ' ಎಂಬ ಈ ಪುಸ್ತಕಕ್ಕೆ ಕಿರು ಮುನ್ನುಡಿಯೊಂದನ್ನು ಬರೆಯುವುದು ನನಗೆ ಸಂತೋಷದ ಸಂಗತಿ.

ಆಡಳಿತ ಕನ್ನಡವನ್ನು ಕುರಿತು ಈಗಾಗಲೆ ಕೆಲವು ಪುಸ್ತಕಗಳು ಪ್ರಕಟವಾಗಿದ್ದು, ಅವುಗಳ ಸಾಲಿಗೆ ಪ್ರಸಕ್ತ ಪುಸ್ತಕವೊಂದು ಹೊಸ ಸೇರ್ಪಡೆಯಾಗುತ್ತಿದೆ. ಅವುಗಳಿಗಿಂತ ಇದು ಸಹಜವಾಗಿಯೆ ಮುಂದೆ ಹೋಗಿದೆ ಎಂಬುದು ಮೊದಲಿಗೇ ಹೇಳಬೇಕಾದ ಮಾತು.

'ಇಂಗ್ಲೆಂಡಿನಲ್ಲಿ ಇಂಗ್ಲಿಷ್ ಇರುವಂತೆ ಫ್ರಾನ್ಸಿನಲ್ಲಿ ಫ್ರೆಂಚ್ ಇರುವಂತೆ ಕರ್ನಾಟಕದಲ್ಲಿ ಕನ್ನಡವಿರಬೇಕು. ಈ ಆಶಯದಲ್ಲಿ ಅಸ್ವಾಭಾವಿಕತೆ ಲವಲೇಶವೂ ಇಲ್ಲ. ಏನಾದರೂ ಅಸ್ವಾಭಾವಿಕತೆ ಇದ್ದರೆ, ಅದು ಕನ್ನಡ ನಾಡಿನಲ್ಲಿ ಕನ್ನಡವಿರಲಿ ಎಂದು ಬೇಡಬೇಕಾಗಿರುವ ದುರವಸ್ಥೆಯೊಂದೆ' ಎಂಬ ಕುವೆಂಪು ಅವರ ಮಾರ್ಮಿಕವಾದ ಹೇಳಿಕೆಯನ್ನು ಛಾಯಾಪತಿಯವರು ಪುಸ್ತಕದ ಆರಂಭ ಭಾಗದಲ್ಲಿ ಉದ್ಧರಿಸಿರುವುದು ಅರ್ಥಪೂರ್ಣವಾಗಿದೆ. ಕರ್ನಾಟಕದಲ್ಲಿ ಕನ್ನಡ ಎಲ್ಲ ಹಂತಗಳಲ್ಲೂ ಶಿಕ್ಷಣ ಮಾಧ್ಯಮವಾಗಿಲ್ಲ, ಆಡಳಿತ ಮಾಧ್ಯಮವಾಗಿಲ್ಲ ಎನ್ನುವುದು ವಿಷಾದಕರ ವಿಪರ್ಯಾಸ, ಮತ್ತಾವ ಪ್ರಾಂತದಲ್ಲಾಗಲಿ  ದೇಶದಲ್ಲಾಗಲಿ ಕಾಣಬರದ ವಿಚಿತ್ರ ವಿದ್ಯಮಾನ.

ಆಡಳಿತ ಮಾಧ್ಯಮಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಕನ್ನಡ ಸಂಪೂರ್ಣವಾಗಿ ಆಡಳಿತ ಭಾಷೆಯಾಗದಿರುವುದಕ್ಕೆ ಸಂಕಲ್ಪಶಕ್ತಿಯ ಅಭಾವದ ಹೊರತು ಮತ್ತಾವ ನಿಜವಾದ ಅಥವಾ ಪ್ರಬಲವಾದ ಕಾರಣಗಳೂ ಇಲ್ಲ. ಛಾಯಾಪತಿಯವರು ಹೇಳುವಂತೆ, 'ಕನ್ನಡವನ್ನು ಶಿಕ್ಷಣ ಮಾಧ್ಯಮದಲ್ಲಿ ಜಾರಿಗೆ ತರುವುದಕ್ಕಿಂತ ಸುಲಭವಾಗಿ ಮತ್ತು ತ್ವರಿತವಾಗಿ ಆಡಳಿತದಲ್ಲಿ ಜಾರಿಗೆ ತರಬಹುದು.' ಆದರೂ, ಕನ್ನಡವನ್ನು ಆಡಳಿತ ಯಂತ್ರಕ್ಕೆ ಹೂಡುವಲ್ಲಿ ಸಹಾಯಕ ಸಾಮಗ್ರಿಯ ಅಗತ್ಯವೂ ತಕ್ಕಮಟ್ಟಿಗೆ ಇದೆಯೆಂಬುದನ್ನು ಮರೆಯುವಂತಿಲ್ಲ. ಆ ಅಗತ್ಯವನ್ನು ಪೂರೈಸುವ ದಿಶೆಯಲ್ಲಿ ಈ

**ಸಿ.ಪಿ.ಕೆ. : ಮುನ್ನುಡಿ**

ಹೊತ್ತಗೆ ಸಾಕಷ್ಟು ಯಶಸ್ವಿಯಾಗಿದೆ. ಇಂಥದೊಂದು ಉಪಯುಕ್ತವಾದ ಕೃತಿಯನ್ನು ಶ್ರಮವಹಿಸಿ ರಚಿಸಿರುವ ಛಾಯಾಪತಿಯವರನ್ನು ಅಭಿನಂದಿಸುತ್ತೇನೆ.

'ಆಡಳಿತ ಭಾಷೆ ಕನ್ನಡ' ಎಂಬ ಎರಡನೆಯ ಅಧ್ಯಾಯ ಚಾರಿತ್ರಿಕ ಸಮೀಕ್ಷೆಯನ್ನೊಳಗೊಂಡು, ವಿಷಯಕ್ಕೊಂದು ಸಮರ್ಥ ಪೀಠಿಕೆಯಾಗಿದೆ. ಹಿಂದಿನ ಕಾಲದಲ್ಲಿ - ಅಷ್ಟೇಕೆ, ಬ್ರಿಟಿಷರ ಕಾಲದಲ್ಲಿ ಕೂಡ ಆಡಳಿತ ಭಾಷೆಯಾಗಿದ್ದು ಕನ್ನಡ ಈಚೆಗೆ ಆ ಸ್ಥಾನದಿಂದ ಚ್ಯುತವಾದುದೇಕೆ, ಇರಬಹುದಾದ ತೊಡಕು ತೊಂದರೆಗಳೇನು, ಅವುಗಳ ಪರಿಹಾರ ಹೇಗೆ ಮುಂತಾದ ಪ್ರಶ್ನೆಗಳನ್ನು ಲೇಖಕರು ವಿವೇಚಿಸಿ, ಪರಿಸ್ಥಿತಿಯ ಶೋಚನೀಯತೆಯನ್ನು ಮನಗಾಣಿಸಿದ್ದಾರೆ.

'ವಿವಿಧ ರೀತಿಯ ಅರ್ಜಿ ನಮೂನೆಗಳು', 'ಪತ್ರ ವ್ಯವಹಾರ, ವಿಭಾಗ, ಫೈಲುಗಳು', 'ಕಛೇರಿ ಟಿಪ್ಪಣಿಗಳು', 'ಪಾರಿಭಾಷಿಕ ಪದಗಳು - ವಿಶ್ಲೇಷಣೆ', 'ವರದಿ', 'ಆಡಳಿತದಲ್ಲಿ ಬಳಸುವ ವಾಕ್ಯ ಮತ್ತು ವಾಕ್ಯಾಂಶ' - ಇವು ಗ್ರಂಥದ ಮುಂದಿನ ಅಧ್ಯಾಯಗಳು; ಅವುಗಳ ತಲೆಬರಹಗಳೇ ಹೂರಣವನ್ನು ಸೂಚಿಸುತ್ತವೆ. ಒಂದೊಂದು ಅಧ್ಯಾಯಕ್ಕೂ ಸಮುಚಿತವಾದ ಪ್ರವೇಶಿಕೆಯಿದೆ. ವಿಶೇಷವೆಂದರೆ, ಛಾಯಾಪತಿಯವರು ಆಡಳಿತ ಕನ್ನಡದ ಸ್ವರೂಪವನ್ನು ವಿವರಿಸುವುದರ ಜೊತೆಗೆ ಆಡಳಿತದ ಸ್ವರೂಪವನ್ನೂ ವಿವರಿಸಿ, ಆ ಬಗ್ಗೆ ಸಲಹೆ ಸೂಚನೆಗಳನ್ನು ಕೊಟ್ಟಿದ್ದಾರೆ; ಹೀಗಾಗಿ ಆಡಳಿತ - ಕನ್ನಡ ಎರಡನ್ನೂ ಕುರಿತುದಾಗಿದೆ, ಈ ಪುಸ್ತಕ ! ಪ್ರತಿಯೊಂದು ಅಧ್ಯಾಯದಲ್ಲೂ ಕಾಲ್ಪನಿಕವಲ್ಲದ, ವಿವಿಧ ಕಛೇರಿಗಳಿಂದ ಸಂಗ್ರಹಿಸಿದ ಪತ್ರ ಇತ್ಯಾದಿಗಳ ಮಾದರಿಗಳನ್ನು ಒದಗಿಸಲಾಗಿದೆ.

'ಪಾರಿಭಾಷಿಕ ಪದಗಳು' ಎಂಬ ಅಂತಿಮ ಅಧ್ಯಾಯ ವಾಸ್ತವವಾಗಿ ಒಂದು ಪುಟ್ಟ ಅಕಾರಾದಿ ಕೋಶವಾಗಿದ್ದು, ಆಸಕ್ತರಿಗೆ ಅತ್ಯಂತ ಪ್ರಯೋಜನಕರವಾಗಿದೆ. ಇಂಗ್ಲಿಷ್ ಶಬ್ದಗಳಿಗೆ ಸಮಾನಾರ್ಥಕವಾದ ಕನ್ನಡ ಶಬ್ದಗಳನ್ನು ಕೊಡುವಲ್ಲಿ ಲೇಖಕರು ಎಷ್ಟೋ ಕಡೆ ಹಿಂದಿನವರ ತಪ್ಪುಗಳನ್ನು ತಿದ್ದಿದ್ದಾರೆಂಬುದು ಉಲ್ಲೇಖನೀಯ. ಇಂಥಕಡೆ ಅವರ ಸೂಕ್ಷ್ಮ ದೃಷ್ಟಿಯನ್ನು ಗುರುತಿಸಬಹುದು : 'ಉದಾಹರಣೆಗೆ, 'ಲಿಮಿಟೆಡ್' ಎಂಬ ಪದ. ಈ ಪದಕ್ಕೆ 'ಪರಿಮಿತ' ಎಂಬುದು ಅನುವಾದದ ದೃಷ್ಟಿಯಿಂದ ಸರಿಯಾಗಿದೆ. ಆದರೆ 'ನಿಯಮಿತ' ಎಂಬ ಪದ ಉಪಯೋಗವಾಗಿ ಬಳಕೆಗೆ ಬಂದಿದೆ'.

ಪಾರಿಭಾಷಿಕ ಪದಗಳ ವಿಷಯದಲ್ಲಿ ಮಡಿವಂತಿಕೆ ಬೇಕಿಲ್ಲವೆಂದು ಛಾಯಾಪತಿಯವರು ಹೇಳುವುದು ಒಪ್ಪಬೇಕಾದ ವಿಚಾರ. ಮೂಲ ಶಬ್ದಗಳನ್ನು ಎಲ್ಲಿ ಹಾಗೆಯೆ ಇಟ್ಟುಕೊಳ್ಳಬೇಕು, ಎಲ್ಲಿ ಕನ್ನಡಿಸಬೇಕು ಎಂಬುದು ಔಚಿತ್ಯಕ್ಕೆ ಬಿಟ್ಟ ಪ್ರಶ್ನೆ ಎಂದು ಅವರು ಹೇಳುವುದು ಕೂಡ ಸಮರ್ಪಕವಾಗಿದೆ.

ಆಡಳಿತ ಭಾಷೆ ಹೇಗಿರಬೇಕೆಂಬುದನ್ನು ಲೇಖಕರು ಹೀಗೆ ತಿಳಿಸುತ್ತಾರೆ. 'ಯಾವುದೇ ವಿಚಾರವನ್ನು ಆಡಳಿತದ ವಿಷಯದಲ್ಲಿ ಹೇಳುವಾಗ, 'ಚಿಕ್ಕ ವಾಕ್ಯದಲ್ಲಿ ಸರಳವಾಗಿ,

ಸುಲಭವಾಗಿ ಹೇಳಬೇಕು. ಸಂಯುಕ್ತ ವಾಕ್ಯಗಳ ರಚನೆ ಕೂಡದು. ಅಲಂಕಾರ, ಧ್ವನಿ, ದ್ವಂದ್ವಾರ್ಥ, ಉತ್ಪ್ರೇಕ್ಷೆ ಮೊದಲಾದ ಮೀಮಾಂಸೆಯ ಭಾಷೆಯನ್ನು ಬಳಸುವುದು ಉಚಿತವಲ್ಲ'. ಈ ಹೊತ್ತಗೆಯಲ್ಲಿ ಲೇಖಕರ ಭಾಷೆಯೂ ಬಹುತೇಕ ಹೀಗೆಯೆ ಇದೆಯೆಂಬುದು ಗಮನಾರ್ಹ. ಅದರಲ್ಲಿ ಸರಳತೆ, ಸ್ಪಷ್ಟತೆ, ಸೌಲಭ್ಯಗಳಿವೆ; ನಿರೂಪಣೆ ಮನಸ್ಸನ್ನು ಹಿಡಿಯುವಂತಿದೆ.

ಈ ಪುಸ್ತಕದಲ್ಲಿ ಲೋಪ, ದೋಷಗಳಿಲ್ಲವೆ? ಇರಬಹುದು; ಅವುಗಳನ್ನು ಕಂಡುಹಿಡಿಯುವಷ್ಟು ಪರಿಶ್ರಮ ಈ ಕ್ಷೇತ್ರದಲ್ಲಿ ನನಗಿಲ್ಲ; ಆದರೆ ಪುಸ್ತಕದ ಗುಣಗಳನ್ನು ನಾನು ಗ್ರಹಿಸಬಲ್ಲೆ; ಇದೊಂದು ಒಳ್ಳೆಯ ಪುಸ್ತಕ ಎಂಬುದರ ಬಗೆಗೆ ಸಂದೇಹ ಅನಾವಶ್ಯಕ.

ವಿವಿಧ ಹಂತಗಳಲ್ಲಿ ಆಡಳಿತ ಸೂತ್ರ ಹಿಡಿದವರು ಈ ಹೊತ್ತಗೆಯ ಪೂರ್ಣ ಪ್ರಯೋಜನವನ್ನು ಪಡೆದುಕೊಳ್ಳಲಿ, ಛಾಯಾಪತಿಯವರು ಮಾಡಿರುವ ಈ 'ಲೋಕೋಪಯೋಗಿ' ಕಾರ್ಯ ತನ್ಮೂಲಕ ಸಾರ್ಥಕವಾಗಲಿ ಎಂದು ಹಾರೈಸುತ್ತೇನೆ.

# ಆಡಳಿತ ಭಾಷೆ ಕನ್ನಡ

ಗೆಳೆಯರಾದ ಶ್ರೀ ಟಿ.ಎಸ್. ಛಾಯಾಪತಿ ಅವರ 'ಆಡಳಿತ ಭಾಷೆ ಕನ್ನಡ'ವನ್ನು ನಾನು ಆಸಕ್ತಿಯಿಂದ ಓದಿದ್ದೇನೆ. ಕನ್ನಡದಲ್ಲಿ ಈಗಾಗಲೇ ಈ ಕುರಿತ ಪುಸ್ತಕಗಳು ಅನೇಕವಿದೆ. ಆದರೆ ಶ್ರೀ ಛಾಯಾಪತಿಯವರ ಪುಸ್ತಕ ಅವೆಲ್ಲಕ್ಕಿಂತ ಮುಂದೆ ಹೋಗಿದೆಯೆನ್ನಬಹುದು! ಅವೆಲ್ಲದರ ಪ್ರಯೋಜನ ಪಡೆದುಕೊಂಡು ಈ ಪುಸ್ತಕ ಹೆಜ್ಜೆ ಹಾಕಿದೆ. ಆಡಳಿತ ಭಾಷೆ ಕನ್ನಡ ಎಂಬ ಮೊದಲನೆಯ ಅಧ್ಯಾಯ ತಾಯಿ ನುಡಿ ಅಥವಾ ಪರಿಸರದ ಭಾಷೆಯ ಪರಿಚಯವಿಲ್ಲದ ವ್ಯಕ್ತಿಗಳು ಸಮರ್ಪಕವಾದ ಆಡಳಿತ ನಡೆಸುವಲ್ಲಿ ಹೇಗೆ ಅಸಮರ್ಥರಾಗುತ್ತಾರೆ ಎಂಬುದನ್ನು ಸೂಕ್ಷ್ಮವಾಗಿ ವಿವೇಚಿಸಿದ್ದಾರೆ. ಇದು ಶ್ರೀ ಛಾಯಾಪತಿಯವರ ಸ್ವೋಪಜ್ಞವಾದ ಕೊಡುಗೆ. ಮಾದರಿ ಪತ್ರಗಳು, ಆದೇಶಗಳು, ಪಾರಿಭಾಷಿಕ ಪದಗಳು - ಇವೆಲ್ಲವೂ ವಿಷಯಕ್ಕೆ ಉಚಿತವಾದ ನ್ಯಾಯವನ್ನು ದೊರಕಿಸಿಕೊಡುತ್ತವೆ.

**- ಹಾ.ಮಾ. ನಾಯಕ**

ಟಿ.ಎಸ್. ಛಾಯಾಪತಿಯವರು ಬರೆದಿರುವ 'ಆಡಳಿತ ಭಾಷೆ ಕನ್ನಡ' ಎಂಬ ಹೊತ್ತಗೆಯಲ್ಲಿ ಆಡಳಿತದಲ್ಲಿ ಕನ್ನಡವನ್ನು ಏಕೆ ಮತ್ತು ಹೇಗೆ ಉಪಯೋಗಿಸಬೇಕೆಂಬ ಬಗ್ಗೆ ಮಹತ್ತರವಾದ ವಿಷಯಗಳ ಸಂಗ್ರಹಣೆಯನ್ನು ಹೊಂದಿದೆ. ಜನ ಸಮುದಾಯದ ಹಾಗೂ ಆಡಳಿತ ವರ್ಗದ ಅಗತ್ಯಗಳನ್ನು ಈ ಕಿರುಹೊತ್ತಗೆ ತನ್ನದೇ ಆದ ರೀತಿಯಲ್ಲಿ ಪೂರೈಸುತ್ತದೆಂಬ ಭರವಸೆ ನನಗಿದೆ.

**- ಜಿ.ವಿ. ಕೊಂಗವಾಡ್**

# ತಂಪು ನೆಳಲು

ನನ್ನ ಪೂಜ್ಯ ತಂದೆ ತ.ಸು. ಶಾಮರಾಯರು ಒಬ್ಬ ಸಾರ್ಥಕ ಜೀವಿ. 'ಪರಿವರ್ತಿನಿ ಸಂಸಾರೇ ಮೃತಃ ಕೋವಾನ ಜಾಯತೇ. ಸ ಜಾತೋ ಯೇನ ಜಾತೇನ ವಂಶೋಯಾತಿ ಸಮುನ್ನತಿಮ್||' ಎಂಬ ಸೂಕ್ತಿಗೆ ಜೀವಂತ ಉದಾಹರಣೆಯಾಗಿದ್ದರು, ಅವರು. ಥಳಕಿನ ಈ ಪ್ರಪಂಚದಲ್ಲಿ ತಳುಕಿನ ಪ್ರಸಿದ್ಧವಂಶದ ಕುಡಿಯಾದ ಅವರು ಅಣ್ಣ ಪೂಜ್ಯ ವೆಂಕಣ್ಣಯ್ಯನವರ ಪಡಿಯಚ್ಚೇ ಆಗಿ, ತಮ್ಮ ಜೀವಿತಕಾಲದಲ್ಲಿಯೇ ದಂತಕಥೆಯಾಗಿದ್ದರು. ಅಧ್ಯಯನ, ಅಧ್ಯಾಪನ, ಕೃತಿ ರಚನೆಯ ತ್ರಿವೇಣಿಸಂಗಮವಾಗಿದ್ದವರು, ಅವರು. ಶಿಷ್ಯಸಂಪತ್ತಿನಿಂದ ಬಹುದೊಡ್ಡ ಶ್ರೀಮಂತರಾಗಿದ್ದ ಅವರ ವ್ಯಕ್ತಿತ್ವದ ತಂಪು ನೆಳಲಿನಲ್ಲಿ ನೆಮ್ಮದಿಯನ್ನು, ಸಾರ್ಥಕತೆಯನ್ನು, ಜೀವನೋತ್ಸಾಹವನ್ನು ಪಡೆದುಕೊಂಡವರು ಅದೆಷ್ಟು ಜನರೋ! 'ಪರೋಪಕಾರಾರ್ಥಮಿದಂ ಶರೀರಮ್' ಎಂಬ ವಾಣ್ಣುಡಿಯಂತೆ ಜೀವಮಾನದುದ್ದಕ್ಕೂ ಪರಹಿತಕ್ಕಾಗಿಯೇ ಜೀವವನ್ನು ಗಂಧವಂತೆ ತೇಯ್ದ ಅಮೃತ ಚೇತನ, ಅವರು. ಅವರಿಗಿದ್ದ ಪ್ರಭಾವ, ಶಿಷ್ಯಸಂಪತ್ತು, ಸ್ನೇಹದ ಸಿರಿಯನ್ನು ಬಳಸಿಕೊಂಡು ಅವರು ಏನನ್ನು ಬೇಕಾದರೂ ಪಡೆದುಕೊಳ್ಳಬಹುದಿತ್ತು. ಆದರೆ, ಎಂದಿಗೂ 'ದೇಹಿ' ಎಂದು ಯಾರನ್ನೂ ಬೇಡದೆ, 'ನಾಸ್ತಿ' ಎಂದು ಯಾರಿಗೂ ಹೇಳದೆ ಅಪರೂಪದ, ಆದರ್ಶಮಯ ಜೀವನವನ್ನು ನಡೆಸಿದ ಪ್ರಾತಃ ಸ್ಮರಣೀಯರು, ಅವರು. ಹಲವಾರು ಬಾರಿ ಅವರು ನನ್ನ ಬಳಿ, 'ಮಗು ನನ್ನ ಜೀವನಚರಿತ್ರೆಯನ್ನು ನೀನೇ ಬರೆಯಬೇಕು ಕಣೋ'ಎಂದು ಹೇಳಿದ್ದುಂಟು. ಭಗವಂತನ ಇಚ್ಛೆಯಿದ್ದುದೇ ಹಾಗೇನೊ?! ನಾನದನ್ನು ಬರೆಯಲಾಗಲೇ ಇಲ್ಲ. ಇದೀಗ ನನ್ನ ತಮ್ಮ ಚಿ|| ಟಿ.ಎಸ್. ಛಾಯಾಪತಿ ಅವರ ವ್ಯಕ್ತಿತ್ವವನ್ನು ಅರ್ಥಪೂರ್ಣವಾಗಿ ಧ್ವನಿಸುವ 'ತಂಪುನೆಳಲು' ಎಂಬ ಶೀರ್ಷಿಕೆಯೊಂದಿಗೆ ಅವರ ಜೀವನಚರಿತ್ರೆಯನ್ನು ಬರೆದಿದ್ದಾನೆ. ಜನನದಿಂದ ಹಿಡಿದು ಅವರ ಮರಣದವರೆಗಿನ ಜೀವನಯಾತ್ರೆಯನ್ನು ಸುಂದರವಾಗಿ, ಹೃದಯಸ್ಪರ್ಶಿಯಾಗಿ ಇಲ್ಲಿ ನಿರೂಪಿಸಿದ್ದಾನೆ. ಅವರ ಅನನ್ಯ ವ್ಯಕ್ತಿತ್ವದ ಎಲ್ಲ ಮಜಲುಗಳನ್ನೂ ತೆರೆದಿಟ್ಟಿದ್ದಾನೆ. ಈ ಕಥನವನ್ನು ಓದಿದಾಗ 'ಇಂತಹ ವ್ಯಕ್ತಿ ಯೊಬ್ಬರು ಇದ್ದರೆ? ಹೀಗೂ ಇರಲು ಸಾಧ್ಯವೆ?'

ಬಿ. ಟಿ.ಎಸ್. ವೆಂಕಣ್ಣಯ್ಯ : ಮುನ್ನುಡಿ

ಎಂದು ಅಚ್ಚರಿ ಮೂಡಿದರೆ ಅತಿಶಯೋಕ್ತಿಯಲ್ಲ. ಅವರ ಜೀವನವನ್ನು ನನ್ನೀ ಸೋದರ ತುಂಬ ನಿಕಟವಾಗಿ ಕಂಡವನು. ಹೀಗಾಗಿ ಅವನ ಬರವಣಿಗೆಯಲ್ಲಿ ನೈಜತೆಯಿದೆ, ವಸ್ತುನಿಷ್ಠತೆಯಿದೆ, ಖಚಿತತೆ ಇದೆ. ದೂರದ ಶೃಂಗೇರಿ ಯಲ್ಲಿ ಶಾಶ್ವತವಾಗಿ ನೆಲೆಸಿದ ನಾನು ಹಿರಿಯಮಗನಾಗಿಯೂ ಆ ಸೌಭಾಗ್ಯದಿಂದ ವಂಚಿತನಾದೆ. ನನ್ನ ಜೀವನದ ಬಹುದೊಡ್ಡ ದುರಂತ ಇದು. ಆದರೂ ಅವರ ವಾತ್ಸಲ್ಯದ ಸವಿಯನ್ನು ನಾನು ಕಟ್ಟುರೆಯಾಗಿ ಸವಿದಿದ್ದೇನೆ. ಅವರ ನೆನಪಿನ ಸೌರಭರೂಪವಾದ ಹಲವಾರು ಪತ್ರಗಳನ್ನು ಅವರು ನನಗೆ ಬರೆದದ್ದುಂಟು. 'ಮಗು, ನಿನಗೇನಾದರೂ ಸಹಾಯಬೇಕಿದ್ದರೆ ನಿಸ್ಸಂಕೋಚವಾಗಿ ಬರಿ' ಎಂದೋ, ನನ್ನ ಮನಸ್ಸಿನ ದುಗುಡವನ್ನೇ ನಾದರೂ ಲೆಕ್ಕಣಿಸಿದರೆ, 'ಮಗು, ನಿಮ್ಮಪ್ಪ ನಾನಿನ್ನೂ ಬದುಕಿದ್ದೇನೆ, ನೀನು ಯಾವುದಕ್ಕೂ ಚಿಂತೆ ಮಾಡಬೇಡ' ಎಂದು ಬರೆದು ವಾತ್ಸಲ್ಯದ ತಂಪನ್ನೆರೆಯುತ್ತಿದ್ದರು. ಜೀವನದ ಕೊನೆಗಾಲದಲ್ಲಿ. ಹಲವಾರು ಬಾರಿ 'ಮಗು, ನನಗೆ ಸನ್ಯಾಸ ಸ್ವೀಕಾರ ಮಾಡಬೇಕೆನಿಸಿದೆ. ಆಗ ಜೀವನದ ನಾಲ್ಕೂ ಅವಸ್ಥೆಗಳನ್ನು ಪೂರ್ಣಗೊಳಿಸಿದಂತಾಗು ತ್ತದೆ' ಎಂದಿದ್ದರು. ಆದರೆ ಸನ್ಯಾಸಾಶ್ರಮ ಸ್ವೀಕಾರಮಾಡದಿದ್ದರೂ ಸನ್ಯಾಸಿಯಂತೆ ಜೀವನ ನಡೆಸಿ ಜೀವನಯಾತ್ರೆ ಮುಗಿಸಿದರು, ಅವರು. 'ಇಹವನ್ನು ದೂರದೆ ಪರಕ್ಕೆ ದೂರವಾಗದೆ' ಬದುಕಿದ ಧನ್ಯಜೀವಿ, ಅವರು. ಅವರ ಜೀವನಚರಿತ್ರೆಯನ್ನು ಬರೆಯುವುದರ ಮೂಲಕ ಸೋದರ ಛಾಯಾಪತಿ ಪಿತೃಋಣವನ್ನು ತೀರಿಸಿದ್ದಾನೆ. ಆದರೆ ಅವರ ಜೀವನಚರಿತ್ರೆ ಇಷ್ಟೇಯೇನು? ಮಹಾತ್ಮರ ಜೀವನ ಮುಕ್ತಾಯ ಗೊಳ್ಳುವುದೆಂಬುದುಂಟೆ?! ಸೋದರ ಛಾಯಾಪತಿಯನ್ನು ಅವನ ಈ ಸಾರ್ಥಕ ಕಾರ್ಯಕ್ಕಾಗಿ ಹಾರ್ದಿಕವಾಗಿ ಅಭಿನಂದಿಸು ತ್ತೇನೆ.

# ನಮ್ಮ ಕ್ರಿಕೆಟ್

## ಜನಪ್ರಿಯ ಕ್ರಿಕೆಟ್‌ನ ಸರಳ ನಿರೂಪಣೆ

ಎರಡು ತಂಡಗಳ ನಡುವೆ ಆಟ - ಕ್ರಿಕೆಟ್ . ಇಂದು ಜಗತ್ಪ್ರಸಿದ್ಧ ಆಟ. ಪ್ರತಿಯೊಂದು ತಂಡದಲ್ಲಿ ಹನ್ನೊಂದು ಮಂದಿ ಇದ್ದು ಎರಡು ತಂಡದವರೂ ಬ್ಯಾಟಿಂಗ್ ಮತ್ತು ಬೌಲಿಂಗ್ ಮಾಡುತ್ತಾರೆ. ಕ್ರಿಕೆಟ್ ಆಟ ಆರಂಭಿಸುವುದನ್ನು ಮೈದಾನದ ಎದುರುಬದಿರು 22 ಗಜಗಳ ಅಂತರದಲ್ಲಿ ತಲಾ ಮೂರು ಮೂರು 28 ಅಂಗುಲಗಳ ಉದ್ದದ ಗೂಟಗಳನ್ನು ನೆಟ್ಟಿರುವುದೇ ವಿಕೆಟ್ಟುಗಳು. ಸುತ್ತಳತೆ 9 ಅಂಗುಲದ ಐದೂವರೆ ಔನ್ಸ್ ತೂಕದ ಕೆಂಪು ಚೆಂಡೇ ಕ್ರಿಕೆಟ್ ಬಾಲ್. ಪ್ರತಿಯೊಂದು ಮೂರು ವಿಕೆಟ್ಟುಗಳ ಮೇಲೆ ತಲಾ ಎರಡೆರಡು ಬೇಲ್ಸ್‌ಗಳು. ಬ್ಯಾಟ್ಸ್‌ಮನ್‌ಗಳು ರಕ್ಷಣೆಗಾಗಿ ಪ್ಯಾಡು, ಗ್ಲೌಸ್‌ಗಳು ಮತ್ತು ಅಬ್ಡಮನ್‌ಗಾರ್ಡ್ಸ್ ಧರಿಸುತ್ತಾರೆ. ವಿಕೆಟ್ಟುಗಳ ನಡುವಿನ ಪ್ರದೇಶವೇ 5 ಅಡಿ ಅಗಲ 22 ಗಜದುದ್ದವೇ ಪಿಚ್. ಆಟ ಆರಂಭವಾಗುವ ಮುನ್ನ ಶ್ವೇತವಸ್ತ್ರಧಾರಿಗಳೇ ಸ್ಟ್ರೈಟ್ ಅಂಪೈರ್ ಮತ್ತು ಲೆಗ್ ಅಂಪೈರ್. ನಾಣ್ಯ ಚಿಮ್ಮಿದಾಗ (ಟಾಸ್) ಗೆದ್ದ ತಂಡದ ನಾಯಕ ಬ್ಯಾಟಿಂಗ್ ಅಥವಾ ಬೌಲಿಂಗ್ ಘೋಷಿಸುತ್ತಾನೆ. ತಂಡಕ್ಕೊಬ್ಬನೆ ನಾಯಕ. ಆ ನಾಯಕನ ಗೈರು ಹಾಜರಿಯಾದಲ್ಲಿ ಉಪನಾಯಕ ನಿರುವನು. ಬ್ಯಾಟಿಂಗ್‌ನಲ್ಲಿ ಫಾರ್ವರ್ಡ್ ಮತ್ತು ಬ್ಯಾಕ್‌ವರ್ಡ್ ಡಿಫೆನ್ಸ್ ಆಟವಿದ್ದು ಚೆಂಡು ಕ್ಷೇತ್ರರಕ್ಷಕರ ಕೈಯನ್ನು ತಲುಪುವುದರೊಳಗೆ ಓಡುವುದೇ ರನ್ನು. ಬೌಂಡರಿ ಲೈನನ್ನು ದಾಟಿದರೆ ಬೌಂಡರಿ. ಮೊದಲನೆ ಪಿಚ್ ಬೌಂಡರಿ ಲೈನಿನ ಆಚೆ ಬಿದ್ದರೆ ಸಿಕ್ಸರ್. ಬ್ಯಾಟ್ಸ್‌ಮನ್‌ಗಳು ತಮ್ಮ ರಿಸ್ಟ್‌ವರ್ಕ್‌ನಿಂದ ಬೌಂಡರಿಯನ್ನು ಬಾರಿಸಿದವರಿದ್ದಾರೆ.

ವಿಕೆಟ್‌ಕೀಪರ್‌ನನ್ನು ದಾಟಿ ಬ್ಯಾಟುಮನ್‌ಗಳು ಓಡುವ ರನ್‌ಗೆ ಬೈ. ಬ್ಯಾಟ್ಸ್‌ಮನ್‌ನ ಕಾಲಿಗೆ ಬಿದ್ದು ಮುಂದೆ ಹೋಗುವ ರನ್‌ಗೆ ಓಡಿದರೆ ಲೆಗ್‌ಬೈ. ಬೌಲರ್ ಬಾಲ್ ಅನ್ನು ಪಿಚ್‌ನ ಆಚೆ-ಈಚೆ ಬೌಲ್ ಮಾಡಿದಾಗ ವೈಡ್‌ಬಾಲ್. ಈ

ಈಚನೂರು ಕುಮಾರ್ : ಮೈಸೂರು ಮಿತ್ರ

ಬಾಲ್‌ನಿಂದ ಬ್ಯಾಟ್ಸ್‌ಮನ್‌ನನ್ನು ಸ್ಟಂಪ್ ಮಾಡಬಹುದು. ಬೌಲ್ ಮಾಡುವ ಕಡೆ ಇರುವ ಗೆರೆ ಬೌಲಿಂಗ್ ಕ್ರೀಸ್. ಇದನ್ನು ತಿಳಿವರೆ ಅಂತಹ ಬಾಲ್ ನೋಬಾಲ್.

ಮೈದಾನದ ಸುತ್ತಲೂ ಹಾಕಿದ್ದ ಗೆರೆಯೇ ಬೌಂಡರಿಲೈನ್. ಇದರೊಳಗೆ ತಂಡದ ನಾಯಕ ಚತುರತೆಯಿಂದ ಫೀಲ್ಡ್‌ಪ್ಲೇಸ್‌ಮೆಂಟ್ ಮಾಡಿರುತ್ತಾನೆ. ಚೆನ್ನಾಗಿ ಆಡಿದ ಫೀಲ್ಡರ್ಸ್‌ಗೆ ಅನೇಕ ಗುಣ ವಿಶೇಷಗಳನ್ನು ಕೊಟ್ಟಿದ್ದೂ ಉಂಟು. ಬ್ಯಾಟ್ಸ್‌ಮನ್ ಹಿಂಭಾಗದಲ್ಲಿ ವಿಕೇಟ್‌ಕೀಪರ್. ಈತನ ಅಸುಪಾಸಿನಲ್ಲಿರುವವರಿಗೆ ಸ್ಲಿಪ್ಸ್ ಫೀಲ್ಡರ್ಸ್ ಎಂದೂ ಎಡಗಡೆ ನಿಂತಿರುವುದನ್ನು ಲೆಗ್‌ಸ್ಲಿಪ್ಸ್ ಕ್ಷೇತ್ರ ರಕ್ಷಕ ಎಂದೂ ಕರೆಯಲಾಗಿದೆ. ಬೌಲ್ ಅನ್ನು ಬ್ಯಾಟ್ಸ್‌ಮನ್‌ಗಳಿಗೆ ಎಸೆಯುವವನೇ ಬೌಲರ್. ಆ ಬೌಲರ್ ಒಮ್ಮೊಮ್ಮೆ ಬಾಲ್‌ನ್ನು ಎಸೆದರೆ ಥ್ರೊ. ಈ ಬೌಲರ್‌ಗಳಲ್ಲಿ ವೇಗದ ಬೌಲರ್, ಸ್ಪಿನ್ ಬೌಲರ್‌ಗಳೂ ಇದ್ದಾರೆ. ವೇಗದ ಬೌಲರ್ ಬೌಲ್ ಮಾಡುವ ಚೆಂಡು ಬ್ಯಾಟ್ಸ್‌ಮನ್‌ನ ಹಣೆಗೆ ಬಿದ್ದರೆ ಇಂಥ ಬೌಲಿಂಗ್ ಭೀಮರ್ಸ್ ಎನ್ನುವರು. ಬೌಲಿಂಗ್ ಗೆರೆಯಿಂದ 4 ಅಡಿಗಳ ಉದ್ದದಲ್ಲಿ ಪಾಪಿಂಗ್ ಕ್ರೀಸ್ ಇರುತ್ತದೆ. ವೇಗದ ಬೌಲರ್‌ಗಳು ಬಾಲ್ ಮಾಡಿದಾಗ ಬಾಲು ತಲೆಯ ನೇರದಲ್ಲಿ ಮಿಂಚಿನಂತೆ ಬಂದರೆ ಶಾರ್ಟ್‌ಪಿಚ್ ಬಂಪರ್. ಇದು ಆತಂಕಕಾರಿ ಚೆಂಡು ಎಂದರೂ ಸರಿ. ಇಂಥ ಬಂಪರ್‌ಗಳನ್ನು ಬ್ಯಾಟ್ಸ್‌ಮನ್‌ಗಳು ತಮ್ಮದೇ ಆದ ರೀತಿಯಲ್ಲಿ ವೀಕ್ಷಿಸುವುದೇ ಹುಕ್. ಕೆಲವು ಬ್ಯಾಟ್ಸ್‌ಮನ್‌ಗಳು ಸ್ಟ್ರೋಕ್ ಮಾಡಲಾರದೆ ಚೆಂಡುಗಳಿಗೆ ಶರಣಾದರೆ ಡಕ್.

ವೇಗದ ಬೌಲರುಗಳು ಬಾಲ್ ನೆಲಕ್ಕೆ ಬೀಳುತ್ತಿದ್ದಂತೆಯೇ ತಿರುಗುವಂತೆ ಮಾಡಿದ ಬೌಲ್ ಎಡಗಡೆಗೆ ಬಿದ್ದರೆ ಲೆಗ್‌ಸ್ಪಿನ್ ಬಲಗಡೆ ಬಿದ್ದರೆ ಆಫ್‌ಸ್ಪಿನ್. ಇವೆರಡನ್ನೂ ಪ್ರಯೋಗಿಸುವವರು ಗೂಗ್ಲಿಬೌಲರ್. ಬೌಲರ್‌ಗಳು ಬ್ಯಾಟ್ಸ್‌ಮನ್ನುಗಳಿಗೆ ಆರು ಬಾರಿ ಬೌಲ್ ಮಾಡಿದರೆ ಓವರ್. ಒಂದು ರನ್ ಅನ್ನೂ ಬಾರಿಸದ ಓವರ್‌ಗಳಿಗೆ ಮೇಡನ್‌ಓವರ್. ಅದೇ ರೀತಿ ಇಂಥದೇ ಓವರುಗಳಲ್ಲಿ ಪಡೆದ ವಿಕಟ್ಟುಗಳಿಗೆ ಮೇಡನ್‌ವಿಕೆಟ್. ಯಾವುದೇ ಓವರಿನಲ್ಲಿ ಸತತವಾಗಿ ಮೂರು ಬಾಲುಗಳಿಗೆ ಮೂರು ಔಟ್ ಆದ ಬೌಲರುಗಳು ಪಡೆಯುವ ವಿಕೆಟ್‌ಗಳಿಗೆ ಹ್ಯಾಟ್-ಟ್ರಿಕ್. ಹನ್ನೊಂದು ಮಂದಿಯ ತಂಡದಲ್ಲಿ ಅನಿವಾರ್ಯವಾಗಿ ಒಬ್ಬರ ಬದಲು ಆಟಗಾರರು ಬಂದರೆ ಸಬ್‌ಸ್ಟಿಟ್ಯೂಟ್ ಎನ್ನುವರು.

ಅನಿರೀಕ್ಷಿತವಾಗಿ ಬ್ಯಾಟು ವಿಕೆಟ್ಟಿಗೆ ತಗುಲಿದರೆ ಬ್ಯಾಟ್‌ಮನ್ಸ್ ಔಟು. ಕೆಲವೊಮ್ಮೆ ಬೌಲ್ ಎದುರಿಸುವ ಚೆಂಡನ್ನು ಆಯತಪ್ಪಿಸಿ ತಾನೇ ವಿಕೆಟ್ ಉರುಳಿಸುವವನು. ಈಗ ಇದು ಹಿಟ್‌ವಿಕೆಟ್‌ನಿಂದ ಔಟ್.

ಎರಡು ತಂಡಗಳ ಸ್ಕೋರುಗಳು ಸರಿ ಸಮನಾಗಿ ಪಂದ್ಯ ಮುಕ್ತಾಯವಾದರೆ ಅಂಥ ಪಂದ್ಯವನ್ನು ಟೈ ಎಂದು ಘೋಷಿಸುವರು. ಯಾವ ತಂಡ ಅತ್ಯಂತ ಹೆಚ್ಚು

ರನ್ನುಗಳನ್ನು ಗಳಿಸುತ್ತದೋ ಆ ತಂಡಕ್ಕೆ ಗೆಲವು, ಮುಕ್ತಾಯವಾಗದ ತಂಡವನ್ನು ಸಮ ಎನ್ನುತ್ತಾರೆ.

ಈ ಕ್ರಿಕೆಟ್ ಅನ್ನು ಕೂಲಂಕಷವಾಗಿ ಸ್ವತಃ ಕ್ರಿಕೆಟ್ ಆಟಗಾರರಾಗಿ ಅನುಭವಿಸಿದ ಉದಾಹರಣೆಗಳನ್ನು ಪುಸ್ತಕ ರೂಪದಲ್ಲಿ ಸರಳವಾಗಿ ನಿರೂಪಿಸಿದ್ದಾರೆ.

ರಂಜನೆ ಮತ್ತು ಕಾಲಹರಣಕ್ಕಾಗಿ ಆರಂಭಗೊಂಡ ಈ ಕ್ರಿಕೆಟ್ ಪ್ರಥಮ ದರ್ಜೆ ಪಂದ್ಯವಾಗಿ, ಒಂದು ದಿನದ ಅಂತರರಾಷ್ಟ್ರೀಯ ಪಂದ್ಯವಾಗಿ, ಇದೀಗ ಡಬಲ್ ವಿಕೆಟ್ ಕ್ರಿಕೆಟ್ ಟೂರ್ನಿ ಕೂಡ ಆವಿಷ್ಕಾರವಾಗಿದೆ.

'ಟಿ.ಎಸ್. ಛಾಯಾಪತಿ ಅವರು ಪಂಚಾಯತ್ ರಾಜ್ಯವ್ಯವಸ್ಥೆ ಕುರಿತು ಬರೆದ ಕೃತಿ ತುಂಬ ಜನಪ್ರಿಯವಾಗಿದೆ. ಅವರೀಗ ಕ್ರಿಕೆಟ್ ಲೋಕಕ್ಕೆ ದಾಳಿ ಇಟ್ಟಿದ್ದಾರೆ. ಒಂದು ಕಾಲದಲ್ಲಿ ಸೂರ್ಯ ಮುಳುಗದ ಸಾಮ್ರಾಜ್ಯವನ್ನಾಳುತ್ತಿದ್ದ ಬ್ರಿಟನ್ನಿನ ವಿರಾಮಜೀವಿಗಳ ವಿನೋದ ಸಾಧನವಾಗಿ ಆರಂಭವಾಗಿ, ಅತ್ಯದ್ಭುತ ಕಲೆಯಾಗಿ ವಿಕಾಸಗೊಂಡ ಕ್ರಿಕೆಟ್‌ನ್ನು ಸ್ವಾರಸ್ಯವಾಗಿ ವಿವರಿಸಿದ್ದಾರೆ.' ಎಂದು ಹಿರಿಯ ವಿಮರ್ಶಕ ಎಚ್ಚೆಸ್ಕೆಯವರು ಹೇಳಿರುವುದು ನಿಜವಾಗಿದೆ.

ಮುಖಪುಟದ ಒಳಅಂಗಿಯಲ್ಲಿ ಕ್ರಿಕೆಟ್ ಆಟದ ಚಿತ್ರವನ್ನು ಕೊಟ್ಟಿರುವುದು ಅಲ್ಲಲ್ಲೇ ಕೆಲವು ರೇಖಾ ಚಿತ್ರಗಳನ್ನು ಕೊಟ್ಟಿರುವುದು ಸೂಕ್ತವಾಗಿದೆ.

* * *

ನನ್ನ ಮಿತ್ರರಾದ ಶ್ರೀ ಟಿ.ಎಸ್. ಛಾಯಾಪತಿ ಅವರ ಆಸಕ್ತಿ ಬಹುಮುಖವಾದದ್ದು. ಅವರು ಒಳ್ಳೆಯ ಸಾಹಿತ್ಯದ ಪ್ರಕಾಶಕರು ಮಾತ್ರವೇ ಅಲ್ಲ, ಒಳ್ಳೆಯ ಲೇಖಕರೂ ಕೂಡ. ನಮ್ಮ ಉದ್ದಾಮ ಸಾಹಿತಿಗಳನ್ನು ಕುರಿತು ಸರಳವಾಗಿ ಬರೆಯಬಲ್ಲ ಛಾಯಾಪತಿ ಅವರು ಅಷ್ಟೇ ಸರಳವಾಗಿ ನಮ್ಮ ಸಾಮಾಜಿಕ ಬದುಕಿನ ಹಲವು ಮುಖಗಳನ್ನು ಕುರಿತೂ ಪುಸ್ತಕಗಳನ್ನು ಬರೆದಿದ್ದಾರೆ. ಪಂಚಾಯತ್ ರಾಜ್ಯ ವ್ಯವಸ್ಥೆ ಕುರಿತು ಅವರು ಬರೆದಿರುವ ಕೃತಿ ತುಂಬ ಜನಪ್ರಿಯವಾಗಿದೆ. ಅವರೀಗ ಕ್ರಿಕೆಟ್ ಲೋಕಕ್ಕೆ ದಾಳಿ ಇಟ್ಟಿದ್ದಾರೆ. ಒಂದು ಕಾಲದಲ್ಲಿ ಸೂರ್ಯನೇ ಮುಳುಗದ ಸಾಮ್ರಾಜ್ಯವನ್ನಾಳುತ್ತಿದ್ದ ಬ್ರಿಟನ್ನಿನಲ್ಲಿ ವಿರಾಮಜೀವಿಗಳ ವಿನೋದ ಸಾಧನವಾಗಿ ಆರಂಭವಾಗಿ, ಅತ್ಯದ್ಭುತ ಕಲೆಯಾಗಿ ವಿಕಾಸಗೊಂಡ ಕ್ರಿಕೆಟ್ ಕ್ರೀಡೆ 'ನಮ್ಮ ಕ್ರಿಕೆಟ್' ಹೇಗಾಯಿತು ಎಂಬುದನ್ನು ಅವರು ಈ ಪುಸ್ತಕದಲ್ಲಿ ಬಣ್ಣಿಸಿದ್ದಾರೆ. ಈ ಆಟದ ಇತಿಹಾಸ, ವಿಧಾನ, ಇದಕ್ಕೆ ಬೇಕಾದ ಸಲಕರಣೆಗಳು, ನಾಯಕ ಹೇಗಿರಬೇಕು, ಇದರಲ್ಲಿ ಬಳಸಲಾಗುವ

ನಾನಾ ಪದ ಪ್ರಯೋಗಗಳ ಅರ್ಥ ವೈಶಿಷ್ಟ್ಯವೇನು, ಕ್ರಿಕೆಟ್ ಲೋಕದಲ್ಲಿ ಮೆರೆದ ಮಹಾಸಾಹಸಿಗಳ ಅದ್ಭುತ ಸಾಧನೆಗಳು ಯಾವುವು ಎಂಬುದನ್ನೆಲ್ಲ ಅತ್ಯಂತ ಸ್ವಾರಸ್ಯವಾಗಿ ಅವರು ಇಲ್ಲಿ ವಿವರಿಸಿದ್ದಾರೆ. ವಿದ್ಯಾರ್ಥಿಯಾಗಿದ್ದಾಗ ತಮ್ಮ ಕಾಲೇಜಿನ ಕ್ರಿಕೆಟ್ ತಂಡದ ಪ್ರಮುಖ ಆಟಗಾರರಲ್ಲೊಬ್ಬರಾಗಿದ್ದು ಈ ಆಟದ ಒಳಹೊರಗನ್ನೆಲ್ಲ ಬಲ್ಲ ಛಾಯಾಪತಿ ಅವರ ಈ ಪುಸ್ತಕ ಎಲ್ಲ ಕ್ರಿಕೆಟ್ ಪ್ರೇಮಿಗಳಿಗೂ, ಈ ಆಟದ ವಿರಾಡ್ರೂಪವನ್ನರಿಯಬಲ್ಲವರಿಗೂ, ನಮ್ಮ ಸಮೂಹ ಮಾಧ್ಯಮಗಳಲ್ಲಿ ಬಿತ್ತರಿಸಲಾಗುವ ವೀಕ್ಷಕ ವಿವರಣೆಗಳನ್ನು ಅರ್ಥಮಾಡಿಕೊಳ್ಳಬಯಸುವವರಿಗೂ, ಕ್ರಿಕೆಟ್ ಆಟದ ಶ್ರೀ ಓನಾಮವನ್ನು ಪಠಿಸಿ ಮುಂದುವರಿಯಬೇಕೆನ್ನುವ ಚಿಣ್ಣರಿಗೂ, ನವಸಾಕ್ಷರರಿಗೂ ಬಹಳ ಉಪಯುಕ್ತವಾಗುವುದರಲ್ಲಿ ಸಂದೇಹವಿಲ್ಲ. ಕನ್ನಡದಲ್ಲಿ ಯಾವುದೇ ಕ್ರೀಡೆ ಕುರಿತೂ ಇಂಥ ದೀರ್ಘವಾದ ಪುಸ್ತಕ ಬಂದಿರುವುದು ಇದುವರೆಗೂ ಛಾಯಾಪತಿ ಅವರಿಂದ ನನ್ನ ಗಮನಕ್ಕೆ ಬಂದಿಲ್ಲ. ಇಂಥ ಇನ್ನೂ ಅನೇಕ ಪುಸ್ತಕಗಳು ಹೊರಬರಲಿ ಎಂದು ಹಾರೈಸುತ್ತೇನೆ.



- ಎಚ್ಚೆಸ್ಕೆ

ಭಾರತೀಯ ಭಾಷೆಗಳಲ್ಲಿ ಕ್ರೀಡೆಗಳ ಬಗ್ಗೆ ಕೆಲವೇ ಪುಸ್ತಕಗಳಿರುತ್ತವೆ. ಕ್ರೀಡಾ ಸಾಹಿತ್ಯ ಭಾರತೀಯ ಭಾಷೆಗಳಲ್ಲಿ ವಿರಳವಾಗಿದ್ದಾಗ ಶ್ರೀ ಟಿ.ಎಸ್. ಛಾಯಾಪತಿಯವರು 'ನಮ್ಮ ಕ್ರಿಕೆಟ್' ಎಂಬ ಪುಸ್ತಕ ಹೊರತಂದಿರುವುದು ಸ್ವಾಗತಾರ್ಹ. ಮಕ್ಕಳಿಗಾಗಿ ಮತ್ತು ನವ ಅಕ್ಷರಸ್ಥರಿಗಾಗಿ ಬರೆಯುವುದರಲ್ಲಿ ಶ್ರೀ ಛಾಯಾಪತಿಯವರು ಅಗಾಧ ಅನುಭವವುಳ್ಳವರು. ಆದ್ದರಿಂದ ಅವರು ಕ್ರಿಕೆಟ್ ಬಲ್ಲದವರಿಗೆ ಅತಿ ಸರಳ ಹಾಗೂ ತಿಳಿಯಾದ ಭಾಷೆಯಲ್ಲಿ ಕ್ರಿಕೆಟ್‌ನ ವೈಶಿಷ್ಟ್ಯಗಳನ್ನು ತಿಳಿಹೇಳಲು ಸಮರ್ಥರಾದವರು. ಈ ಪುಸ್ತಕವು ಕೇವಲ ಶಾಲಾ ಮಕ್ಕಳಿಗೆ ಮತ್ತು ಪಟುಗಳಿಗೆ ಮಾತ್ರವಲ್ಲದೆ ಕ್ರಿಕೆಟ್‌ನಲ್ಲಿ ಆಸಕ್ತಿಯುಳ್ಳವರಿಗೆಲ್ಲರಿಗೂ ಉಪಯುಕ್ತವಾಗುತ್ತದೆ. ಈ ಪುಸ್ತಕದಲ್ಲಿರುವ ರೇಖಾಚಿತ್ರಗಳು ಅನೇಕ ಪದಗಳ ಅರ್ಥವನ್ನು ವಿವರಿಸಲು ಸಹಾಯಕವಾಗಿವೆ.

ರೇಡಿಯೋ ಮತ್ತು ಟೆಲಿವಿಷನ್‌ಗಳ ವೀಕ್ಷಕ ವಿವರಣೆಯಿಂದಾಗಿ ಕ್ರಿಕೆಟ್ ಬಗ್ಗೆ ಜನರಲ್ಲಿ ಆಸಕ್ತಿ ವೃದ್ಧಿ ಮಾಡಿರುವುದು ಅಭಿನಂದನಾರ್ಹ. ಆದರೆ ಬಹಳ ಜನರು ವೀಕ್ಷಕ ವಿವರಣೆ ಯಾವುದೆಂಬುದರ ಪೂರ್ಣ ಅರಿವಿಲ್ಲದೆಯೇ ಕೇಳಲು ಇಚ್ಛಿಸುವುದುಂಟು. ಇಂತಹವರಿಗೆ ಈ ಪುಸ್ತಕವು ಉಪಯುಕ್ತವಾಗುವುದಲ್ಲದೆ ಈ ಕ್ರೀಡೆಯಿಂದ ಹೆಚ್ಚಿನ ಆನಂದ ವೃದ್ಧಿ ಮಾಡುತ್ತದೆ.

ಕೆಲವು ವರ್ಷಗಳ ಹಿಂದೆ ಬೆಂಗಳೂರಿನಲ್ಲಿ ಕೆಲವು ಪತ್ರಿಕೋದ್ಯಮಿ ಸ್ನೇಹಿತರು ಕ್ರಿಕೆಟ್ಟಿನ ವಿರುದ್ಧ ಒಂದು ಸಂಘ ಕಟ್ಟಲು ನಿರ್ಧರಿಸಿದ್ದರು. ಆ ಸಂಘ ಪ್ರಾರಂಭ

ಪಾಯಿತೋ ಇಲ್ಲವೋ ನನಗೆ ಗೊತ್ತಿಲ್ಲ. ಒಂದು ವೇಳೆ ಅದು ಅಸ್ತಿತ್ವದಲ್ಲಿದ್ದರೆ ಈ ಪುಸ್ತಕ ಖಂಡಿತವಾಗಿಯೂ ಆ ಸಂಘಕ್ಕೆ ಸೇರಲಿಚ್ಛಿಸುವ ಜನರನ್ನು ಕಡಿಮೆ ಮಾಡಬಲ್ಲದು.

**- ಚಿರಂಜೀವಿ ಸಿಂಘ್**

ಕನ್ನಡ ಭಾಷೆಯಲ್ಲಿ ಕ್ರೀಡೆಗಳಿಗೆ ಸಂಬಂಧಪಟ್ಟ ಪುಸ್ತಕಗಳು, ನಿಯತಕಾಲಿಕೆಗಳು ಬಹಳ ಅಪರೂಪವಾಗಿವೆ. ಇದಕ್ಕೆ ಕಾರಣ ಹಲವಾರು. ಇವುಗಳಲ್ಲಿ ಮುಖ್ಯವಾದವುಗಳು, ಬರಹಗಾರರು ಈ ದಿಶೆಯಲ್ಲಿ ಹೆಚ್ಚಿಗೆ ಅಸ್ಥೆ ವಹಿಸದೆ ಇರುವುದು ಹಾಗೂ ಪುಸ್ತಕಗಳ ಪ್ರಕಟಣೆಯಾಗಲು ಇವುಗಳನ್ನು ಕೊಂಡು ಓದುವವರ ಸಂಖ್ಯೆ ವಿರಳವಾಗಿರುವುದು.

ಇಂತಹ ಪರಿಸ್ಥಿತಿಯಲ್ಲಿ ಮಾನ್ಯ ಮಿತ್ರರಾದ ಶ್ರೀ ಟಿ.ಎಸ್. ಛಾಯಾಪತಿಯವರು ಬರೆದ 'ನಮ್ಮ ಕ್ರಿಕೆಟ್' ಒಂದು ಅಪರೂಪದ ಕೃತಿಯೆಂದೇ ಹೇಳಬಹುದು. ಕ್ರಿಕೆಟ್ ಆಟ, ಆಟಗಾರರಿಗಿಂತಲೂ ಹೆಚ್ಚಿಗೆ ಅಭಿಮಾನವನ್ನು ಪ್ರೇಕ್ಷಕರಲ್ಲಿ ಹುಟ್ಟಿಸುವ ಒಂದು ಅಪರೂಪದ ಕ್ರೀಡೆ. ಇದರಲ್ಲಿ ಹೆಚ್ಚಿನ ಕುತೂಹಲ ಅಂಕಿ ಸಂಖ್ಯೆಗಳ ಮೇಲೆ ಹಾಗೂ ಯಶಸ್ವೀ ಆಟಗಾರರ ಮೇಲೆ ಇದ್ದರೂ ಸಹ, ಇದರ ತಾಂತ್ರಿಕತೆಯನ್ನು ತಿಳಿದ ವ್ಯಕ್ತಿಗಳು ಬಹಳ ಕಡಿಮೆ. ಈ ಒಂದು ಕೊರತೆಯನ್ನು ನಿವಾರಿಸಲು ಒಂದು ಯಶಸ್ವೀ ಪ್ರಯತ್ನವನ್ನು ಈ ಪುಸ್ತಕದಲ್ಲಿ ಕಾಣುತ್ತೇವೆ. ತಾಂತ್ರಿಕ ವಿವರಣೆಗಳನ್ನು ಒಳಗೊಂಡಿದ್ದು, ಅಷ್ಟೇ ಅಲ್ಲದೆ ಕ್ರಿಕೆಟ್ ಪ್ರೇಮಿಗಳಿಗೆ ಬೇಕಾಗುವ ಸಾಮಾನ್ಯ ಜ್ಞಾನವನ್ನು ಕೂಡ ಒಳಗೊಂಡಿದೆ. ಈ ಒಂದು ಸಣ್ಣ ಹೊತ್ತಿಗೆಯಲ್ಲಿ ಕ್ರಿಕೆಟ್ ಜಗತ್ತಿನ ಅಗ್ರಮಾನ್ಯ ಆಟಗಾರರ ವ್ಯಕ್ತಿತ್ವದ ಪರಿಚಯವನ್ನು ಕೂಡ ಕೊಡಲಾಗಿದೆ. ಉದಾಹರಣೆಗೆ ಕ್ರಿಕೆಟ್ ಜಗತ್ತಿನಲ್ಲಿ ಎಲ್ಲರಿಗೂ ಚಿರಪರಿಚಿತರಾದ ಕರ್ನಾಟಕದ ಬ್ಯಾಟ್ಸ್‌ಮನ್ ಹಾಗೂ ಭಾರತ ತಂಡದ ನಾಯಕರಾದಂಥ ಶ್ರೀ ಜಿ.ಆರ್. ವಿಶ್ವನಾಥ್ ಅವರು ಇಂಗ್ಲೆಂಡಿನ ಬ್ಯಾಟ್‌ಗಾರ ಬಾಬ್‌ಟೇಲರ್ ಔಟ್ ಎಂದು ಅಂಪೈರ್‌ರವರ ತೀರ್ಮಾನಕ್ಕೆ ಒಳಗಾಗಿದ್ದರೂ ಕೂಡ ಈ ತೀರ್ಪು ಸರಿಯಲ್ಲವೆಂದು ಬಾಬ್‌ಟೇಲರ್‌ರವರನ್ನು ಮರಳಿ ಆಡಲು ಆಹ್ವಾನಿಸಿದ ಅಪರೂಪದ ಮಹಾನ್ ವ್ಯಕ್ತಿಯ ದೃಷ್ಟಾಂತವು ಕೂಡ ಈ ಪುಸ್ತಕದಲ್ಲಿ ಕಂಡು ಬರುತ್ತದೆ (ಪುಟ ಸಂಖ್ಯೆ 19-20).

ಇಂತಹ ಒಂದು ಪ್ರಯತ್ನಕ್ಕೆ ಯಶಸ್ಸು ಸಿಗಲಿ ಎಂದು ಹಾರೈಸುವ

**- ಜಿ.ವಿ. ಕೊಂಗವಾಡ್**

ನನ್ನ ಗೆಳೆಯರಾದ ಶ್ರೀ ಟಿ.ಎಸ್. ಛಾಯಾಪತಿಯವರು 'ನಮ್ಮ ಕ್ರಿಕೆಟ್' ಎಂಬ ಕಿರು ಹೊತ್ತಿಗೆಯನ್ನು ಓದುಗರ ಮುಂದಿಟ್ಟಿದ್ದಾರೆ. ಈ ಪುಸ್ತಕವನ್ನು ಸರಳವಾಗಿ ಸ್ವಚ್ಛ

ಕನ್ನಡವಲ್ಲಿ ಎಲ್ಲರಿಗೂ ಅರ್ಥವಾಗುವ ರೀತಿಯಲ್ಲಿ ಬರೆದಿರುವುದು ಹೆಮ್ಮೆಯ ವಿಚಾರ. ಕ್ರಿಕೆಟ್ ಆಟದ ವೀಕ್ಷಕ ವಿವರಣೆ ಕೇಳುವುದು ಅಥವಾ ಆಟವನ್ನು ವೀಕ್ಷಿಸುವುದೆಂದರೆ ಕೇವಲ ಕ್ರೀಡಾಭಿಮಾನಿಗಳಿಗೆ ಮಾತ್ರವಲ್ಲದೆ ಅಬಾಲವೃದ್ಧರಿಗೂ ಸಂತಸವೇ ಸರಿ. ಆದರೆ ಆಟದ ತಾಂತ್ರಿಕ ಹಾಗೂ ವೈಜ್ಞಾನಿಕ ರೀತಿ ನೀತಿಗಳನ್ನು ತಿಳಿದಿರುವವರು ಕೇವಲ ಕೆಲವರು ಮಾತ್ರ. ಇಂತಹ ವಿಚಾರಗಳ ಅರಿವು ಮೂಡಿಸಲು ಹಾಗೂ ಆಟಕ್ಕೆ ಬೇಕಾದ ಆಟಗಾರ ಸಂಖ್ಯೆ, ಸಲಕರಣೆಗಳು ಆಟವಾಡಲು ಆಯ್ಕೆ ಮಾಡಲು ಮೈದಾನದ ವಿವರ ಇವುಗಳೆಲ್ಲದರ ಬಗ್ಗೆ ತಿಳಿದುಕೊಳ್ಳಲು ಅಭಿರುಚಿಯುಳ್ಳ ಪ್ರತಿಯೊಬ್ಬರಿಗೂ ಅರ್ಥವಾಗುವ ರೀತಿಯಲ್ಲಿ ಕೃತಿ ರಚನೆ ಮಾಡುವಲ್ಲಿ ಶ್ರೀ ಛಾಯಾಪತಿಯವರು ಸಫಲತೆಯನ್ನು ಪಡೆದಿದ್ದಾರೆ. ಇದು ನಿಜವಾಗಿಯೂ ಶ್ಲಾಘನೀಯ. ಇಂತಹ ಜನ ಉಪಯೋಗಿ ಕೃತಿಗಳು ಎಲ್ಲಾ ರಂಗಗಳಲ್ಲಿಯೂ ಶ್ರೀ ಛಾಯಾಪತಿಯವರ ಲೇಖನಿಯಿಂದ ಪುಂಖಾನುಪುಂಖವಾಗಿ ಹೊರ ಬರಲಿ ಹಾಗೂ ಸರ್ವರೂ ಇದರ ಪ್ರಯೋಜನ ಪಡೆಯುಂತಾಗಲೆಂದು ಹಾರೈಸುತ್ತೇನೆ.

**-ಎ.ಕೆ. ಶಿವರಾಯ್**

# ಗುರುಶ್ರೇಷ್ಠ

ಪ್ರಕೃತ ಪುಸ್ತಿಕೆಯನ್ನು ನಾನು ತುಂಬ ಆಸಕ್ತಿಯಿಂದ ಓದಿದ್ದೇನೆ. ಓದಿ ಸಂತೋಷಿಸಿದ್ದೇನೆ. ಅದರ ನಿರೂಪಣೆಯ ವಿಧಾನವನ್ನು ಬಹುವಾಗಿ ಮೆಚ್ಚಿಕೊಂಡಿದ್ದೇನೆ ಸರಳ ಸುಂದರವಾದ ಈ ಪುಟ್ಟ ಆಕರ್ಷಕ ಪುಸ್ತಕಕ್ಕಾಗಿ ನಾನು ಶ್ರೀ ಛಾಯಾಪತಿಯವರನ್ನ ಅಭಿನಂದಿಸುತ್ತೇನೆ.

**- ಹಾ.ಮಾ.ನಾಯಕ**

ರಾಯರ ಜೀವನದಲ್ಲಿ ನಡೆದ ಸಂಗತಿಗಳನ್ನು, ಅನೇಕ ಘಟನೆಗಳನ್ನು ಇನ್ನೂ ವಿಸ್ತಾರವಾಗಿ ಸಂಗ್ರಹಿಸುವುದಕ್ಕೆ ಇದೊಂದು ಉತ್ತಮ ಸಾಹಿತ್ಯ ಕೃತಿಯಾಗುವುದರಲ್ಲಿ ಸಂಶಯವಿಲ್ಲ.

**- ಹೆಚ್.ಬಿ. ಜ್ವಾಲನಯ್ಯ**

ಮಿತ್ರರೂ ಸುಪ್ರಸಿದ್ಧ ಪ್ರಕಾಶಕರೂ ಆಗಿರುವ ಶ್ರೀ ಟಿ.ಎಸ್. ಛಾಯಾಪತಿಯವರ ಕಿರುಪುಸ್ತಕ 'ಗುರುಶೇಷ್ಠ' ಓದಿ ಸಂತೋಷವಾಯಿತು. ಸರಳ ಸುಂದರ ಸುಲಲಿತ ತಿಳಿಭಾಷೆ ನಮ್ಮ ಕಿರಿಯರಿಗೆ ಅಷ್ಟೆ ಅಲ್ಲ ಹಿರಿಯರಿಗೂ ಹಿಡಿಸುವಂಥದು. ಇಂತಹ ಉತ್ತಮ ಭಾಷಾಶಕ್ತಿಯನ್ನು ಛಾಯಾಪತಿಗಳಲ್ಲಿ ಕಂಡು ನಾನು ಅತ್ಯಂತ ಸಂತೋಷ ಪಟ್ಟಿರುವೆ.

**- ಪಿ.ಆರ್. ತಿಪ್ಪೇಸ್ವಾಮಿ**

ಶ್ರೇಷ್ಠ ಗುರುಗಳ ಸಂಖ್ಯೆ ಕ್ಷೀಣಿಸುತ್ತಿರುವ ಈಗಿನ ಸಮಾಜದಲ್ಲಿ 'ಗುರುಶ್ರೇಷ್ಠ' ಕಿರುಕೃತಿಯನ್ನು ಶ್ರೀ ಛಾಯಾಪತಿಯವರು ಪ್ರಕಟಿಸಿರುವುದು ಸ್ವಾಗತಾರ್ಹವಾದುದು.

**- ಲಕ್ಷ್ಮೀಪತಿ ಪುಟ್ಟಣ್ಣ**

## 'ಸಾವಿರದ ಸರದಾರ' ಟಿ.ಎಸ್. ಛಾಯಾಪತಿ

ಕನಸುಗಾರರು ಕ್ರಿಯಾಶೀಲರಲ್ಲವೆನ್ನುವ ಭಾವನೆ ಇದೆ. ಆದರೆ, ಟಿ.ಎಸ್. ಛಾಯಾಪತಿ ಕನಸುಗಾರರೂ ಹೌದು. ಕ್ರಿಯಾಶೀಲರೂ ಹೌದು. ತಾವು ಕಂಡ ಘನವಾದ ಕನಸುಗಳಿಗೆ ಅವರು ಕನ್ನಡ ಸಾಹಿತ್ಯ ಪ್ರಕಾಶಸದ ಮೂಲಕ ಘನತರವಾದ ಅಸ್ತಿಭಾರ ವನ್ನು ಹಾಕಿದ್ದಾರೆ. ಅವರ ಕನಸು ನನಸಾಗಿರುವುದನ್ನು ನಾವು ತಳುಕಿನ ವೆಂಕಣ್ಣಯ್ಯ ಸ್ಮಾರಕ ಪ್ರಕಾಶನದ ಮೂಲಕ ಕಾಣಬಹುದು. ಕವಿಯಾದವನು, ಪ್ರಕಾಶಕನಾದವನು, ಸಮಾಜ ಸೇವಕನಾದವನು ವ್ಯಾವಹಾರಿಕ ಜೀವನದಲ್ಲಿ ಗೆಲ್ಲುವುದಿಲ್ಲವೆಂಬ ಮಾತಿದೆ. ಆದರೆ, ವ್ಯಾವಹಾರಿಕ ಜೀವನದಲ್ಲಿಯೂ ಛಾಯಾಪತಿಯವರು ಗೆದ್ದಿದ್ದಾರೆ.

ಛಾಯಾಪತಿಯವರು ಸಮಾಜಕ್ಕೆ ಬೆಳಕು ಕೊಡುವಂಥ ಕೆಲಸ ಮಾಡುತ್ತಿದ್ದಾರೆ. ಒಳ್ಳೆಯದನ್ನು ಮಾಡುವ, ಬೇರೆಯವರಿಂದ ಒಳ್ಳೆಯದನ್ನು ಮಾಡಿಸುವ ಗುಣವನ್ನು ಇವರು ತಮ್ಮ ತಂದೆ, ತಾಯಿಯಿಂದ ಬಳುವಳಿಯಾಗಿ ಪಡೆದುಕೊಂಡು ಬಂದವರು, ಇವರ ತಂದೆ, ತಾಯಿಗಳು, ಕುಟುಂಬದ ವಂಶಸ್ಥರು ಬೇರೆಯವರಿಗೆ ಜೀವನದುದ್ದಕ್ಕೂ ಸಹಾಯ ಮಾಡುತ್ತಲೇ ಕೊನೆಯುಸಿರೆಳೆದವರು. ಕವಿ ಜಿ.ಎಸ್. ಶಿವರುದ್ರಪ್ಪನವರು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಓದುತ್ತಿದ್ದಾಗ ಬಡತನದಿಂದ ಅಸಹಾಯಕರಾಗಿದ್ದ ಸಂದರ್ಭದಲ್ಲಿ ಇವರ ತಂದೆ ಪ್ರೊ. ತ.ಸು. ಶಾಮರಾಯರು ಕನ್ನಡ ಸಾಹಿತ್ಯ ದಿಗ್ಗಜರು. ಇವರ ಸಾಹಿತ್ಯಿಕ ಗರಡಿಯಲ್ಲಿ ಪಳಗಿದವರು ಇವರು. ಎಂ.ಕಾಂ., ಪದವೀಧರರಾದ ಛಾಯಾಪತಿ ಪುಸ್ತಕೋದ್ಯಮವನ್ನು ವೃತ್ತಿಯಾಗಿ ಸ್ವೀಕರಿಸಿ, ಪ್ರವೃತ್ತಿಯಾಗಿ ಸಾಹಿತ್ಯ ಕೃಷಿಯನ್ನು ಮಾಡಿದವರು. ಅವರು ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ, ಚೆನ್ನವೀರ ಕಣವಿ, ಹಾ.ಮಾ.ನಾಯಕ್, ದೇಜಗೌ, ನಿಸಾರ್ ಅಹಮದ್, ಮತ್ತೂರು ಕೃಷ್ಣಮೂರ್ತಿ ಮುಂತಾದ ನಾಡಿನ ಪ್ರಮುಖ ಸಾಹಿತಿಗಳ ಪುಸ್ತಕವನ್ನು ತಮ್ಮ ಪ್ರಕಾಶನದಲ್ಲಿ ಪ್ರಕಟಿಸಿ ದ್ದಾರೆ. ಈ ಮಾಲೆಯ ಹಲವಾರು ಪುಸ್ತಕಗಳು ಹತ್ತಾರು ಪುನರ್ ಮುದ್ರಣಗಳನ್ನು ಕಂಡಿರುವುದನ್ನು ನೋಡಿದರೆ ಛಾಯಾಪತಿಯವರ ಪ್ರಕಾಶನ ನೋಡಿ ಸಾಮಾನ್ಯನಿಗೂ ತಲುಪುವಂತಹ ಬೆಲೆ ಎಲ್ಲರನ್ನೂ ಆಕರ್ಷಿಸುವಂತಿದೆ.

ಡಾ. ಎಸ್. ಶಿವರಾಜಪ್ಪ : ಪ್ರಜಾವಾಣಿ

ಈಗಾಗಲೇ ಛಾಯಾಪತಿಯವರು ಸಾವಿರ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ತಂದೆಯಂತೆ ಇವರು ಕೂಡ ಸಾಹಿತ್ಯ ಕೃಷಿಯಲ್ಲಿ ತೊಡಗಿ, 'ಗಾಂಧೀಜಿಯ ಕನಸು ನಜೀರರಿಂದ ನನಸು', 'ಅಣ್ಣನ ಸ್ಮರಣೆ', 'ಆಡಳಿತ ಭಾಷೆ ಕನ್ನಡ', 'ಗುರುಶ್ರೇಷ್ಠ', 'ವರದಕ್ಷಿಣೆ - ಸಾಮಾಜಿಕ ಪಿಡುಗು' ಮುಂತಾದ ಹತ್ತು ಹಲವು ಕೃತಿಗಳನ್ನು ರಚಿಸಿದ್ದಾರೆ. ರಾಷ್ಟ್ರಕವಿ ಕುವೆಂಪು, ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ, ಹಾ.ಮಾ. ನಾಯಕ್, ತ.ಸು. ಶಾಮರಾಯ, ಎಚ್ಚೆಸ್ಕೆ, ನಾಡೋಜ ದೇಜಗೌ, ಮತ್ತೂರು ಕೃಷ್ಣಮೂರ್ತಿ, ಚೆನ್ನವೀರ ಕಣವಿ, ನಿಸಾರ್ ಮುಂತಾದ ಸಾಹಿತ್ಯ ಲೋಕದ ದಿಗ್ಗಜರಿಂದ ಬೆನ್ನು ತಟ್ಟಿಸಿಕೊಡಿದ್ದಾರೆ. 1968ರಲ್ಲಿ ತಮ್ಮ ತಂದೆ ಸಂಸ್ಥಾಪಿಸಿದ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಪ್ರಕಾಶನದ ಜವಾಬ್ದಾರಿ ವಹಿಸಿಕೊಂಡ ಇವರು ಇಲ್ಲಿಯ ತನಕ ಒಂದು ಸಾವಿರ ಕೃತಿಗಳನ್ನು ಪ್ರಕಟಿಸಿದ್ದಾರೆ. ಇವರ ಈ ಸಾಧನೆಗಾಗಿ 1999ರಲ್ಲಿ ರಾಜ್ಯ ಸರ್ಕಾರ 'ಅತ್ಯುತ್ತಮ ಪ್ರಕಾಶಕ' ಎಂಬ ರಾಜ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

ಛಾಯಾಪತಿಯವರು ಜನಿಸಿದ್ದು 1944ರ ಮೇ 10 ರಂದು. ತಂದೆ ತ.ಸು. ಶಾಮ ರಾಯರು. ತಾಯಿ ಸುಬ್ಬಲಕ್ಷ್ಮಿ, ದೊಡ್ಡಪ್ಪನ ಮಗ ತ.ರಾ.ಸು. ಅವರು. ಸ್ನೇಹಜೀವಿ ಯಾದ ಇವರು ಅತಿಥಿಗಳ ಆದರದಲ್ಲಿ ತಮ್ಮ ಬದುಕಿನ ಸುಖವನ್ನು ಕಾಣುವ 64ರ ಹರೆಯದಲ್ಲೂ ಯುವಕರಂತೆ ಕ್ರಿಯಾಶೀಲರಾಗಿದ್ದಾರೆ. ಹಣ ಮಾಡುವ ಉದ್ದೇಶದಿಂದ ಇವರು ಪ್ರಕಾಶನ ಕ್ಷೇತ್ರಕ್ಕೆ ಬಂದವರಲ್ಲ. ಕನ್ನಡದ ಪ್ರತಿಷ್ಠಿತ ಕೃತಿಗಳನ್ನು ಪ್ರಕಟಿಸುವ ಮೂಲಕ ಕನ್ನಡ ಸಾಹಿತ್ಯ ಕ್ಷೇತ್ರದ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ. ಒಟ್ಟಿನಲ್ಲಿ ಕನ್ನಡ ಸಾಹಿತ್ಯದ ಮೌಲಿಕ ಕೃತಿಗಳ ಪ್ರಕಾಶನವನ್ನೇ ತಮ್ಮ ವೃತ್ತಿಯಾಗಿ ಸ್ವೀಕರಿಸಿ, ಸೃಜನಶೀಲ ಕೃತಿಗಳ ಪ್ರಕಟಣೆಯನ್ನೇ ತಮ್ಮ ಬದುಕಾಗಿಸಿಕೊಂಡು, ಸಾಹಿತ್ಯ ಪ್ರಕಾಶನ ದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು, ಸಾವಿರ ಕೃತಿಗಳ ಪ್ರಕಾಶಕರಾಗಿ ಕರ್ನಾಟಕದ ಜನ ಮನವನ್ನು ಗೆದ್ದಿದ್ದಾರೆ.

ಅವರ ಸಾಹಿತ್ಯ ಸಾಧನೆಯನ್ನು ಗಮನಿಸಿ ಜಿಲ್ಲಾ ಪ್ರತಿಭಾನ್ವಿತ, ಸಾಹಿತ್ಯ ಸೇವಾಧುರೀಣ, ಕನ್ನಡ ಪ್ರಕಾಶನ ರತ್ನ, ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ಮುಂತಾದ ಹತ್ತು ಹಲವಾರು ಪ್ರಶಸ್ತಿಗಳನ್ನು ವಿವಿಧ ಸಂಘ ಸಂಸ್ಥೆಗಳು ನೀಡಿ ಗೌರವಿಸಿವೆ. ನಿಗರ್ವಿಯಾದ ಛಾಯಾಪತಿಯವರು 'ಫಲಹೊತ್ತ ಗಿಡದಂತೆ ಬಾಗುವ ಗುಣವುಳ್ಳವರು'. ತಮ್ಮಲ್ಲಿನ ಸರಳ ಸಜ್ಜನಿಕೆ, ವಿನಯಶೀಲ ಗುಣಗಳಿಂದಲೇ ಸರ್ವರನ್ನೂ ಆಕರ್ಷಿಸು ತ್ತಾರೆ.

ಇಂತಹ ಸಾಧಕರಿಗೆ ಕರ್ನಾಟಕ ರಾಜ್ಯೋತ್ಸವ ಮುಂತಾದ ಪ್ರತಿಷ್ಠಿತ ಪ್ರಶಸ್ತಿಗಳು ಸಂದದೇ ಇರುವುದು ಪ್ರತಿಭೆಗೆ ಇಲ್ಲ ಎಂಬಂತೆ ಕಾಣುತ್ತಿವೆ. ಮುಂದೆಯಾದರೂ ಪ್ರತಿಭೆಗೆ ಪುರಸ್ಕಾರ ಸಿಗುವಂತಾಗಲಿ. ಕನ್ನಡ ಸಾಹಿತ್ಯ ಪ್ರಕಾಶನಕ್ಕೆ ಬೆಲೆಯನ್ನು

ತಂದುಕೊಟ್ಟಿದ್ದಾರೆ ಛಾಯಾಪತಿ. ಬದುಕುವ ಗುಣ ಇರುವಂತಹ ಮೌಲಿಕ ಕನ್ನಡ ಕೃತಿಗಳನ್ನು ಜನರಿಗೆ ನೀಡುತ್ತಿರುವ ಪ್ರಕಾಶಕ, ಸಾಹಿತಿ ಎಂದಿಗೂ ಚಿರಂಜೀವಿ ಎನಿಸುತ್ತಾನೆ. ಈ ಮಾತು ಛಾಯಾಪತಿಯವರಿಗೆ ಅನ್ವರ್ಥವಾದುದು. ಇವರ ಸಾಹಿತ್ಯಿಕ, ಸಾಂಸ್ಕೃತಿಕ ಸಾಧನೆಯನ್ನು ಗುರುತಿಸಿ ಇತ್ತೀಚೆಗೆ ಮೈಸೂರಿನ ಆಂಜನೇಯ ಸ್ವಾಮಿ ದೇವಸ್ಥಾನದ ಟ್ರಸ್ಟ್‌ನವರು 18ನೇ ವರ್ಷದ ಹನುಮ ಜಯಂತಿ ವಾರ್ಷಿಕೋತ್ಸವದ ಶುಭ ಸಂದರ್ಭದಲ್ಲಿ ಮೈಸೂರಿನ ಶಾಸಕರಾದ ಎಚ್.ಎಸ್. ಶಂಕರಲಿಂಗೆಗೌಡರ ನೇತೃತ್ವದಲ್ಲಿ ಇಂಧನ ಸಚಿವರಾದ ಕೆ.ಎಸ್. ಈಶ್ವರಪ್ಪ ಅಧ್ಯಕ್ಷತೆಯಲ್ಲಿ, ಚಲನಚಿತ್ರ ನಟ ಗಣೇಶ್ ಇವರ ಉಪಸ್ಥಿತಿಯಲ್ಲಿ ಹಾಗೂ ಸಾವಿರಾರು ಜನ ಸಭಿಕರ ಸಮಕ್ಷಮದಲ್ಲಿ 'ಸಾವಿರ ಕೃತಿಗಳ ಸರದಾರ' ಎಂಬ ಪ್ರಶಂಸೆಯ ಮೂಲಕ ಸನ್ಮಾನಿಸಲಾಯಿತು.

## ಪುಸ್ತಕೋದ್ಯಮದ ಸಾಧಕ ಛಾಯಾಪತಿ

ತಳುಕಿನ ವೆಂಕಣ್ಣಯ್ಯ ಹೊಸಗನ್ನಡದ ಹೊಳಹಿನಲ್ಲಿ ಎದ್ದು ಕಾಣುವ ಹೆಸರು. ಅವರ ಸ್ಮರಣೆಗಾಗಿ ಆರಂಭವಾದದ್ದು ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಪ್ರಕಾಶನ. ವೆಂಕಣ್ಣಯ್ಯನವರನ್ನು ಅಣ್ಣ ಎಂದಷ್ಟೇ ಪರಿಗಣಿಸದೆ ಗುರುಸ್ಥಾನದಲ್ಲಿಟ್ಟು ಗೌರವಿಸುತ್ತಿದ್ದ ತ.ಸು. ಶಾಮರಾಯರು ಗ್ರಂಥಮಾಲೆಯನ್ನು ಸ್ಥಾಪಿಸಿ ಆರು ದಶಕಗಳಾಗಿವೆ. ಇಲ್ಲಿಯವರೆಗೆ ಒಂದು ಸಾವಿರಕ್ಕೂ ಹೆಚ್ಚಿನ ಪುಸ್ತಕಗಳು ಪ್ರಕಟವಾಗಿವೆ. ಟಿ.ಎಸ್. ವೆಂಕಣ್ಣಯ್ಯ, ಡಿ.ಎಲ್. ನರಸಿಂಹಾಚಾರ್, ತ.ಸು. ಶಾಮರಾಯರು, ದೇ. ಜವರೇಗೌಡ, ಎಚ್ಚೆಸ್ಕೆ, ಹಾ.ಮಾ. ನಾಯಕ, ಜಿ.ಎಸ್. ಶಿವರುದ್ರಪ್ಪ, ಚೆನ್ನವೀರಕಣವಿ, ಟಿ.ವಿ. ವೆಂಕಟಾಚಲ ಶಾಸ್ತ್ರಿ, ಸಿ.ಪಿ.ಕೆ., ನಿಸಾರ್ ಅಹಮದ್, ಚಂಪಾ, ಮತ್ತೂರು ಕೃಷ್ಣಮೂರ್ತಿ ಮುಂತಾದ ಕನ್ನಡ ನಾಡಿನ ಸಾಹಿತಿ ಗಣ್ಯರೆಲ್ಲ ಈ ಗ್ರಂಥಮಾಲೆಯ ಲೇಖಕ ಬಳಗದಲ್ಲಿದ್ದಾರೆ.

1968ರಿಂದ ತ.ಸು. ಶಾಮರಾಯರ ಪುತ್ರ ಟಿ.ಎಸ್. ಛಾಯಾಪತಿ ಪ್ರಕಾಶನದ ಹೊಣೆ ಹೊತ್ತು ಮುನ್ನಡೆಸಿಕೊಂಡು ಹೋಗುತ್ತಿದ್ದಾರೆ. 1944ರಲ್ಲಿ ಜನಿಸಿದ ಛಾಯಾಪತಿಯವರು ಅಧ್ಯಯನಕ್ಕಾಗಿ ಆಯ್ದುಕೊಂಡಿದ್ದು ವಾಣಿಜ್ಯ ವಿಷಯ; ಕಾಯಕ ಕೃಷಿ ಪುಸ್ತಕೋದ್ಯಮದಲ್ಲೇ ನಡೆದು ಅದೊಂದು ತಪಸ್ಸೆಂಬ ಭಾವವೇ ಅವರಲ್ಲಿ ಪಡಿಮೂಡಿದೆ. ಪುಸ್ತಕ ಪ್ರಕಟಣೆಯಲ್ಲಿ ಕ್ರಾಂತಿಯನ್ನೇ ಉಂಟು ಮಾಡಿದವರು. ಕಥೆ, ಕವನ, ಪ್ರಬಂಧ, ನಾಟಕ, ವಿಮರ್ಶೆ, ಪ್ರವಾಸಕಥನ, ಜೀವನಚರಿತ್ರೆ, ಅಂಕಣ, ಸಂಶೋಧನೆ ಹೀಗೆ ಹಲವು ಸಾಹಿತ್ಯ ಪ್ರಕಾರಗಳಲ್ಲಿ ವೈವಿಧ್ಯಮಯ ಪುಸ್ತಕಗಳನ್ನು ಪ್ರಕಟಿಸಿದ ಹೆಗ್ಗಳಿಕೆ ಇವರದು.

1999ರಲ್ಲಿ ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ಬಾಚಿಕೊಂಡಿದ್ದಾರೆ. ಸಾವಿರ ಪುಟಗಳ ಐದು ಗ್ರಂಥಗಳನ್ನು ಪ್ರಕಟಿಸಿದ ಇವರು ಸಾವಿರ ಪುಟಗಳ ಸರದಾರ ಎಂಬ ವಿಶೇಷಣ ಪಡೆದವರು. ಹಾ.ಮಾ. ನಾಯಕರಂತೂ ತ.ಸು. ಶಾಮರಾಯರ ಅಭಿನಂದನ ಗ್ರಂಥ 'ಸ್ವಸ್ತಿ' ಕುರಿತು ಮಾತನಾಡುತ್ತ ಇಂಥ ಪುಸ್ತಕ ಪ್ರಕಟಿಸಲು ಯಮಧೈರ್ಯವೇ ಬೇಕು

**ಶೈಲಜಾ : ಪ್ರಜಾವಾಣಿ**

ಎಂದು ಮೆಚ್ಚುಗೆ ವ್ಯಕ್ತಪಡಿಸಿದ್ದರು. ಕನ್ನಡ ಪುಸ್ತಕ ಪ್ರಾಧಿಕಾರದ ಸದಸ್ಯರೂ ಆಗಿದ್ದವರು. ಪ್ರಕಾಶಕರಾಗಿ ಉಡುಪಿಯಲ್ಲಿ ನಡೆದ 74ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಭಾಗವಹಿಸಿದವರು.

ಲೇಖಕರಾಗಿಯೂ ಛಾಯಾಪತಿ ಖ್ಯಾತನಾಮರು. ಇಪ್ಪತ್ತೆರಡು ಕೃತಿ ರಚನೆಕಾರ. ತಮ್ಮ ವಂಶದ ಹಿರಿಯರಾದ ಟಿ.ಎಸ್. ವೆಂಕಣ್ಣಯ್ಯ, ತ.ಸು. ಶಾಮರಾಯ, ತ.ರಾ.ಸು. ಅವರಲ್ಲದೆ ಚದುರಂಗ, ಅಬ್ದುಲ್ ನಜೀರ್‌ಸಾಬ್, ಬಿ. ಪಾರ್ಥಸಾರಥಿ ಅವರ ವ್ಯಕ್ತಿ ಚಿತ್ರಣಗಳನ್ನೂ ಕಟ್ಟಿಕೊಟ್ಟಿದ್ದಾರೆ. 'ಜಿಲ್ಲಾ ಪರಿಷತ್‌ನ ಕಾಯಿದೆಗಳ ಮೇಲೆ ಬೆಳಕು ಚೆಲ್ಲುವ 'ಗಾಂಧೀಜಿ ಕನಸು ನಜೀರರಿಂದ ನನಸು' ಎಂಬ ಪುಸ್ತಕವಂತೂ ರಾಷ್ಟ್ರಕವಿ ಕುವೆಂಪು ಅವರ ಮೆಚ್ಚುಗೆ ಗಳಿಸಿತ್ತು. ಗಾಂಧೀಜಿ ಕನಸೇನಿತ್ತು ಎಂಬುದನ್ನು ಸರಳವಾಗಿ ಪ್ರತಿ ಗ್ರಾಮಸ್ಥನೂ ತಿಳಿದುಕೊಳ್ಳುವಂತೆ ಚರ್ಚಿಸಲಾಗಿದೆ ಎಂದು ಅವರು ಉದ್ಗರಿಸಿದ್ದರು. 'ಆಡಳಿತ ಭಾಷೆ ಕನ್ನಡ', 'ಅಣ್ಣನ ಸ್ಮರಣೆ' ಮುಂತಾದವು ವಿದ್ವಾಂಸರ ಮೆಚ್ಚುಗೆ ಪಡೆದಿವೆ. ಇದೀಗ ಹಿರಿಯ ಕವಿಗಳ ಸಮಗ್ರ ಸಾಹಿತ್ಯವನ್ನು ಪ್ರಕಟಿಸುವ ಕೈಂಕರ್ಯದಲ್ಲಿ ತೊಡಗಿದ್ದಾರೆ. ಅದರ ಮೊದಲ ಹೆಜ್ಜೆಯಾಗಿ ಚೆನ್ನವೀರ ಕಣವಿಯವರ ಎಲ್ಲ ಕವನ ಸಂಕಲನಗಳನ್ನು ಪುನರ್ ಮುದ್ರಿಸುತ್ತಿದ್ದಾರೆ. ಅವುಗಳಲ್ಲಿ 16 ಕೃತಿಗಳು ಇದೇ 29 ರಂದು ಸಂಜೆ 6 ಗಂಟೆಗೆ ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್‌ನಲ್ಲಿ ಬಿಡುಗಡೆಯಾಗಲಿವೆ.

# ಟಿ.ಎಸ್. ಛಾಯಾಪತಿ

ಕನ್ನಡ ಸಾಹಿತ್ಯದ ನವೋದಯದ ಕಾಲದಲ್ಲಿ ಜೀವಿಸಿದ್ದು, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪರಾಗಿ ಶೋಭಿಸಿ, ಪ್ರಾಚೀನ ಸಾಹಿತ್ಯದ ಸಾರಸತ್ತ್ವವನ್ನು ಹೀರಿಕೊಂಡು, ಆಧುನಿಕ ಸಾಹಿತ್ಯಕ್ಕೆ ಕಾಂತಿಯನ್ನು ದೊರಕಿಸಿಕೊಡುವುದರಲ್ಲಿ ತೊಡಗಿದ್ದವರಲ್ಲಿ ಅಗ್ರಗಣ್ಯರಾಗಿದ್ದ ಟಿ.ಎಸ್. ವೆಂಕಣ್ಣಯ್ಯನವರ ನೆನಪು ನಂದಾದೀಪ. ಆದರೆ ಅವರ ಗರಿಮೆ ಹಿರಿಮೆಗಳನ್ನು ಬಲ್ಲವರ ಸಂಖ್ಯೆ ಅಲ್ಲ.

ಅವರ ತಮ್ಮ ಪ್ರೊ. ತ.ಸು. ಶಾಮರಾಯ. ಅಣ್ಣನ ಆದರ್ಶದ ಹಾದಿಯಲ್ಲೇ ನಡೆದು ಅವರ ನೆನಪನ್ನು ಚಿರಸ್ಥಾಯಿಯಾಗಿ ಮಾಡಲು ಸಂಕಲ್ಪಿಸಿದ ಅವರು ತಮ್ಮ ಅಣ್ಣನವರ ಹೆಸರಿನಲ್ಲಿ ಒಂದು ಗ್ರಂಥಮಾಲೆಯನ್ನೇ ಆರಂಭಿಸಿದರು. ಬಡ ಮೇಸ್ಟ್ರು. ಕನಸುಗಾರ. ಆದರೆ ಧಾರಾಳಿ. ಶಿಷ್ಯ ಪ್ರೇಮಿ. ಅನೇಕರಿಗೆ ಆಶ್ರಯದಾತ. ಉದಿತೋದಿತ ಕವಿ ವಿದ್ವಾಂಸ ಶಿಷ್ಯ ಮಿತ್ರರಿಗಾಗಿ ಅವರು ಈ ಗ್ರಂಥಮಾಲೆಯನ್ನೊಂದು ವೇದಿಕೆಯಾಗಿ ಮಾಡಿದರು. ತಮ್ಮ ಗುರುವಿನ ಪ್ರೋತ್ಸಾಹದಿಂದ ಒಳ್ಳೆಯ ಕವಿ ವಿಮರ್ಶಕ ಸಂಶೋಧಕರಾದವರು ಎಷ್ಟೋ ಮಂದಿ.

ತ.ಸು. ಶಾಮರಾಯರ ಮಗ ಟಿ.ಎಸ್. ಛಾಯಾಪತಿ (1944). ವಾಣಿಜ್ಯ ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವೀಧರ. ಉದ್ಯೋಗಕ್ಕೆ ಸೇರಿ ಉನ್ನತ ಹುದ್ದೆ ಪಡೆಯಲು ಇದ್ದ ಅವಕಾಶ ಅಪಾರ. ಆದರೆ ಆ ನಿಟ್ಟಿನಲ್ಲಿ ಮನಸ್ಸು ಹರಿಸದೆ ದೊಡ್ಡಪ್ಪನವರ ಹೆಸರಿನ ಗ್ರಂಥ ಮಾಲೆಯನ್ನು ತಮ್ಮ ಕೊರಳಿಗೆ ಧರಿಸಿಕೊಂಡಿದ್ದು ಮಹತ್ವದ ಸಂಗತಿ. ತಂದೆ ತ.ಸು. ಶಾಮರಾಯರದೊಂದು ವಿಲಕ್ಷಣ ಸ್ವಭಾವ. ಮಕ್ಕಳಿಗೆ ಮಮತೆ ತೋರಿಸಿದಲ್ಲಿ ಎಂಥ ಪ್ರಮಾದವಾದೀತೋ ಎಂಬ ವಿಚಿತ್ರ ಪ್ರವೃತ್ತಿ. ಅವರವರು ತಂತಮ್ಮ ಕಾಲ ಮೇಲೆ ನಿಲ್ಲಲೆಂಬ ನಿಲುವಿನಿಂದಾಗಿ ಮಕ್ಕಳಿಗೆ ಬಹಳಷ್ಟು ಇರಿಸು ಮುರಿಸು ಆಗಿದ್ದರೆ ಆಶ್ಚರ್ಯವಿಲ್ಲ. ಹೀಗಾಗಿ ಛಾಯಾಪತಿಗೆ ದೊರಕಿದ್ದು ದೊಡ್ಡಪ್ಪನವರ ನಾಮವಷ್ಟೇ! ಅವರಂತೆಯೇ ಇವರದೂ ಎತ್ತರದ ನಿಲುವು. ಛಾಯಾಪತಿಯವರದು ಒಂಟಿ ಪಯಣ; ಭಗೀರಥನ ಛಲ. ಅವರಿಗೆ ಪ್ರಕಾಶನ ಕಾರ್ಯ ಒಂದು

---

ಎಚ್ಚೆಸ್ಕೆ : ಸುಧಾ

---

ಉದ್ಯಮವಲ್ಲ, ಜೀವನ ವಿಧಾನ. ಆದರೆ ಅದರಿಂದ ಜೀವನವೂ ನಡೆಯಬೇಕಷ್ಟೆ? ಉದ್ಯೋಗ - ಆದರ್ಶಗಳನ್ನೆರಡನ್ನೂ ಸಮನ್ವಯಗೊಳಿಸುವ ಸಾಹಸ. ಪಠ್ಯಪುಸ್ತಕಾನ್ವೇಷಣೆಗಿಂತ ಸತ್ತ್ವಪೂರಿತ ಕೃತಿಗಳಲ್ಲಿ ಆಸಕ್ತಿ. ಶಾಶ್ವತವೆನಿಸುವಂಥ ಕೃತಿಗಳನ್ನು ಪ್ರಕಟಿಸಿ, ಅವು ಶಾಶ್ವತವಾಗಿ ತಮ್ಮಲ್ಲೇ ಉಳಿಯದಂತೆ ಮಾಡುವ ಪ್ರಯತ್ನ. ಸುಪ್ತ ಓದುಗರನ್ನು ಪತ್ತೆ ಹಚ್ಚಿ ಅವರಿಗೆ ತಲುಪಿಸುವ ಸಾಧನೆ. ಅವರು ಕೇವಲ ಪ್ರಕಾಶಕರಲ್ಲ; ಪ್ರವರ್ತಕರು ಕೂಡ, ಸದಭಿರುಚಿಯ ಸೃಷ್ಟಿಕರ್ತ, ವಿಕಸನಶೀಲ, ಟಿ.ಎಸ್. ಛಾಯಾಪತಿ ಸಮರ್ಥ ಲೇಖಕರು ಕೂಡ. ತರಾಸು, ಪಾರ್ಥಸಾರಥಿ, ಪಂಚಾಯತ್ ರಾಜ್ಯ, ಕ್ರಿಕೆಟ್ - ಹೀಗೆ ಹಲವು ಕ್ಷೇತ್ರಗಳಲ್ಲಿ ಲೇಖನಿ ಓಡಿಸಿರುವ ಛಾಯಾಪತಿಯವರು ಪ್ರಕಾಶನಕ್ಕೇ ಪೂರ್ತಿಯಾಗಿ ತಮ್ಮನ್ನರ್ಪಿಸಿಕೊಂಡು ಸಾಹಸ ಮೆರೆದದ್ದು ದೊಡ್ಡ ಸಂಗತಿ. ಹಲವು ಸಿದ್ಧಪ್ರಸಿದ್ಧರ ಉದ್ಧೃತ ಕೃತಿಗಳ ಬೆಳಕು. ಒಂದೊಂದು ಪ್ರಕಟನೆಯೂ ಒಂದೊಂದು ಪ್ರಯೋಗ. ಅಂತಃಸತ್ತ್ವದ ಜೊತೆಗೆ ಬಾಹ್ಯ ಸೌಂದರ್ಯ, ಕಳೆದ ಶತಮಾನದ ಕೊನೆಯ ವರ್ಷ ಶ್ರೇಷ್ಠ ಪ್ರಕಾಶಕರೆಂದು ಕನ್ನಡ ಪುಸ್ತಕ ಪ್ರಾಧಿಕಾರದ ಪ್ರಶಸ್ತಿಯ ಕಿರೀಟ. ಮಾಲೆಯ ಸ್ವರ್ಣ ಮಹೋತ್ಸವ ವರ್ಷದಲ್ಲಿ ಐವತ್ತು ಪುಸ್ತಕ ಹೊರ ತರುವ ಹಂಬಲಕ್ಕೆ ಚಿನ್ನದ ನೀರಿನ ಎರಕ.



# ಸೃಜನಶೀಲ ಪ್ರಕಾಶಕ ಛಾಯಾಪತಿ

ಟಿ.ಎಸ್. ಛಾಯಾಪತಿ ನಮ್ಮ ನಡುವಿನ ಅಪರೂಪದ ಸೃಜನಶೀಲ ಪ್ರಕಾಶಕ. ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ, ನಿಸರ್ಗದ ಕವಿ ನಿಸಾರ್ ಅಹ್ಮದ್, ಹಾ.ಮಾ. ನಾಯಕ್ ಸೇರಿದಂತೆ ಹತ್ತು ಹಲವು ಅತಿರಥ ಮಹಾರಥ ಸಾಹಿತಿಗಳ ಕೃತಿಗಳನ್ನು ತಮ್ಮ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಎಂಬ ಪ್ರಕಾಶನ ಸಂಸ್ಥೆಯ ಮೂಲಕ ಪ್ರಕಾಶನ ಮಾಡಿದ ಹಿರಿಮೆ ಇವರದು.

ಮೂಲತಃ ಸಾಹಿತ್ಯಿಕ ಕುಟುಂಬದಿಂದ ಬಂದ ಛಾಯಾಪತಿ ತಂದೆ ಹೆಸರಾಂತ ಸಾಹಿತಿ ತ.ಸು. ಶಾಮರಾಯರ ಗರಡಿಯಲ್ಲಿ ಪ್ರಕಾಶನ ವೃತ್ತಿಯ ತರಬೇತಿ ಪಡೆದವರು. ಎಂ.ಕಾಂ.ನಲ್ಲಿ ಸ್ನಾತಕೋತ್ತರ ಪದವಿ ಪಡೆದರೂ ಬ್ಯಾಂಕಿಂಗ್ ವೃತ್ತಿಯ ಹಿಂದೆ ಬೀಳದೆ ತಂದೆಯ ಕನಸಿನ ಕೂಸಾದ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯನ್ನು ಮುನ್ನಡೆಸುವ ಪಣತೊಟ್ಟು ಅದರಲ್ಲಿ ಯಶಸ್ವಿಯಾದವರು. ಸಾಹಿತ್ಯಲೋಕದ ಆರಾಧ್ಯ ದೇವತೆಯ ಕೊರಳಿಗೆ ನವರತ್ನಗಳ ಕಂಠಿಹಾರವನ್ನು ತೊಡಿಸಿದ ಮೇರು ಪರ್ವತ.

ತಂದೆಯಂತೆ ಸಾಹಿತ್ಯ ಕೃಷಿಯಲ್ಲೂ ತೊಡಗಿದ್ದ ಛಾಯಾಪತಿ ರಾಮಾಯಣ, ಗಣಕ, ಪಂಚತಂತ್ರ ಕಥಾಮಾಲಿಕೆ, ನಮ್ಮ ಕ್ರಿಕೆಟ್ ಸೇರಿದಂತೆ ಸುಮಾರು 20ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿ ಕುವೆಂಪು, ಹಾ.ಮಾ.ನಾ., ತ.ಸು. ಶಾಮರಾಯರು, ಎಚ್ಚೆಸ್ಕೆ ಮೊದಲಾದ ಸಾಹಿತ್ಯ ಲೋಕದ ದಿಗ್ಗಜರಿಂದ ಬೆನ್ನು ತಟ್ಟಿಸಿಕೊಂಡವರು. 1968 ರಿಂದ ತಮ್ಮ ತಂದೆ ಸ್ಥಾಪಿಸಿದ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಪ್ರಕಾಶನದ ಜವಾಬ್ದಾರಿ ವಹಿಸಿಕೊಂಡ ಛಾಯಾಪತಿ, ಇಲ್ಲಿಯವರೆಗೂ ಪ್ರಕಟಿಸಿರುವ ಪುಸ್ತಕಗಳ ಸಂಖ್ಯೆ ಸಾವಿರದ ಗಡಿಯನ್ನು ದಾಟಿದೆ. ಇಂದಿನ ಪೈಪೋಟಿಯುತ ವ್ಯವಸ್ಥೆಯಲ್ಲಿ ಒಂದು ಪುಸ್ತಕವನ್ನು ಹೊರತರಲು ಸಹಸ್ರಾರು ರೂಪಾಯಿಗಳನ್ನು ವ್ಯಯಿಸಬೇಕಾದ ಅನಿವಾರ್ಯತೆ ಇರುವಾಗ ಛಾಯಾಪತಿಯವರು ಲಕ್ಷಾಂತರ ರೂಪಾಯಿಗಳನ್ನು ವ್ಯಯಿಸಿ ಸಾವಿರಾರು ಪುಸ್ತಕಗಳನ್ನು ಹೊರತಂದಿದ್ದಾರೆ ಎಂದರೆ ಅದೇನು ಸಾಮಾನ್ಯವಾದ

---

ರಾಜೇಶ್

---

ಸಂಗತಿಯಲ್ಲ. ಅವರ ಈ ಸಾಧನೆಗಾಗಿಯೇ 1999ರಲ್ಲಿ ರಾಜ್ಯ ಸರ್ಕಾರ ಅತ್ಯುತ್ತಮ ಪ್ರಕಾಶಕ ಎಂಬ ರಾಜ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿರುವುದು.

ಸ್ನೇಹಜೀವಿ, ಅತಿಥಿ ಆದರದಲ್ಲಿ ತಮ್ಮ ಬದುಕಿನ ಸುಖವನ್ನು ಕಾಣುವ 63ರ ಹರೆಯದ ಛಾಯಾಪತಿ ತಮ್ಮ ತಂದೆಯನ್ನೇ ಆದರ್ಶವಾಗಿರಿಸಿಕೊಂಡವರು. ದುರ್ಗಾಸ್ತಮಾನದಂತಹ ಮೇರು ಕೃತಿಯನ್ನು ರಚಿಸಿತ ತ.ರಾ.ಸು. ಇವರ ದೊಡ್ಡಪ್ಪನ ಮಗ ಎಂಬುದು ಮತ್ತೊಂದು ವಿಶೇಷ. ಕನ್ನಡ ಸಾರಸ್ವತ ಲೋಕದ ದಿಗ್ಗಜರಲ್ಲಿ ಒಬ್ಬರಾದ ತಳುಕಿನ ವೆಂಕಣ್ಣಯ್ಯ ಸಹ ಇವರ ತಂದೆಯ ಅಣ್ಣ. ಒಟ್ಟಿನಲ್ಲಿ ಸಾಹಿತ್ಯ ಲೋಕದ ನಂಟಿನಲ್ಲೇ ಬೆಳೆಯುವ ಸದಾವಕಾಶದಿಂದಲೇ ಅವರಿಂದು ಶಾರದೆಯ ಪುತ್ರರಾಗಿ ಕಂಗೊಳಿಸುತ್ತಿದ್ದಾರೆ. ಅವರ ಮನೆಯಲ್ಲೇ ಶಾರದಾದೇವಿ ಅವತರಸಿದ್ದಾಳೇನೋ ಎಂಬಂತೆ ಅವರ ಮನೆಯ ತುಂಬೆಲ್ಲಾ ಪುಸ್ತಕಗಳ ಸಾಗರವೇ ಮೈದೆರೆದು ನಿಂತಿದೆ. ಅದಕ್ಕೂ ಮೀರಿದ ವಿಶೇಷ ಎಂದರೆ ಕುವೆಂಪು, ತ.ರಾ.ಸು., ಶಾಮರಾಯರು, ನಿಸಾರ್ ಅಹ್ಮದ್ ಮೊದಲಾದ ಕವಿಶ್ರೇಷ್ಠರ ಹಸ್ತಪ್ರತಿಗಳ ಸಂಗ್ರಹವೂ ಅವರಲ್ಲಿದೆ. ಕನ್ನಡ ಸಾರಸ್ವತ ಲೋಕದ ಆ ಮುಕುಟಮಣಿಗಳ ಹಸ್ತಾಕ್ಷರವನ್ನು ನೋಡುತ್ತಿದ್ದರೆ ಒಂದು ಕ್ಷಣ ಮೈಮನಸ್ಸುಗಳೆಲ್ಲಾ ರೋಮಾಂಚನಗೊಳ್ಳುತ್ತದೆ.

ಹಣ ಮಾಡುವ ಉದ್ದೇಶವನ್ನಿಟ್ಟುಕೊಂಡು ನಾನು ಪ್ರಕಾಶನ ಕ್ಷೇತ್ರಕ್ಕೆ ಬಂದಿಲ್ಲ, ಕನ್ನಡದ ಪ್ರತಿಷ್ಠಿತ ಕೃತಿಗಳನ್ನು ಹೊರತರುವ ಮೂಲಕ ಕನ್ನಡ ಸಾಹಿತ್ಯ ಕ್ಷೇತ್ರದ ಶ್ರೀಮಂತಿಕೆಯನ್ನು ಹೆಚ್ಚಿಸುವ ಉದ್ದೇಶ ನನ್ನದು. ಪ್ರಕಾಶನ ವೃತ್ತಿ ಎಂದೂ ನನ್ನ ಕೈಬಿಟ್ಟಿಲ್ಲ. ನಾನು ಯಾರನ್ನೂ ಕೆಲಸಕ್ಕೆಂದು ನೇಮಿಸಿ ಕೊಳ್ಳದೆ ಒಬ್ಬೊಂಟಿಯಾಗಿ ಈ ಪ್ರಕಾಶನ ಸಂಸ್ಥೆಯ ರಥವನ್ನು ಎಳೆಯುತ್ತಿದ್ದೇನೆ. ನಾಡಿನ ಮೂಲೆ ಮೂಲೆಗೂ ಹೋಗಿ ಉತ್ತಮ ಕೃತಿಯನ್ನು ತಲುಪಿಸುವ ಕೆಲಸ ಮಾಡುತ್ತಿದ್ದೇನೆ. ಟಿ.ವಿ. ಮಾಧ್ಯಮದ ಹಾವಳಿಯಿಂದ ಪುಸ್ತಕ ಓದುವ ಪ್ರವೃತ್ತಿ ಕಡಿಮೆಯಾಗುತ್ತಿದೆ ಎಂಬುದು ಶುದ್ಧ ಸುಳ್ಳು. ಇಂದಿಗೂ ಉತ್ತಮವಾದ ಕನ್ನಡ ಪುಸ್ತಕಗಳನ್ನು ಓದುಗರು ಕೊಂಡು ಓದುತ್ತಿದ್ದಾರೆ. ಖ್ಯಾತ ಕಾದಂಬರಿಕಾರ ಎಸ್.ಎಲ್. ಭೈರಪ್ಪನವರ ಕಾದಂಬರಿ ಬಿಡುಗಡೆಯಾದ ಕೆಲವೇ ದಿನಗಳಲ್ಲಿ ಸಾವಿರಕ್ಕೂ ಹೆಚ್ಚು ಪ್ರತಿಗಳ ಮಾರಾಟವಾಗುತ್ತದೆ. ತ.ಸು. ಶಾಮರಾಯರ ಶಬ್ದಮಣಿದರ್ಪಣ ಕೃತಿ ಪ್ರತೀವರ್ಷ ಸಾವಿರ ಪ್ರತಿಗಳು ಮಾರಾಟವಾಗುತ್ತಿದೆ. ಇವೆಲ್ಲ ಕನ್ನಡಿಗರ ಓದುವ ಪ್ರವೃತ್ತಿ ಕಡಿಮೆಯಾಗಿಲ್ಲ ಎಂಬುದಕ್ಕೆ ಸಾಕ್ಷಿಯಾಗಿದೆ, ಒಳ್ಳೆಯ ಪುಸ್ತಕ ಮಾಡಿ ಕಡಿಮೆ ಬೆಲೆ ಇಟ್ಟರೆ ಇಂದಿಗೂ ಜನ ಪುಸ್ತಕವನ್ನು ಕೊಂಡು ಓದುತ್ತಾರೆ, ಇದರಲ್ಲಿ ಖಂಡಿತಾ ಅನುಮಾನವೇ ಇಲ್ಲ ಎಂದು ವಿಶ್ವಾಸದಿಂದ ನುಡಿಯುತ್ತಾರೆ.

ಸಾಹಿತ್ಯ ಕ್ಷೇತ್ರದಲ್ಲೂ ಇಂದು ಭ್ರಷ್ಟಾಚಾರ ತಾಂಡವವಾಡುತ್ತಿದೆ. ಕೇವಲ ಹಣ ಮಾಡಬೇಕೆನ್ನುವ ಉದ್ದೇಶವನ್ನೇ ಇಟ್ಟುಕೊಂಡು ಪ್ರಕಾಶನ ಕ್ಷೇತ್ರಕ್ಕೆ ಬರುತ್ತಿರುವವರ

ಸಂಖ್ಯೆ ಹೆಚ್ಚುತ್ತಿದ್ದು ಇದರಿಂದ ಮೌಲ್ಯಗಳು ನಾಶವಾಗುತ್ತಿವೆ. ಇದರಿಂದಾಗಿ ಸಾಹಿತ್ಯ ಕ್ಷೇತ್ರ ಅವನತಿಯ ಹಾದಿಯಲ್ಲಿ ಸಾಗುತ್ತಿದೆ ಎಂದು ನೋವಿನಿಂದ ನುಡಿಯುವ ಛಾಯಾಪತಿ, ಹಣಮಾಡುವ ಉದ್ದೇಶವನ್ನಿಟ್ಟುಕೊಂಡು ಯಾರೂ ಪ್ರಕಾಶನ ಕ್ಷೇತ್ರಕ್ಕೆ ಬರಲೇಬಾರದು ಎನ್ನುತ್ತಾರೆ.

ನಮ್ಮ ಪ್ರಕಾಶನ ಕಾರ್ಯಗಳಿಗೆ ಬೆನ್ನೆಲುಬಾಗಿ ನಿಂತು ಎಲ್ಲಾ ರೀತಿಯ ಸಹಕಾರ ನೀಡುತ್ತಿರುವ ಶ್ರೀನಿವಾಸಪ್ರಸಾದ್‌ರನ್ನು ತುಂಬು ಹೃದಯದಿಂದ ಸ್ಮರಿಸುವ ಛಾಯಾಪತಿ, ಆ ಆತ್ಮೀಯತೆಯ ಕುರುಹಾಗಿ ಮಾಧ್ಯಮದಲ್ಲಿ ಶ್ರೀನಿವಾಸಪ್ರಸಾದ್ ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ ಹಿರಿಯ ಸಾಹಿತಿಗಳಾದ ಚೆನ್ನವೀರಕಣವಿ ನಿಸಾರ್ ಅಹಮದ್‌ರವರ ಒಡನಾಟದ ಬಗ್ಗೆಯೂ ಅವರಿಗೆ ಹೆಮ್ಮೆಯಿದೆ.

ಒಟ್ಟಿನಲ್ಲಿ ಕನ್ನಡ ಸಾಹಿತ್ಯ ಕೃತಿಗಳ ಪ್ರಕಾಶನವನ್ನೇ ತಮ್ಮ ವೃತ್ತಿಯಾಗಿ ಸ್ವೀಕರಿಸಿ, ಸೃಜನಶೀಲ ಕೃತಿಗಳ ಪ್ರಕಟಣೆಯನ್ನೇ ತಮ್ಮ ಬದುಕಾಗಿಸಿಕೊಂಡ ಸಾಹಿತ್ಯ ದೇವಿಯ ಆರಾಧನೆಗೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡಿರುವ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಟಿ.ಎಸ್. ಛಾಯಾಪತಿ ನಮ್ಮ ನಡುವಿನ ಅಪರೂಪದ ಸೃಜನಶೀಲ ಪ್ರಕಾಶಕ ಎಂದರೆ ಖಂಡಿತ ಅತಿಶಯೋಕ್ತಿಯಾಗದು.

## ಕನ್ನಡ ಸಾಹಿತ್ಯದ ಸಹೃದಯ ಪ್ರಕಾಶಕ ಟಿ.ಎಸ್. ಛಾಯಾಪತಿ

ಈಗಂತೂ ಮಾತು-ಕೃತಿಯಲ್ಲಿ ಕಷ್ಟ -ನಷ್ಟದ್ದೇ ಕಾರುಬಾರು. ಇವೆರಡು ಪರಿಸ್ಥಿತಿ ಸಾಧಕರಿಗೆ ಸಿಂಹಸ್ವಪ್ನ. ಹಾಗಾಗಿಯೇ ಇವುಗಳ ವಿಚಾರದಲ್ಲಿ ಕನಸಿನಲ್ಲೂ ಬೆಚ್ಚಿ ಬೀಳುತ್ತಾರೆ, ಬೆವರೂರಿಸಿಕೊಳ್ಳುತ್ತಾರೆ.

ಆದರೆ ಕೆಲ ಸಾಧಕರು ಇವುಗಳನ್ನು ಮಗ್ಗಲುಗಳನ್ನಾಗಿ ಮಾಡಿಕೊಂಡು, ಪ್ರಯತ್ನ... ಪ್ರಯತ್ನ ಮಾಡಿ ಕೊನೆಗೊಮ್ಮೆ ಗುರಿ ತಲುಪುವಲ್ಲಿ ಯಶಸ್ವಿಯಾಗುತ್ತಾರೆ. ಆ ಮೂಲಕ ಇನ್ನಿತರರಿಗೆ ಆತ್ಮಸ್ಥೈರ್ಯದ ಪ್ರತಿರೂಪವಾಗಿ ಬಾಳುತ್ತಾರೆ.

ಈ ಮಾತು ಮೈಸೂರಿನ ಸಹೃದಯ ಪ್ರಕಾಶಕ ಟಿ.ಎಸ್.ಛಾಯಾಪತಿ ಅವರಿಗೆ ಅಕ್ಷರಶಃ ಅನ್ವಯವಾಗುತ್ತದೆ. ತಂದೆಯಿಂದ ಬಳುವಳಿಯಾಗಿ ಬಂದ ಪುಸ್ತಕ ಪ್ರಕಟಣೆ ಕಾಯಕವನ್ನು ಕಾಯಾ ವಾಚಾ ಮನಸಾ ಅನುಸರಿಸಿಕೊಂಡು ಬರುತ್ತಿರುವ ಛಾಯಾಪತಿ ಅವರು ನಿಜವಾದ  ಕಾಯಕಯೋಗಿ.

ಕನ್ನಡ ನವ್ಯ ಸಾಹಿತ್ಯ ದೀವಿಗೆ ಪ್ರಜ್ವಲಿಸಲು ಕಾರಣಕರ್ತ ರಾದವರಲ್ಲಿ ಒಬ್ಬರಾದ ತಳುಕಿನ ವೆಂಕಣ್ಣಯ್ಯ ಅವರ ಸ್ಫೂರ್ತಿ ಹಾಗೂ ಸ್ಮರಣಾರ್ಥ ಅವರ ಸಹೋದರ ತ.ಸು. ಶಾಮರಾಯರು ಒಂದು ಪ್ರಕಾಶನ ಆರಂಭಿಸಿದರು. ಅದೇ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ. ಅದು ಈಗ ಕನ್ನಡ ಸಾಹಿತ್ಯ ಭಂಡಾರದಲ್ಲಿ ತನ್ನದೇ ವಿಶಿಷ್ಟ ಸ್ಥಾನಮಾನ ಹೊಂದಿದೆ. ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಈಗ ಸಾಹಿತ್ಯಾಭಿಮಾನಿಗಳ ಅಭಿಮಾನದ ಜ್ಞಾನದೇಗುಲವಾಗಿದೆ. ಇಲ್ಲಿ ಅಮೂಲ್ಯ ಸಾಹಿತ್ಯರತ್ನಗಳ ಸಾಹಿತ್ಯ ಸಾರವಿದೆ, ಸಂಗ್ರಹವಿದೆ. ಹೀಗೆ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಸ್ಥಾಪನೆಯಾಗಿ ಆರು ದಶಕ ಸಂದಿದ್ದು, ಅಲ್ಲಿಂದ ಇಲ್ಲಿವರೆಗೆ 1500ಕ್ಕೂ ಅಧಿಕ ಪುಸ್ತಕಗಳನ್ನು ಪ್ರಕಟಿಸಿದೆ. ಕಾವ್ಯ, ಕಥೆ, ನಾಟಕ, ಪ್ರಬಂಧ, ವಿಮರ್ಶೆ, ಜೀವನ ಚರಿತ್ರೆ, ಅಂಕಣ, ಪ್ರವಾಸಕಥನ, ಸಂಶೋಧನೆ, ಅಭಿನಂದನಾ ಕೃತಿ ಹೀಗೆ ಸಾಹಿತ್ಯದ ನಾನಾ ಪ್ರಾಕಾರಗಳಲ್ಲಿ ವೈವಿಧ್ಯಪೂರ್ಣವಾಗಿ ಪುಸ್ತಕಗಳನ್ನು ಪ್ರಕಟಿಸಿದ ಹೆಗ್ಗಳಿಕೆ. ಅದರಲ್ಲಿ ಸಾಹಿತ್ಯ ದಿಗ್ಗಜರಾದ ಟಿ.ಎಸ್. ವೆಂಕಣ್ಣಯ್ಯ, ಡಿ.ಎಲ್. ನರಸಿಂಹಚಾರ್,

ತ.ಸು. ಶಾಮರಾಯ, ದೇ. ಜವರೇಗೌಡ, ಎಚ್ಚೆಸ್ಕೆ, ಹಾ.ಮಾ. ನಾಯಕ, ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ, ಚೆನ್ನವೀರಕಣವಿ, ಟಿ.ವಿ. ವೆಂಕಟಾಚಲ ಶಾಸ್ತ್ರಿ, ಸಿಪಿಕೆ, ನಿಸಾರ್ ಅಹಮದ್, ಚಂಪಾ, ಮಲ್ಲೇಪುರಂ ಜಿ. ವೆಂಕಟೇಶ, ಮತ್ತೂರು ಕೃಷ್ಣಮೂರ್ತಿ, ಎಚ್.ಜೆ. ಲಕ್ಕಪ್ಪಗೌಡ, ಎನ್.ಎಸ್. ತಾರಾನಾಥ ಹೀಗೆ ನಾಡಿನ ಇನ್ನಿತರೆ ಸಾಹಿತ್ಯ ದಿಗ್ಗಜರ ಕೃತಿಗಳನ್ನು ಹೊರತಂದ ಹೇಲರಿಮೆ ಈ ಗ್ರಂಥಮಾಲೆಗೆ ಸಂದಿದೆ. ಈ ಸಾಹಿತಿಗಳ ಕೃತಿಗಳು ಇದೇ ಗ್ರಂಥಮಾಲೆ ಮೂಲಕ ಹತ್ತಾರು ಮರು ಪ್ರಕಟಣೆಗೊಂಡಿರುವುದು ಹೆಮ್ಮೆಯ ವಿಷಯವಲ್ಲವೆ? ತ.ಸು. ಶಾಮರಾಯರು ಅತೀ ಶ್ರದ್ಧೆ ಹಾಗೂ ಸಂಕಲ್ಪದಿಂದ ಕಟ್ಟಿದಂತಹ ಈ ಗ್ರಂಥಮಾಲೆಯನ್ನು ಅವರ ಆದರ್ಶಕ್ಕೆ ಸ್ವಲ್ಪವೂ ಚ್ಯುತಿ ಬಾರದಂತೆ ಅವರ ಪುತ್ರ ಟಿ.ಎಸ್. ಛಾಯಾಪತಿ ಅತ್ಯಂತ ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಕೇವಲ ಪ್ರಕಾಶನ ಮಾತ್ರವಲ್ಲ, ಅವರು ಒಂದು ಹೆಜ್ಜೆ ಮುಂದೆ ಹೋಗಿ ಲೇಖಕರಾಗಿಯೂ ಸಾಹಿತ್ಯ ಲೋಕದಲ್ಲಿ ಚಿರಪರಿಚಿತರಾಗಿದ್ದಾರೆ. ತಮ್ಮ ವಂಶದ ಮಹಾಪುರುಷರಾದ ಟಿ.ಎಸ್. ವೆಂಕಣ್ಣಯ್ಯ, ತ.ಸು. ಶಾಮರಾಯ, ತರಾಸು ಜೊತೆಗೆ ಚದುರಂಗ, ಅಬ್ದುಲ್ ನಜೀರ್ ಸಾಬ್, ಬಿ. ಪಾರ್ಥಸಾರಥಿ ಅವರುಗಳ ವ್ಯಕ್ತಿ ಚಿತ್ರಣ, ಜಿಲ್ಲಾ ಪಂಚಾಯತ್ ಕಾಯ್ದೆ ಮೇಲೆ ಬೆಳಕು ಚೆಲ್ಲುವ 'ಗಾಂಧೀಜಿ ಕನಸು ನಜೀರರಿಂದ ನನಸು, ಆಡಳಿತ ಭಾಷೆ ಕನ್ನಡ, ಅಣ್ಣನ ಸ್ಮರಣೆ, ಸಾಹಿತ್ಯ ಖ್ಯಾತರ ಸಮಗ್ರ ಸಾಹಿತ್ಯ ಹೀಗೆ 23 ಕೃತಿಗಳ ರಚನಕಾರರಿವರು. ಛಾಯಾಪತಿಗಳ ಸಾಹಿತ್ಯ ಕೃಷಿಯ ಬಗ್ಗೆ ರಾಷ್ಟ್ರಕವಿ ಕುವೆಂಪು, ತರಾಸು, ಚದುರಂಗ, ಹಂ.ಪ. ನಾಗರಾಜಯ್ಯ, ಹಾಮಾ ನಾಯಕ್, ಗೊರೂರು ರಾಮಸ್ವಾಮಿ ಐಯ್ಯಂಗಾರ್, ಯು.ಆರ್. ಅನಂತಮೂರ್ತಿ, ಕೆ.ಎಸ್. ನಿಸಾರ್ ಅಹಮದ್, ಪು.ತಿ. ನರಸಿಂಹಚಾರ್, ಚೆನ್ನವೀರಕಣವಿ, ಜಿ.ಎಸ್. ಶಿವರುದ್ರಪ್ಪ ಇನ್ನಿತರರು ಅತೀವ ಪ್ರಶಂಸೆ ವ್ಯಕ್ತಪಡಿಸಿದ್ದಾರೆ. ಇಂದಿನ ಸ್ಪರ್ಧಾಯುಗದಲ್ಲೂ ಲಾಭ - ನಷ್ಟಗಳ ಲೆಕ್ಕಾಚಾರ ಮಾಡದೇ ತಮ್ಮ ತಂದೆಯಿಂದ ಬಳುವಳಿಯಾಗಿ ಬಂದ ಈ ಗ್ರಂಥಮಾಲೆ ತನ್ನ ಬದುಕಿಗೆ ಬಂಗಾರದ ಖಜಾನೆ ಎಂಬಂತೆ ಸಂರಕ್ಷಿಸಿ ಕಾಲಕಾಲಕ್ಕೆ ಮೌಲ್ಯಯುತ ಮಾರ್ಪಾಡು ಮಾಡಿಕೊಂಡು ಸಾರ್ಥಕತೆ ಮೆರೆಯುತ್ತಿದ್ದಾರೆ ಛಾಯಾಪತಿ.

ಟಿ.ಎಸ್. ಛಾಯಾಪತಿಯವರು ಜನಿಸಿದ್ದು 1944ರ ಮೇ10 ರಂದು. ತಂದೆ ತ.ಸು.ಶಾಮರಾಯರು, ತಾಯಿ ಸುಬ್ಬಲಕ್ಷ್ಮಿ. ದೊಡ್ಡಪ್ಪನ ಮಗ ಖ್ಯಾತ ಕಾದಂಬರಿಕಾರ ತರಾಸು. ವಾಣಿಜ್ಯ - ವ್ಯವಹಾರ ಜ್ಞಾನ ಪೂರಕಕ್ಕೆ ಎಂ.ಕಾಂ. ಪದವೀಧರರಾದರೂ ಅವರ ಮನಸ್ಸು ಮಾತ್ರ ಸಾಹಿತ್ಯ ಸಂವರ್ಧನೆಯತ್ತ ತುಡಿಯಿತು. ಸ್ನೇಹಜೀವಿಯಾದ ಛಾಯಾಪತಿಯವರು ಅತಿಥಿಗಳ ಆದರದಲ್ಲೇ ತಮ್ಮ ಬದುಕಿನ ಸುಖವನ್ನು ಕಾಣುವ ವಿಶೇಷ ವ್ಯಕ್ತಿ. 69ರ ಹರೆಯದಲ್ಲೂ ಯುವಕರಂತೆ ಕ್ರಿಯಾಶೀಲರಾಗಿದ್ದಾರೆ. ಹಣ

ಮಾಡುವ ಉದ್ದೇಶವನ್ನಿಟ್ಟುಕೊಂಡು ಇವರು ಪ್ರಕಾಶನಕ್ಕೆ ಕೈಹಾಕಿದವರಲ್ಲ. ಕನ್ನಡದ ಪ್ರತಿಷ್ಠಿತ ಸಾಹಿತಿಗಳ ಕೃತಿಗಳನ್ನು ಪ್ರಕಟಿಸುವ ಮೂಲಕ ಕನ್ನಡ ಸಾಹಿತ್ಯ ಕ್ಷೇತ್ರದ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ. ಕನ್ನಡ ಸಾಹಿತ್ಯದ ಮೌಲಿಕ ಕೃತಿಗಳ ಪ್ರಕಾಶನವನ್ನೇ ತಮ್ಮ ವೃತ್ತಿಯಾಗಿ ಸ್ವೀಕರಿಸಿ, ಸೃಜನಶೀಲ, ಉತ್ತಮ ಸದಭಿರುಚಿಯ ಕೃತಿಗಳ ಪ್ರಕಟಣೆಯನ್ನೇ ತಮ್ಮ ಬದುಕಾಗಿಸಿಕೊಂಡು, ಸಾಹಿತ್ಯ ದೇವಿಯ ಆರಾಧನೆಗೆ ತಮ್ಮನ್ನೇ ಸಂಪೂರ್ಣ ಸಮರ್ಪಿಸಿಕೊಂಡಿದ್ದಾರೆ.

ಟಿ.ಎಸ್. ಛಾಯಾಪತಿಯವರ ಸಾಹಿತ್ಯ ಸಾಧನೆಯನ್ನು ಗಮನಿಸಿ ಜಿಲ್ಲಾ ಪ್ರತಿಭಾನ್ವಿತ, ಸಾಹಿತ್ಯ ಸೇವಾಧುರೀಣ, ಕನ್ನಡ ಪ್ರಕಾಶನ ರತ್ನ, ಅತ್ಯುತ್ತಮ ಪ್ರಕಾಶನ ಪ್ರಶಸ್ತಿ, ಹತ್ತು -ಹಲವಾರು ಪ್ರಶಸ್ತಿಗಳನ್ನು ವಿವಿಧ ಸಂಘ ಸಂಸ್ಥೆಗಳು ನೀಡಿ ಗೌರವಿಸಿದೆ. ಇಷ್ಟಾದರೂ ನಿಗರ್ವಿಯಾದ ಛಾಯಾಪತಿಯವರು 'ಎಲೆ ಮರೆಯ ಕಾಯಿಯಂತೆ' ಸರಳ -ಸಜ್ಜನಿಕೆ, ವಿನಯ-ವಿವೇಕಶೀಲ ಗುಣಗಳಿಂದಲೇ ಸರ್ವರಿಗೂ ಸ್ನೇಹಮಯಿ.

ಟಿ.ಎಸ್. ಛಾಯಾಪತಿಯವರು ಸರ್ವಾರ್ಥದಲ್ಲೂ ವಿಶೇಷರು, ವಿವೇಚನಾ ಶೀಲರು, ಸಮಯ ಪ್ರಜ್ಞೆ ಉಳ್ಳವರು. ಇವರು ತಮ್ಮ ಸ್ನೇಹಭಾವದ ಗುಣದಿಂದ ಇತರರನ್ನು ಉತ್ತಮ ವ್ಯಕ್ತಿಗಳನ್ನಾಗಿ ರೂಪಿಸತಕ್ಕವರು. ಇಂತಹ ಸಾಧಕರಿಗೆ ಇನ್ನು ಕರ್ನಾಟಕ ರಾಜ್ಯೋತ್ಸವ ಸೇರಿ ಇತರೆ ಪ್ರತಿಷ್ಠಿತ ಪ್ರಶಸ್ತಿಗಳು ಸಂದದೇ ಇರುವುದು, ಪ್ರತಿಭೆಗೆ ಪುರಸ್ಕಾರವೇ ಇಲ್ಲವೇ ಎಂಬ ಪ್ರಶ್ನೆಗೆ ಕಾರಣವಾಗಿದೆ. ಕನ್ನಡ ಸಾಹಿತ್ಯ ಪ್ರಕಾಶನಕ್ಕೆ ಭಾರೀ ಗೌರವ ಬೆಲೆಯನ್ನು ತಂದುಕೊಟ್ಟಿರುವ ಛಾಯಾಪತಿ ಅವರ ಪ್ರಬುದ್ಧತೆಗೆ ತಕ್ಕಂತೆ ಅವರಿಗೆ ಮನ್ನಣೆ ದೊರಕಬೇಕಿದೆ. ಮೌಲಿಕ ಕನ್ನಡ ಕೃತಿಗಳನ್ನು ಜನರಿಗೆ ನೀಡುತ್ತಿರುವ ಪ್ರಕಾಶಕ, ಸಾಹಿತಿ ಛಾಯಾಪತಿ ಅವರ ವಿದ್ವತ್ತನ್ನು ಬಳಸಿಕೊಳ್ಳ ಬೇಕಾಗಿದೆ. ಸರ್ಕಾರದ ಸಹಾಯ - ಸಹಕಾರವಿದ್ದರೆ ಇಂತಹವರು ಮತ್ತಷ್ಟು ಸಾಹಿತ್ಯ ಸೇವೆ ಮಾಡಬಹುದಲ್ಲವೆ'

## ಕನ್ನಡ ಪುಸ್ತಕೋದ್ಯಮದ ಮೇರು : ಟಿ.ಎಸ್. ಛಾಯಾಪತಿ

ಭಾಷೆ ಅಭಿವ್ಯಕ್ತಿ ಮಾಧ್ಯಮವಾಗಿ ಮೂಡತೊಡಗಿದ್ದು ಮಾತಿನ ಮೂಲಕ. ಬರಹದ ಮೂಲಕ ನಂತರ ನೃತ್ಯ ಅಭಿನಯ ಮುಂತಾದವುಗಳ ಮೂಲಕ. ಬಹುಶಃ ಬಳಸಿದ ನಂತರವೂ ಭಾಷೆ ಭಾಷೆಯಾಗಿಯೇ ಉಳಿಯುವ ಮಾಧ್ಯಮ ಕೇವಲ ಪುಸ್ತಕಗಳು ಮಾತ್ರ. ಅಂತಹ ಪುಸ್ತಕಗಳನ್ನು ಪ್ರಕಟಿಸುವ ಮೂಲಕ ಬಹಳಷ್ಟು ಬರಹಗಾರರನ್ನು ಬೆಳಕಿಗೆ ತರುವುದರ ಜೊತೆಗೆ ಸಿದ್ಧ ಪ್ರಸಿದ್ಧ ವ್ಯಕ್ತಿಗಳ ಚಿಂತನೆಗಳ ಪ್ರಕಟಣೆಯ ಮೂಲಕ ದನಿಯಾದವರು ನಾಡಿನ ಪ್ರಸಿದ್ಧ ಪುಸ್ತಕ ಪ್ರಕಾಶಕ ಲೇಖಕ ಟಿ.ಎಸ್. ಛಾಯಾಪತಿ ಅವರು.

ತಳುಕಿನ ಮನೆತನ ಕನ್ನಡ ಸಾಹಿತ್ಯ ಲೋಕಕ್ಕೆ ಮಹತ್ವದ ಕೊಡುಗೆಗಳನ್ನಿತ್ತಿದೆ. ಕನ್ನಡದ ಅಶ್ವಿನಿ ದೇವತೆಗಳಲ್ಲೊಬ್ಬರಾದ ಟಿ.ಎಸ್. ವೆಂಕಣ್ಣಯ್ಯ, ಕನ್ನಡ ಸಾಹಿತ್ಯ ಭೀಷ್ಮ ತ.ಸು. ಶಾಮರಾಯರು, ಕನ್ನಡದ ಗಂಡುಮೆಟ್ಟಿನ ಸಾಹಿತಿ ತ.ರಾ. ಸುಬ್ಬರಾಯರು ತಳುಕಿನ ಮನೆತನದ ನಂದಾದೀವಿಗೆಗಳು. ಅಂತಹ ವಂಶದ ಮತ್ತೊಂದು ಬೆಳಕಿನ ಪುಂಜ ಟಿ. ಎಸ್. ಛಾಯಾಪತಿ.

ಛಾಯಾಪತಿ ಜನಿಸಿದ್ದು 1944 ಮೇ 10 ರಂದು. ತಂದೆ ತ.ಸು. ಶಾಮರಾಯರು, ತಾಯಿ ಸುಬ್ಬಲಕ್ಷ್ಮಿ, ತ.ಸು. ಶಾಮರಾಯರ ಐದು ಮಕ್ಕಳ ಪೈಕಿ ಛಾಯಾಪತಿ ಎರಡನೆಯವರು. ಚಿಕ್ಕಂದಿನಲ್ಲಿಯೇ ತಂದೆ ಶಾಮರಾಯರ, ದೊಡ್ಡಪ್ಪ ವೆಂಕಣ್ಣಯ್ಯನವರ ಪ್ರಭಾವಕ್ಕೆ ಒಳಗಾದ ಛಾಯಾಪತಿ ವಾಣಿಜ್ಯ ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದರಲ್ಲದೇ 1968 ರಿಂದ ತ.ವೆಂ. ಸ್ಮಾರಕ ಗ್ರಂಥಮಾಲೆಯನ್ನು ನಿರ್ವಹಿಸುವುದರೊಂದಿಗೆ ಪುಸ್ತಕೋದ್ಯಮಕ್ಕೆ ಪಾದಾರ್ಪಣ ಮಾಡಿದರು. ತಮ್ಮ ಪ್ರಕಾಶನದಿಂದ ಸದಭಿರುಚಿಯ ಶುದ್ಧ ಕನ್ನಡ ಸಾಹಿತ್ಯದ ಪರಿಚಯ ಮಾಡಿಸಲಾರಂಭಿಸಿದ ಛಾಯಾಪತಿ ಕನ್ನಡದ ಬಹಳಷ್ಟು ಪ್ರಸಿದ್ಧ ಲೇಖಕರ ಕೃತಿಗಳನ್ನು ಪ್ರಕಟಿಸಿದ್ದಾರೆ. ಸಾವಿರಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿರುವ ತ.ವೆಂ. ಸ್ಮಾರಕ ಗ್ರಂಥಮಾಲೆ ಛಾಯಾಪತಿಯವರಿಗೆ ಹೆಸರು ತಂದುಕೊಟ್ಟಿರುವುದರ ಜೊತೆಗೆ ಅತ್ಯುತ್ತಮ ಪ್ರಕಾಶನ ಪ್ರಶಸ್ತಿಯನ್ನೂ

ಸ್ಪರ್ಶ : ಸವಿಗನ್ನಡ

ತಂದುಕೊಟ್ಟಿದೆ. ಟಿ.ಎಸ್. ವೆಂಕಣ್ಣಯ್ಯ, ತ.ಸು. ಶಾಮರಾಯರು, ರಂಶ್ರೀ ಮುಗಳಿ, ಹಾ.ಮಾ. ನಾಯಕ, ಜಿ.ಎಸ್. ಶಿವರುದ್ರಪ್ಪ, ಚನ್ನವೀರಕಣವಿ, ದೇಜಗೌ, ಡಾ. ಸಿಪಿಕೆ, ವೆಂಕಟಾಚಲಶಾಸ್ತ್ರಿ, ನಿಸಾರ್ ಅಹಮದ್, ಎಸ್.ಜಿ. ಲಕ್ಕಪ್ಪಗೌಡ ವಿಜಯಸಾಸನೂರ್, ಕೆ.ಎಸ್. ಭಗವಾನರಂತಹ ಪ್ರಸಿದ್ಧ ಲೇಖಕರ ಕೃತಿಗಳು ತ.ವೆಂ. ಸ್ಮಾರಕ ಗ್ರಂಥಮಾಲೆಯಲ್ಲಿ ಪ್ರಕಟಗೊಂಡಿವೆ.

ಕನ್ನಡ ಸಾಹಿತ್ಯ ಚರಿತ್ರೆ, ಶಬ್ದಮಣಿದರ್ಪಣಂ, ಬಸವರಾಜದೇವರ ರಗಳೆ, ಜಾನಪದ ಸ್ವರೂಪ, ಸೌಂದರ್ಯ ಸಮೀಕ್ಷೆಗಳಂತಹ ಪುಸ್ತಕಗಳು 5 ರಿಂದ 10 ಭಾರಿ ಮುದ್ರಣ ಕಾಣುವ ಮೂಲಕ ಪ್ರಕಾಶಕ ಹಾಗೂ ಪ್ರಕಾಶನಕ್ಕೆ ಹೆಸರು ತಂದುಕೊಟ್ಟಿವೆ. ಕನ್ನಡ ಪುಸ್ತಕ ಪ್ರಕಾಶನೋದ್ಯಮದಲ್ಲಿಯೇ ಒಂದು ಸಾವಿರ ಪುಟಗಳ ಮಹಾಭಾರತ ಸಮೀಕ್ಷೆ, ಹೊನ್ನಾರು ಪುಸ್ತಕಗಳು ಸೇರಿದಂತೆ ನಾಡಿನ ಹೆಮ್ಮೆಯ ಅಂಕಣಕಾರ ಪ್ರೊ. ಎಚ್ಚೆಸ್ಕೆಯರವರ ಅಂಕಣದ ಬರಹಗಳ ಸಂಕಲನಗಳಾದ 'ಬೆಳಕುಚೆಲ್ಲಿದ ಬದುಕು', 'ಗಗನಚುಕ್ಕಿ ಭರಚುಕ್ಕಿ', ಮಾನ್ಯರು ಸಾಮಾನ್ಯರು ಬೃಹತ್ ಪುಸ್ತಕಗಳನ್ನು ಹೊರತಂದಿರುವುದು ಅವರ ಸಾಹಸಶೀಲತೆಗೆ, ಸಾಹಿತ್ಯಾಭಿಮಾನಕ್ಕೆ ಮತ್ತು ಕನ್ನಡ ಭಾಷಾ ಪ್ರೇಮಕ್ಕೆ ಸಾಕ್ಷಿಯಾಗಿದೆ.

ಸ್ವತಃ ಲೇಖಕರಾಗಿಯೂ ಟಿ.ಎಸ್. ಛಾಯಾಪತಿ ಆಡಳಿತಭಾಷೆ ಕನ್ನಡ, ಪುಟ್ಟನ ಸಚಿತ್ರ ರಾಮಾಯಣ, ಗಾಂಧೀಜಿಯ ಕನಸು - ನಜೀರರಿಂದ ನನಸು, ವರದಕ್ಷಿಣೆ ಸಾಮಾಜಿಕ ಪಿಡುಗು, ಪಂಚತಂತ್ರ ಕಥಾಮಾಲಿಕೆ ಮುಂತಾದ 22ಕ್ಕೂ ಹೆಚ್ಚು ಪುಸ್ತಕಗಳನ್ನು ರಚಿಸಿದ್ದಾರೆ.

ಪ್ರಕಟಣಾ ಪ್ರಪಂಚದ ಆಗುಹೋಗುಗಳ ಬಗ್ಗೆ ತಮ್ಮ ಚಿಂತನೆಯನ್ನು ಆಕಾಶವಾಣಿಯ ಮೂಲಕ ಶ್ರೋತೃಗಳಿಗೆ ಪರಿಚಯಿಸಿದ್ದಾರೆ. ಅತ್ಯುತ್ತಮ ಪ್ರಕಾಶನ ಸಂಸ್ಥೆಯಾಗಿ 1999ರಲ್ಲಿ ತ.ವೆಂ. ಸ್ಮಾರಕ ಗ್ರಂಥಮಾಲೆ ಪ್ರಶಸ್ತಿ ನಡೆದಾಗ 'ಗ್ರಂಥ ಲೋಕ' ದಲ್ಲಿ ವಿಶೇಷ ಸಂದರ್ಶನದಲ್ಲಿ ಹಾಗೂ ಆಕಾಶವಾಣಿಯ ಸಂದರ್ಶನ ಕಾರ್ಯಕ್ರಮಗಳಲ್ಲಿ ಪುಸ್ತಕ ಪ್ರಕಾಶನದ ನೋವು ನಲಿವುಗಳ ಬಗ್ಗೆ ಮಾತನಾಡಿದ್ದಾರೆ.

ಅತ್ಯಂತ ಪ್ರಸಿದ್ಧ ಪ್ರಕಾಶನ ಸಂಸ್ಥೆಯ ಪ್ರಕಾಶಕರಾದರೂ ಅತ್ಯಂತ ಸರಳತೆಯಿಂದ ಎಲ್ಲರನ್ನೂ ಪ್ರೀತಿಸುವ, ಗೌರವದಿಂದ ಮಾತನಾಡಿಸುವ ಛಾಯಾಪತಿಯವರನ್ನು ನಾಡಿನ ಹಲವು ಸಂಘ ಸಂಸ್ಥೆಗಳು ಸನ್ಮಾನಿಸಿವೆ.

1994 ಹಾಗೂ 1996ರಲ್ಲಿ ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಕನ್ನಡದ ಕುಲಪತಿ ಡಾ. ದೇಜಗೌರವರು ಛಾಯಾಪತಿಯವರನ್ನು ಸನ್ಮಾನಿಸಿ ಗೌರವಿಸಿದ್ದಾರೆ. 1998ರಲ್ಲಿ ಬೆಳಕು ಚೆಲ್ಲಿದ ಬದುಕು ಗ್ರಂಥ ಬಿಡುಗಡೆಯ ಸಮಾರಂಭದಲ್ಲಿ ಮಾಜಿ ಮೇಯರ್ ವಾಸುರವರು ಗೌರವಿಸಿದ್ದಾರೆ. 1996ರಲ್ಲಿ ಚಿತ್ರದುರ್ಗದ ಶ್ರೀಗಳವರು, ಸಾಹಿತ್ಯ ಸೇವಾ

ಧುರೀಣ ಬಿರುದು ನೀಡಿ ಅಭಿನಂದಿಸಿ ಆಶೀರ್ವದಿಸಿದ್ದಾರೆ. 1999ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರದಿಂದ ತ.ವೆಂ. ಸ್ಮಾರಕ ಗ್ರಂಥಮಾಲೆಗೆ ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ಪಡೆದಿದ್ದಾರೆ. ಕರ್ನಾಟಕ ರಾಜ್ಯ ಸರ್ಕಾರ 2001ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರದ ಸದಸ್ಯರನ್ನಾಗಿ ನೇಮಕಮಾಡಿ ಗೌರವಿಸಿದೆ. ಗುಂಡ್ಲುಪೇಟೆ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನಿಂದ, ಮೈಸೂರಿನ ಹೊಯ್ಸಳ ಕನ್ನಡ ಸಂಘ ಹಾಗೂ ಗೋಕುಲಂ ಕ್ಷೇಮಾಭಿವೃದ್ಧಿ ಸಂಘದಿಂದ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಲಾಗಿದೆ.

ಪ್ರಶಸ್ತಿಗಳ ಸರಮಾಲೆಯನ್ನೇ ಕೊರಳಿಗೆ ಹಾಕಿಕೊಂಡರೂ ನಿಗರ್ವಿಯಾದ ಛಾಯಾಪತಿ ಭತ್ತದ ತೆನೆಯಂತೆ ಬಾಗುವ ಗುಣವುಳ್ಳವರು. ತಮ್ಮಲ್ಲಿನ ವಿನಯದಿಂದಲೇ ಎಲ್ಲರನ್ನೂ ಸೆಳೆದುಕೊಳ್ಳುವ ಛಾಯಾಪತಿ ತಳುಕಿನ ಮನೆತನದ ಮತ್ತೊಂದು ನಂದಾದೀಪ. ಮೃದುಮಾತಿನ ವಿಶಾಲ ಹೃದಯದ ಈ ಪುಸ್ತಕೋದ್ಯಮಿ ರಾಷ್ಟ್ರೀಯ ಅಂತರರಾಷ್ಟ್ರೀಯ ಮಟ್ಟದಲ್ಲಿ ತ.ವೆಂ. ಸ್ಮಾರಕ ಗ್ರಂಥಮಾಲೆಯ ಹೆಸರನ್ನು ಎತ್ತಿ ಹಿಡಿಯಲಿ, ಹಿರಿಯ ಲೇಖಕರ ಜೊತೆ ಉದಯೋನ್ಮುಖ ಲೇಖಕರ ಕೃತಿಗಳನ್ನೂ ಪ್ರಕಟಿಸಿ ಮತ್ತಷ್ಟು ಎತ್ತರಕ್ಕೆ ಏರಲಿ ಎಂಬುದು ಸಾಹಿತ್ಯಾಭಿಮಾನಿಗಳ ಅಭಿಲಾಷೆ.

## ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯ ಪ್ರಕಾಶಕ ರತ್ನ ಛಾಯಾಪತಿ

'ಆಡಳಿತ ಭಾಷೆ ಕನ್ನಡ' ಈ ಪುಸ್ತಕ ಎಲ್ಲಾ ಪುಸ್ತಕಗಳಿಗಿಂತ ಮುಂದೆ ಹೋಗಿದೆ ಎನ್ನಬಹುದು. ಇದು ಛಾಯಾಪತಿಯವರ ಸ್ವೋಪಜ್ಞವಾದ ಕೊಡುಗೆ - ಈ ಮಾತನ್ನು ಆಡಿದ ವಿಮರ್ಶಕರು ಸುಲಭವಾಗಿ ಯಾವ ಛಾಯಾ ಪ್ರಭಾವಳಿಗೂ ಒಳಗಾಗುವಂಥ ವರಲ್ಲ. ಡಾ. ಹಾ.ಮಾ. ನಾಯಕರ ಈ ಅಭಿಪ್ರಾಯ ಮೌಲಿಕವಾದದ್ದು. ಇಂಥ ಒರೆಗಲ್ಲಿನಿಂದ ಆದ ಶ್ರೀ ಟಿ.ಎಸ್. ಛಾಯಾಪತಿಯವರು ಅಭಿನಂದನೀಯರು.

ಶ್ರೀ ಛಾಯಾಪತಿಯವರು ನಾಡು, ಕನ್ನಡದ ಮಹಾನ್ ದ್ರಷ್ಟಾರರಲ್ಲೊಬ್ಬರಾದ ತಳುಕಿನ ವೆಂಕಣ್ಣಯ್ಯನವರ ಸೋದರ, ಕನ್ನಡ ಸಾಹಿತ್ಯ ಚರಿತ್ರಕಾರ, ಕೀರ್ತಿಶೇಷ ಶ್ರೀ ಟಿ.ಎಸ್. ಶಾಮರಾಯರ ಮಗ. ಸಂಸ್ಕೃತ ಪ್ರಾಧ್ಯಾಪಕ ದಿ.ಟಿ.ಎಸ್. ವೆಂಕಣ್ಣಯ್ಯನವರ ಕಿರಿಯ ಸಹೋದರ.

'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ' ಸಂಸ್ಥೆ 1950ರಲ್ಲೆ ಪ್ರಾರಂಭ ವಾಗಿದ್ದು, 1968ರಲ್ಲಿ ಶ್ರೀ ಛಾಯಾಪತಿಯವರು ಪ್ರಕಾಶನ ನಿರ್ವಹಣೆಗೆ ಮುಂದಾದರು. 'ಸಾವಿರ ಪುಟಗಳ ಸರದಾರ' ಎಂದು ಬಿರುದಾಂಕಿತರಾಗುವವರೆಗೂ ಇವರ ಪುಸ್ತಕೋದ್ಯಮ ತಪಸ್ಸು ಬೃಹದಾಕಾರವಾಗಿ ಬೆಳೆಯುತ್ತ ಬಂದಿದೆ. ಇನ್ನು ಬೆಳೆಯುತ್ತಲೇ ಇದೆ. 'ಕನ್ನಡ ಪ್ರಕಾಶನ ರತ್ನ', ಪ್ರಕಾಶನದ ಮೇರು ಎಂದು ಗುರುತಿಸಲ್ಪಟ್ಟಿರುವ ಶ್ರೀಯುತರದು ಯಮ ಧೈರ್ಯವೇ ಸರಿ ಎಂದು ಹಾ.ಮಾ. ನಾಯಕರು ಸರಿಯಾಗಿಯೇ ಗುರುತಿಸಿದ್ದಾರೆ.

ಶ್ರೀ ಛಾಯಾಪತಿಯವರು ತಳುಕಿನ ತ.ಸು. ಶಾಮರಾಯರು, ಸುಬ್ಬಮ್ಮ ದಂಪತಿ ಗಳ ಪುತ್ರನಾಗಿ 1944ರಲ್ಲಿ ಜನಿಸಿದರು. ಈವರೆಗೆ ಇವರ ಪ್ರಕಾಶನ ಗ್ರಂಥಮಾಲೆಯಲ್ಲಿ ಒಂದು ಸಾವಿರಕ್ಕೂ ಮಿಗಿಲಾಗಿ ಪುಸ್ತಕಗಳು ಪ್ರಕಟಗೊಂಡಿವೆ. ಸ್ವತಃ 22 ಪುಸ್ತಕಗಳ ಲೇಖಕರೂ ಆಗಿರುವ ಇವರು 'ಪ್ರಕಟಣ ಪ್ರಪಂಚದ ಆಗುಹೋಗು'ಗಳ ಕುರಿತು

ರೇಡಿಯೋ ಭಾಷಣ ಮಾಡಿದ್ದಾರೆ. 1999ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರದಿಂದ ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ಪಡೆದಿದ್ದಾರೆ.

## ಪುಸ್ತಕ - ಪ್ರಕಾಶನ - ಕ್ರಾಂತಿ

ಒಂದು ಅವಧಿಗೆ ಕನ್ನಡ ಪುಸ್ತಕ ಪ್ರಾಧಿಕಾರದ ಸದಸ್ಯರಾಗಿದ್ದ ಶ್ರೀ ಛಾಯಾಪತಿ ಯವರು ಕಾವ್ಯ, ಕಥೆ, ನಾಟಕ, ಪ್ರಬಂಧ, ವಿಮರ್ಶೆ, ಜೀವನಚರಿತ್ರೆ, ಅಂಕಣ, ಪ್ರವಾಸ ಕಥನ, ಸಂಶೋಧನೆ, ಅಭಿನಂದನೆ ಹೀಗೆ ಸಾಹಿತ್ಯದ ಬಹು ಪ್ರಕಾರಗಳಲ್ಲಿ ವರ್ಣ ಮಯವೂ, ವೈವಿಧ್ಯಮಯವೂ ಆದ ಒಂದು ಸಾವಿರಕ್ಕೂ ಹೆಚ್ಚಿನ ಪುಸ್ತಕಗಳನ್ನು ಪ್ರಕಟಿಸಿದ ಸಾಧಕರಾಗಿದ್ದಾರೆ. ಈ ಮಾಲೆಯ ಹಲವಾರು ಪುಸ್ತಕಗಳು ಹತ್ತಾರು ಮುದ್ರಣ ಕಂಡಿವೆ. ನಾಡಿನ ಸಾಹಿತ್ಯ ಸಂಪದಭಿವೃದ್ಧಿಗೆ ಕಾಣಿಕೆಯಾಗಿ ನಿಂತಿವೆ.

'ಪ್ರಕಾಶಕ ರತ್ನ'ರು ಲೇಖಕರೂ ಆಗಿದ್ದು ಇಪ್ಪತೆರಡು ಕೃತಿಗಳನ್ನು ರಚಿಸಿದ್ದಾರೆ. ತಮ್ಮ ವಂಶದ ಹಿರಿಯರಾದ ಶ್ರೀ ಟಿ.ಎಸ್. ವೆಂಕಣ್ಣಯ್ಯ, ಶ್ರೀ ತ.ಸು. ಶಾಮರಾಯರು, ಶ್ರೀ ತ.ರಾ.ಸು. ಅವರುಗಳ ಹಾಗೂ ಶ್ರೀ ಚದುರಂಗ, ಶ್ರೀ ಅಬ್ದುಲ್ ನಜೀರ್ ಸಾಬ್, ಶ್ರೀ ಬಿ. ಪಾರ್ಥಸಾರಥಿ ಈ ಆರು ವ್ಯಕ್ತಿ ಚಿತ್ರಗಳನ್ನು ಬರೆದಿದ್ದಾರೆ.

'ಗಾಂಧೀಜಿ ಕನಸ ನಜೀರರಿಂದ ನನಸು' ಜಿಲ್ಲಾ ಪರಿಷತ್ ಕಾಯಿದೆಗಳ ಕುರಿತು ಪುಸ್ತಕವಾದರೆ 'ಆಡಳಿತ ಭಾಷೆ ಕನ್ನಡ' ಇನ್ನೊಂದು ಉಪಯುಕ್ತ ಕೃತಿ. ಅಣ್ಣನ ಸ್ಮರಣೆ, ಪುಟ್ಟಿನ ಸುಚಿತ್ರ ರಾಮಾಯಣಗಳು ಉಲ್ಲೇಖನೀಯ ಕೊಡುಗೆಗಳು.

ಒಪ್ಪಿಗೆ ಮೆಚ್ಚುಗೆ : ರಾಷ್ಟ್ರಕವಿ ಕುವೆಂಪು, ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ, ವಿಮರ್ಶಕ ಹಾ.ಮಾ. ನಾಯಕರೇ ಮೊದಲಾಗಿ ಹಲವು ಮಹನೀಯರು ಛಾಯಾಪತಿ ಯವರ ಕೃತಿಗಳ ಕುರಿತು ಮೆಚ್ಚುಗೆಯ ಮಾತುಗಳನ್ನು ಆಡಿದ್ದಾರೆ, ಅಭಿನಂದಿಸಿದ್ದಾರೆ.

## ಪ್ರಶಸ್ತಿ ಪುರಸ್ಕಾರಗಳ ಮಹಾಪೂರ

'ಜಿಲ್ಲೆಯ ಪ್ರತಿಭಾನ್ವಿತ', 'ಸಾಹಿತ್ಯ ಸೇವಾ ಧುರೀಣ'ರೆಂದು ಪ್ರಶಸ್ತಿಗಳನ್ನು ಪಡೆದ ಶ್ರೀಯುತರಿಗೆ ಅತ್ಯುತ್ತಮ ಪ್ರಕಾಶನ ಪ್ರಶಸ್ತಿ, ರಾಜ್ಯೋತ್ಸವ ಸನ್ಮಾನ, ಮೈಸೂರು ಮಿತ್ರ ಹಾಗೂ ಸ್ಟಾರ್ ಆಫ್ ಮೈಸೂರು ಪತ್ರಿಕೆಗಳ ರಜತ ಮಹೋತ್ಸವ ಸಂದರ್ಭದಲ್ಲಿ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳಿಂದ ಸನ್ಮಾನ, ನಾಡಹಬ್ಬ, ಹನುಮಜ್ಜಯಂತಿ ಸಮಾರಂಭಗಳಲ್ಲಿ ಸಚಿವರುಗಳಿಂದ ಸನ್ಮಾನ ಹೀಗೆ ಬಹುಮುಖ ಪ್ರತಿಭೆಗಳಿಗೆ ಪುರಸ್ಕೃತರಾಗಿದ್ದಾರೆ, ಗೌರವಿಸಲ್ಪಟ್ಟಿದ್ದಾರೆ.

ಶ್ರೀ ಚೆನ್ನವೀರಕಣವಿಯವರ ಹದಿನಾರು ಕವಿತಾ ಸಂಕಲನಗಳನ್ನು ಒಮ್ಮೆಗೇ ಪುನರ್ ಪ್ರಕಟಿಸಿದ ಪ್ರಥಮ ಸಾಹಸಿಯೂ ಇವರಾಗಿದ್ದಾರೆ.

ಶ್ರೀ ಛಾಯಾಪತಿಯವರು ಸಮುದಾಯದ ಹೆಮ್ಮೆಯ ಪುತ್ರರೂ, ನಾಡು - ನುಡಿಗಳಿಗಾಗಿ ದುಡಿದ ಹಿರಿಯರ ದಾರಿಯಲ್ಲಿ ನಡೆದು ಇನ್ನೂ ಬಹುಕಾಲ ಕನ್ನಡಮ್ಮನ ಸೇವೆ ಮಾಡಲಿ ಎಂದು ಸಭೆ ಆಶಿಸುತ್ತದೆ, ಅಭಿನಂದಿಸುತ್ತದೆ.

## ಹಿರಿಯರ ಬಳುವಳಿಗೆ ಆಧುನಿಕತೆಯ ಮೆರುಗು

'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ' ಕನ್ನಡ ಪುಸ್ತಕೋದ್ಯಮದಲ್ಲಿ ಬಹಳ ಮಹತ್ವವಾದದ್ದು. ವ್ಯವಹಾರ ಪ್ರಧಾನವಲ್ಲದ ಈ ಪುಸ್ತಕ ಪ್ರಕಾಶನ ಆರಂಭವಾದದ್ದೇ ಸಾಹಿತ್ಯಿಕ ಐತಿಹಾಸಿಕ ಹಿನ್ನೆಲೆಯಲ್ಲಿ. ತಳುಕಿನ ವೆಂಕಣ್ಣಯ್ಯ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪ್ರಮುಖ ಪಾತ್ರ ವಹಿಸಿದ ಹಿರಿಯರು. ತ.ಸು. ಶಾಮರಾಯರು, ವೆಂಕಣ್ಣಯ್ಯನವರ ಸಹೋದರ ಮಾತ್ರವಲ್ಲ; ಶಿಷ್ಯರೂ ಹೌದು. ಅಣ್ಣ - ತಮ್ಮಂದಿರ ಮಾತುಕತೆ ನಡುವೆ ಒಂದು ದಿನ ಶಾಮರಾಯರು ಹೇಳಿದರು 'ಅಣ್ಣಾ ನಿನ್ನ ಹೆಸರನ್ನು ಶಾಶ್ವತವಾಗಿ ಉಳಿಸುವಂತಹ ಕಾರ್ಯವೇನಾದರೂ ಮಾಡಬೇಕು' ಎಂದು ತಮ್ಮ ಇರಾದೆ ವ್ಯಕ್ತಪಡಿಸಿದರು. ಅದಕ್ಕೆ ವೆಂಕಣ್ಣಯ್ಯ ಪ್ರತಿಕ್ರಿಯಿಸಿದ್ದು ಹೀಗೆ: 'ನಾನೇನು ಬುದ್ಧನೇ, ಬಸವನೇ ಜನರ ಮನಸ್ಸಿನಲ್ಲಿ ಉಳಿಯಲು? ಅಬ್ಬಬ್ಬಾ ಎಂದರೆ ನಾನು ಇನ್ನು ಹದಿನೈದು - ಇಪ್ಪತ್ತು ವರ್ಷ ಜನರ ಮನದಲ್ಲಿ ಉಳಿದೇನು?' ಎಂದರು. (ಕುವೆಂಪು ತಮ್ಮ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯವನ್ನು ವೆಂಕಣ್ಣಯ್ಯನವರಿಗೆ ಅರ್ಪಿಸಿ ಸಾಹಿತ್ಯ ಲೋಕದಲ್ಲಿ ಗುರುಗಳ ಹೆಸರನ್ನು ಚಿರಸ್ಥಾಯಿಗೊಳಿಸಿದರೆಂಬುದು ಬೇರೆ ಮಾತು). ಅಣ್ಣ - ತಮ್ಮಂದಿರ ಈ ಮಾತುಕತೆ ನಡೆದ ಕೆಲವೇ ವರ್ಷಗಳಲ್ಲಿ ಅಂದರೆ 1937 ರಲ್ಲಿ ವೆಂಕಣ್ಣಯ್ಯ ನಿಧನರಾದರು. ಅಣ್ಣನ ಹೆಸರನ್ನು ಚಿರಸ್ಥಾಯಿ ಮಾಡಬೇಕೆಂದುಕೊಂಡಿದ್ದ ತ.ಸು. ಶಾಮರಾಯರು 1940ರಲ್ಲಿ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ' ಮೈಸೂರಿನಲ್ಲಿ ಆರಂಭಿಸುವ ಮೂಲಕ ಕನಸು - ನನಸು ಮಾಡಿ ಕೊಂಡರು.

'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥ ಮಾಲೆ' ಆರಂಭಿಸಿದ್ದು ಲಾಭದಾಯಕ ವ್ಯವಹಾರಕ್ಕಾಗಿಯಲ್ಲ. ಅಣ್ಣನ ಹೆಸರನ್ನು ಚಿರಸ್ಥಾಯಿಗೊಳಿಸುವುದರ ಜೊತೆಗೆ ಯುವ ಸಾಹಿತಿಗಳಿಗೆ ಪ್ರೋತ್ಸಾಹ ನೀಡುವುದು ಪ್ರಮುಖ ಉದ್ದೇಶ. ಹಾಗಾಗಿ ಶಾಮರಾಯರು ತಾವು ಆರಂಭಿಸಿದ ಗ್ರಂಥ ಮಾಲೆಯ ಪ್ರಥಮ ಕಾಣಿಕೆಯಾಗಿ ತಮ್ಮ ಶಿಷ್ಯ, ರಾಷ್ಟ್ರ ಕವಿ ಡಾ. ಜಿ.ಎಸ್. ಶಿವರುದ್ರಪ್ಪನವರ ಪ್ರಥಮ ಕವನ ಸಂಕಲನ 'ಸಾಮಗಾನ'

ಶರತ್ ಕಲ್ಕೋಡ್ : ಹಾಯ್ ಬೆಂಗಳೂರು

ಪ್ರಕಟಿಸಿದರು ('ಎದೆ ತುಂಬಿ ಹಾಡಿದೆನು ಅಂದು ನಾನು' ಡಾ.ಜಿ.ಎಸ್.ಎಸ್. ಕವನ ಈ ಗುರುಗಳಿಗೆ ಎಂಬುದನ್ನು ನೆನೆದಾಗ ಗುರು-ಶಿಷ್ಯರ ಸಂಬಂಧ ಎಂಥ ಅರ್ಥಪೂರ್ಣ ಬೆಸುಗೆ ಎಂಬುದು ನಿಮಗೆ ಮನದಟ್ಟಾದೀತು!).

ತ.ಶು. ಶಾಮರಾಯರು ವಯಸ್ಸಾಗುತ್ತಿದ್ದಂತೆ, ಗ್ರಂಥಮಾಲೆಯ ಜವಾಬ್ದಾರಿಯನ್ನು ಮಗ ಛಾಯಾಪತಿಯ ಹೆಗಲಿಗೆ ವರ್ಗಾಯಿಸಿದರು. ಆಗ ತಾನೇ ಎಂ.ಕಾಂ, ಪದವಿ ಪಡೆದಿದ್ದ ಛಾಯಾಪತಿ ಯುವ ಉತ್ಸಾಹದಲ್ಲೇ ಗ್ರಂಥಮಾಲೆಯ ಜವಾಬ್ದಾರಿಯ ಹೊಣೆ ಹೊತ್ತರು (1968). ತಂದೆ ಸಾಗಿದ ಹಾದಿಯಲ್ಲೇ ಮುನ್ನಡಿಯಿಡುತ್ತಿರುವ ಛಾಯಾಪತಿ ಹೇಳುತ್ತಾರೆ : 'ತಂದೆಯವರ ಆದರ್ಶಕ್ಕೆ ಚ್ಯುತಿ ಬರದಂತೆ, ಸದಭಿರುಚಿಯ ಸಾಹಿತ್ಯ ಗ್ರಂಥಗಳನ್ನೇ ಪ್ರಕಟಿಸುತ್ತ ಬಂದಿದ್ದೇನೆ. ಗ್ರಂಥಮಾಲೆ ಆರಂಭಿಸಿ ಆರು ದಶಕಗಳೇ ಆಗಿವೆ. ಒಂದು ಸಾವಿರಕ್ಕೂ ಹೆಚ್ಚಿನ ಪುಸ್ತಕಗಳು ಪ್ರಕಟವಾಗಿವೆ. ಟಿ.ಎಸ್. ವೆಂಕಣ್ಣಯ್ಯ, ಡಿ.ಎಲ್. ನರಸಿಂಹಾಚಾರ್, ತ.ಸು. ಶಾಮರಾಯ, ದೇ.ಜವರೇಗೌಡ, ಪ್ರೊ. ಎಚ್ಚೆಸ್ಕೆ, ಡಾ. ಹಾ.ಮಾ.ನಾಯಕ್, ಡಾ. ಜಿ.ಎಸ್. ಶಿವರುದ್ರಪ್ಪ, ಚೆನ್ನವೀರ ಕಣವಿ, ಟಿ.ವಿ.ವೆಂಕಟಾಚಲ ಶಾಸ್ತ್ರಿ, ನಿಸಾರ್ ಅಹಮದ್, ಚಂಪಾ, ಮತ್ತೂರು ಕೃಷ್ಣಮೂರ್ತಿ - ಹೀಗೆ ಕನ್ನಡ ನಾಡಿನ ಪ್ರಮುಖ ಸಾಹಿತಿಗಳ ಕೃತಿಗಳನ್ನೆಲ್ಲ ನಮ್ಮ ಗ್ರಂಥಮಾಲೆಯಲ್ಲಿ ಪ್ರಕಟಿಸಿದ್ದೇವೆ. ಪುಸ್ತಕೋದ್ಯಮ ವನ್ನು ಕಾಯಕ ಕೃಷಿ., ಅದೊಂದು ತಪಸ್ಸು ಎಂಬ ಭಾವನೆಯಲ್ಲೇ ಮುಂದುವರೆಸಿಕೊಂಡು ಬಂದಿದ್ದೇವೆ. ಪುಸ್ತಕೋದ್ಯಮದಲ್ಲಿ ಲೇಖಕ - ಕಾಗದ - ಮುದ್ರಕ ಬಹಳ ಮುಖ್ಯ. ಆದರೆ ನಮ್ಮ ವ್ಯವಹಾರದಲ್ಲಿ ಲೇಖಕ ಬಹಳ ಪ್ರಾಮುಖ್ಯ. ಲೇಖಕರನ್ನು ಗಮನದಲ್ಲಿಟ್ಟುಕೊಂಡೇ ಮುಖಪುಟ, ಒಳಪುಟಗಳ ವಿನ್ಯಾಸ ಮಾಡುತ್ತೇವೆ. ಪ್ರತಿಯೊಂದು ಹಂತದಲ್ಲೂ ಅವರೊಂದಿಗೆ ಚರ್ಚಿಸಿ, ಅಂತಿಮ ನಿರ್ಣಯಕ್ಕೆ ಬರುತ್ತೇವೆ. ಯಾವುದೇ ಹಂತದಲ್ಲೂ ಕ್ವಾಲಿಟಿ ಬಗ್ಗೆ ಕಾಂಪ್ರೊಮೈಸ್ ಮಾಡಿಕೊಳ್ಳುವುದಿಲ್ಲ. ನಿಗದಿತ ಅವಧಿಯೊಳಗೆ ಲೇಖಕರಿಗೆ ಸಲ್ಲಬೇಕಾದ ಗೌರವಧನವನ್ನು ನೀಡುತ್ತೇವೆ. ವ್ಯವಹಾರದಲ್ಲಿ ನಷ್ಟ ಆಗಿಲ್ಲ. ಹಣ ಬಂದಿದೆ. ದೇವರು ಸಾಕಷ್ಟು ಕೊಟ್ಟಿದ್ದಾನೆ. ಪ್ರಕಾಶನದ ದುಡಿಮೆಯಲ್ಲಿ ತೃಪ್ತಿ - ಧನ್ಯತೆ ಇದೆ'.

ಕಥೆ, ಕವನ, ಪ್ರಬಂಧ, ನಾಟಕ, ವಿಮರ್ಶೆ, ಪ್ರವಾಸ ಕಥನ, ಜೀವನಚರಿತ್ರೆ, ಅಂಕಣ, ಸಂಶೋಧನೆ - ಹೀಗೆ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ವೈವಿಧ್ಯಮಯ ಪುಸ್ತಕಗಳನ್ನು ಪ್ರಕಟಿಸಿ, ಕನ್ನಡ ಪುಸ್ತಕೋದ್ಯಮದಲ್ಲಿ ಕ್ರಾಂತಿಯನ್ನೇ ಉಂಟು ಮಾಡಿದ ಈ ಗ್ರಂಥಮಾಲೆ 1999ರಲ್ಲಿ 'ಅತ್ಯುತ್ತಮ ಪ್ರಕಾಶನ ಪ್ರಶಸ್ತಿ' ಪಡೆದುಕೊಂಡಿದೆ.

ಸಾವಿರ ಪುಟದ ಐದು ಗ್ರಂಥಗಳನ್ನು ಪ್ರಕಟಿಸಿ'ಸಾವಿರ ಪುಟಗಳ ಸರದಾರ' ಎಂಬ ವಿಶೇಷಣಕ್ಕೂ ಪಾತ್ರರಾಗಿದ್ದಾರೆ ಛಾಯಾಪತಿ. ಪ್ರೊ. ಎಚ್ಚೆಸ್ಕೆ ಅವರ ಸಾವಿರ ಪುಟಗಳ ಮೂರು ಅಂಕಣಗಳು 'ಬೆಳಕು ಚೆಲ್ಲಿದ ಬದುಕು', 'ಮಾನ್ಯರು ಸಾಮಾನ್ಯರು', 'ಗಗನ

ಚುಕ್ಕಿ ಛರಚುಕ್ಕಿ' ಅವುಗಳಲ್ಲಿ ಪ್ರಮುಖವಾದವು. ಎಚ್ಚೆಸ್ಕೆ ಅವರ ನಾಲ್ಕನೇ ಸಂಪುಟ 'ಮಿಂಚಿನ ಗೊಂಚಲು' ಪ್ರಕಟಣೆಯ ಪ್ರಗತಿ ಹಂತದಲ್ಲಿದೆ.

ಕಳೆದ ತಿಂಗಳಷ್ಟೇ ಚೆನ್ನವೀರ ಕಣವಿ ಅವರ ಹದಿನಾರು ಕವಿತಾ ಸಂಕಲನಗಳನ್ನು ತಮ್ಮ ಗ್ರಂಥಮಾಲೆಯಲ್ಲಿ ಮರು ಮುದ್ರಣ ಮಾಡಿ ಏಕಕಾಲದಲ್ಲಿ ಛಾಯಾಪತಿ ಬಿಡುಗಡೆಗೊಳಿಸಿರುವುದು ಒಂದು ವಿಶೇಷವೇ. 'ಯಾರೂ ಮಾಡದೇ ಇರುವುದನ್ನು ನಾವು ಮಾಡಬೇಕೆಂಬುದೇ ನಮ್ಮ ಸಂಕಲ್ಪದ ಮುಖ್ಯ ಉದ್ದೇಶ' ಎನ್ನುವ ಅವರು ಈಗ ಡಾ. ಜಿ.ಎಸ್. ಶಿವರುದ್ರಪ್ಪನವರ ಹದಿನಾಲ್ಕು ಕವಿತಾ ಸಂಕಲನ, ಡಾ. ಎಚ್.ಎಸ್. ವೆಂಕಟೇಶ ಮೂರ್ತಿಯವರ 'ಸಮಗ್ರ ಮಕ್ಕಳ ನಾಟಕ' (ಐದು) ಪ್ರಕಟಿಸುವ ಸಂಭ್ರಮದಲ್ಲಿ ನಿರತರಾಗಿದ್ದಾರೆ. ಈ ಕಾರ್ಯ ಮುಗಿಯುತ್ತಿದ್ದ ಹಾಗೆ ಡಾ. ದೇ. ಜವರೇಗೌಡರ 'ಡೈರಿ ಮತ್ತು ಭಾಷಣಗಳು' (ಸುಮಾರು ಒಂದು ಸಾವಿರ ಪುಟ) ಹಾಗೂ ಡಾ. ಎಚ್.ಎಸ್.ವಿ. ಅವರ ಸಮಗ್ರ (ಎಂಟು) ನಾಟಕಗಳನ್ನು ಪ್ರಕಟಿಸುವ ಯೋಜನೆ ರೂಪಿಸಿಕೊಂಡಿದ್ದಾರೆ. ಈ ಎಲ್ಲಾ ಸಾಹಸ ಕಾರ್ಯಗಳಲ್ಲಿ ತಮ್ಮ ಶ್ರೀಮತಿ ಪುಷ್ಪಾ ಅವರ ಪ್ರೋತ್ಸಾಹ -ಸಹಕಾರ ನಿರಂತರವಾಗಿದೆ ಎಂದು ಛಾಯಾಪತಿ ಅಭಿಮಾನದಿಂದ ಹೇಳುತ್ತಾರೆ.

1982ರಲ್ಲಿ ಡಾ. ಹಾ.ಮಾ. ನಾಯಕ್ ಅನುವಾದಿಸಿದ ವಿದ್ಯಾಪತಿಯ 'ಪ್ರಣಯ ಪದಾವಳಿ' ಕವನ ಸಂಕಲನ ನೋಡಿ ಮೆಚ್ಚಿದ ಚೆನ್ನವೀರಕಣವಿ, 'ಕೈ ತೊಳೆದು ಮುಟ್ಟಬೇಕು' ಎಂದ ಮಾತು. ದೇ.ಜ.ಗೌ, ಕೆಲವು ಪುಸ್ತಕಗಳ ಬಗ್ಗೆ 'ಫಾರಿನ್ ಪುಸ್ತಕಗಳಿಗಿಂತ ಕಡಿಮೆ ಏನಿಲ್ಲ' ಎಂದದ್ದು, ತ.ಸು. ಶಾಮರಾಯರ ಅಭಿನಂದನಾ ಗ್ರಂಥ 'ಸ್ವಸ್ತಿ' ಕುರಿತು 'ಇಂಥ ಪುಸ್ತಕ ಪ್ರಕಟಿಸಲು ಯಮಧೈರ್ಯವೇ ಬೇಕು' ಎಂಬ ಹಾ.ಮಾ. ನಾಯಕರ ಮೆಚ್ಚುಗೆ ನುಡಿಗಳು 'ಗ್ರಂಥಮಾಲೆಯ ಕಿರೀಟದ ಗರಿಗಳು' ಎನ್ನುವ ಛಾಯಾಪತಿ, ಲೇಖಕರೂ ಹೌದು. ಟಿ.ಎಸ್. ವೆಂಕಣ್ಣಯ್ಯ, ತ.ಸು. ಶಾಮರಾಯ, ತ.ರಾ.ಸು, ಜಿಮರಂಗ, ಅಬ್ದುಲ್ ನಜೀರ್‌ಸಾಬ್, 'ಗಾಂಧೀಜಿ ಕನಸು-ನಜೀರರಿಂದ ನನಸು' - ಹೀಗೆ ಸುಮಾರು ಇಪ್ಪತ್ತೆರಡು ಕೃತಿಗಳ ರಚನೆಕಾರರೂ ಹೌದು.

## ಪ್ರಕಾಶನದ ಈ ವೃತ್ತಿ ಒಂದು ತಪಸ್ಸು

**ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಆರಂಭವಾದ ಹಾಗೂ ಬೆಳೆದು ಬಂದ ಹಿನ್ನೆಲೆಯನ್ನ ವಿವರಿಸ್ತೀರಾ?**

ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆಯನ್ನು ಆರಂಭಿಸಿದಂಥವರು ತಮ್ಮ ತಂದೆಯವರಾದ ದಿವಂಗತ ತ.ಸು. ಶಾಮರಾಯರು. ವೆಂಕಣ್ಣಯ್ಯನವರು 14-2-1939ರಲ್ಲಿ ನಿಧನರಾದರು. ವೆಂಕಣ್ಣಯ್ಯನವರು ಕನ್ನಡದ ಮೊತ್ತ ಮೊದಲ ಪ್ರಾಧ್ಯಾಪಕರು. ಅವರ ಎತ್ತರವನ್ನು ನೋಡಿದಂಥ ನಮ್ಮ ತಂದೆಯವರು ಅವರನ್ನು ಕುರಿತು ಒಂದು ಸಾರಿ ಕೇಳ್ತಾರೆ, 'ಅಣ್ಣಾ, ನೀನು ಬಹಳ ದೊಡ್ಡವನು ಅಂತ ಅಂತಾರೆ'. ಆಗ ವೆಂಕಣ್ಣಯ್ಯನವರು, 'ಶಾಮಣ್ಣ, ನಿನಗೆಲ್ಲೋ ಭ್ರಾಂತಿ, ಅಬ್ಬಬ್ಬಾ ಅಂದರೆ ಇನ್ನೊಂದಿಪ್ಪತ್ತು ವರ್ಷ ನನ್ನನ್ನು ನೆನಸ್ಕೋಬಹುದು, ಆಮೇಲೆ ನನ್ನನ್ನು ಯಾರಯ್ಯ ನೆನಸ್ಕೋತಾರೆ! ನಾನೇನು ಗಾಂಧಿನೇ, ಬುದ್ಧನೇ?' ಅಂತ ಕೇಳ್ತಾರೆ. ಇದು ನಮ್ಮ ತಂದೆಯವರ ಮನಸ್ಸಿನ ಮೇಲೆ ಆಗಾಧವಾದ ಪರಿಣಾಮ ಬೀರಿತು. ವೆಂಕಣ್ಣಯ್ಯನವರು ನಿಧನರಾದಾಗ 'ನಮ್ಮ ಅಣ್ಣನ ಹೆಸರು ಶಾಶ್ವತವಾಗಿ ಇರಬೇಕು. ಅದಕ್ಕೆ ಏನು ಮಾಡಬೇಕು? ಅವರು ಕನ್ನಡ ಪ್ರಾಧ್ಯಾಪಕರು. ಅವರ ಹೆಸರಿನಲ್ಲಿ ಒಂದು ಗ್ರಂಥಮಾಲೆ ಪ್ರಾರಂಭಿಸಿ ಅದರಲ್ಲಿ ಕನ್ನಡ ಪುಸ್ತಕಗಳನ್ನು ಪ್ರಾರಂಭಿಸಬೇಕು' ಅಂತ; ಈ ಮೂಲ ಉದ್ದೇಶದಿಂದ ಗ್ರಂಥಮಾಲೆ ಪ್ರಾರಂಭಿಸಿದರು. 1945ನೇ ಇಸವಿಯಲ್ಲಿ ದಿವಂಗತ ಎಚ್.ಎಂ. ಶಂಕರನಾರಾಯಣರಾವ್- ಅವರೂ ಕೂಡ ವೆಂಕಣ್ಣಯ್ಯನವರ ಶಿಷ್ಯರೇ - ಅವರ ಜೊತೆಯಲ್ಲಿ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ' ಶುರು ಮಾಡಿದರು. ಐದು ವರ್ಷಗಳ ಕಾಲ ಇಬ್ಬರೂ ಒಟ್ಟಿಗೆ ನಡೆಸಿಕೊಂಡು ಹೋದರು. 1950ನೇ ಇಸವಿ ಹೊತ್ತಿಗೆ ಕೆಲವು ತಾತ್ವಿಕ ಕಾರಣದಿಂದ ಅವರು 'ಶಾರದಾ ಪ್ರಕಟಣ ಮಂದಿರ' ಶುರು ಮಾಡಿಕೊಂಡರು. ನಮ್ಮ ತಂದೆ ಸುಮಾರು 18 ವರ್ಷ ಈ ಮಾಲೆ ನಡೆಸಿದರು. 1968ನೇ ಇಸವಿಯಲ್ಲಿ ನಾನು ವಾಣಿಜ್ಯ ಶಾಸ್ತ್ರದ ಪದವಿ ಪಡೆದೆ. ಆಗ ನಮ್ಮ ತಂದೆಯವರು ಹೇಳಿದರು ; 'ಮಗೂ, ನಿಮ್ಮ ದೊಡ್ಡಪ್ಪನ ಹೆಸರು ಉಳೀಬೇಕು.

---

**ಅತ್ಯುತ್ತಮ ಪ್ರಕಾಶನ ಪ್ರಶಸ್ತಿ ಪಡೆದಾಗ**

---

ಉಳಿಯೋ ಅಂತ ಕೆಲಸ ಆಗಬೇಕು. ನೀನು ಎಲ್ಲಾದರೂ ಕೆಲಸಕ್ಕೆ ಸೇರಿಕೊಂಡರೆ ಏನು ಸಂಪಾದನೆ ಮಾಡ್ತೀಯ ಅದನ್ನ ಇದರಲ್ಲೇ ಮಾಡಬಹುದು. ಅದಕ್ಕಿಂತ ಮುಖ್ಯವಾಗಿ ನಮ್ಮ ಅಣ್ಣನ ಹೆಸರು ಚಿರಸ್ಥಾಯಿಯಾಗಿ ಇರಬೇಕು. ಆದ್ದರಿಂದ ಇದನ್ನ ನೀನು ವೃತ್ತಿಯಾಗಿ ಸ್ವೀಕರಿಸಬೇಕು' ಅಂತ ಹೇಳಿದರು. ಯಾವ ಪ್ರಕಾಶನ ಅವರಿಗೆ ಹವ್ಯಾಸವಾಗಿತ್ತೋ ಅದನ್ನು ನಾನು ಆಗ ವೃತ್ತಿಯಾಗಿ ತಗೊಂಡೆ. ನಮ್ಮ ತಂದೆಯವರಿಗೆ ಗ್ರಂಥಮಾಲೆಯಿಂದ ಹಣ ಮಾಡಬೇಕು ಅನ್ನೋ ಉದ್ದೇಶ ಇರಲಿಲ್ಲ. ಕೀರ್ತಿ ಸಂಪಾದನೆ ಮಾಡಬೇಕು ಅನ್ನೋದೂ ಇರಲಿಲ್ಲ. ವೆಂಕಣ್ಣಯ್ಯನವರ ಹೆಸರು ಅಜರಾಮರವಾಗಿ ಇರಬೇಕು ಅನ್ನೋ ಉದ್ದೇಶದಿಂದ ಈ ಮಾಲೆಯನ್ನು ಅವರು ಪ್ರಾರಂಭ ಮಾಡಿದರು. ಪ್ರಕಟನೆಗಳಲ್ಲಿಯೂ ಅವರ ಶಿಷ್ಯರ ಪುಸ್ತಕಗಳನ್ನು ಪ್ರಕಟಿಸುತ್ತಿದ್ದರು. ತಮ್ಮ ಪುಸ್ತಕಗಳನ್ನು ಪ್ರಕಟಿಸಿದರು. ವೆಂಕಣ್ಣಯ್ಯನವರ ಕೃತಿಗಳನ್ನು ಪ್ರಕಟಿಸಿದರು; ಯಾರ ಪುಸ್ತಕಗಳನ್ನು ಪ್ರಕಾಶಕರು ಪ್ರಕಟಿಸ್ತಿರಲಿಲ್ಲವೋ, ಅಂಥ ಪುಸ್ತಕಗಳನ್ನು ಅವರು ಪ್ರಕಟಿಸ್ತಾ ಇದ್ದರು.

**ಆರಂಭದಲ್ಲಿ ಪ್ರಕಟವಾದ ಕೃತಿಗಳು ಯಾವ್ಯಾವು?**

ವೆಂಕಣ್ಣಯ್ಯನವರ 'ಕನ್ನಡ ಸಾಹಿತ್ಯ ಚರಿತ್ರೆ ಇತರ ಲೇಖನಗಳು', 'ಪ್ರಾಚೀನ ಸಾಹಿತ್ಯ', 'ಬಸವರಾಜದೇವರ ರಗಳೆ' ಇವು ಆರಂಭದಲ್ಲಿ ಪ್ರಕಟಿಸಿದ ಕೃತಿಗಳು. ನಂತರ ಮಹಾಭಾರತದ ಎಲ್ಲ ಪರ್ವಗಳನ್ನೂ ನಮ್ಮ ತಂದೆಯವರೆ ಸಂಪಾದಿಸಿ ಪ್ರಕಟಿಸಿದರು. ಜೊತೆಗೆ ನಾ. ಕಸ್ತೂರಿ ಅವರ 'ಅನರ್ಥಕೋಶ' ಮರಿಯಪ್ಪಭಟ್ಟರ 'ನಾಲ್‌ನುಡಿ ನಾಣ್ನುಡಿ', ಶಿವರುದ್ರಪ್ಪನವರ ಆರಂಭದ ಎಲ್ಲ ಕೃತಿಗಳನ್ನು ಪ್ರಕಟಿಸಿದ್ದು ನಮ್ಮ ತಂದೆಯವರೆ; ಶಿವರುದ್ರಪ್ಪನವರು ಆಗ ಕವನ ರಚಿಸ್ತಾ ಇದ್ದರು. ಕೇಳ್ತಿದ್ದಂಥವರು ನಮ್ಮ ತಂದೆ. ಶಿವರುದ್ರಪ್ಪನವರು 'ಸರಿ ಸಾರ್, ನೀವೇನೋ ಬೆನ್ನು ತಟ್ಟುತ್ತೀರಿ ಬಹಳ ಚೆನ್ನಾಗಿದೆ ಅಂತೀರಿ. ಆದರೆ ಪ್ರಕಾಶಕರು ಯಾರು ಸಾರ್?' ಅಂತ ಕೇಳ್ತಾರೆ. ಅದಕ್ಕೆ 'ಯಾಕಯ್ಯ, ನಾನಿಲ್ಲವೇನಯ್ಯಾ' ಅಂತ ಅವರ ಮೊದಲ ಸಂಕಲನ 'ಸಾಮಗಾನ' ವನ್ನು ಪ್ರಕಟಿಸಿದರು. ನಂತರ 'ಚೆಲುವು;ಒಲವು' ಡಾಕ್ಟರೇಟ್ ಪ್ರಬಂಧ 'ಸೌಂದರ್ಯ ಸಮೀಕ್ಷೆ'ಯನ್ನು ನಮ್ಮ ತಂದೆ ಪ್ರಕಟಿಸಿದರು.

**ಆರಂಭಕಾಲದ ಮಾರಾಟ ವ್ಯವಸ್ಥೆ ತ.ವೆಂ. ಸ್ಮಾರಕ ಗ್ರಂಥಮಾಲೆಗೆ ಹೇಗಿತ್ತು?**

ಇದಕ್ಕೆ ಆಗ ನಮ್ಮ ತಂದೆಯವರಿಗೆ ಒಂದು ಸೌಲಭ್ಯ ಇತ್ತು. ಅವರ ವಿದ್ಯಾರ್ಥಿಗಳು ಅವರಿಗೆ ಮಕ್ಕಳು ಇದ್ದ ಹಾಗೆ ಇದ್ದರು. ನಾವು ಮಕ್ಕಳಾದರೂ ನಮಗಿಂತ ಹೆಚ್ಚಾಗಿ ವಿದ್ಯಾರ್ಥಿಗಳನ್ನು ಪ್ರೀತಿಸ್ತಾ ಇದ್ದರು. ಇದಕ್ಕೆ ಒಂದು ಸಣ್ಣ ಉದಾಹರಣೆ ಹೇಳ್ತೀನಿ: 1973ರಲ್ಲಿ 'ಸ್ವಸ್ತಿ' ಅಂತ ಒಂದು ಅಭಿನಂದನ ಗ್ರಂಥ ಪ್ರಕಟಿಸಿದೆ. ಆಗ ಅವರನ್ನ ಜೀ.ಶಂ. ಪರಮಶಿವಯ್ಯ ಇಂಟರ್‌ವ್ಯೂ ಮಾಡಿದರು. 'ಸಾರ್, ವಿಚ್ ಈಸ್

ಯುವರ್ ಬೆಸ್ಟ್ ಪಾರ್ಟ್ ಆಫ್ ಲೈಫ್?' ಅಂತ ಕೇಳಿದರು. 'ಮೈ ಕ್ಲಾಸ್ ರೂಂ' ಅಂದರು ನಮ್ಮ ತಂದೆ. ನಾವೆಲ್ಲ 'ನಮ್ಮ ಮಕ್ಕಳು, ಒಳ್ಳೆ ಮಕ್ಕಳು ಅಂತಾರೆ' ಅಂತ ತಿಳಕೊಂಡಿದ್ವು. ಆದರೆ ಅವರು 'ದಿ ಬೆಸ್ಟ್ ಪಾರ್ಟ್ ಆಫ್ ಮೈ ಲೈಫ್ ಈಸ್ ಕ್ಲಾಸಂ ರೂಂ. ವಿದ್ಯಾರ್ಥಿಗಳೇ ಮಕ್ಕಳು. ವಿದ್ಯಾರ್ಥಿಗಳಲ್ಲಿ ನಾನು ಜಾತಿ ನೋಡೋದಿಲ್ಲ. ಹಾಗೆ ನೋಡಿದರೆ ನನಗೆ ಸಿಡಿಲು ಬಡೀಲಿ' ಅಂದರು. ಈ ಮಾತನ್ನು ಅವರು ಪದೇ ಪದೇ ಹೇಳ್ತಿದ್ದರು. ಹೀಗಾಗಿ ಅವರ ಸ್ಟೂಡೆಂಟ್ಸ್ ಬಾಂಧವ್ಯ ಹೆಚ್ಚಿನದಾಗಿತ್ತು. ಅವರ ವಿದ್ಯಾರ್ಥಿಗಳಾದ ಸುಬ್ರಮಣ್ಯಂ, ಶಿವರುದ್ರಪ್ಪ, ನಂಜೇಗೌಡ ಅವರೆಲ್ಲ ಮನೆಗೆ ಬಂದು ಬಿಲ್ ಮಾಡಿಕೊಂಡು ಪುಸ್ತಕ ತಗೊಂಡೋಗಿ ಕಾಲೇಜ್‌ಗಳಿಗೆ ಇಟ್ಟು ದುಡ್ಡು ತಂದುಕೊಡೋರು. ಈ ಸೌಲಭ್ಯದ ಜೊತೆಗೆ ಆಗ ಹೆಚ್ಚಿನ ಪ್ರಕಾಶಕರು ಇರಲಿಲ್ಲ. ಹೇಗೋ ಮಾರಾಟ ನಡೆದುಕೊಂಡು ಹೋಗ್ತಿತ್ತು.

ಸಮಾಜ ಬುಕ್ ಡಿಪೋ, ಗೀತಾ ಏಜೆನ್ಸೀಸ್ ಇತ್ತು. ಇವರೆಲ್ಲ ಚೆನ್ನಾಗಿ ಪುಸ್ತಕ ಖರೀದಿ ಮಾಡ್ತಿದ್ದರು. ವರ್ಷಕ್ಕೆ ಮುನ್ನೂರರಷ್ಟು ಕೃತಿಗಳು ಈಗಿನ ಹಾಗೆ ಆಗಲೂ ಹೋಗ್ತಿದ್ದವು. ಆ ಕಾಲದಲ್ಲಿ ಪುಸ್ತಕದ ಪ್ರೊಡಕ್ಷನ್ ಕಡಿಮೆ ಇತ್ತು. ಪ್ರಕಾಶಕರೇ ಬೆರಳೆಣಿಕೆಯಷ್ಟು ಇದ್ದರು. ಗೀತಾ ಏಜನ್ಸೀಸ್‌ನವರು ಪುಸ್ತಕದ ವಿನ್ಯಾಸವನ್ನು ಆಕರ್ಷಕವಾಗಿರೋ ಮುಖಪುಟ ಹಾಕಿ ತನ್ನಿ ಅಂತ ಹೇಳೋರು. ಆದರೆ ನಮ್ಮ ತಂದೆಯವರಿಗೆ ವ್ಯಾಪಾರ ಮನೋಭಾವ ಇಲ್ಲದೆ ಇದ್ದದ್ದರಿಂದ ಇದನ್ನೆಲ್ಲ ಅವರು ಮಾಡ್ತಿರಲಿಲ್ಲ. ಅದು ಹಾಗೇ ಸೇಲ್ಸ್ ಆಗ್ತಿತ್ತು.

**ಆಗ ತಾನೆ ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶಿಸಿದ್ದ ಜಿ.ಎಸ್.ಎಸ್. ಅಂಥವರ ಕೃತಿಗಳ ಜೊತೆಗೆ ನಿಮ್ಮ ಗ್ರಂಥಮಾಲೆ ಪರಂಪರೆ ಜೊತೆಗಿನ ಕಾರ್ಯವನ್ನೂ ಮಾಡಿದೆ. 'ಶಿವಶರಣ ಕಥಾರತ್ನಕೋಶ' ಇವಕ್ಕೆ ಉದಾಹರಣೆ, ಈ ಬಗ್ಗೆ...?**

'ಶಿವಶರಣ ಕಥಾರತ್ನಕೋಶ' ಪ್ರಕಟಿಸಿದಾಗ ನೀವು ಹೇಳಿದ ಹಾಗೆ ಅದೊಂದು ದೊಡ್ಡ ಎನ್‌ಸೈಕ್ಲೋಪಿಡಿಯಾ, ಹನ್ನೆರಡನೆ ಶತಮಾನದಿಂದ ಇಪ್ಪತ್ತನೆ ಶತಮಾನದ ತನಕ ಪ್ರತಿಯೊಬ್ಬ ವೀರಶೈವ ಸಂತರೂ ಬರತಕ್ಕಂಥ ಅಮೋಘವಾದ ಕೃತಿ. ಇದು ಯೂನಿಕ್ ಪಬ್ಲಿಕೇಷನ್, ಅವರಿಗೆ ಇದು ಪ್ರವೃತ್ತಿಯಾಗಿತ್ತು. ವೃತ್ತಿಯಾಗಿರಲಿಲ್ಲ. ಹಾಗಾಗಿ ಅವರು ಹಣ ಮಾಡಲಿಲ್ಲ. ಅವರ ಶಿಷ್ಯರೊಬ್ಬ ರಾಜೇಶ್ವರಯ್ಯ ಅಂತ ಈ ಕಾರ್ಯಕ್ಕೆ ಸರ್ಕಾರದಿಂದ ಹಣ ಸಹಾಯ ಕೊಡಿಸಿದರು. ಸರ್ಕಾರದ ಹಣಕ್ಕೆ ಪ್ರತಿಯಾಗಿ ಅರ್ಧದಷ್ಟು ಮುದ್ರಿತ ಕೃತಿಗಳನ್ನು ಕೊಟ್ಟರು. ಪ್ರವೃತ್ತಿಯಿಂದ ಇಂಥ ದೊಡ್ಡ ಕೃತಿ ಮಾಡೋದು ಕಷ್ಟ ಆಗಿದ್ದರಿಂದ ಆಗ ಈ ಕಾರ್ಯ ಹೀಗೆ ಆಗಿದೆ.

**ನೀವು ಈ ಗ್ರಂಥಮಾಲೆಯ ಕಾರ್ಯಕ್ಕೆ ನಿಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರೂ ಇದು ವೃತ್ತಿ - ಪ್ರವೃತ್ತಿ ಎರಡರ ನಡುವೆ ನಿಲ್ಲೋಂಥ ಜಾಡಿನಲ್ಲಿದೆ.**

ಇವತ್ತಿನ ಪುಸ್ತಕಗಳ ಮಾರಾಟ - ವಿತರಣೆಯನ್ನ ಒಬ್ಬ ಪ್ರಕಾಶಕರಾಗಿ ನೀವು ಹೇಗೆ ಎದುರಿಸ್ತಿದ್ದೀರಾ?

ನಾವು ಈಗ ಒಂದು ಪುಸ್ತಕವನ್ನು ಪ್ರಕಟಿಸಿದರೆ ಕೇವಲ ಬೆರಣಿಕೆಯ ಮಾರಾಟಗಾರರೆ ಅದನ್ನ ಕೊಳ್ತಿರೋದು ಇವತ್ತು. ಅದು ಎಂತದೇ ಉತ್ತಮ ಗ್ರಂಥವಾಗಲಿ ಅದಕ್ಕೆ ಸೀಮಿತ ಮಾರುಕಟ್ಟೆ ಇದೆ. ಸುಮಾರು ಐವತ್ತು ಅರವತ್ತು ಪುಸ್ತಕ ಮಾರಬಹುದು. ಏಳೆಂಟು ಪುಸ್ತಕ ಮಾರಾಟಗಾರರು ಇದ್ದಾರೆ ಅಷ್ಟೆ. ಐದು ಹತ್ತು ಕಾಪೀಸ್ ಕೇಳೋರೂ ಕಡಿಮೆ. ಆಗ ನಾವು ಇದನ್ನು ಹ್ಯಾಗೆ ಕೂಡಿಸಿಕೊಂಡು, ಅಭಿವೃದ್ಧಿ ಪಡಿಸಿಕೊಂಡು ಹೋಗ್ತಿದೀವಿ ಅಂದರೆ ಪ್ರಮೋಟ್; ಪ್ರಮೋಷನ್ ಇಲ್ಲದೆ ಇವತ್ತು ಪುಸ್ತಕ ಮಾರಾಟ ಸಾಧ್ಯವೇ ಇಲ್ಲ ಅನ್ನೋ ಹಾಗಿದೆ. ಕಥೆ, ಕಾದಂಬರಿ ಮಾರಾಟ ಕೂಡ ಕಡಿಮೆ. ಭೈರಪ್ಪ, ಅನುಪಮ ನಿರಂಜನ, ತ್ರಿವೇಣಿ ಅವರದು ಆಗಬಹುದು. ಅದು ಬಿಟ್ಟು ಇವಕ್ಕಿಂತ ಹೆಚ್ಚು ಮಾರಾಟ ಆಗದಂಥ ವಾತಾವರಣ ಸೃಷ್ಟಿ ಆಗಿದೆ. ಹೀಗಿರುವಾಗ ನಾವು, ಹೇಗೆ ನಿಭಾಯಿಸ್ತೀದೀವಿ ಅಂದರೆ' ಸರ್ಕ್ಯುಲರ್ ಫ್ರಮ್ ಡಿಪಾರ್ಟ್‌ಮೆಂಟ್, ಎಜುಕೇಷನ್ ಡಿಪಾರ್ಟ್‌ಮೆಂಟಿಂದ ಸುತ್ತೋಲೆ ಪಡಿತೀನಿ, ಅಕ್ಯೂಮಿಲೇಟ್ ಫಂಡ್ಸ್, ಅಂತ ಇರತ್ತೆ. ಅವರಿಂದ ಒಂದು ವರ್ಷಕ್ಕೆಒಂದು ಜಿಲ್ಲೆಯ ನೂರಾರು ಸಂಸ್ಥೆಗಳಿಗೆ ಸರಬರಾಜು ಮಾಡ್ತೀವಿ. ಹೀಗಾಗಿ ನಾವು ಬದುಕಿಕೊಂಡಿದೀವಿ. ಇಲ್ಲದೆ ಇದ್ದರೆ ನಾವು ಇಂಥ ದೊಡ್ಡ ಗ್ರಂಥಗಳನ್ನು ಪ್ರಕಟಿಸಿ ಮಾರೋದು ಸಾಧ್ಯವೇ ಇಲ್ಲ. ಮುಂದುವರಿಸಿಕೊಂಡು ಹೋಗಬೇಕು ಅಂದರೆ ಪ್ರಮೋಷನ್. ಇದು ಯಾವತ್ತು ನಿಂತು ಹೋಗುತ್ತೋ, ಅವತ್ತು ನಾನು ಪ್ರಕಟಣೆ ಕಾರ್ಯ ಈಗಿನಂತೆ ಮಾಡೋಕೆ ಆಗತ್ತೆಯೇ ಅಂತ ನನಗೆ ಸಂದೇಹ.

ಜನಸಾಮಾನ್ಯ ಓದುಗರ ಪ್ರತಿಕ್ರಿಯೆಯನ್ನು ನೀವು ಹೇಗೆ ನೋಡ್ತೀರಿ?

ಜನಸಾಮಾನ್ಯರು ನಿಜವಾದ ಒಳ್ಳೆ ಪುಸ್ತಕವನ್ನು ಇವತ್ತೂ ಕೊಳ್ತಾರೆ. 'ಬೆಳಕು ಚೆಲ್ಲಿದ ಬದುಕು' ಎಚ್ಚೆಸ್ಕೆ ಅವರ ಅಂಕಣಗಳ ಒಂದು ಸಾವಿರ ಪುಟಗಳ ಉದ್ಗ್ರಂಥ. ಅದಕ್ಕೆ ಆರುನೂರು ರೂ ಬೆಲೆ ಇಟ್ಟಿದೀವಿ. ಆದರೂ ಕೂಡ ಎಚ್ಚೆಸ್ಕೆ ಅವರ ಈ ಅಂಕಣಗಳ ವಿಷಯ ಎಷ್ಟು ಜನಪ್ರಿಯವಾಗಿದೆ ಅಂದ್ರೆ, ನಾವು ನೂರೈವತ್ತು ಪ್ರತಿಗಳನ್ನು ಇಂಡಿವಿಷ್ಯುಲ್ ಆಗಿ ಮಾರಿದೆವು. ನಿಜವಾದ ಗಟ್ಟಿಪುಸ್ತಕ ಬಂತು ಅಂದ್ರೆ ಜನ ಕೊಂಡು ಇವತ್ತೂ ಓದ್ತಾರೆ. ಸಮ್ಮೇಳನಗಳಿಗೆ ಸ್ಟಾಲ್ ಹಾಕಿದಾಗಲೂ ಅಷ್ಟೇ. ನೂರು ಜನ ಬರ್ತಾರೆ, ಸುಮಾರು ಹತ್ತು ಜನ ಕೊಳ್ತಾರೆ. ಒಳ್ಳೆ ಪುಸ್ತಕ ಆದ್ರೆ ಖಂಡಿತ ಇವತ್ತೂ ಜನ ಪ್ರೀತಿಯಿಂದ ಕೊಳ್ತಾರೆ. ತಿಪ್ಪೇಸ್ವಾಮಿ ಅವರ 'ಕಲಾವಿದನ ನೆನಪುಗಳು' ಅಂತ ಒಂದು ಪುಸ್ತಕ ಮಾಡಿದ್ದೆ. ಇನ್ನೂರೈವತ್ತು ಜನ ಇನ್ನೂರೈವತ್ತರ ಬೆಲೆಗೆ ನಮ್ಮ ಹತ್ತಿರ ಕೊಂಡರು. ಈ ಸೌಲಭ್ಯ ಎಲ್ಲಾ ಪುಸ್ತಕಗಳಿಗೂ ಸಿಗೋದಿಲ್ಲ. ಶಾಸ್ತ್ರಗ್ರಂಥವಾದ

'ಜಾನಪದ ಸ್ವರೂಪ'ವನ್ನ ನಾವು ಪ್ರಕಟಿಸಿದ್ದೀವಿ. 1970ರಲ್ಲಿ ಪ್ರಕಟಿಸಿದ್ದು. ಇದು ಹತ್ತು ಮುದ್ರಣ ಕಂಡಿದೆ! ಇದು ಎಂಥ ಪುಸ್ತಕ ಅಂದರೆ, ಒಂದು ಮನೆಗೆ ಫೌಂಡೇಷನ್ ಎಷ್ಟು ಮುಖ್ಯವೋ ಅದೇ ರೀತಿ ಜನಪದ ಸಾಹಿತ್ಯಕ್ಕೆ -ಅಧ್ಯಯನಕ್ಕೆ 'ಜಾನಪದ ಸ್ವರೂಪ' ಅಷ್ಟೇ ಪ್ರಮುಖ ಅಂತ ನನ್ನ ಭಾವನೆ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಒಂದು ಸಾರಿ ಹೇಳಿದ್ದರು. 'ಜನಪದ ಸಾಹಿತ್ಯಕ್ಕೆ ಇದು ಆಸ್ತಿಭಾರ ಹಾಕುತ್ತೆ' ಅಂತ ಇಂಥದು ನಮ್ಮ ಮಾಲೆಯ ಪ್ರಮುಖ ಅಂಶ ಅಂತ ನನ್ನ ಭಾವನೆ.

**ಲೇಖಕರ ಜೊತೆಗಿನ ಸಂಬಂಧ ನಿಮಗೆ ಹೇಗಿದೆ ?**

ಪುಸ್ತಕೋದ್ಯಮಕ್ಕೆ ಲೇಖಕನೇ ಮೊದಲು ಅಂತ ಎಚ್.ಎಂ. ಶಂಕರ ನಾರಾಯಣ ರಾವ್‌ಯರು ಹೇಳ್ತಿದ್ದರು. ಲೇಖಕನೇ ಪ್ರಥಮ. ಆಮೇಲೆ ಮುದ್ರಕ, ನಂತರ ಕಾಗದ ಅನ್ನೋ ನೀತಿ ಸಂಹಿತಿಯನ್ನು ಹೇಳೋರು ಅವರು. ನಾನೂ ಕೂಡ ಆ ಮಾತನ್ನು ಒಪ್ತೀನಿ. ಲೇಖಕನೇ ನಮ್ಮ ಬೆನ್ನೆಲುಬು. ನಮಗೆ ಹಾ.ಮಾ. ನಾಯಕರೇ ಬೆನ್ನೆಲುಬು. ನಮ್ಮಲ್ಲಿ ನೀವು ಹೇಗಾದರೂ ವ್ಯವಹಾರ ಮಾಡಿ, ಲೇಖಕರ ಹತ್ತಿರ ನೀವು ಸರಿಯಾಗಿರಿ' ಅಂತ ಆವಾಗಾವಾಗ ಎಚ್ಚರಿಸ್ತಾರೆ. ಇವತ್ತು ನಾವು ಪ್ರಕಾಶನದಲ್ಲಿ ಏನಾದರೂ ಯಶಸ್ಸು ಸಾಧಿಸಬೇಕಾದರೆ ಹಾ.ಮಾ. ನಾಯಕರಂಥ ಮುಖ್ಯ ಲೇಖಕರ ಬೆನ್ನೆಲುಬೇ ಕಾರಣ. ಲೇಖಕರಿಗೆ ಕೊಡ್ತಕ್ಕಂಥ ಗೌರವ ಧನ, ಒಡನಾಟದಲ್ಲಿ ನಾವು ಆದಷ್ಟೂ ಎಚ್ಚರಿಕೆಯಿಂದ ನಡೆಸಿಕೊಂಡು ಹೋಗ್ತಾ ಇರಬೇಕು. ಲೇಖಕರು ನಮಗೆ ಬೇಕಾದಷ್ಟು ಸಹಾಯ ಮಾಡಿದಾರೆ. ಡಾ. ಲಕ್ಕಪ್ಪ ಗೌಡರು ನಮ್ಮ ಲೇಖಕರು. ಹಾ.ಮಾ. ನಾಯಕರು ನಮಗೆ ಪ್ರಾತಃಸ್ಮರಣೀಯರು. ಲೇಖಕ - ಪ್ರಕಾಶಕರ ಬಾಂಧವ್ಯ ಬಹಳ ಪ್ರಮುಖವಾದ್ದು. ಪುಸ್ತಕದ ಉತ್ಪಾದನೆಯಲ್ಲಿ ಹಸ್ತಪ್ರತಿ ಕೊಟ್ಟ ಮೇಲೆ ಕರಡು ತಿದ್ದತಕ್ಕಂಥ ಕೆಲಸ; ಲೇಖಕರೊಂದಿಗೆ ಈ ವಿಷಯದಲ್ಲಿ ಹೊಯ್‌ಕೈಯ್ಯಾಗಿ ನಡಕೊಳ್ತೀವಿ ನಾವು. ಲೇಖಕರಿಗೆ ನಾವು ಪ್ರೂಫ್ ಕೊಟ್ಟಾಗ ಅದರಲ್ಲಿ ತಪ್ಪುಗಳೇ ಇರೋದಿಲ್ಲ. ಇದಕ್ಕೆ ನನ್ನ ಶ್ರೀಮತಿ ಪುಷ್ಪಾ ಕೂಡ ನಿಂತುಕೊಳ್ತಾಳೆ. ಹಾಗಾಗಿ ಪ್ರಗತಿ ಸಾಧಿಸೋದಕ್ಕೆ ಇವೆರೆಲ್ಲಾ ಮುಖ್ಯ ಕಾರಣ ಆಗಿದೆ. ಕಳಪೆ ಪುಸ್ತಕ ನಾವು ಪ್ರಕಟಿಸೋದಿಲ್ಲ. ಕ್ವಾಲಿಟೀಲಿ ನಾವು ಯಾವುದೇ ರೀತಿಲಿ ಕಾಂಪ್ರಮೈಸ್ ಮಾಡ್ಕೊಳೋದಿಲ್ಲ. ಅಂಥ ಸ್ಥಿತಿ ಬಂದಾಗ ನಾವು ಪ್ರಕಾಶನ ಮುಂದುವರಿಸಿಕೊಂಡು ಹೋಗುವುದಿರಲ್ಲಿ ಅರ್ಥವಿಲ್ಲ. ಹಾ.ಮಾ. ನಾಯಕರ 'ಪ್ರಣಯ ಪದಾವಳಿ' ಪ್ರಕಟಿಸಿದಾಗ ಅನೇಕರು ಪ್ರತಿಕ್ರಿಯಿಸಿದರು. ಚೆನ್ನವೀರ ಕಣವಿ ಅವರು 'ಕೈ ತೊಳಕೊಂಡು ಮುಟ್ಟಬೇಕಾದ ಪುಸ್ತಕ' ಅಂತ ಕಾಗದ ಬರೆದರು. 1983 ಸುಮಾರಿಗೆ ಹೀಗೆ ನಮಗೆ ಪ್ರತಿಕ್ರಿಯೆ ಬಂತು. ಆದ್ದರಿಂದ ನಮಗೆ ಇನ್ನೂ ಚೆನ್ನಾಗಿ ಪುಸ್ತಕ ಪ್ರಕಟಿಸಬೇಕು ಅನ್ನುವ ಅಂತ ಸ್ಫೂರ್ತಿ ಬಂತು.

**ಇದುವರೆಗೆ ನಿಮ್ಮ ಗ್ರಂಥಮಾಲೆಗೆ ಆಂತರಿಕವಾಗಿ ಇದ್ದ ಈ ರೀತಿಯ ಬೆಂಬಲವನ್ನು, ಪ್ರಾಧಿಕಾರ ನೀಡ್ತಿರೋ 'ಅತ್ಯುತ್ತಮ ಪ್ರಕಾಶಕ ಪ್ರಶಸ್ತಿ'ಯನ್ನು ಎರಡನೆಯವರಾಗಿ ಪಡೆಯ್ತಿರುವಾಗ ಇದು ಹೇಗೆ ಕಂಡಿದೆ?**

ಈ ಪ್ರಶಸ್ತಿ ಬಂದಿರೋದರಿಂದ ನನಗೆ ಒಂದು ರೀತಿ ಮಾನಸಿಕವಾಗಿ ಬಹಳ ಸಂತೋಷ ಸಮಾಧಾನ ಆಗಿದೆ. ಯಾಕೆ ಅಂದರೆ, ಬಹುಮಾನಕೋಸ್ಕರ ಯಾರೂ ಕೆಲಸ ಮಾಡೋದಿಲ್ಲ, ಮಾಡಬೇಕಾಗೂ ಇಲ್ಲ. ಆದ್ರೆ ಅಂಥ ಒಂದು ಬಹುಮಾನ ಬಂದಾಗ ಬಹಳ ಸಂತೋಷದಿಂದ ನಾನು ಸ್ವೀಕರಿಸ್ತಾ ಇದೀನಿ. ನಾನು ಈ ವೃತ್ತೀನ ಒಂದು ತಪಸ್ಸು ಅಂತ ತಗೊಂಡಿದೀನಿ. ನಮ್ಮ ತಂದೆಯವರು ನನಗೆ ಏನು ಒಂದು ಆದರ್ಶ ಹೇಳಿದ್ದರು. ಅದರಂತೆ ನಾನು ನಡಕೊಂಡು ಹೋಗ್ತಾ ಇದೀನಿ. ದುಡ್ಡು ಬರುತ್ತೆ ಅಂತ ಪಠ್ಯಪುಸ್ತಕಗಳ ಸಮಿತಿ ಮುಂದೆ ಓಡೋಡಾದು, ಅಥವಾ ಇನ್ನೇನೋ ಮಾರ್ಗಗಳನ್ನ ಹಿಡಿಯೋದಕ್ಕೆ ನಾನು ಇಷ್ಟಪಡೋದಿಲ್ಲ. ತಂದೆಯವರು ಹಾಕಿಕೊಟ್ಟ ಮಾರ್ಗದರ್ಶನ ಇಂಥದು. ಅವರಿಗೆ ಒಂದು ಸ್ವಲ್ಪ ಮಾರಾಟ ಆಗತಕ್ಕಂಥ ಪುಸ್ತಕ ಮಾಡ್ತೀನಿ ಅಂತಂದ್ರೆ 'ಏನಯ್ಯಾ ಆ ಪಬ್ಲಿಕೇಷನ್ ಥರ ನೀನು ಆಗ್ತಿ!' ಅಂದು ಬಿಡೋರು. ಅದರಿಂದ ಅವರು ಹಾಕಿಕೊಟ್ಟ ಮೇಲ್ಪಂಕ್ತಿಯಲ್ಲಿ ನಡೀತಿದೀನಿ. ಈ ಮೂವತ್ತು ವರ್ಷಗಳಲ್ಲಿ ಮಾಡಿರೋ ಸಾಧನೆಗೆ ಒಂದು ಸಿದ್ಧಿ ಸಿಕ್ಕಿದೆ ಅಂತ ನಾನು ಭಾವಿಸಿದೀನಿ. ಅದರಿಂದ ನನಗೆ ಬಹಳ ಸಂತೋಷ ಆಗಿದೆ. ಇನ್ನೂ ಚೆನ್ನಾಗಿ ಪುಸ್ತಕ ಪ್ರಕಟಿಸಬೇಕು ಅಂತ ಆಸೆ ನನಗೆ. ಈಗ ನಮ್ಮ ಮಾಲೆಗೆ ಐವತ್ತು ವರ್ಷ ಆಗಿದೆ. ಈ ಸಂದರ್ಭದಲ್ಲಿ ಐವತ್ತು ಪುಸ್ತಕ ಪ್ರಕಟಿಸಬೇಕು ಅಂತ ಹೆಜ್ಜೆ ಇಟ್ಟಿದೀನಿ. 'ಬಂಗಾರದ ಬೆಳೆ' ಅಂತ ಶೀರ್ಷಿಕೆ ಕೊಟ್ಟು ಇವನ್ನ ಮಾಡಿಕೊಂಡು ಹೋಗ್ತಾ ಇದೀನಿ. ನನಗೆ ಪ್ರಕಾಶನ ಕಾರ್ಯದಲ್ಲಿ ಪ್ರೇರಣೆ - ತಂದೆಯ ಪ್ರೇರಣೆ ಇದ್ದೇ ಇತ್ತು - ಅಪಾರ್ಟ್‌ಫ್ರಂ ದಟ್ ಡಿ.ವಿ.ಕೆ. ಮೂರ್ತಿ ನನಗೆ ಒಂದು ರೀತಿ ಮಾನಸಿಕ ಗುರುಗಳು. ಆ ಕಾಲದಲ್ಲಿ ನಾನು ಅವರನ್ನ ನೋಡ್ತಾ ಇದ್ದೆ. ನಾನು ಅಂಥ ಪ್ರಕಾಶಕನಾಗಬೇಕು ಅಂತ ಆಸೆಯಿತ್ತು. ಹಾಗಾಗಿ ಅದೂ ಕೂಡ ನಾನು ಇಷ್ಟು ಕೆಲಸ ಮಾಡೋದಕ್ಕೆ ಕಾರಣ ಅಂತ ನಾನು ಭಾವಿಸಿದ್ದೀನಿ. ಪ್ರಶಸ್ತಿ ಬಂದ ಸುದ್ದಿ ಕೇಳಿದಾಗ - ಇವತ್ತು ನಮ್ಮ ತಂದೆಯಿಲ್ಲ - ಹೀಗಾಗಿ ನಾನು ಡಿ.ವಿ.ಕೆ. ಮೂರ್ತಿ ಅವರ ಪಾದಸ್ಪರ್ಶ ಮಾಡಿದೆ. ಅವರಿಗೂ ಬಹಳ ಸಂತೋಷ ಆಯ್ತು.

**ಇವತ್ತಿನ ದಿನಗಳಲ್ಲಿ ಪ್ರಕಾಶನ ಕಾರ್ಯದ ಸವಾಲನ್ನು ಹೇಗೆ ಎದುರಿಸ್ತಿದೀರಿ?**

ಪ್ರಕಾಶನ ಅಂತಕ್ಕದ್ದು ಏನಿದೆ ಅದನ್ನು ವೃತ್ತಿಯಾಗಿ ಸ್ವೀಕರಿಸತಕ್ಕಂತದ್ದು ಬಹಳ ದೊಡ್ಡ ಸವಾಲನ್ನು ಎದುರಿಸಿದಂಗೆ. ಬಹಳ ಕಷ್ಟ ಅದು. ಪ್ರವೃತ್ತಿಯಾಗಿ ನಡೆಸಿಕೊಂಡು ಹೋಗಬಹುದು. ಶಂಕರನಾರಾಯಣ ರಾವ್ ಇದ್ದರು. ಅವರು ಕಾಲೇಜು, ಅಧ್ಯಾಪಕ

ರಾಗಿದ್ದರು. ಪ್ರಕಾಶನ ನಡೆಸಿಕೊಂಡು ಹೋಗ್ತಿದ್ದರು. ಸಿಂಧುವಳ್ಳಿ ಅನಂತಮೂರ್ತಿ ಕೂಡ ಹಾಗೇ. ಉಷಾ ಪ್ರೆಸ್ ಇತ್ತು ಅವರು ಪ್ರೆಸ್ ಜೊತೆಗೆ ನಡೆಸಿದರು. ಹೀಗೆ ಪ್ರವೃತ್ತಿಯಾಗಿ ಬೆಳೆಸಿದವರೇ ಜಾಸ್ತಿ, ವೃತ್ತಿಯಾಗಿ ಬಹಳ ಕಡಿಮೆ.

## ಸಾರ್ಥಕ

ತಂದೆಗೆ ತಕ್ಕ ಮಗ ಛಾಯಾಪತಿ, ಹೌದು ಸೇನಾಪತಿ !
ಶಾಮರಾಯರ ಕನಸು ವೆಂಕಣ್ಣಯ್ಯನವರ ಆಶೀ
ವಾದವೀಗಲೂ ಹಚ್ಚಹಸಿರು. ಸ್ಮಾರಕ ಹೆಗಲ
ಜಾತಕವಾದಂತೆ ಮುದ್ದು ಮೊಲವ ಸಾಕಿದ ಪರಿಯಲಿ
ಮುನ್ನಡೆಸಿದಿವರು ಮಹೀಪತಿ! ಆದರೂ ಆಗಿಲ್ಲ
ಕರೋಡಪತಿ! ಛೆ, ಛೆ, ಹೇಗೆ ಸಾಧ್ಯವದು ಇರುವಾಗ
ಅದಮ್ಯ ಪುಸ್ತಕ ಪ್ರೀತಿ? 'ಗಾಂಧೀಜಿ ಕನಸು
ನಜೀರರಿಂದ ನನಸು', 'ಅಣ್ಣನ ಸ್ಮರಣೆ' ಯಾರು
ಯಾರಿಗೆ ಇಷ್ಟವೆಂಬ ಹುಚ್ಚು ಲೆಕ್ಕದ ರೀತಿ?
ಸಾವಿರ ಪುಟಗಳೈದರ ಪ್ರಕಟಣೆ ಅಚ್ಚರಿಯ
ಸಂಗತಿ. ಸಿಗದೇನು ಅತ್ಯುತ್ತಮ ಪ್ರಕಾಶನ
ಪ್ರಶಸ್ತಿ? ಋಣಮುಕ್ತಕೆ ಅಭಿನಂದನ 'ಸ್ವಸ್ತಿ'
ಹಾಮಾನಾ ಹೇಳಿದಂತೆ ತೋರಿದ್ದಾರೆ ಯಮಧೈರ್ಯ!
ಯಾರು ಅಲ್ಲಗಳೆದಾರಿವರ ಮೂಲವಂಶ ಮೌರ್ಯ!

ರವಿ ಉಪಾಧ್ಯ

## ಸಾರ್ಥಕ ಛಾಯೆ

ಶಿರದ ಮೇಲೆ ಅಪ್ಪನ ನೆರಳು
ಅಂತರಂಗದೆ ಅಮ್ಮನ ಕೊರಳು
ಹರಸುತಲಿರಲು ನೀವೆ ಶ್ರೀಪತಿ
ಧನ್ಯರು ನೀವು ಛಾಯಾಪತಿ

ಶಿಷ್ಯ ಪ್ರೀತಿಯೆ ಅಪ್ಪನ ಸಂಪತ್ತು
ಸರಸತಿ ಭಕ್ತಿಯಲಿ ಅವರ ಉಸಿರಿತ್ತು
ಅವರುಗಳಿಸಿದಾ ಪುಣ್ಯವೆ ನಿಮ್ಮನು
ಕಾಯುತಲಿಹುದು ಮಕ್ಕಳು ಮರಿಯನು

ಅಪ್ಪನ ಕೃತಿಗಳೆ ಎಂದು ಬಾಳಿಗೆ
ಅನ್ನ ನೀಡಿವೆ ಸಾಕು ನನಗೆ
ಎನ್ನುತ ತಂದೆಯ ಸದಾ ನೆನೆಯುವ
ನಿಮ್ಮದು ಬೆಳಕಿನ ದಾರಿಯೆ

ಶಾಮರಾಯರು ಬರೆದುದೆಲ್ಲ
ಶಾಶ್ವತವಾಗಿ ಉಳಿಸಿದಿರಲ್ಲ
ಮರೆಯಲಾಗದು ನಿಮ್ಮಯ ಕಾರ್ಯ
ಮಗನಾಗಿ ಋಣವ ಸಲಿಸಿದರಲ್ಲ

ಶಾಂತಾ ಜಗದೀಶ್

ಸಾವಿರ ಕೈಗಳು ಬರೆಯುತ್ತಲಿರಲು
ಜಗದಲಿ ಅವಕೆ ಬೆಳಕನು ತೋರಲು
ಶ್ರಮಿಸಿದ ನಿಮಗೆ ಎಂಥ ಗೌರವ
ಸಂದಿವೆ ಅವಕೆ ಬೆಲೆ ಕಟ್ಟಲಾಗದು

ಪುಸ್ತಕೋದ್ಯಮ ನಿಮ್ಮ ಬದುಕು
ಲೇಖಕನಾಗಿಯು ಪ್ರತಿಭೆಯ ಹೊಳಹು
ಹಿರಿಯರ ಜೊತೆಗೆ ಕಿರಿಯರನ್ನು
ಪ್ರೋತ್ಸಾಹಿಸುವ ಉದಾರ ಮನಸು

ಎಡೆಬಿಡದೆ ಜೊತೆ ನಡೆವ ಸಂಗಾತಿ
ಸುಖದುಃಖಗಳಿಗೆಲ್ಲ ಸಮನಾದ ಪ್ರಿಯಸತಿ
ಸರಿದಾರಿ ಬಿಡದ ಮಕ್ಕಳ ಪ್ರೀತಿ
ತುಂಬಿದೆ ಬಾಳಲಿ ನೆಮ್ಮದಿ ಶಾಂತಿ
ಛಾಯಾಪತಿ ಇವರೇ ಛಾಯಾಪತಿ

# ಅಪರೂಪದ ವ್ಯಕ್ತಿ

ಹೆಸರು 'ಛಾಯಾಪತಿ' ಎಂದು
ಹೆಸರಾಯಿತು ಖ್ಯಾತ ಪ್ರಕಾಶಕನೆಂದು
ಲೇಸಾದ ಸಾಹಿತ್ಯ ಉಣಬಡಿಸಿ
ಹಸನಾಗಿದೆ ಬದುಕು ನಳನಳಿಸಿ

ದುಡಿದು ಅನುದಿನವು ಶ್ರದ್ಧೆಯಿಂದ
ಮಾಡಿದರು ಸಾಹಿತ್ಯ ಸೇವೆ ಪ್ರೀತಿಯಿಂದ
ಜಡತೆ ಅರಿಯದ ಉತ್ಸುಕತೆ ನಿತ್ಯ
ಸಡಗರ ಉಲ್ಲಾಸ ಲೋಕಾರ್ಪಣೆ ಕೃತ್ಯ

ತಂದೆತಾಯಿಯರ ಹಾರೈಕೆ
ಹಿಂದೆ ನೋಡದಿಹ ಸ್ಥೈರ್ಯ
ಚೆಂದದಲಿ ಹೊರ ಬಂದವೆನಿತೊ
ಅಂದರೂಪದಿ ಬಂದ ಪುಸ್ತಕಗಳೆನಿತೊ

ಆದರದಿ ಕಾಣುವವರೆಲ್ಲರನು
ಮುದದಿ ಮಂದಸ್ಮಿತ ಮಾತು
ಶ್ರದ್ಧೆ ತಾಳ್ಮೆಯಿಂದಲೇ ನಿತ್ಯ ಬದುಕು
ವೃದ್ಧಿಯಾಗುತಿದೆ ಆ ಹೆಸರು ತಳುಕು.

ಮೆಚ್ಚಿ ಮದುವೆಯಾದವರೆ
ಅಚ್ಚು ಮೆಚ್ಚಿನ ಮಡದಿ
ಇಚ್ಛೆಯಿಂದಲೆ ನೆರವಾಗುತಿಹರು
ಸ್ವಚ್ಛ ಮನದಾಕೆ ಹೆಸರು ಪುಷ್ಪ

ಎಪ್ಪತ್ತು ತುಂಬುತಿಹ ಘಳಿಗೆಯಲಿ
ಒಪ್ಪತ್ತು ಸುಮ್ಮನೆ ಕಳೆಯದಿಹ
ಅಪ್ಪ ಶಾಮರಾಯರ ಮುದ್ದು ಕುವರನಿಗೆ
ಒಪ್ಪ ವರ್ಷಗಳೆಲ್ಲ ಹರ್ಷ ತರಲಿ!

---

ಎ. ನಾರಾಯಣ

---



ಛಾಯಾಪತಿ ಮತ್ತು ಪುಷ್ಪ



ಛಾಯಾಪತಿ, ಪುಷ್ಪ ಛಾಯಾಪತಿ,
ಮಗಳು ಪ್ರತಿಭಾ ಮುರುಳಿ, ಮಗ ಶ್ರೀನಿವಾಸ ಪವನ್



ಛಾಯಾಪತಿ, ಕುಟುಂಬದ ಸದಸ್ಯರೊಂದಿಗೆ
ಮೊಮ್ಮಗ ಚಿರಾಗ್, ಪತ್ನಿ ಪುಷ್ಪ, ಮಗ ಪವನ್, ಸೊಸೆ ಕಾಂಚನ,
ಮಗಳು ಪ್ರತಿಭಾ, ಮೊಮ್ಮಗ ಅಲೋಕ್, ಅಳಿಯ ಮುರುಳಿ



ಮೊಮ್ಮಕ್ಕಳು ಅಲೋಕ್, ಚಿರಾಗ್



ಕಾದಂಬರಿಕಾರ ಸಮೇತನಹಳ್ಳಿ ರಾಮರಾಯ
ಹಾಗೂ ಅಣ್ಣ ವೆಂಕಣ್ಣಯ್ಯನವರೊಂದಿಗೆ




ಛಾಯಾಪತಿ-ಭಾಷಣಕಾರರಾಗಿ



ಆಪ್ತಮಿತ್ರ ಮಲ್ಲೇಪುರಂ ಜಿ. ವೆಂಕಟೇಶ ಅವರೊಂದಿಗೆ



ಸುಪ್ರಸಿದ್ಧ ಕವಿ ನಾಡೋಜ ಚನ್ನವೀರ ಕಣವಿ ಅವರೊಂದಿಗೆ



ಶ್ರೇಷ್ಠ ಗದ್ಯ ಲೇಖಕ ನಾಡೋಜ ದೇ.ಜ.ಗೌ. ಅವರೊಂದಿಗೆ



ಶ್ರೇಷ್ಠ ಅಂಕಣಕಾರ ಎಚ್ಚೆಸ್ಕೆ ಅವರೊಂದಿಗೆ



ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ ಮತ್ತು
ಶ್ರೇಷ್ಠ ವಿಮರ್ಶಕ ಭಗವಾನ್ ಅವರೊಡನೆ



ನಿತ್ಯೋತ್ಸವದ ಕವಿ, ನಿಸಾರ್ ಅಹಮದ್ ಛಾಯಾಪತಿ ದಂಪತಿಗಳೊಂದಿಗೆ



ಸುಪ್ರಸಿದ್ಧ ಲೇಖಕ ಹಾಗೂ ಸಹೋದರ ರವಿ ಬೆಳಗೆರೆ ಅವರೊಂದಿಗೆ



ರಾಷ್ಟ್ರಕವಿ ಕುವೆಂಪು, ಜವರಪ್ಪಗೌಡ, ಅಣ್ಣ ಸುಪ್ರಸಿದ್ದ ಕಾದಂಬರಿಕಾರ
ತ.ರಾ.ಸು. ಮುನಿಸ್ವಾಮಿ ಅವರೊಂದಿಗೆ, ಕುವೆಂಪು ಅವರ ನಿವಾಸದಲ್ಲಿ



ಶ್ರೇಷ್ಠ ಕಾದಂಬರಿಕಾರ ಸಮೇತನಹಳ್ಳಿ ರಾಮರಾಯರೊಂದಿಗೆ



ಆತ್ಮೀಯ ಬಂಧು ಬೆಳಗೆರೆ ಕೃಷ್ಣಶಾಸ್ತ್ರಿ ಹಾಗೂ
ಹಿರಿಯ ರಾಜಕಾರಣಿ ಮಾದೇಗೌಡ ಅವರೊಂದಿಗೆ



ರಾಷ್ಟ್ರಕವಿ ಜಿ.ಎಸ್.ಎಸ್. ಅವರೊಂದಿಗೆ
ಒಂದು ವಿಶೇಷ ಸಂದರ್ಭದಲ್ಲಿ




ತ.ಸು. ಶಾಮರಾಯ ಜನ್ಮಶತಮಾನೋತ್ಸವ ಆಚರಣೆಯ ಸಂದರ್ಭದಲ್ಲಿ
ಎಡದಿಂದ : ಪದ್ಮಾಶೇಖರ್, ವಿವೇಕರೈ, ಟಿ.ವಿ. ವೆಂಕಟಾಚಲಶಾಸ್ತ್ರೀ,
ಸಚಿವ ವಿ. ಶ್ರೀನಿವಾಸಪ್ರಸಾದ್ ಹಾಗೂ ರಾಷ್ಟ್ರಕವಿ ಜಿ.ಎಸ್.ಎಸ್. ಅವರೊಂದಿಗೆ



ಆತ್ಮೀಯ ಸ್ನೇಹಿತರಾದ ಹಾ.ಮಾ. ನಾಯಕ ಅವರೊಂದಿಗೆ
ಪಕ್ಕದಲ್ಲಿರುವವರು ಪದ್ಮಾಶೇಖರ್ ಸೋಮಶೇಖರಗೌಡ ದಂಪತಿಗಳು



ಜನಪ್ರಿಯ ಕವಿ ಎಚ್.ಎಸ್. ವೆಂಕಟೇಶಮೂರ್ತಿ ಅವರೊಂದಿಗೆ ಛಾಯಾಪತಿ ದಂಪತಿಗಳು




ಡಾ|| ಎ.ಎನ್. ಮೂರ್ತಿರಾಯರೊಂದಿಗೆ ಛಾಯಾಪತಿ ಮತ್ತು ಪುಷ್ಪ ಛಾಯಾಪತಿ



ಸುಪ್ರಸಿದ್ಧ ಸುಗಮ ಸಂಗೀತ ಗಾಯಕ ಶಿವಮೊಗ್ಗ ಸುಬ್ಬಣ್ಣ
ಅವರೊಂದಿಗೆ ಛಾಯಾಪತಿ ದಂಪತಿಗಳು



ಛಾಯಾಪತಿ ಅವರ ಮಗಳ ಮದುವೆಯ ಸಂದರ್ಭದಲ್ಲಿ ಪಿ.ಆರ್. ತಿಪ್ಪೇಸ್ವಾಮಿ,
ಅ.ನ. ರಾಜೇಂದ್ರ, ಹಾ.ಮಾ. ನಾಯಕ, ಚದುರಂಗ, ಛಾಯಾಪತಿ



ಸಮಾರಂಭವೊಂದರಲ್ಲಿ ಹಾ.ಮಾ. ನಾಯಕ ಮತ್ತು
ಎಸ್.ಎಲ್. ಭೈರಪ್ಪನವರೊಂದಿಗೆ ಛಾಯಾಪತಿ



ಹಿರಿಯ ಕಾಂಗ್ರೆಸ್ಸಿಗ ಹಾರನಹಳ್ಳಿ ರಾಮಸ್ವಾಮಿ ಅವರೊಂದಿಗೆ



ರಾಜ್ಯಪಾಲ ಚತುರ್ವೇದಿಯವರನ್ನು ಮತ್ತೂರು ಕೃಷ್ಣಮೂರ್ತಿ ಅವರು
ಛಾಯಾಪತಿ ಅವರಿಗೆ ಪರಿಚಯಿಸುತ್ತಿರುವುದು



ಮಾಜಿ ಪ್ರಧಾನಿ ಶ್ರೀ ಎಚ್.ಡಿ. ದೇವೇಗೌಡರೊಂದಿಗೆ,
ಮಧ್ಯ ನಿಂತಿರುವವರು ದಿ. ಮತ್ತೂರು ಕೃಷ್ಣಮೂರ್ತಿ



ಸುಪ್ರಸಿದ್ಧ ಚಲನಚಿತ್ರ ಕಲಾವಿದರಾದ ಶ್ರೀ ರವಿ ಅವರೊಂದಿಗೆ



ಮೈಸೂರಿನ ಜನಪ್ರಿಯ ಶಾಸಕ ಹಾಗೂ ಆಪ್ತಮಿತ್ರ ಶ್ರೀ ವಾಸು ಅವರೊಂದಿಗೆ



ಶ್ರೀ ಟಿ.ಎಸ್. ಛಾಯಾಪತಿ ಅವರಿಗೆ ಸನ್ಮಾನ ಎಸ್.ಬಿ.ಐ. (ಬ್ಯಾಂಕಿನ ಸಿಬ್ಬಂದಿ)
ಶ್ರೀ ಬಿ.ಜಿ. ರಂಗನಾಥ್, ಸಂಘದ ಕಾರ್ಯದರ್ಶಿ, ಶ್ರೀ ಎಸ್. ರಮೇಶ್‌ರಾವ್,
ಪ್ರಾದೇಶಿಕ ವ್ಯವಸ್ಥಾಪಕರು, ಶ್ರೀ ವೆಂಕಟೇಶ ಶಲವಡಿ, ಮುಖ್ಯ ವ್ಯವಸ್ಥಾಪಕರು,
ಶ್ರೀ ಶೇಷಪ್ರಸಾದ್, ಸಹಾಯಕ ಪ್ರಧಾನ ವ್ಯವಸ್ಥಾಪಕರು,
ಶ್ರೀ ಆರ್. ಕೆ. ಚಂದ್ರಶೇಖರ, ಸಹಾಯಕ ಪ್ರಧಾನ ವ್ಯವಸ್ಥಾಪಕರು



'ಅತ್ಯುತ್ತಮ ಪ್ರಕಾಶನ ಪ್ರಶಸ್ತಿ' ಪಡೆದ ಸಂದರ್ಭ
ಎಡದಿಂದ ಎಚ್.ಜೆ. ಲಕ್ಕಪ್ಪಗೌಡ, ಎನ್. ಬಸವರಾಧ್ಯ, ಚಂದ್ರಹಾಸಗುಪ್ತ,
ಹಾ.ಮಾ. ನಾಯಕ, ಮಲ್ಲಿಕಾರ್ಜುನಸ್ವಾಮಿ ಅವರೊಂದಿಗೆ



ಎಚ್.ಎಸ್. ವೆಂಕಟೇಶಮೂರ್ತಿ ಅವರ ನಿವಾಸದಲ್ಲಿ
ನಾಡೋಜ ಚೆನ್ನವೀರ ಕಣವಿ ಅವರಿಂದ ಸನ್ಮಾನ.
ಎಡದಿಂದ ಟಿ.ಪಿ. ಅಶೋಕ, ಸನ್ಮಾನಿಸುತ್ತಿರುವ ಚೆನ್ನವೀರ ಕಣವಿ,
ಗಿರಡ್ಡಿ ಗೋವಿಂದರಾಜ, ಕವಿ ಎಚ್.ಎಸ್. ವೆಂಕಟೇಶಮೂರ್ತಿ



ತಳುಕಿನ ಶಾಮರಾಯ ಛಾಯಾಪತಿ ಪುಸ್ತಕ ಪ್ರಕಾಶನದ ಹೆಸರಿನಲ್ಲಿ ಅಗ್ರಮಾನ್ಯರು. ಇವರು ಪ್ರಕಾಶಕರಾಗಿ ಎಂಥ ಪ್ರಸಿದ್ಧಿಯನ್ನು ಪಡೆದಿದ್ದಾರೋ ಅಷ್ಟೇ ಮಿಗಿಲಾದ ಪ್ರಾಶಸ್ತ್ಯವನ್ನು ಲೇಖಕರಾಗಿಯೂ ಪಡೆದಿದ್ದಾರೆ. ತಳುಕಿನ ವಂಶವು ಸಾಮಾಜಿಕ, ಸಾಂಸ್ಕೃತಿಕ ಮತ್ತು ಸಾಹಿತ್ಯಕ ಕ್ಷೇತ್ರಗಳಿಗೆ ಕೊಟ್ಟ ಕೊಡುಗೆ ಯಾವತ್ತೂ ಸ್ಮರಣೀಯವೇ. ಅಂಥ ವಂಶದಲ್ಲಿ ಹುಟ್ಟಿ ಎಲ್ಲ ಜನಸಮುದಾಯದ ಪ್ರೀತಿಗೆ, ವಿಶ್ವಾಸಕ್ಕೆ ಕಾರಣರಾದವರು ನಮ್ಮೆಲ್ಲರ ಆತ್ಮೀಯರಾದ ಟಿ.ಎಸ್. ಛಾಯಾಪತಿ!

ಪ್ರಕಾಶಕರಾದ ಟಿ.ಎಸ್. ಛಾಯಾಪತಿ ಅವರಿಗೆ ಈಗ ಎಪ್ಪತ್ತರ ಸಂಭ್ರಮ. ಅವರು ಈಗಲೂ ನಮ್ಮ ನಡುವಿನ ಕ್ರಿಯಾಶೀಲರು. ಇವರು ಸದ್‌ಗೃಹಸ್ಥರಾಗಿ ತಮ್ಮ ಧರ್ಮಪತ್ನಿಯವರಿಗೆ ಆದರ್ಶಪ್ರಾಯರು. ಇವರು ಉತ್ತಮ ಮಕ್ಕಳಿಗೆ ತಕ್ಕ ತಂದೆಯಾಗಿಯೂ ಗಣ್ಯತೆಯನ್ನು ಪಡೆದಿದ್ದಾರೆ. ಲೇಖಕರಿಗೂ ನಾಡಿನ ಪ್ರಕಾಶಕರಿಗೂ ಇವರು ಎಂದೆಂದೂ ದೊಡ್ಡ ಆಸ್ತಿಯೇ ಆಗಿದ್ದಾರೆ. ನಗೆಮೊಗದ, ಎತ್ತರ ವ್ಯಕ್ತಿತ್ವದ, ಸದಾ ಗಾಂಭೀರ್ಯದ, ಆಲೋಚನಾಮಗ್ನ ಟಿ.ಎಸ್. ಛಾಯಾಪತಿ ಎಲ್ಲರ ಪ್ರೀತಿಗೆ, ಗೌರವಕ್ಕೆ, ವಿಶ್ವಾಸಕ್ಕೆ ಪಾತ್ರರಾಗುತ್ತ ಬಂದಿದ್ದಾರೆ. ತಮ್ಮ ತಂದೆ ದಿವಂಗತ ಪ್ರೊ. ತ.ಸು. ಶಾಮರಾಯರು ಹುಟ್ಟುಹಾಕಿದ 'ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ'ಯ ಪ್ರಕಾಶಕರಾಗಿ ಪ್ರಕಾಶನ ಪ್ರಪಂಚದಲ್ಲಿ ಧೀರತೆಯ ವ್ಯಕ್ತಿತ್ವವನ್ನು ಪಡೆದಿದ್ದಾರೆ. ಅವರು ಎಲ್ಲರಿಗೂ ಹಿರಿಮೆಯನ್ನು ತಂದು-ಕೊಟ್ಟಿದ್ದಾರೆ. ಇಂಥ ಎಪ್ಪತ್ತರ ಹರೆಯದ ವಿಶ್ವಮಿತ್ರರಿಗೆ ಹಿರಿಯರು, ಗೆಳೆಯರು, ಲೇಖಕಮಿತ್ರರು ಅವರ 70ರ ಜನ್ಮಸಂಭ್ರಮದಲ್ಲಿ ಪ್ರೀತಿಯಿಂದ ಕೊಡಮಾಡುತ್ತಿರುವ 'ಛಾಯಾಭಿನಂದನ' ಒಂದು ಆಪ್ತವೂ ವಿಶಿಷ್ಟವೂ ಆದ ಅಭಿನಂದನ ಸಂಪುಟವಾಗಿದೆ.

ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ
ಪ್ರಧಾನ ಸಂಪಾದಕ

---

**ಪ್ರತಿಭಾ ಪ್ರಕಾಶನ**
ಮೈಸೂರು